# "ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ" (ಕ್ರಿ.ಶ.1000-1336)

## ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ

**ಮೋಹನ ಹೆಚ್.ಎಂ.**
ಸಂಶೋಧಕರು
ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ,
ಮೈಸೂರು-570 006

**ಡಾ||ಎನ್.ಸರಸ್ವತಿ** ಎಂ.ಎ., ಪಿಹೆಚ್.ಡಿ
ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ,
ಮೈಸೂರು-570 006

**ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ,**
**ಮೈಸೂರು ವಿಶ್ವವಿದ್ಯಾನಿಲಯ**
**ಮೈಸೂರು-570 006**

**2014**

Telephone No. : (O) 0821-2419681
Fax : 0821-2415390
E-mail : ww.uomcist.org

UNIVERSITY  OF MYSORE

## DEPARTMENT OF STUDIES IN HISTORY

PROFESSOR AND CHAIRMAN

MANASAGANGOTRI
MYSORE-570 006, INDIA

*No. MGH/ /20 -20*

*Dated....................*

### ARTICLES PUBLISHED

This is to certify that Mr. Mohana H M, Research Scholar, Department of Studies in History, Manasagangotri, University of Mysore, has published an articles entitled "*ಹೊಯ್ಸಳ ರಾಜ ವೀರಸೋಮೇಶ್ವರನ ಕಾಲದಲ್ಲಿ ಗರುಡರು*" Journal of Historical Studies Vol.46 Year 2012. "*ಹೊಯ್ಸಳರ ಕಾಲದಲ್ಲಿ ನೀರಾವರಿ ಯೋಜನೆಗಳಿಗೆ ದಾನಗಳು*" Journal of Historical Studies Vol. 47, Year 2013. ISSN No. 1941-2681.

Chairman

Professor & Chairman
Dept. of Studies in History
Manasagangotri, Mysore - 570 006

# ಪ್ರಮಾಣಪತ್ರ

**ಶ್ರೀ ಮೋಹನ ಹೆಚ್.ಎಂ.** ಆದ ನಾನು "**ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ" (ಕ್ರಿ.ಶ.1000-1336)** ಎಂಬ ವಿಷಯವನ್ನು **ಪ್ರೊ.ಎನ್.ಸರಸ್ವತಿ,** ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು ಇವರ ಮಾರ್ಗದರ್ಶನದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ ಇತಿಹಾಸ ವಿಷಯದಲ್ಲಿ ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಂಡಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಗಳ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಾಗಿ ಅವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು** **ಸಂಶೋಧಕರು**

**ಅಧ್ಯಕ್ಷರು**

Dr. N. SARASWATHI
Professor
Dept. of Studies in History
University of Mysore,
Manasagangothri,
Mysore - 570 006




Dept.: 2419686
Off.: 2419682
Resi.: 2541408
Cell : 94485 04074

Res : # 581, ' Latha Nivas'
i - Block, 4th Cross,
Ramakrishnanagar,Mysore-22

Ref. Date :

# ಮಾರ್ಗದರ್ಶಕರ ಪ್ರಮಾಣಪತ್ರ

**ಶ್ರೀ ಮೋಹನ ಹೆಚ್.ಎಂ** ಅವರು ನನ್ನ ಮಾರ್ಗದರ್ಶನದಲ್ಲಿ "**ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ" (ಕ್ರಿ.ಶ.1000–1336)** ಎಂಬ ವಿಷಯದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಇತಿಹಾಸ ವಿಷಯದಲ್ಲಿ ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ನಾನು ತಿಳಿದ ಮಟ್ಟಿಗೆ ಇದುವರೆಗೂ ಯಾವುದೇ ವಿಶ್ವವಿದ್ಯಾನಿಲಯದ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಾಗಿ ಅವರು ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಪ್ರೊ.ಎನ್.ಸರಸ್ವತಿ**
ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ,
ಮೈಸೂರು

ಸ್ಥಳ: ಮೈಸೂರು
ದಿನಾಂಕ:

# ಸಂಶೋಧಕರ ಪ್ರಮಾಣಪತ್ರ

ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ **ಪ್ರೊ.ಎನ್.ಸರಸ್ವತಿ** ಅವರ ಮಾರ್ಗದರ್ಶನದಲ್ಲಿ **"ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ" (ಕ್ರಿ.ಶ.1000–1336)** ಎಂಬ ವಿಷಯ ಕುರಿತು ಸಂಶೋಧನಾ ಕಾರ್ಯ ನಡೆಸಿ ಇತಿಹಾಸ ವಿಷಯದಲ್ಲಿ ಡಾಕ್ಟರೇಟ್ ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಈ ಹಿಂದೆ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಮೋಹನ ಹೆಚ್.ಎಂ)**

ಸ್ಥಳ: ಮೈಸೂರು
ದಿನಾಂಕ:

# ಕೃತಜ್ಞತೆಗಳು

ನನ್ನನ್ನು ಸಂಶೋಧನಾ ವಿದ್ಯಾರ್ಥಿಯನ್ನಾಗಿ ಆಯ್ಕೆ ಮಾಡಿ ಸಂಶೋಧನೆ ನಡೆಸಲು ಅವಕಾಶ ಮಾಡಿಕೊಟ್ಟ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಗೌರವಪೂರ್ವಕವಾಗಿ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನನ್ನ ಸಂಶೋಧನಾ ಕಾರ್ಯಕ್ಕೆ ಪೂಜ್ಯ ಗುರುಗಳು ಹಾಗೂ ಮಾರ್ಗದರ್ಶಕರಾದ ಪ್ರೊ.ಎನ್.ಸರಸ್ವತಿರವರು, ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರ ಕೈಕೆಳಗೆ ನನಗೆ ಸಂಶೋಧನೆ ಮಾಡುವ ಅವಕಾಶ ಸಿಕ್ಕಿದ್ದು ನನ್ನ ಸೌಭಾಗ್ಯ ಎಂದು ಹೇಳಬಹುದು. ತಮ್ಮ ಅವಿರತ ಕಾರ್ಯದಲ್ಲೂ ಬಿಡುವು ಮಾಡಿಕೊಂಡು ನನ್ನ ಸಂಶೋಧನೆಯುದ್ದಕ್ಕೂ ಹೆಜ್ಜೆಹೆಜ್ಜೆಗೂ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ಮಾಡಿದ್ದಾರೆ. ಹಾಗಾಗಿ ನಾನು ಅವರಿಗೆ ಸದಾ ಚಿರಋಣಿಯಾಗಿರುತ್ತೇನೆ.

ನಾನು ಸಂಶೋಧನಾ ಕಾರ್ಯದಲ್ಲಿ ತೊಡಗಿದಾಗ ನನ್ನ ಪ್ರಗತಿಯನ್ನು ಪರಿಶೀಲಿಸುತ್ತಾ ಪ್ರೋತ್ಸಾಹಿಸಿ ಮುನ್ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸುವಾಗ ಅತ್ಯಮೂಲ್ಯವಾದ ಸಲಹೆ ನೀಡಿದ ಪ್ರೊ.ಅಶ್ವತ್ ನಾರಾಯಣರವರು, ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು, ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನಾನು ಸಂಶೋಧನಾ ಕಾರ್ಯದಲ್ಲಿ ತೊಡಗಿದಾಗ ನನಗೆ ಪ್ರೋತ್ಸಾಹ ಹಾಗೂ ಸ್ಫೂರ್ತಿಯನ್ನು ನೀಡಿ ನನ್ನ ಸಂಶೋಧನಾ ಕಾರ್ಯದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ನೆರವು ನೀಡಿದ ಪ್ರೊ.ವೈ.ಹೆಚ್.ನಾಯಕವಾಡಿಯವರಿಗೆ ನನ್ನ ಕೃತಜ್ಞತೆಗಳು.

ಇತಿಹಾಸ ಅಧ್ಯಯನ ವಿಭಾಗದ ಪ್ರೊ.ಆರ್.ರಾಜಣ್ಣರವರು, ಪ್ರೊ.ಸದಾಶಿವರವರು, ಪ್ರೊ.ಸೋಮಶೇಖರ್‌ರವರು, ಡಾ.ಪುಟ್ಟಯ್ಯರವರು, ಡಾ.ಗುರುಸಿದ್ದಯ್ಯರವರು, ಡಾ.ಗಂಗಮ್ಮ-ರವರು ಇವರೆಲ್ಲರೂ ನನಗೆ ಪ್ರೋತ್ಸಾಹ ನೀಡಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಹಾಗೂ ಇತಿಹಾಸ ಅಧ್ಯಯನ ವಿಭಾಗದ ಗ್ರಂಥಾಲಯದ ಮುಖ್ಯಸ್ಥರಾದ ಶ್ರೀ ರಾಜೇಂದ್ರವರಿಗೂ ನನ್ನ ವಂದನೆಗಳು.

ಸಂಶೋಧನೆಯಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅನುಕೂಲ ಮಾಡಿಕೊಟ್ಟಂತಹ ನಿರ್ದೇಶಕರು, ಸರ್ಕಾರಿ ರಾಜ್ಯ ಪತ್ರಾಗಾರ ಇಲಾಖೆ, ವಿಧಾನಸೌಧ, ಬೆಂಗಳೂರು ಮತ್ತು ಉಪನಿರ್ದೇಶಕರು, ಸರ್ಕಾರಿ ರಾಜ್ಯ ಪತ್ರಾಗಾರ ಇಲಾಖೆ, ಜೆ.ಪಿ.ನಗರ, ಮೈಸೂರು ಇವರಿಗೂ ನನ್ನ ಕೃತಜ್ಞತೆಗಳು.

ನನ್ನ ಶ್ರೇಯಸ್ಸನ್ನು ಬಯಸಿ ನನ್ನನ್ನು ಪ್ರೋತ್ಸಾಹಿಸಿದ ಕೆ.ಎ.ನಾಣಯ್ಯನವರು, ನಿವೃತ್ತ ಉಪನ್ಯಾಸಕರು, ಫೆರೋಕಿಯಾ ಪದವಿ ಪೂರ್ವ ಕಾಲೇಜು, ಮೈಸೂರು ಹಾಗೂ ಪ್ರೊ.ಎನ್.ಸಾವಿತ್ರಿರವರು, ಪ್ರಾಧ್ಯಾಪಕರು, ಮಲ್ಲಮ್ಮ ಮರಿಮಲ್ಲಪ್ಪ ಕಾಲೇಜು, ಮೈಸೂರು ಇವರುಗಳನ್ನೂ ಸಹ ನಾನು ಸದಾ ಸ್ಮರಿಸುತ್ತೇನೆ.

ನನಗೆ ಸದಾ ಹಾರೈಸುತ್ತಾ ನನ್ನ ಸಂಶೋಧನೆಗೆ ಅಪಾರ ಪ್ರೋತ್ಸಾಹ ನೀಡಿದ ನನ್ನ ಪ್ರೀತಿಯ ಅಧಿಕಾರಿಗಳಾದ ಶ್ರೀ ಹೆಚ್.ಎಂ.ರಮೇಶರವರು,ಬಿಇ.ಎಂ.ಟೆಕ್ ವಿಭಾಗೀಯ ನಿಯಂತ್ರಣಾಧಿಕಾರಿಗಳು, ನಗರ ಸಾರಿಗೆ ವಿಭಾಗ, ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಮೈಸೂರು ಇವರಿಗೂ ನನ್ನ ಧನ್ಯವಾದಗಳು ಅರ್ಪಿಸುತ್ತೇನೆ.

ನನ್ನ ಸಂಶೋಧನಾ ಕಾರ್ಯದಲ್ಲಿ ಯಾವುದೇ ಅಡೆತಡೆಯಾಗದಂತೆ ನನ್ನನ್ನು ಸದಾ ವಿಚಾರಿಸುತ್ತಾ ಸೂಕ್ತ ಮಾರ್ಗದರ್ಶನವನ್ನು ನೀಡಿದ ನನ್ನ ನೆಚ್ಚಿನ ಅಧಿಕಾರಿಗಳಾದ ಶ್ರೀ ಮರಿಗೌಡರು,ಎಂ.ಬಿ.ಎ. ಘಟಕ ವ್ಯವಸ್ಥಾಪಕರು, ವಿಜಯನಗರ ಘಟಕ, ನಗರ ಸಾರಿಗೆ ವಿಭಾಗ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಮೈಸೂರು ಇವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ನನ್ನ ಸಂಶೋಧನೆಗೆ ಪ್ರೋತ್ಸಾಹಿಸಿ ಆಶೀರ್ವದಿಸಿ ನನ್ನ ನೆಚ್ಚಿನ ಅಧಿಕಾರಿಗಳಾದ ಶ್ರೀ ಶಿವರಾಜೇಗೌಡರು, ಉಪಮುಖ್ಯ ಜಾಗೃತಿ ಮತ್ತು ಭದ್ರತಾಧಿಕಾರಿಗಲು, ಕೇಂದ್ರ ಕಛೇರಿ, ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಹಾಗೂ ಶ್ರೀ ಪುಟ್ಟೇಗೌಡರುMSW., M.L.I.Sc., M.Phil ಉಪಮುಖ್ಯ ಕಾರ್ಮಿಕ ಕಲ್ಯಾಣಾಧಿಕಾರಿಗಳು, ಮಂಡ್ಯ ವಿಭಾಗ, ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಇವರಿಗೂ ನನ್ನ ಕೃತಜ್ಞತೆಗಳು.

ನನ್ನ ಶ್ರೇಯಸ್ಸನ್ನು ಬಯಸಿ ನನಗೆ ಎಲ್ಲಾ ರೀತಿಯ ಸಹಾಯ ಸಹಕಾರ ನೀಡಿದ ಶ್ರೀ ಡಿ.ರವಿಕುಮಾರರವರು, ಜನ ಸಂಪರ್ಕ ಅಧಿಕಾರಿಗಳು, ಕಾವೇರಿ ನೀರಾವರಿ ನಿಗಮ, ಮಐಸೂರು ಇವರಿಗೂ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನೆಗೆ ಹೆಚ್ಚಿನ ಪ್ರೋತ್ಸಾಹ, ಸಹಾಯ, ಸಹಕಾರ ನೀಡಿ ನನ್ನ ಬಾವನವರಾದ ಶ್ರೀ ಪ್ರಸನ್ನ ಕುಮಾರ್‌ರವರು, ಸರ್ಕಲ್ ಇನ್ಸ್‌ಪೆಕ್ಟರ್, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ ಇವರನ್ನು ನಾನು ಸದಾ ಸ್ಮರಿಸುತ್ತೇನೆ.

ನನ್ನ ಸಂಶೋಧನೆಯ ಪ್ರತಿ ಹೆಜ್ಜೆಯಲ್ಲೂ ನನಗೆ ಸಹಾಯ ನೀಡದ ನನ್ನ ನೆಚ್ಚಿನ ಸ್ನೇಹಿತರಾದ ಬಿ.ಸಿ.ಬಾಬು, ಹಾಗೂ ಎಸ್.ಅಕ್ಷತ ಇವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ನನ್ನ ಸಂಶೋಧನೆಯುದ್ದಕ್ಕೂ ನನ್ನ ಹಿತವನ್ನು ಬಯಸಿದ ನನ್ನ ನೆಚ್ಚಿನ ಸ್ನೇಹಿತರಾದ ಶ್ರೀ ಎನ್.ಸಿ.ಪ್ರಮೋದರವರು, ಶ್ರೀ ಲೋಕೇಶರವರು, ಶ್ರೀ ಅರುಣ್ ಕುಮಾರ್‌ರವರು ಮತ್ತು ಶ್ರೀ ನವೀನ್ ಪ್ರಸಾದ್‌ರವರು ಇವರೆಲ್ಲರಿಗೂ ನನ್ನ ಕೃತಜ್ಞತೆಗಳು.

ನನ್ನ ಸಂಶೋಧನೆಯಲ್ಲಿ ಅಪಾರ ಸಹಾಯ ಮತ್ತು ಸಹಕಾರ ನೀಡಿದ ನನ್ನ ಪೂಜ್ಯರಾದ ಶ್ರೀಮತಿ ಲತಾ ಮತ್ತು ಶ್ರೀ ರಾಮಚಂದ್ರರವರು, ಪಾಲಹಳ್ಳಿ ಗ್ರಾಮ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರಿಗೂ ನನ್ನ ವಂದನೆಗಳು.

ನನ್ನ ಶ್ರೇಯಸ್ಸನ್ನು ಬಯಸಿ ನನ್ನನ್ನು ಹಾರೈಸುತ್ತಾ ನನ್ನ ಸಂಶೋಧನೆಗೆ ಅಪಾರ ಪ್ರೋತ್ಸಾಹವನ್ನು ನೀಡಿ ತಮ್ಮ ತನು, ಮನ, ಧನವನ್ನು ನೀಡಿ ಆಶೀರ್ವದಿಸಿದ ನನ್ನ ಪ್ರೀತಿಯ ತಂದೆ ತಾಯಿಗಳಾದ ಶ್ರೀಮತಿ ಹೆಚ್.ಎಲ್.ಮಹಾದೇವಮ್ಮ ಮತ್ತು ದಿವಂಗತ ಕೆ.ಎಸ್.ಮುಕುಂದರವರು ಹಾಗೂ ನನ್ನ ಕುಟುಂಬ ವರ್ಗದವರಿಗೂ ನನ್ನ ಕೃತಜ್ಞತೆಗಳು.

ಕೊನೆಯದಾಗಿ ಈ ನನ್ನ ಪ್ರೌಢಪ್ರಬಂಧವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಂತಹ ಕೆ.ಬಿ.ಕಮ್ಯೂನಿಕೇಷನ್ಸ್‌ನ ಎಲ್ಲಾ ಸಿಬ್ಬಂದಿ ವರ್ಗದವರಿಗೂ ನನ್ನ ಕೃತಜ್ಞತೆಗಳು.

**(ಹೆಚ್.ಎಂ.ಮೋಹನ)**

# ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ (ಕ್ರಿ.ಶ.1000–1336)

# ಅಧ್ಯಾಯ–1
# ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ
# (ಕ್ರಿ.ಶ.1000–1336)

**ಪೀಠಿಕೆ**

1.1 ಭೌಗೋಳಿಕ ಹಿನ್ನೆಲೆ

1.2 ಆಧಾರಗಳು

1.2.1 ಪುರಾತತ್ವ ಆಧಾರಗಳು

1.2.2 ಭೂಸಂಶೋಧನೆಗಳು ಅಥವಾ ಭೂಉತ್ಖನನ

1.2.3 ಶಾಸನಗಳು

1.2.4 ಸ್ಮಾರಕಗಳು

1.2.5 ಸಾಹಿತ್ಯಾಧಾರಗಳು

1.2.5.1 ಸಂಸ್ಕೃತ ಕೃತಿಗಳು

1.2.5.2 ಕನ್ನಡ ಕೃತಿಗಳು

1.3 ಹೊಯ್ಸಳರ ನಾಣ್ಯಗಳು

1.4 ಇದುವರೆವಿಗೂ ನಡೆದಿರುವ ಅಧ್ಯಯನಗಳ ವಿಮರ್ಶೆ

1.5 ಅವನತಿ ಪದದ ಅರ್ಥ

1.6 ಅಧ್ಯಯನದ ವ್ಯಾಪ್ತಿ

1.7 ಸಂಶೋಧನಾ ವಿಧಾನ

1.8 ಅಧ್ಯಯನದ ವಸ್ತುನಿಷ್ಠತೆ

1.9 ಅಧ್ಯಯನದ ವಿಭಾಗೀಕರಣ

# ಅಧ್ಯಾಯ–1
# ಹೊಯ್ಸಳ ರಾಜ ಸಂತತಿಯ ಅವನತಿ: ಒಂದು ಅಧ್ಯಯನ
# (ಕ್ರಿ.ಶ.1000–1336)

**ಪೀಠಿಕೆ**

ದಕ್ಷಿಣ ಭಾರತದಲ್ಲಿ ಹೊಯ್ಸಳರು ಪ್ರಮುಖರು. ಅದರಲ್ಲೂ ಕರ್ನಾಟಕದಲ್ಲಿ ಅತ್ಯಂತ ಶಕ್ತಿಯುತವಾಗಿ ಆಳ್ವಿಕೆ ನಡೆಸಿ ತಮ್ಮ ಧೈರ್ಯ ಹಾಗೂ ಸಾಹಸಗಳ ಮೂಲಕ ಹೆಸರುವಾಸಿ–ಯಾದವರು. ಈ ಭಾಗದಲ್ಲಿ ಸಂಸ್ಕೃತಿಯು ಬೇರೂರಲು ಇವರೇ ಪ್ರಮುಖರೆಂದರೆ ತಪ್ಪಾಗ–ಲಾರದು. ಸುಮಾರು ಹನ್ನೆರಡು ಮತ್ತು ಹದಿಮೂರನೇ ಶತಮಾನಗಳಲ್ಲಿ ಆಡಳಿತದ ಚುಕ್ಕಣಿ ಹಿಡಿದರು. ಇವರ ಬೆಳವಣಿಗೆ ತಲಕಾಡು ವಿಜಯದ ನಂತರ ಹೊಯ್ಸಳ ರಾಜವಂಶವು ಉನ್ನತ ಮಟ್ಟಕ್ಕೇರಿತು.

ಇವರ ವಂಶದಲ್ಲಿ ನರಸಿಂಹ, ಇಮ್ಮಡಿ ಬಲ್ಲಾಳ, ಸೋಮೇಶ್ವರ, ರಾಮನಾಥ ಮತ್ತು ಮುಮ್ಮಡಿಬಲ್ಲಾಳರಂಥವರು ಬಲಿಷ್ಟ ರಾಜರಾಗಿ ಆಡಳಿತವನ್ನು ಸುಗಮವಾಗಿ ನಡೆಸಿದಂತವರು. ಅದೇ ರೀತಿ ಉತ್ತರದಲ್ಲಿ ಯಾದವರು, ದಕ್ಷಿಣದಲ್ಲಿ ಚೋಳ ಮತ್ತು ಪಾಂಡ್ಯರನ್ನು ತಮ್ಮ ಆಡಳಿತಕ್ಕೆ ಒಳಪಡುವಂತೆ ಮಾಡಿಕೊಂಡಿದ್ದದ್ದು. ಈ ರಾಜವಂಶದ ಸಾಹಸ, ಧೈರ್ಯವನ್ನು ಮೆಚ್ಚುವಂತದ್ದು.

ಈ ಕಾಲದಲ್ಲಿ ಅಂದರೆ ಹೊಯ್ಸಳರ ಯುಗ ಆರಂಭದಲ್ಲಿ ಸರ್ವತೋಮುಖ ಪ್ರಗತಿ ಕಂಡು ಬಂದು ಕರ್ನಾಟಕದ ಘನತೆ ಗೌರವ ಇವರಿಂದ ಹೆಚ್ಚಾಯಿತು. ಇವರ ಯುದ್ಧ ನೀತಿ, ಪ್ರಜೆಗಳ ಜೊತೆ ಬೆರೆಯುತ್ತಿದ್ದ ರೀತಿ ಹಾಗೂ ಅವರಿಗೆ ನೀಡುತ್ತಿದ್ದ ಉತ್ತಮ ಆಡಳಿತ ಮತ್ತು ಸಾಮಾಜಿಕ ಕಾಳಜಿ, ಯತೇಚ್ಛವಾಗಿತ್ತು. ಆದ್ದರಿಂದ ಇವರ ಕಾಲದಲ್ಲಿ ವಿದ್ಯಾ ಪ್ರಗತಿಯಲ್ಲಿ ಸಾಗಿತು. ಹಾಗೂ ಭಾಷಾ ಸಾಹಿತ್ಯಗಳ ಅಭಿವೃದ್ಧಿಗೆ ಹೆಚ್ಚು ಶ್ರಮ ವಹಿಸಿದರು. ಇದು ಕರ್ನಾಟಕದಲ್ಲೇ ಅಲ್ಲದೇ ಭಾರತದ ಇತಿಹಾಸದಲ್ಲಿ ಹೊಯ್ಸಳರ ಆಡಳಿತವು ಹೆಚ್ಚು ಮನ್ನಣೆ ಪಡೆದುಕೊಂಡಿತು.

ಕ್ರಿ.ಶ.10 ಮತ್ತು 11ನೇ ಶತಮಾನಗಳಲ್ಲಿ ಚೋಳರಿಗೂ ಕಲ್ಯಾಣದ ಚಾಳುಕ್ಯರಿಗೂ ದಕ್ಷಿಣ ಭಾರತದ ಸಾರ್ವಭೌಮತ್ವಕ್ಕಾಗಿ ಸೆಣಸಾಟಗಳು ನಡೆದವು. ಚೋಳರು ಕ್ರಿ.ಶ.1004ರ

ವೇಳೆಗೆ ತಲಕಾಡಿನ ಗಂಗರನ್ನು ಸೋಲಿಸಿ ಗಂಗವಾಡಿಯನ್ನು ಆಕ್ರಮಿಸಿದರು. ಕ್ರಿ.ಶ.೧೦೦೬ರ ವೇಳೆಗೆ ಚೋಳರ ಮೇಲೆ ಹೊಯ್ಸಳರು ಯುದ್ಧ ಮಾಡಿ ಸೋತರು. ಇದಾದ ನಂತರ ಹೊಯ್ಸಳರು ಕಲ್ಯಾಣದ ಚಾಳುಕ್ಯರ ಪರಮಾಧಿಕಾರವನ್ನು ಸ್ವೀಕರಿಸಿ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು.

ಕರ್ನಾಟಕ ಮಾತ್ರವಲ್ಲದೆ ಭಾರತದ ಇತರ ಪ್ರದೇಶಗಳನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡು ಆಡಳಿತ ನಡೆಸುತ್ತಿದ್ದ ಹೊಯ್ಸಳರ ಸಾಮ್ರಾಜ್ಯವು ವಿಜೃಂಭಣೆಯಿಂದ ಮೆರೆದಂತ ಈ ವಂಶದ ಅವನತಿಯ ಬಗ್ಗೆ ಚರ್ಚಿಸುವುದು ದುರಂತವೇ ಸರಿ. ಈ ರಾಜವಂಶದ ಪ್ರಬಲ ದೊರೆ ಎನಿಸಿದ ವಿಷ್ಣುವರ್ಧನ, 2ನೇ ವೀರಬಲ್ಲಾಳ ಮತ್ತು ೩ನೇ ವೀರಬಲ್ಲಾಳರು ಆಡಳಿತದ ಕೊನೆಯಲ್ಲಿ ಮಧುರೈ ಸುಲ್ತಾನರ ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ಸೋಮೇಶ್ವರನ ಅವನತಿಯ ನಂತರ ಇವರ ವಂಶದಲ್ಲಿ ಆಂತರಿಕ ಕಲಹಗಳಿಂದಾಗಿ ಈ ಸಾಮ್ರಾಜ್ಯದ ಅರಸರು ತಮ್ಮ ಪರಮಾಧಿಕಾರವನ್ನು ಕಳೆದುಕೊಳ್ಳಬೇಕಾಯಿತು. ಊಳಿಗಮಾನ್ಯ ಪದ್ಧತಿಯು ಇದರ ಜೊತೆಗೆ ಪ್ರಾಬಲ್ಯವಾಗಿ ಬೆಳೆಯತೊಡಗಿತು. ಸಾಮ್ರಾಜ್ಯದಲ್ಲಿ ಉಂಟಾದ ಆಂತರಿಕ ಕಲಹದಿಂದಾಗಿ ಈ ವಂಶವು ಅವನತಿಯ ದಾರಿ ತಲುಪಿತು.

ಮೂರನೇ ಬಲ್ಲಾಳನು ತನ್ನ ಅಧಿಕಾರದ ಎಲ್ಲೆಯನ್ನು ಮೀರಿ ಏಕತೆಯನ್ನು ಸಾಧಿಸಲು ಶಕ್ತಿ ಮೀರಿ ಹೋರಾಡಿದನು. ಆದರೂ ಕೂಡ ಪದೇ ಪದೇ ಸೇವುಣರ ಜೊತೆ ನಡೆಯುತ್ತಿದ್ದ ಯುದ್ಧದಿಂದಾಗಿ ಎರಡು ಸಾಮ್ರಾಜ್ಯಗಳು ದುರ್ಬಲಗೊಂಡವು. ದಕ್ಷಿಣದಲ್ಲಿ ಹಿಂದೂ ಸಾಮ್ರಾಜ್ಯಗಳ ಆಡಳಿತ ಅಸ್ತಿತ್ವದಲ್ಲಿದ್ದರೂ ಕೂಡ ಅಸೂಯೆ ಮತ್ತು ನಾಯಕತ್ವದ ಮಹತ್ವಾಕಾಂಕ್ಷೆಯಿಂದ ತಮ್ಮ ತಮ್ಮ ರಾಜ್ಯಗಳಿಗೆ ಒದಗಬಹುದಾದ ಅಪಾಯಗಳ ಬಗ್ಗೆ ಅರಿವಿದ್ದರೂ ಸಹ ಏಕತೆ ಸಾಧಿಸಲು ಸಾಧ್ಯವಾಗಲಿಲ್ಲ. ಏಕೆಂದರೆ ಇಷ್ಟಕ್ಕಾಗಲೇ ಮುಸ್ಲಿಂರ ಪ್ರಾಬಲ್ಯ ಹೆಚ್ಚಾಗಿ ದಕ್ಷಿಣದಲ್ಲಿ ಶಾಶ್ವತವಾಗಿ ನೆಲೆಯೂರಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು. ಇದರಿಂದ ೩ನೇ ಬಲ್ಲಾಳನ ಪ್ರಯತ್ನ ವಿಫಲಗೊಂಡಿತು.

ಹೊಯ್ಸಳರ ಅವನತಿಯ ಬಗ್ಗೆ ಚರ್ಚಿಸುವುದು ತುಂಬ ಕಷ್ಟಸಾಧ್ಯ. ಏಕೆಂದರೆ ಇತಿಹಾಸವು ಕಾಲ ಕಾಲಕ್ಕೆ ಬದಲಾಗುವುದು. ಏಕೆಂದರೆ ಇತಿಹಾಸ ಅಧ್ಯಯನ ಮತ್ತು ಇದರ

ರಚನೆ ಮೂಲಾಧಾರಗಳನ್ನು ಅವಲಂಬಿಸಿದೆ. ಸತ್ಯವನ್ನು ಪರಿಶೀಲಿಸುವ ಪ್ರಾಮಾಣಿಕ ಪ್ರಯತ್ನವನ್ನು ಇತಿಹಾಸಕಾರರು ಮಾಡಬೇಕಾಗುತ್ತದೆ. ಆದ್ದರಿಂದ ಹೊಯ್ಸಳರ ಅವನತಿಯ ಬಗ್ಗೆ ಚರ್ಚಿಸುವುದು ಒಂದು ಪ್ರಮುಖ ಅಂಶವಾಗಿದೆ.

ಹೊಯ್ಸಳರ ಮೂಲಕ್ಕೆ ಸಂಬಂಧಪಟ್ಟಂತೆ ವಿಭಿನ್ನ ಹೇಳಿಕೆಗಳ ಬಗ್ಗೆ ಚರ್ಚಿಸಲಾಗಿದೆ. ನೂರು ವರ್ಷಗಳ ನಂತರದ ರಾಜರ ಶಾಸನಗಳಲ್ಲಿ ದ್ವಾರಕೆಯ ಯದುವಂಶಕ್ಕೆ ಸಂಬಂಧವನ್ನು ಕಲ್ಪಿಸಲಾಗಿದೆ. ಕೆಲವು ವಿದ್ವಾಂಸರು ಸಳನು ಹುಲಿಯನ್ನು ಕೊಂದ ಹೇಳಿಕೆಯು ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಹೊಯ್ಸಳರ ಸಂತತಿಯ ಪ್ರಾರಂಭದ ರಾಜರ ಬಿರುದುಗಳಾದ "ಮೆಲೆ ಪರೋಳ್ಯಂಡ" "ತೊರೆವರಮಾರಿ" ಹಾಗೂ "ಮಲೆವರಮಾರಿ" ಮುಂತಾದ ಬಿರುದುಗಳು ಇವರ ರಾಜ ಸ್ಥಾಪನೆಗೆ ಪುಷ್ಠೀಕರಿಸಿದೆ.

ನಂತರ ಹೊಯ್ಸಳರ ರಾಜ್ಯ ಸ್ಥಾಪನೆಯಾದ ನಂತರ ಈ ವಂಶದಲ್ಲಿ ಆಡಳಿತಕ್ಕೆ ಒಳಪಟ್ಟಂತ ರಾಜರುಗಳ ತಮ್ಮ ಸಾಮ್ರಾಜ್ಯ ಸ್ಥಾಪನೆಗೆ ಹೆಚ್ಚು ಗಮನಹರಿಸಿ ನೆರೆಯ ರಾಜ್ಯಗಳನ್ನು ತನ್ನ ಸಾಮ್ರಾಜ್ಯದ ಆಡಳಿತಕ್ಕೆ ಒಳಪಡಿಸಿಕೊಂಡು ಅನೇಕ ಕಲೆ, ವಾಸ್ತುಶಿಲ್ಪ, ಸಂಸ್ಕೃತಿಯ ಬಗ್ಗೆ ಆಸಕ್ತಿ ಹೊಂದಿ ರಾಜ್ಯದೆಲ್ಲೆಡೆ ತಮ್ಮ ಪ್ರಾಬಲ್ಯವನ್ನು ಮೆರೆದರು.

ಹೊಯ್ಸಳರು ತಮ್ಮ ಸಾರ್ವಭೌಮಾಧಿಕಾರಿಗಳಾಗಿದ್ದು ಒಂದನೇ ಬಲ್ಲಾಳನ ಸಾಧನೆಗಳು ಹೊಯ್ಸಳರ ಆಡಳಿತಕ್ಕೆ ಬುನಾದಿಯನ್ನು ಹಾಕಿತ್ತು. ಇವನ ದಿಗ್ವಿಜಯಗಳಿಂದಾಗಿ ಹಾನಗಲ್ ಕದಂಬರು, ಉಚ್ಚಂಗಿಯ ಪಾಂಡ್ಯರು, ಇವರ ಮೇಲಿನ ಹೋರಾಟಗಳು ಹಾಗೂ ನಮಗೆ ಸಿಗುವ ದಾಖಲೆಗಳ ಆಧಾರದ ಮೇಲೆ ತಿಳಿಯಬಹುದು. ಎರಡನೇ ವೀರಬಲ್ಲಾಳನ ಮತ್ತು 2ನೇ ವೀರನರಸಿಂಹನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯವು ವಿಸ್ತರಣೆಯಾಗುತ್ತಾ ಹೋಯಿತು. ಇಷ್ಟೆಲ್ಲಾ ಸಾಹಸ ಧೈರ್ಯಶಾಲಿಗಳಿಗೆ ಹೆಸರುವಾಸಿಯಾಗಿ ಆಡಳಿತ ನಡೆಸಿದ ನಂತರ ಅಂದರೆ ರಾಜ್ಯ ವಿಭಜನೆಯಿಂದ ಹೊಯ್ಸಳರ ಅವನತಿ ಆರಂಭಗೊಂಡಿತು. ವೀರ ಸೋಮೇಶ್ವರ, ರಾಮನಾಥ, ಮೂರನೆಯ ನರಸಿಂಹ ಇವರ ಕಾಲದಲ್ಲಾಗಲೇ ರಾಜ್ಯಗಳ ಭಾಗಗಳು ಸ್ವಲ್ಪಸ್ವಲ್ಪವಾಗಿ ಕಳೆದುಕೊಳ್ಳುವ ಸ್ಥಿತಿಗೆ ತಲುಪಿತು. ನಂತರ ಬಂದಂತಹ ಮೂರನೇ ಬಲ್ಲಾಳನಿಂದ ಆದಂತಹ ಯುದ್ಧಗಳಿಂದಾಗಿ ಸಂಪೂರ್ಣವಾಗಿ ಹೊಯ್ಸಳರ ರಾಜ್ಯವು ಅವನತಿಯತ್ತ ಸಾಗಿತು. ಇದಕ್ಕೆಲ್ಲಾ ಪ್ರಮುಖವಾಗಿ ಸಾಮಂತ ಕುಟುಂಬಗಳು ಸ್ಥಳೀಯವಾಗಿ

ಆಡಳಿತದ ಚಿಕ್ಕಣೆಯಿಂದಾಗಿ ಅಂದರೆ ಚೆಂಗಾಳ್ವರು, ಕೊಂಗಾಳ್ವರು, ಹಾನಗಲ್ಲಿನ ಕದಂಬರು, ಸಂತಾಲರು ಹೀಗೆ ಇವರುಗಳ ಉಪಟಳದಿಂದ ಈ ಸಾಮ್ರಾಜ್ಯವು ನಶಿಸತೊಡಗಿತು.

ಹೊಯ್ಸಳರ ರಾಜ ಸಂತತಿಯು ದುರ್ಬಲಗೊಳ್ಳಲು ಪ್ರಮುಖವಾಗಿ ದೇವಗಿರಿಯ ಸೆವುಣರು ಮತ್ತು ದ್ವಾರಸಮುದ್ರದ ಹೊಯ್ಸಳರ ನಡುವಿನ ವೈರತ್ವದಿಂದಾಗಿ ಈ ಎರಡು ರಾಜಮನೆತನಗಳು ದುರ್ಬಲಗೊಂಡವು. ತಮಿಳು ದೇಶದ ರಾಜರೊಡನೆ ಇವರು ಹೊಂದಿದ್ದ ಸಂಬಂಧವನ್ನು ಪ್ರಮುಖವಾಗಿ ಪರಿಗಣಿಸಬೇಕು. ಏಕೆಂದರೆ ತಮಿಳುನಾಡಿನ ಆಂತರಿಕ ಮತ್ತು ರಾಜಕೀಯ ವಿಚಾರಗಳಲ್ಲಿ ಹೊಯ್ಸಳರು ಹೆಚ್ಚು ಹೆಚ್ಚು ಹಸ್ತಕ್ಷೇಪ ಮಾಡಿದ್ದರಿಂದ ಉತ್ತರದ ಗಡಿಗಳ ರಕ್ಷಣೆಗೆ ಸಾಕಷ್ಟು ಗಮನ ಕೊಡಲಿಲ್ಲ. ಹೊಯ್ಸಳರ ಶಕ್ತಿಯು 12ನೇ ಶತಮಾನದಲ್ಲಿ ವಿಷ್ಣುವರ್ಧನನ ಕಾಲದ ಮೈಸೂರು ರಾಜ್ಯದಲ್ಲಿ ಚೋಳರ ಭವಿಷ್ಯವು ತೀವ್ರ ಸಂಕಷ್ಟಕ್ಕೆ ಒಳಗಾಯಿತು. ಚೋಳರು ಬಹಳ ಹಿನ್ನೆಡೆಯನ್ನು ಅನುಭವಿಸಿದರು. ತಮ್ಮ ಪ್ರದೇಶದ ಗಮನೀಯ ಭಾಗಗಳನ್ನು ಹೊಯ್ಸಳರಿಗೆ ಬಿಟ್ಟುಕೊಡಬೇಕಾಯಿತು. ಇದರಿಂದ ಹೊಯ್ಸಳರಿಗೂ ಚೋಳರಿಗೂ ವಿವಾಹದ ಸಂಬಂಧದಿಂದಾಗಿ ಚೋಳರಿಗೆ ಸಹಕಾರ ನೀಡಿದರು.

13ನೇ ಶತಮಾನದ ಮಧ್ಯಭಾಗದ ದಕ್ಷಿಣ ಭಾಗದಲ್ಲಿ ಪಾಂಡ್ಯರು ತಮ್ಮ ಅಧಿಪತ್ಯವನ್ನು ಸಾಧಿಸಿದರು. ಸುಂದರಪಾಂಡ್ಯನು ದ್ವಾರಸಮುದ್ರ ಹೊಯ್ಸಳರು ಮತ್ತು ತಂಜಾವೂರಿನ ಹಾಗೂ ಕಾಂಚೀಯ ಚೋಳರ ಮೇಲೆ ಜಯ ಸಾಧಿಸಿದನು. ಇದಲ್ಲದೆ ಹೊಯ್ಸಳರಿಂದ ಶ್ರೀರಂಗಂ ಕ್ಷೇತ್ರವನ್ನು ಕಿತ್ತುಕೊಂಡಿದ್ದರು. ಚೋಳರ ಲಾಭಕ್ಕಾಗಿ ಹೊಯ್ಸಳರ ಮತ್ತು ಪಾಂಡ್ಯರ ನಡುವಿನ ಸಂಬಂಧವನ್ನು ಬೇರ್ಪಡಿಸಿ ಕ್ರಿ.ಶ.1245ರಲ್ಲಿ ಹೊಯ್ಸಳರ ರಾಜ ಸೋಮೇಶ್ವರನನ್ನು ಸೋಲಿಸಿ ರಾಜ್ಯದಿಂದ ಹೊರ ಹಾಕಿದರು. ಪಾಂಡ್ಯರು ಮತ್ತು ಚೋಳರ ನಡುವಿನ ಸಂಬಂಧದಿಂದ ತನ್ನ ರಾಜಧಾನಿಯಾದ ದ್ವಾರಸಮುದ್ರವನ್ನು ಮರೆತುಬಿಟ್ಟಂತೆ ಅಪರೂಪಕ್ಕೆ ಭೇಟಿ ನೀಡುತ್ತಿದ್ದನು. ಹಾಗೂ ಹೊಯ್ಸಳರ ರಾಜಕೀಯ ಚಟುವಟಿಕೆಗಳನ್ನು ನಿಲ್ಲಿಸಿದನು. ಸೋಮೇಶ್ವರ ಮತ್ತು ಬಿಜ್ಜಳ ದೇವಿಯ ಮಗನಾದ ಮೂರನೇ ನರಸಿಂಹನು ದ್ವಾರಸಮುದ್ರವನ್ನು ಆಳುತ್ತಿದ್ದರು. ಇವರಿಬ್ಬರ ನಡುವೆ ಯುದ್ಧವೇರ್ಪಟ್ಟು ಇವರ ಆಡಳಿತದಲ್ಲಿ ಒಗ್ಗಟ್ಟು ಮುರಿಯಿತು ಮತ್ತು ತಮ್ಮ ಸುತ್ತಮುತ್ತಲಿನ ಸೈನ್ಯಾಧಿಕಾರಿಗಳಿಗೆ ತಮ್ಮ ಚಟುವಟಿಕೆಗಳನ್ನು ನಡೆಸಲು ಅವಕಾಶ ದೊರಕಿದಂತೆ ಆಯಿತು.

ಸೇವುಣರು ಹೊಯ್ಸಳರು ಮತ್ತು ದಕ್ಷಿಣ ಭಾರತದ ಇತರ ರಾಜ ಮನೆತನಗಳು ಬದಲಾದ ರಾಜಕೀಯ ಪರಿಸ್ಥಿತಿಯನ್ನು ತಿಳಿಯಲು ವಿಫಲವಾದ್ದರಿಂದ ಉತ್ತರದಲ್ಲಾಗಲೇ

ದೆಹಲಿ ಸುಲ್ತಾನರು ಏಳಿಗೆಗೆ ಬಂದರು. ಹೊಯ್ಸಳರ ದೊರೆ 3ನೇ ಬಲ್ಲಾಳನು ಮತ್ತು ಸೇವುಣರು ಅಲ್ಲಾವುದ್ದೀನ್ ಖಿಲ್ಜಿಯಿಂದ ಪರಾಜಿತಗೊಂಡರು. ಇಷ್ಟೆಲ್ಲಾ ಆದರೂ ತಮಿಳು ಸಾಮ್ರಾಜ್ಯದ ರಕ್ಷಣೆಗಾಗಿ ಹೆಚ್ಚು ಒತ್ತು ನೀಡದೆ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡಲು ಪ್ರಾರಂಭಿಸಿದರು.

ಮಲ್ಲಿಕಾಫರನ ದಂಡಯಾತ್ರೆಗಳ ಮತ್ತು ಇತರ ಮುಸ್ಲಿಂ ಆಕ್ರಮಣಗಳ ಹಾಗೂ ಸ್ಥಳೀಯ ಸಾಮಂತರ ಉಪಟಳದಿಂದ ಹೊಯ್ಸಳರ ಸಾಮ್ರಾಜ್ಯವು ದುರ್ಬಲಗೊಂಡಿತ್ತು. 3ನೇ ಬಲ್ಲಾಳನ ಸಾವಿನಿಂದಾಗಿ ಹೊಯ್ಸಳ ಸಾಮ್ರಾಜ್ಯವು ದಕ್ಷಿಣ ಭಾರತದ ಭೂಪಟದಲ್ಲಿ ಕಣ್ಮರೆಯಾಗಿತ್ತು. 4ನೇ ವಿರೂಪಾಕ್ಷ ಬಲ್ಲಾಳನು ಹೊಯ್ಸಳರ ಸಾರ್ವಭೌಮತ್ವವನ್ನು ಪುನರ್ ಸ್ಥಾಪಿಸಲು ಸಫಲನಾಗಲಿಲ್ಲ. 3ನೇ ಬಲ್ಲಾಳನ ಮರಣದ ನಂತರ ಮಹಾಮಾಂಡಲಿಕನಾದ ಹರಿಹರನು ಹೊಯ್ಸಳರ ರಾಜ್ಯವನ್ನು ಪತನಗೊಳಿಸಿ ಸ್ವತಂತ್ರ ವಿಜಯನಗರ ಸಾಮ್ರಾಜ್ಯವು ಅಸ್ಥಿತ್ವಕ್ಕೆ ಬರಲು ಕಾರಣನಾದನು.

### 1.1 ಭೌಗೋಳಿಕ ಹಿನ್ನೆಲೆ

ಪ್ರಾಕೃತಿಕ ಭೂಗೋಳವು ಸ್ವಾಭಾವಿಕ ಸಸ್ಯವರ್ಗ, ಭೂಮಿ ಮತ್ತು ನದಿಗಳು ಇವುಗಳನ್ನು ಒಳಗೊಂಡಿರುತ್ತದೆ. ಕರ್ನಾಟಕವು ಉತ್ತರದಲ್ಲಿ ಮಹಾರಾಷ್ಟ್ರ, ದಕ್ಷಿಣದಲ್ಲಿ ಕೇರಳ ಮತ್ತು ತಮಿಳುನಾಡು, ಪೂರ್ವದಲ್ಲಿ ಆಂಧ್ರಪ್ರದೇಶ, ಮತ್ತು ಪಶ್ಚಿಮದಲ್ಲಿ ಅರೇಬಿಯನ್ ಸಮುದ್ರವನ್ನು ಹೊಂದಿದ್ದು ಇವುಗಳಿಂದಾಗಿ ಕರ್ನಾಟಕ ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದೆ:

1. ತೀರಪ್ರದೇಶ
2. ಉತ್ತರದ ಮೈದಾನ ಪ್ರದೇಶ
3. ಮಲೆನಾಡು ಪ್ರದೇಶ
4. ದಕ್ಷಿಣದ ಬಯಲು ಪ್ರದೇಶ

### ಕರಾವಳಿ (ತೀರಪ್ರದೇಶ)

ಪಶ್ಚಿಮಘಟ್ಟಗಳು ಮತ್ತು ಅರೇಬಿಯನ್ ಸಮುದ್ರದ ತೀರದ ಕೆಳಭಾಗವು ಮನೋಹರ-ವಾಗಿದ್ದು ಸೌಂದರ್ಯದಿಂದ ಕೂಡಿದೆ. ಇದು ನದಿಗಳಿಂದ ತುಂಬಿದ್ದು ಅಲ್ಲಲ್ಲಿ ಗುಡ್ಡಗಳಿದ್ದು ಪರ್ವತಗಳ ಸಾಲುಗಳಿಂದಾಗಿ ಇಲ್ಲಿ ಹೆಚ್ಚಿನ ಮಳೆಯನ್ನು ಜೂನ್ ಮತ್ತು ಆಗಸ್ಟ್ ತಿಂಗಳಲ್ಲಿ ಸುಮಾರು 254 ರಿಂದ 279 ಇಂಚುಗಳವರೆಗೆ ಪಡೆಯುತ್ತದೆ. ಅಲ್ಲಿನ ಮಣ್ಣು ಗಟ್ಟಿಯಾಗಿದ್ದು

ಸಮುದ್ರದ ಬಳಿಯಲ್ಲಿ ಅಲ್ಲಲ್ಲಿ ಮೆಕ್ಕಲುಮಣ್ಣುಗಳನ್ನು ಹೊಂದಿದೆ. ದಟ್ಟವಾದ ಅರಣ್ಯ ಇರುವುದರಿಂದ ತೆಂಗು ಮತ್ತು ಅಡಿಕೆ ತೋಟಗಳು ಕಂಡುಬರುತ್ತವೆ. ಅಲ್ಲದೇ ಅನೇಕ ಜಾತಿಯ ಬೃಹದಾಕಾರದ ಮರಗಳಿದ್ದು ಆರ್ಥಿಕವಾಗಿ ಬೆಲೆಬಾಳುವ ಬಿದುರು, ಸಾಗುವಾನಿ, ಬೀಟೆ ಮೊದಲಾದ ಮರಗಳಿವೆ. ಪಶ್ಚಿಮ ಕರಾವಳಿಯು ಬಂದರುಗಳನ್ನು ಒಳಗೊಂಡಿದೆ. ಈ ಬಂದರುಗಳ ಮೂಲಕ ಬಹಳ ಹಿಂದಿನಿಂದಲೂ ದೂರ ದೇಶದ ನಡುವೆ ಸಂಪರ್ಕವನ್ನು ಹೊಂದಿತ್ತು. ಈ ಪ್ರದೇಶವು ಉತ್ತರ ಕನ್ನಡ ಜಿಲ್ಲೆಯ ಪಶ್ಚಿಮ ಭಾಗವನ್ನು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಭಾಗವನ್ನೂ ಒಳಗೊಂಡಿದೆ.

## ಉತ್ತರದ ಮೈದಾನ

ಉತ್ತರದ ಮೈದಾನ ಪ್ರದೇಶವು ಬೆಳಗಾವಿ, ಬೀದರ್, ಬಿಜಾಪುರ, ಗದಗ, ಕಲಬುರ್ಗಿ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳನ್ನೊಳಗೊಂಡಿದೆ. ಪಶ್ಚಿಮದ ಜಿಲ್ಲೆಗಳಾದ ಬೆಳಗಾವಿ, ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳು ಪಶ್ಚಿಮ ಘಟ್ಟದ ಅಂಚಿನಲ್ಲಿದ್ದು ಅವು ದಟ್ಟವಾದ ಮರಗಳಿಂದ ಕೂಡಿದ್ದು ಮಹಾರಾಷ್ಟ್ರ ರಾಜ್ಯಕ್ಕೆ ಹೊಂದಿಕೊಂಡಿದೆ. ಉಳಿದ ಶುಷ್ಕ ದಕ್ಷಿಣದ ಮೈದಾನದ ಪ್ರದೇಶಗಳಿಗಿಂತ ಉತ್ತಮವಾದ ನೀರಿನ ಸೌಕರ್ಯವನ್ನು ಹೊಂದಿದೆ. ಬಹಳ ಮುಖ್ಯವಾದ ಕೆರೆಗಳನ್ನು ಮಲಪ್ರಭದ ಗಡಿಯ ಮೇಲೆ ಮತ್ತು ತುಂಗಭದ್ರಾ ಕಣಿವೆಯಲ್ಲಿ ಹಾಗೂ ಭೀಮಾ ನದಿಯ ಪ್ರದೇಶದಲ್ಲಿ ಕಟ್ಟಿಸಲಾಗಿದೆ. ಇಲ್ಲಿಯ ಮುಖ್ಯ ಬೆಳೆಗಳೆಂದರೆ ಜೋಳ, ಗೋಧಿ ಮತ್ತು ಹತ್ತಿ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತಿದೆ.

## ಮಲೆನಾಡು ಪ್ರದೇಶ

ಮಲೆನಾಡು ಘಟ್ಟದ ನೀಳವಾಡ ಗೋಡೆಯ ಮೂಲಕ ಕರಾವಳಿ ಪ್ರದೇಶದಿಂದ ಪ್ರತ್ಯೇಕಿಸಲ್ಪಟ್ಟಿದೆ ಮತ್ತು ಪೂರ್ವದಲ್ಲಿ ಅದು ದಕ್ಷಿಣದ ಮೈದಾನದೊಂದಿಗೆ ಮಿಳಿತವಾಗಿದ್ದು, ಇದು ಅರಣ್ಯಗಳ ಮತ್ತು ಬೆಟ್ಟಗುಡ್ಡಗಳ ಪ್ರದೇಶವಾಗಿದೆ. ಮಲೆನಾಡು ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳನ್ನು ಒಳಗೊಂಡಿದೆ. ಇಲ್ಲಿನ ಹವಾಮಾನವು ಸಾಧಾರಣವಾಗಿ ಬಿಸಿ ಮತ್ತು ಆಂಧ್ರವಾಗಿರುತ್ತದೆ. ಇಲ್ಲಿನ ಮುಖ್ಯ ಬೆಳೆಗಳೆಂದರೆ ಭತ್ತ, ಕಾಫಿ, ಅಡಿಕೆ ಮತ್ತು ತೆಂಗಿನ ಬೆಳೆಗಳು.

## ದಕ್ಷಿಣದ ಮೈದಾನ ಪ್ರದೇಶ

ದಕ್ಷಿಣದ ಮೈದಾನ ಪ್ರದೇಶಗಳು ಬೆಂಗಳೂರು, ಕೋಲಾರ, ಮಂಡ್ಯ, ತುಮಕೂರು ಜಿಲ್ಲೆಗಳನ್ನೊಳಗೊಂಡಿದೆ. ಇಲ್ಲಿನ ನೆಲವು ಪ್ರಮುಖವಾಗಿ ಕೆಂಪು, ಮರಳು ಮಿಶ್ರಿತವಾದದ್ದು.

ಪೂರ್ವದಲ್ಲಿ ವಿಶೇಷವಾಗಿ ಉತ್ತರಾರ್ದ ಮೈದಾನ ಕಪ್ಪು ಮಣ್ಣಿನ ಭಾಗವು ವಿಸ್ತೃತವಾಗಿದೆ. ಇದರ ಪರಿಣಾಮವಾಗಿ ಕಪ್ಪು ಮಿಶ್ರಿತ ಕೆಂಪು ಮಣ್ಣು ಸಿಗುತ್ತದೆ. ಇಲ್ಲಿ ಸುಮಾರು 16000ಕ್ಕೂ ಹೆಚ್ಚಿನ ಕೆರೆಗಳಿವೆ. ಮತ್ತು ಇದರಿಂದ ಕರ್ನಾಟಕಕ್ಕೆ ಕೆರೆಗಳ ನಾಡು ಎಂಬ ಹೆಸರಿದೆ. ಈ ಭಾಗದ ಮುಖ್ಯ ಬೆಳೆಗಳೆಂದರೆ ಭತ್ತ, ರಾಗಿ ಹಾಗೂ ಜೋಳ, ಕಬ್ಬು, ತೆಂಗು ಮತ್ತು ಅಡಿಕೆ ಬೆಳೆಗಳು.

## ನದಿಗಳು

ಕರ್ನಾಟಕದ ಮುಖ್ಯ ನದಿಗಳೆಂದರೆ ಕೃಷ್ಣಾ ಮತ್ತು ಕಾವೇರಿ. ಅವು ಪಶ್ಚಿಮದ ಘಟ್ಟಗಳಿಂದ ಹುಟ್ಟಿ ಪೂರ್ವದ ಕಡೆ ಹರಿದು ಬಂಗಾಳಕೊಲ್ಲಿಯನ್ನು ಸೇರುತ್ತವೆ. ಕೃಷ್ಣಾ ನದಿಯ ಉಪನದಿಗಳೆಂದರೆ ತುಂಗಭದ್ರ, ಭೀಮ, ಘಟಪ್ರಭ, ಮಲಪ್ರಭ, ಮತ್ತು ವೇದಾವತಿ. ಅವು ಉತ್ತರದಲ್ಲಿ ಹರಿದರೆ ಕಾವೇರಿಯ ಉಪನದಿಗಳಾದ ಹೇಮಾವತಿ, ಶಿಂಷಾ, ಅರ್ಕಾವತಿ, ಲಕ್ಷ್ಮಣತೀರ್ಥ, ಲೋಕಪಾವನಿ ಮತ್ತು ಕಬಿನಿ ಇವು ದಕ್ಷಿಣದಲ್ಲಿ ಹರಿಯುವುದರಿಂದ ವ್ಯವಸಾಯಕ್ಕೆ ಸಹಾಯವಾಗಿದೆ. ನದಿಗಳ ಬಗ್ಗೆ ಜನರಿಗೆ ಇದ್ದ ಭಾವನೆಗಳು ಆಧ್ಯಾತ್ಮಿಕವಾಗಿತ್ತು. ಅಲ್ಲದೇ ಆ ದಿನಗಳಲ್ಲಿ ಕೃಷಿಗೆ ಅನುಕೂಲವಾಗುತ್ತಿದ್ದ ಭೂಮಿಯೂ ಸ್ವಲ್ಪವೇ ಆಗಿತ್ತು ಮತ್ತು ನದಿಯ ನೀರೂ ಸಹ ಮಿತಿಯಲ್ಲಿಯೇ ಉಪಯೋಗವಾಗುತ್ತಿತ್ತು. ಭಾರತೀಯ ಸಾಹಿತ್ಯದಲ್ಲಿ ಕೃಷ್ಣ (ಮೈಸೊಲಾಸ್), ಕಾವೇರಿ (ಕಹ್ಬೆರೊಸ್) ಮತ್ತು ಭೀಮ (ಬಂದ) ಎಂದು ಉಲ್ಲೇಖಿಸಲ್ಪಟ್ಟಿವೆ. ಆ ಕಾಲದ ಶಾಸನಗಳಲ್ಲಿಯೂ ಸಹ ನದಿಗಳಾದ ತುಂಗಭದ್ರ, ಕಾವೇರಿ, ಗೋದಾವರಿ ಮತ್ತು ಕಬಿನಿಗಳ ಬಗ್ಗೆ ಉಲ್ಲೇಖವನ್ನು ಮಾಡಿವೆ.

## ಹೊಯ್ಸಳ ಸಾಮ್ರಾಜ್ಯದ ವಿಸ್ತಾರ ಮತ್ತು ಅದರ ಮೇಲ್ಮೈ ಲಕ್ಷಣ

ಹೊಯ್ಸಳರು ತಮ್ಮ ಅಧಿಕಾರದ ತುದಿಯಲ್ಲಿದ್ದಾಗ ಅವರು ತಮ್ಮ ಸಾಮ್ರಾಜ್ಯವನ್ನು ದಕ್ಷಿಣದಲ್ಲಿ ತಂಜಾವೂರಿನಿಂದ ಉತ್ತರಾರ್ದದಲ್ಲಿ ಶೋಲಾಪುರದವರೆಗೆ ಮತ್ತು ಪಶ್ಚಿಮದಲ್ಲಿ ಕೊಡಗಿನಿಂದ ಪೂರ್ವದಲ್ಲಿ ದಕ್ಷಿಣ ಆರ್ಕಾಟ್‌ನವರೆಗೆ ವಿಸ್ತರಿಸಿದರು. ಆದರೆ ಅವರ ಅಧಿಕಾರದ ಮೂಲವು ತುಂಗಭದ್ರ ಮತ್ತು ಕಾವೇರಿ ಪ್ರದೇಶಗಳ ನಡುವೆ ಇದ್ದಿತು ಅಂದರೆ ಮಲೆನಾಡು ಮತ್ತು ದಕ್ಷಿಣದ ಬಯಲು ಪ್ರದೇಶ. ಹಾಗಾಗಿ ಮಲೆನಾಡು ಮತ್ತು ದಕ್ಷಿಣದ ಬಯಲು ಪ್ರದೇಶಗಳು ಹೊಯ್ಸಳರ ಆರ್ಥಿಕತೆಯ ಮೇಲೆ ಹೆಚ್ಚಿನ ಪರಿಣಾಮವನ್ನು ಬೀರುತ್ತಿತ್ತು. ಮೊಟ್ಟಮೊದಲಿಗೆ ಹೊಯ್ಸಳರು ತಮ್ಮ ರಾಜಕೀಯ ಜೀವನವನ್ನು ಫಲವತ್ತಾದ ಕಾವೇರಿ ಕೊಳದ ಬದಲಿಗೆ ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರಾರಂಭಿಸಿದರು. ಕಾವೇರಿ ಕೊಳದ ಆರ್ಥಿಕ ಸಂಪನ್ಮೂಲವು ವಿಷ್ಣುವರ್ಧನನಿಗೆ ಸಾವಿರಾರು ವಿಜಯಯಾತ್ರೆಗಳನ್ನು ಹಮ್ಮಿಕೊಳ್ಳಲು ಮತ್ತು

ವಿವಿಧ ದಿಕ್ಕುಗಳನ್ನು ವಶಪಡಿಸಿಕೊಳ್ಳಲು ದಾರಿಯನ್ನು ನೀಡಿತು. ಮುಂದೆಯೂ ಅವನ ಮೊಮ್ಮಗನಾದ ಎರಡನೆಯ ವೀರಬಲ್ಲಾಳನಿಗೆ ಚೋಳರಿಗೆ ಮತ್ತು ಪಾಂಡ್ಯರಿಗೆ ದಕ್ಷಿಣದಲ್ಲಿ ರಕ್ಷಣೆಯನ್ನು ನೀಡಲು ಅವಕಾಶವನ್ನು ಮಾಡಿಕೊಟ್ಟಿತು. ಮೇಲಿನ ರಾಜರುಗಳಿಗೆ ಈ ವಿಜಯಯಾತ್ರೆಯು ಕೊಯಂಬತ್ತೂರು ಮತ್ತು ಸೇಲಮ್ ಪ್ರದೇಶಗಳ ಮೇಲೆ ಹಿಡಿತವನ್ನು ಸಾಧಿಸಲು ಅವಕಾಶವಾಯಿತು. ಕೊಯಂಬತ್ತೂರು, ಸೇಲಮ್ ಮತ್ತು ಕರ್ನಾಟಕದ ಭೂಮಿಯ ಮೇಲ್ಮೈ ಲಕ್ಷಣಗಳು ಒಂದೇ ತರಹ ಇರುವುದಲ್ಲದೇ ಅದು ಕೋರಮಂಡಲದ ಬಯಲು ಪ್ರದೇಶಕ್ಕಿಂತ ಭಿನ್ನವಾಗಿದೆ. ಇಲ್ಲಿ ಮಳೆಯು ಕಡಿಮೆ ಮತ್ತು ಅವಧಿ ಮತ್ತು ಪ್ರಮಾಣಾವು ವ್ಯತ್ಯಾಸವಾಗುತ್ತಿರುತ್ತದೆ. ಕಾವೇರಿ ನದಿಯು ದಕ್ಷಿಣದಲ್ಲಿ ಕೊಯಂಬತ್ತೂರು, ದಕ್ಷಿಣ ಸೇಲಮ್ ಮತ್ತು ಕೋರಮಂಡಲ ಬಯಲು, ಮತ್ತು ಪೂರ್ವದಲ್ಲಿ ಪಾಲಾರನ್ನು ಸೇರುತ್ತದೆ. ಮುಂದೆ ದಕ್ಷಿಣದ ಮೈದಾನವು ತುಂಗಭದ್ರಾ, ಕಾವೇರಿ ಮತ್ತು ಅದರ ಉಪನದಿಗಳಿಂದ ಉಂಟಾದ ಬಯಲಾಗಿದೆ. ಹೊಯ್ಸಳ ಸಾಮ್ರಾಜ್ಯದ ಭೌಗೋಳಿಕ ನಕ್ಷೆಯಲ್ಲಿ ಕಾವೇರಿ ಮತ್ತು ಅದರ ಉಪನದಿಗಳು ಮುಖ್ಯವಾದರೂ ಅದರ ಬಳಕೆಯು ಕೃಷಿಗೆ ಸಂಬಂಧಪಟ್ಟಂತೆ ಸೀಮಿತವಾಗಿತ್ತು. ಚುರುಕಾದ ಕಾಲುವೆಗಳನ್ನು ನಿರ್ಮಿಸದಿದ್ದರೆ ಈ ನದಿಗಳಲ್ಲಿ ಹರಿಯುತ್ತಿರುವ ನೀರನ್ನು ಕೃಷಿಕಾರ್ಯಗಳಿಗಾಗಿ ವ್ಯಾಪಕವಾಗಿ ಬಳಸಿಕೊಳ್ಳಲು ಆಗುತ್ತಿರಲಿಲ್ಲ. ಕಾಲುವೆಗಳಿಗಾಗಿ ಇಲ್ಲಿ ಎರಡು ಆಧಾರಗಳಿವೆ. ಮೊದಲನೆಯದು ಯಗಚಿ ನದಿಯಿಂದ ನೀರು ತರುವ ಕಾಲುವೆಯಾದರೆ ಇನ್ನೊಂದು ಹರಹು ಕಾಲುವೆ.

ರಾಜ್ಯದ ಸರ್ವೇಕ್ಷಣೆಯನ್ನು 1965ರಲ್ಲಿ ಮಾಡಿದಾಗ ಭೂಪ್ರದೇಶದ ಶೇ.18ರಷ್ಟನ್ನು ಪರೀಕ್ಷಿಸಿ ಆಕ್ರಮಿಸಿದ್ದು ಅದರಲ್ಲಿ ಬಹು ಭಾಗವು ಮಲೆನಾಡಿನಲ್ಲಿದೆ. ಹಾಗಾಗಿ ಹೊಯ್ಸಳರು ಕೃಷಿಗಾಗಿ ಹೆಚ್ಚು ಹೆಚ್ಚು ಭೂಮಿಯನ್ನು ಕೃಷಿಗೆ ಒಳಪಡಿಸುವಂತೆ ಹೊಸ ಸುಧಾರಿತ ಮತ್ತು ವಿಸ್ತರಿತ ನೀತಿಯನ್ನು ಜಾರಿಗೆ ತರುವ ಅವಶ್ಯಕತೆ ಇತ್ತು. ಹೊಯ್ಸಳರು ಈ ಮೇಲಿನ ನೀತಿಗಳನ್ನು ಮಲೆನಾಡು ಮತ್ತು ಬಯಲು ಪ್ರದೇಶಗಳ ಅಭಿವೃದ್ಧಿಗಾಗಿ ಅನುಸರಿಸಿದರೆಂದು ಶಾಸನಗಳು ಉಲ್ಲೇಖಿಸಿವೆ.

ಮಲೆನಾಡು ಪ್ರದೇಶವು ಕೆಂಪು ಮತ್ತು ಕರಿಯ ಮಣ್ಣುಗಳಿಂದ ಆವರಿಸಿದೆ. ಇಲ್ಲಿನ ಮುಖ್ಯ ಬೆಳೆಗಳು ಭತ್ತ ಮತ್ತು ವಾಣಿಜ್ಯ ಬೆಳೆಗಳು. ವಾಣಿಜ್ಯ ಬೆಳೆಗಳೆಂದರೆ ಅಡಿಕೆ, ವಿಳ್ಯಾದೆಲೆ, ಏಲಕ್ಕಿ ಹಾಗೂ ತೆಂಗು ಇಲ್ಲಿನ ಕೃಷಿಕರ ಮುಖ್ಯ ಆದಾಯ ಈ ವಾಣಿಜ್ಯ ಬೆಳೆಗಳಿಂದಲೇ ದಕ್ಷಿಣದಲ್ಲಿರುವುದು ಮುಖ್ಯವಾಗಿ ಕೆಂಪು ಮಣ್ಣು. ಇಲ್ಲಿನ ಮುಖ್ಯ ಬೆಳೆಗಳೆಂದರೆ ಭತ್ತ, ಜೋಳ

ಮತ್ತು ಬೇಳೆಕಾಳುಗಳು. ಕಬ್ಬನ್ನೂ ಕೂಡಾ ಮುಖ್ಯ ಬೆಳೆಯಾಗಿ ಬೆಳೆಯುತ್ತಾರೆ. ಅಲ್ಲದೆ ಇಲ್ಲಿ ತೆಂಗು, ಅಡಿಕೆ ಮತ್ತು ವಿಳ್ಯಾದೆಲೆ. ಈ ಎಲ್ಲಾ ಅಂಶಗಳು ಹೊಯ್ಸಳರ ಶಾಸನಗಳಲ್ಲಿ ಉಲ್ಲೇಖಿತವಾಗಿದೆ.

## 1.2 ಆಧಾರಗಳು

"ಆಧಾರಗಳಿಲ್ಲದೆ ಇತಿಹಾಸವಿಲ್ಲ." ಆದರೆ ಆಧಾರಗಳೆಲ್ಲವೂ ಇತಿಹಾಸವಲ್ಲ. ಆಧಾರಗಳೇ ಇತಿಹಾಸದ ಉಸಿರು. ಚರಿತ್ರೆಯ ಅಧ್ಯಯನ ಮತ್ತು ರಚನೆ ಮೂಲಾಧಾರಗಳನ್ನು ಅವಲಂಬಿಸಿದೆ. ಹೀಗಾಗಿ ಯಾವುದೇ ದೇಶದ ಚರಿತ್ರೆಯನ್ನು ರಚಿಸಬೇಕಾದರೆ ಆಧಾರಗಳ ಅಧ್ಯಯನ ಅತ್ಯಂತ ಅವಶ್ಯಕ. ಏಕೆಂದರೆ ಆಧಾರ ಎಂಬುದು ಆರಂಭ ಬಿಂದುವಾದರೆ, ಸತ್ಯಾನ್ವೇಷಣೆ ಚರಿತ್ರಕಾರನ ಗುರುತರ ಜವಾಬ್ದಾರಿಯಾಗಿರುತ್ತದೆ. ಆದ್ದರಿಂದಲೇ "ಆಧಾರಗಳಿಲ್ಲದೆ ಇತಿಹಾಸವಿಲ್ಲ" ಎಂದು ಹೇಳಲಾಗಿದೆ. ಭಾರತೀಯ ಇತಿಹಾಸದ ಆಕರಗಳು ಅತ್ಯಂತ ಪ್ರಾಚೀನ ಕಾಲದಿಂದ ಹಿಡಿದು ಕ್ರಿ.ಶ.12ನೇ ಶತಮಾನದ ಅಂತ್ಯದವರೆಗೆ ಮತ್ತು 13ನೇ ಶತಮಾನದಿಂದ 18ನೇ ಶತಮಾನದವರೆಗೆ ಹಾಗೂ ತರುವಾಯದ ಅವಧಿಗಳಲ್ಲಿ ಸಾಕಷ್ಟು ವ್ಯತ್ಯಾಸವನ್ನು ಹೊಂದಿವೆ. ಆದರೆ ಪ್ರಾಚೀನ ಭಾರತದ ಚರಿತ್ರೆಯ ರಚನೆಗೆ ಐತಿಹಾಸಿಕ ಕೃತಿಗಳ ಕೊರತೆ ಕಂಡುಬರುವಂತೆ, ದಕ್ಷಿಣ ಭಾರತದ ಚರಿತ್ರೆಯ ರಚನೆಗೆ ಐತಿಹಾಸಿಕ ಕೃತಿಗಳ ಕೊರತೆ ಕಂಡುಬರುತ್ತದೆ. ಪ್ರಾಚೀನ ಭಾರತ ಮತ್ತು ದಕ್ಷಿಣ ಭಾರತದ ಚರಿತ್ರೆಯ ರಚನೆಗೆ ಐತಿಹಾಸಿಕ ಆಧಾರಗಳ ಕೊರತೆ ಎದ್ದು ಕಾಣುವುದರಿಂದ ಭಾರತೀಯರಲ್ಲಿ ಐತಿಹಾಸಿಕ ಪ್ರಜ್ಞೆ ಅಷ್ಟಾಗಿ ಇರಲಿಲ್ಲವೆಂಬುದು ಆಲ್ಬರೂನಿ, ಪ್ರೊ.ಮ್ಯಾಕ್ಸ್ ಮುಲ್ಲರ್, ಡಾ.ಫ್ಲೀಟ್ ಮತ್ತು ಹ್ಯೂಯೆನ್‌ತ್ಸಾಂಗ್‌ರ ಅಭಿಮತವಾಗಿದೆ. ಆದರೆ ಇವರ ಹೇಳಿಕೆಗಳು ಸ್ವಲ್ಪ ಮಟ್ಟಿಗೆ ಸತ್ಯವೆಂದು ಕಂಡುಬಂದರೂ ಸಂಪೂರ್ಣ ಸತ್ಯವಲ್ಲ. ಏಕೆಂದರೆ ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆಯೇ ಇರಲಿಲ್ಲವೆಂದು ಹೇಳುವುದು ಘೋರ ಅಪರಾಧವಾಗುತ್ತದೆ. ಕೆಲವು ಧಾರ್ಮಿಕ ಕೃತಿಗಳು, ಮತೀಯ ಸಂಪ್ರದಾಯಗಳ ಬರಹಗಳು ಹಾಗೂ ಶಾಸನಗಳಲ್ಲಿ ಐತಿಹಾಸಿಕ ಪ್ರಜ್ಞೆಗೆ ಆಧಾರ ದೊರಕುತ್ತದೆ. ಉದಾ: ವೇದಗಳು (10 ರಾಜರ ಯುದ್ಧದ ಉಲ್ಲೇಖವಿದೆ), ಬೌದ್ಧ, ಜೈನ ಬರವಣಿಗೆಗಳು, ಪುರಾಣಗಳು, ಬಾಣನ ಹರ್ಷಚರಿತೆ, ಕಲ್ಹಣನ ರಾಜತರಂಗಿಣಿ, ಬಿಲ್ಹಣನ ವಿಕ್ರಮಾಂಕ ದೇವಚರಿತೆ, ಅಶೋಕನ ಶಾಸನಗಳು. ಈ ಕೃತಿಗಳು ಮತ್ತು ಶಾಸನಗಳಲ್ಲಿ ಭಾರತೀಯರು ತಮಗೆ ಐತಿಹಾಸಿಕ ಪ್ರಜ್ಞೆ ಇತ್ತು ಎಂಬುವುದನ್ನು ತೋರಿಸಿ ಕೊಟ್ಟಿದ್ದಾರೆ. ಒಂದು ವೇಳೆ ನಮ್ಮ ಭಾರತ ಮಾತೆ ಹೆರೋಡೋಟಸ್, ಥ್ಯೂಸಿಡೈಡಸ್ ಮತ್ತು ರೋಮ್‌ನ ಲಿವಿಯಂತಹ ಚರಿತ್ರಾಕಾರರಿಗೆ ಜನ್ಮ ನೀಡಿದ್ದರೆ ನಮ್ಮ ಭಾರತದ ಚರಿತ್ರೆಯೇ

ಬೇರೆಯಾಗುತ್ತಿತ್ತು. ಆದರೂ ಕಲ್ಹಣ ಮತ್ತು ಕೌಟಿಲ್ಯನಂತಹ ವ್ಯಕ್ತಿಗಳಿಗೆ ಜನ್ಮ ನೀಡಿರುವುದು ನಿಜಕ್ಕೂ ಸಮಾಧಾನಕರ ಅಂಶವಾಗಿದೆ. ಒಟ್ಟಿನಲ್ಲಿ ಈವರೆಗೆ ದೊರೆತಿರುವ ಆಕರಗಳನ್ನು ಗಣನೆಗೆ ತೆಗೆದುಕೊಂಡು ದಕ್ಷಿಣ ಭಾರತದ ಚರಿತ್ರೆಯ ಭವ್ಯಭವನವನ್ನು ನಿರ್ಮಿಸುವುದು ಚರಿತ್ರಕಾರನ ಗುರುತರ ಜವಾಬ್ದಾರಿಯಾಗಿರಬೇಕು. ಇಲ್ಲದಿದ್ದರೆ ಚರಿತ್ರೆ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತದೆ ಹಾಗೂ ಹಾಸ್ಯಕ್ಕೆ ಎಡೆ ಮಾಡಿಕೊಡುತ್ತದೆ.

ಆಧಾರಗಳನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ, ಸಾಹಿತ್ಯಾಧಾರಗಳು ಮತ್ತು ಪುರಾತತ್ವ ಆಧಾರಗಳು.

### 1.2.1 **ಪುರಾತತ್ವ ಆಧಾರಗಳು ಅಥವಾ ಪ್ರಾಕ್ತನ ಆಧಾರಗಳು *(Archaeological Sources)***

ದಕ್ಷಿಣ ಭಾರತದ ಆದಿಮಾನವ ಜನಾಂಗಗಳ ಜೀವನವನ್ನರಿಯಲು (ಲಿಖಿತ ಆಧಾರಗಳು ಅಲಭ್ಯವಾದ್ದರಿಂದ) ಮುಖ್ಯವಾಗಿ ಪುರಾತತ್ವ ಶೋಧನೆಯೇ ಪ್ರಧಾನವಾದುದು. ಪುರಾತತ್ವ ಶೋಧನೆಯೆಂದರೆ ಪ್ರಾಚೀನ ಸಂಸ್ಕೃತಿಯ ಅಧ್ಯಯನ ಅಥವಾ ದೇಶದ ಪ್ರಾಚೀನಾವಶೇಷಗಳನ್ನು ಕಂಡು ಹಿಡಿಯುವುದು ಎಂದರ್ಥ. ಹಾಗೆಯೇ ಪ್ರಾಚೀನ ಪಟ್ಟಣಗಳ ಅವಶೇಷಗಳನ್ನು. ನಿವೇಶನಗಳನ್ನು ಭೂಶೋಧನೆಯಿಂದ ನಿರ್ಧರಿಸುವುದು, ಶಾಸನಗಳನ್ನು ಹಡುಕಿ ಅವುಗಳ ಲಿಪಿ, ಕಾಲ, ಚಾರಿತ್ರಿಕ ಅಂಶಗಳನ್ನು ವಿಮರ್ಶಿಸುವುದು, ಹಳೆಯ ನಾಣ್ಯಗಳನ್ನು ವಿಮರ್ಶಿಸುವುದು. ಈ ಪ್ರಾಕ್ತನ ಆಧಾರಗಳು ಶಿಲಾಯುಗದಿಂದ ಕ್ರಿ.ಶ.12ನೇ ಶತಮಾನದ ಶಿಲಾಸ್ಮಾರಕಗಳವರೆಗೆ ವ್ಯಾಪಿಸಿವೆ. ಪುರಾತತ್ವ ಸಂಶೋಧನೆಯಿಂದ ವ್ಯಕ್ತವಾಗುವ ವಿಷಯಗಳಿಗೆ ಸಾಹಿತ್ಯಕ್ಕಿಂತಲೂ ಹೆಚ್ಚು ಪ್ರಾಧಾನ್ಯವಿದೆ. ಏಕೆಂದರೆ ನಮ್ಮ ದೇಶದ ಅನೇಕ ಗ್ರಂಥಗಳ ಕರ್ತೃತ್ವವನ್ನು, ಕಾಲವನ್ನು ನಿರ್ಧರಿಸುವುದು ಕಷ್ಟವಾಗಿದೆ. ಉದಾಹರಣೆಗೆ ಭಾರತೀಯ ಸಂಸ್ಕೃತಿಯಲ್ಲಿ ಕಾಳಿದಾಸ ಮತ್ತು ಭಾರವಿಗಳಿಗೆ ಅಗ್ರಸ್ಥಾನವಿದೆ. ಆದರೆ ಇವರು ಯಾವ ಕಾಲದಲ್ಲಿದ್ದರು ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನದಲ್ಲಿ ಕರ್ತೃವಾದ ರವಿಕೀರ್ತಿ ತಾನು ಕಾಳಿದಾಸ, ಭಾರವಿಗಳಿಗೆ ಸಮಾನವೆಂದು ಹೇಳಿಕೊಂಡಿರುವುದರಿಂದ ಆ ಶಾಸನದ ಕಾಲಕ್ಕೆ ಕ್ರಿ.ಶ.634ಕ್ಕೆ ಹಿಂದೆಯೇ ಈ ಕವಿಗಳಿದ್ದಿರಬೇಕೆಂದು ನಿರ್ಧರಿಸಬಹುದು. ಆದ್ದರಿಂದಲೇ “ಪ್ರಾಚ್ಯ ಸಂಶೋಧನವು ಪ್ರಾಚೀನ ಇತಿಹಾಸದ ಬಿರುಕುಗಳನ್ನು ತುಂಬಲು ಸಹಕಾರಿಯಾಗಿರುತ್ತದೆ” ಎಂಬುದಾಗಿ ರೋಮಿಲಾ ಥಾಪರ್ ಅಭಿಪ್ರಾಯ ಪಟ್ಟಿದ್ದಾರೆ.

ಭಾರತೀಯ ಪುರಾತತ್ವ ಇಲಾಖೆ ಇತ್ತೀಚೆಗೆ ಬೆಳೆಯುತ್ತಿರುವ ಸುಮಾರು ನೂರು ವರ್ಷಗಳ ವಿಜ್ಞಾನವಾಗಿದೆ. ಯೂರೋಪಿನ ವಿದ್ವಾಂಸರೇ ಅದರ ಮೂಲ ಪುರುಷರು. ಅವರು ಭಾರತದ ಭೂತಕಾಲದ ಇತಿಹಾಸವನ್ನು ಶೋಧಿಸಲು ಮತ್ತು ಬೆಳಕಿಗೆ ತರಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಇಂಗ್ಲೆಂಡಿನ ಪ್ರಧಾನಿ ವಿಲಿಯಂ ಪಿಟ್‌ನ ಕಾಲದ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಯಾಗಿದ್ದ “ಸರ್ ವಿಲಿಯಂ ಜೋನ್ಸ್” ಕ್ರಿ.ಶ.1784ರಲ್ಲಿ “ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್” ಎಂಬ ವಿದ್ವತ್ ಸಂಸ್ಥೆಯನ್ನು ಸ್ಥಾಪಿಸಿದನು. ಇದರಿಂದ ಬಂಗಾಳದಲ್ಲಿ ಭಾರತೀಯ ಪುರಾತನ ಅವಶೇಷಗಳ ಅಧ್ಯಯನವು ಪ್ರಾರಂಭವಾಯಿತು. ಕ್ರಿ.ಶ.1785ರಲ್ಲಿ ಚಾರ್ಲ್ಸ್ ವಿಲ್ಕಿನ್ಸ್‌ನು ಭಗವದ್ಗೀತೆ ಮತ್ತು ಹಿತೋಪದೇಶ ಗ್ರಂಥಗಳನ್ನು ಇಂಗ್ಲೀಷ್ ತರ್ಜುಮೆ ಮಾಡಿದನು. ಕ್ರಿ.ಶ.1789ರಲ್ಲಿ ವಿಲಿಯಂ ಜೋನ್ಸ್ ಕಾಳಿದಾಸನ ಅಭಿಜ್ಞಾನ ಶಾಕುಂತಲವನ್ನು ಇಂಗ್ಲಿಷ್‌ಗೆ ಅನುವಾದ ಮಾಡಿದನು. ಕ್ರಿ.ಶ.1801ರ ವೇಳೆಗೆ 50 ಉಪನಿಷತ್ತುಗಳು ಫ್ರೆಂಚ್ ಭಾಷೆಗೆ ತರ್ಜುಮೆಯಾದವು. ಕ್ರಿ.ಶ.1804ರಲ್ಲಿ ಬೊಂಬಾಯಿಯಲ್ಲಿ ಮತ್ತು ಕ್ರಿ.ಶ.1823ರಲ್ಲಿ ಲಂಡನ್ನಿನಲ್ಲಿ “ಏಷ್ಯಾಟಿಕ್ ಸೊಸೈಟಿಗಳು” ಸ್ಥಾಪನೆಯಾದವು. ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್‌ನ ಕಾರ್ಯದರ್ಶಿಯಾಗಿದ್ದ ಜೇಮ್ಸ್ ಪ್ರಿನ್ಸೆಪ್ ಕ್ರಿ.ಶ.1837ರಲ್ಲಿ ಬ್ರಾಹ್ಮಿಲಿಪಿಯಲ್ಲಿದ್ದ ಅಶೋಕನ ಶಾಸನಗಳನ್ನು ಓದಿ ಏಷ್ಯಾಟಿಕ್ ಸೊಸೈಟಿಯ ಪತ್ರಿಕೆಯಲ್ಲಿ ಪ್ರಕಟಿಸಿದರು. ಪ್ರಿನ್ಸೆಪ್‌ನ ಈ ಮಹತ್ತರವಾದ ಕೊಡುಗೆಯು ತೆರೆಯಿಂದ ಮುಚ್ಚಿಹೋಗಿದ್ದ ಪ್ರಾಚೀನ ಶಾಸನಗಳ ಅಧ್ಯಯನದಲ್ಲಿ ಒಂದು ನೂತನ ಯುಗವನ್ನು ಕಾಣುವಂತೆ ಮಾಡಿತು. ಮುಂದೆ ಡಾ.ಕನ್ನಿಂಗ್ ಹ್ಯಾಂ, ಡಾ.ಭವುದಾಜಿ ಮತ್ತು ರಾಜೇಂದ್ರಲಾಲ್ ಮಿತ್ರ, ಭಗವಾನ್‌ಲಾಲ್ ಇಂದ್ರಾಜಿ, ರಾಮಕೃಷ್ಣ ಗೋಪಾಲ, ಬಂಡಾರ್ಕರ್, ವಿಶ್ವನಾಥ ಕಾಶಿನಾಥ ರಾಜವಾಡೆ, ಆರ್.ಜಿ.ಭಂಡಾರ್ಕರ್, ಪ್ರಿನ್ಸೆಪ್ ಬೆಳಗಿಸಿದ ಈ ಜ್ಞಾನಜ್ಯೋತಿಯನ್ನು ಮತ್ತಷ್ಟು ಬೆಳಗುವಂತೆ ಮಾಡಿದರು.

ಕ್ರಿ.ಶ.1857ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಬ್ರಿಟಿಷರ ಕಣ್ಣನ್ನು ತೆರೆಸಿ ಬ್ರಿಟಿಷರು ಭಾರತೀಯ ಚರಿತ್ರೆಯ ಬಗ್ಗೆ ಮತ್ತಷ್ಟು ಆಸಕ್ತಿವಹಿಸುವಂತೆ ಮಾಡಿತು. ಕ್ರಿ.ಶ.1862ರಲ್ಲಿ ಜನರಲ್ ಅಲೆಗ್ಸಾಂಡರ್, ಕನ್ನಿಂಗ್‌ಹ್ಯಾಂನನ್ನು ಸರ್ಕಾರದ ಪುರಾತತ್ವ ಸರ್ವೆಯರ್ ಆಗಿ ನೇಮಕ ಮಾಡಲಾಯಿತು. ಇದು ಭಾರತ ಸರ್ಕಾರವು ಕೈಗೊಂಡ ಮೊದಲನೆಯ ಅಧಿಕೃತ ನಿರ್ಧಾರವಾಗಿತ್ತು ಮತ್ತು ಭಾರತದ ಪ್ರಾಚೀನ ಪರಂಪರೆಯನ್ನು ನಾಶವಾಗದಂತೆ ಕಾಪಾಡಿಕೊಂಡು ಬರುವುದು ಬ್ರಿಟಿಷ್ ಸರ್ಕಾರದ ಕರ್ತವ್ಯವೆಂದು ತಿಳಿದಿದ್ದ ಕ್ಯಾನಿಂಗ್‌ನ ಮೊದಲ ಹೆಜ್ಜೆಯೂ ಇದಾಗಿತ್ತು. ಡಾ.ಕನ್ನಿಂಗ್‌ಹ್ಯಾಂ ಕ್ರಿ.ಶ.1885ರಲ್ಲಿ

ನಿವೃತ್ತವಾದ ಮೇಲೆ ಬರ್ಗೆಸ್, ಪ್ರಲೀಟ್, ರೈಸ್, ಹುಲ್ಷ್, ಕೀಲ್‌ಹಾರನ್, ಬರ್ನಾಫ್, ಮ್ಯಾಕ್ಸ್‌ಮುಲ್ಲರ್ ಲಾಸೆನ್, ವೀಬರ್ ಫರ್‌ಗುಸನ್, ಮ್ಯಾಕ್‌ಡೋನೆಲ್, ರೈಸ್‌ಡೇವಿಡ್ಸ್, ಬ್ಲೂಮ್‌ಫೀಲ್ಡ್, ಬುಹ್ಲರ್ ಪಶ್ಚಿಮ ಭಾರತ ಮತ್ತು ದಕ್ಷಿಣ ಭಾರತದ ಗುಹಾಲಯಗಳನ್ನು ಪರಿಶೋಧಿಸಿ ಅವುಗಳ ಫಲಿತಾಂಶವನ್ನು ಉತ್ತಮವಾದ ಸಂಪುಟಗಳಲ್ಲಿ ಪ್ರಕಟಿಸಿದರು. ಕ್ರಿ.ಶ.೧೮೯೯ರಲ್ಲಿ ಲಾರ್ಡ್‌ಕರ್ಜನ್ನನು ವೈಸ್‌ರಾಯಿಯಾದುದು ಭಾರತೀಯ ಪುರಾತತ್ವ ಚರಿತ್ರೆಯಲ್ಲಿ ಒಂದು ನೂತನ ಯುಗಾರಂಭಕ್ಕೆ ನಾಂದಿಯಾಯಿತು. ಕ್ರಿ.ಶ.೧೯೦೬ರಲ್ಲಿ ಬ್ರಿಟಿಷ್ ಸರ್ಕಾರ "ಕೇಂದ್ರ ಪುರಾತತ್ವ ಇಲಾಖೆ"ಯನ್ನು ಸ್ಥಾಪಿಸಿ ಸರ್ ಜಾನ್‌ಮಾರ್ಷೆಲ್‌ರವರನ್ನು ಅದರ ಮುಖ್ಯಸ್ಥನನ್ನಾಗಿ ನೇಮಿಸಿತು. ಅನಂತರ ದೇಶದ ವಿವಿಧ ಐತಿಹಾಸಿಕ ನಿವೇಶನಗಳಲ್ಲಿ ಭೂಸಂಶೋಧನಾಕಾರ್ಯ ಜರುಗಿತು.

ಪುರಾತತ್ವ ಆಧಾರಗಳನ್ನು ಅಧ್ಯಯನದ ದೃಷ್ಟಿಯಿಂದ 4 ಭಾಗಗಳನ್ನಾಗಿ ವಿಭಜಿಸಲಾಗಿದೆ. ಅವು ಯಾವುವೆಂದರೆ–

1. ಭೂ ಸಂಶೋಧನೆಗಳು(Excavation)
2. ಶಾಸನಗಳು (Inscriptions)
3. ನಾಣ್ಯಗಳು (Coins or Numismatics)
4. ಸ್ಮಾರಕಗಳು (Monuments)

### 1.2.2 ಭೂ ಸಂಶೋಧನೆಗಳು ಅಥವಾ ಭೂ ಉತ್ಖನನ

ದಕ್ಷಿಣ ಭಾರತದ ಇತಿಹಾಸದ ರಚನೆಗೆ ಭೂಸಂಶೋಧನೆಗಳು ಬಹು ಉಪಯುಕ್ತವಾದ ಮಾಹಿತಿಯನ್ನು ಒದಗಿಸುತ್ತವೆ. ಭಾರತೀಯರ ಬಹುಪಾಲು ಅವಶೇಷಗಳು ದಿಬ್ಬಗಳಲ್ಲಿ ಹೂತು ಹೋಗಿವೆ. ದಿಬ್ಬಗಳನ್ನು ಲಂಬವಾಗಿ ಬಾವಿಯಂತೆ ಆಳವಾಗಿ ಅಥವಾ ಮಟ್ಟವಾಗಿ ಸಮತಲದಲ್ಲಿ ಅಗೆಯಬಹುದು. ಇದನ್ನು "ಉತ್ಖನನ" ಎನ್ನುವರು. ಅಂದರೆ ಭೂಮಿಯನ್ನು ಅಗೆದು ಅದರಲ್ಲಿ ಅಡಗಿರುವ ಅವಶೇಷಗಳನ್ನು ಹೊರತೆಗೆದು ವೈಜ್ಞಾನಿಕವಾಗಿ ಪ್ರಯೋಗಗಳಿಗೆ ಒಳಪಡಿಸಿ ಅವುಗಳ ಕಾಲವನ್ನು ನಿರ್ಣಯಿಸುವುದೆ ಭೂ ಸಂಶೋಧನೆ. ಲಂಬ ಉತ್ಖನನ (Horizontal Excavation) ಹಲವು ಸಂಸ್ಕೃತಿಗಳ ಕಾಲಾನುಕ್ರಮ ಸರಣಿಯನ್ನು ತೋರಿಸಿದರೆ,[1] ಸಮತಲ ಉತ್ಖನನವು (Vertical Excavation) ಒಂದೇ ಕಾಲಕ್ಕೆ ಸೇರಿದಂತೆ ಆ ನಿವೇಶನದ ಸಂಸ್ಕೃತಿಯನ್ನು ತೋರಿಸುತ್ತದೆ. ಸಮತಲ ಉತ್ಖನನ ಬಹಳ ದುಬಾರಿಯಾದುದರಿಂದ

ಬಹುಮಟ್ಟಿಗೆ ದಿಬ್ಬಗಳು ಲಂಬ ಉತ್ಖನನಕ್ಕೆ ಒಳಗಾಗಿವೆ. ಭೂ ಸಂಶೋಧನೆಯಿಂದ ದೊರೆತ ಅವಶೇಷಗಳ ಕಾಲಮಾನವನ್ನು ಕಾರ್ಬನ್ 14 (ಸಿ–14) ಮತ್ತು ಪೊಟಾಷಿಯಂ ವಿಧಾನಗಳ ಮೂಲಕ ನಿರ್ಧರಿಸಲಾಗುತ್ತದೆ. ಭೂ ಸಂಶೋಧನೆಗಳಿಂದ ಅನೇಕ ಅನುಕೂಲಗಳಿವೆ.

- ದಕ್ಷಿಣ ಭಾರತದಲ್ಲಿನ ಜನರ ಶಿಲಾಯುಧಗಳನ್ನು ತೋರಿಸಿಕೊಟ್ಟಿವೆ.
- ದಕ್ಷಿಣ ಭಾರತ ಅತ್ಯಂತ ಪ್ರಾಚೀನ ಕಾಲದಿಂದಲೂ ಮಾನವನ ವಾಸಸ್ಥಳವಾಗಿತ್ತು ಎಂಬುದನ್ನು ತೋರಿಸಿಕೊಟ್ಟಿವೆ.
- ಶಿಲಾಯುಗ, ಮಧ್ಯ ಶಿಲಾಯುಗ ಮತ್ತು ನವ ಶಿಲಾಯುಗ ಹಾಗೂ ತಾಮ್ರ ಶಿಲಾಯುಗಗಳ ನಾಗರೀಕತೆಯ ಕುರುಹುಗಳನ್ನು ತೋರಿಸಿಕೊಟ್ಟಿವೆ.
- ದಕ್ಷಿಣ ಭಾರತದ ಜನರು ಬಳಸುತ್ತಿದ್ದ ಮಡಿಕೆಕುಡಿಕೆಗಳು, ವಾಸದ ಮನೆಗಳ ಆಕಾರ, ಆಹಾರ ಧಾನ್ಯಗಳ ಮತ್ತು ಉಪಕರಣಗಳನ್ನು ತೋರಿಸಿಕೊಟ್ಟಿವೆ.
- ಅನೇಕ ದೇಶೀಯ ಮತ್ತು ವಿದೇಶಗಳ ನಾಣ್ಯಗಳನ್ನು ಬೆಳಕಿಗೆ ತಂದಿವೆ.
- ದಕ್ಷಿಣ ಭಾರತ ಮತ್ತು ರೋಮ್ ಮತ್ತಿತರ ದೇಶಗಳೊಡನೆ ಇದ್ದ ನಿಕಟ ವ್ಯಾಪಾರ ಬಾಂಧವ್ಯವನ್ನು ತೋರಿಸಿಕೊಟ್ಟಿವೆ.

ಉತ್ತರ ಭಾರತದಲ್ಲಿ ಪ್ರಾಚೀನ ನಿವೇಶನಗಳ ಸಂಶೊಧನ ಕಾರ್ಯಗಳು ನಡೆದ ರೀತಿಯಲ್ಲೇ, ದಕ್ಷಿಣ ಭಾರತದಲ್ಲೂ ಅನೇಕ ಐತಿಹಾಸಿಕ ನಿವೇಶನಗಳ ಸಂಶೋಧನೆ ನಡೆದಿದೆ. ದಖನ್ ಪ್ರಸ್ಥಭೂಮಿಯು ಪ್ರಾಚೀನ ಮಾನವನನ್ನು ತನ್ನೆಡೆಗೆ ಆಕರ್ಷಿಸಿ, ಅಲ್ಲಿಯೇ ನೆಲೆಸುವಂತೆ ಮಾಡಿ, ತನ್ನ ಸಂಸ್ಕೃತಿಯನ್ನು ಹರಡಲು ಅವಕಾಶ ಮಾಡಿಕೊಟ್ಟಿದೆ. ಹೀಗಾಗಿ ದಕ್ಷಿಣ ಭಾರತದ ದಖನ್ ಭೂಭಾಗವು ಮಾನವನ ಅತ್ಯಂತ ಪ್ರಾಚೀನ ನಿವಾಸವಾಗಿರಬೇಕೆಂದು ಅಭಿಪ್ರಾಯ ಪಡಲಾಗಿದೆ. ಈ ಅಂಶವನ್ನು ಪುಷ್ಠೀಕರಿಸಲು ದಕ್ಷಿಣ ಭಾರತದ ಹಲವು ಭಾಗಗಳಲ್ಲಿ ಭೂ ಉತ್ಖನನಗಳು ನಡೆದಿವೆ. “ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ” ಇಲಾಖೆ, ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ, ಪುಣೆಯ ಡೆಕ್ಕನ್ ಕಾಲೇಜಿನ ಪುರಾತತ್ವ ಇಲಾಖೆ ಹಾಗೂ ತಿರುವಾಂಕೂರು, ಕೊಚ್ಚಿನ್ ಮತ್ತು ಪುದುಕೋಟೆಯ ಪುರಾತತ್ವ ಇಲಾಖೆ–ಯವರು ಉತ್ಖನನಗಳನ್ನು ಮಾಡಿ ಹಲವಾರು ಶೋಧನೆಗಳನ್ನು ಬೆಳಕಿಗೆ ತಂದಿದ್ದಾರೆ. ಈ ನಿಟ್ಟಿನಲ್ಲಿ ರಾಬರ್ಟ್ ಬ್ರೂಸ್‌ಫುಟ್, ಬಿ.ಎಲ್.ರೈಸ್, ಮೆಡೋಸ್ ಟೇಲರ್, ಡಾ.ಎಂ.ಎಚ್. ಕೃಷ್ಣ, ಮಾರ್ಟಿಮರ್ ವ್ಹೀಲರ್, ಆರ್.ವಿ.ಜೋಷಿ, ಡಾ.ಎಂ.ಶೇಷಾದ್ರಿ, ಡಾ.ಬಿ.ಸುಬ್ಬರಾವ್, ಸಂಪತ

ಐಯ್ಯಂಗಾರ್, ಡಾ.ಕೆ.ಪಡ್ಡಯ್ಯ ಮತ್ತು ಇತ್ತೀಚಿಗೆ ತಲಕಾಡಿನ ಭೂಸಂಶೋಧನೆಯಲ್ಲಿ ನಿರತರಾಗಿರುವ ಡಾ. ರಂಗರಾಜುರವರ ಸೇವೆ ಶ್ಲಾಘನೀಯವಾದುದು.

- ಕ್ರಿ.ಶ.1836ರ ಬಳ್ಳಾರಿ ಮತ್ತು ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಅಧ್ಯಯನ ನಡೆಸಿದ ಭೂಗರ್ಭ ಶಾಸ್ತ್ರಜ್ಞ 'ನ್ಯೂ ಬೋಲ್ಡ್' ಎಂಬುವರು ಅಲ್ಲಿನ ಬಂಡೆಮಯ ಪ್ರದೇಶವು ಪ್ರಾಚೀನ ಮಾನವನ ನಿಗೂಢ ನಿವಾಸವಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ.[2]
- ಕ್ರಿ.ಶ.1863ರಲ್ಲಿ ಮದ್ರಾಸ್ ಸಮೀಪದ 'ಪಲವರಂ' ಎಂಬ ಗ್ರಾಮದಲ್ಲಿ ಕಲ್ಲಿನ ಆಯುಧಗಳನ್ನು ಪತ್ತೆಹಚ್ಚಿ ಅದರಿಂದ ಪ್ರೇರೇಪಿಸಲ್ಪಟ್ಟ 'ರಾಬರ್ಟ್ ಬ್ರೂಸ್‌ಫುಟ್' ಎಂಬ ಭೂಗರ್ಭ ಶಾಸ್ತ್ರಜ್ಞ ಮುಂದೆ ಗುಜರಾತ್, ಮಹಾರಾಷ್ಟ್ರ ಮತ್ತು ಕರ್ನಾಟಕಗಳಲ್ಲಿ ಸಂಶೋಧನೆ ನಡೆಸಿ ಅನೇಕ ಶಿಲಾಯುಧಗಳನ್ನು ಸಂಗ್ರಹಿಸಿ ಹಳೆ ಶಿಲಾಯುಗದ ಮಾನವರ ವಾಸಸ್ಥಳಗಳನ್ನು ಗುರುತಿಸಿದ್ದಾರೆ.
- ನವ ಶಿಲಾಯುಗದ ಮಾನವ ತನ್ನ ಆಯುಧಗಳಿಗೆ ಮೆರಗು ಕೊಡಲು ಬಂಡೆಯ ಮೇಲೆ ಉಜ್ಜಿದ ಗೆರೆಗಳು ಬಳ್ಳಾರಿಯ ಉತ್ತರ ಬೆಟ್ಟದಲ್ಲಿ ಸಿಕ್ಕಿವೆ. ಇವುಗಳನ್ನು ರಾಬರ್ಟ್ ಬ್ರೂಸ್ ಫುಟ್‌ರವರು 19-2-1889ರಲ್ಲಿ ಆಲೂರು ತಾಲೂಕಿನ ಹೆಳಲಗುಂಡಿಯಲ್ಲಿ ಪತ್ತೆಹಚ್ಚಿದ್ದಾರೆ.
- ಕರ್ನೂಲ್ ಜಿಲ್ಲೆಯ ಪತ್ತಿಕೊಂಡ ತಾಲ್ಲೂಕು ಕಪ್ಪತರಲ ಬೆಟ್ಟದಲ್ಲಿಯೂ, ಹೈದರಬಾದಿನ ಪುಲ್ಲಯ್ಯನ ಗುಡ್ಡದಲ್ಲೂ ಅತ್ಯುತ್ತಮವಾಗಿ ರಕ್ಷಿಸಲ್ಪಟ್ಟಿರುವ ಆಯುಧಗಳನ್ನು ನಯಮಾಡಲು ಉಜ್ಜಿದ ಗೆರೆಗಳು ಬಂಡೆಯಲ್ಲಿ ಕಂಡುಬಂದಿವೆ. ಡಿರ್ರೆಟ್‌ರವರು 1942ರಲ್ಲಿ ಮಾಡಿದ ಸಂಶೋಧನೆಯಿಂದ ಈ ಗೆರೆಗಳು ಕೊಡಲಿ ತಯಾರಿಕೆಗೆ ಸಂಬಂಧಿಸಿದವೆಂದು ದೃಢಪಟ್ಟಿವೆ.
- ಮಲಬಾರಿನ ಫೆರೋಕ್, ತಿನ್ನವೆಲ್ಲಿ, ಶಿವರಾಯಪುರಂ, ಮಧುರೆ, ಮಾನ್ಮಧುರೆ, ಪಳನಿ, ಸೇಲಂ, ಶಿವರಾಯಪರ್ವತ, ಅರಕಮೇಡು, ಚಂದ್ರಗಿರಿ, ಮಾಸ್ಕಿ, ಬರಗೂರು ಮುಂತಾದ ನಿವೇಶನಗಳಲ್ಲಿ ನಡೆದ ಸಂಶೋಧನೆಯ ಪರಿಣಾಮವಾಗಿ ಶಿಲಾಯುಗ ಮತ್ತು ತಾಮ್ರ ಶಿಲಾಯುಗದ ನಾಗರೀಕತೆಯ ಅಂಶಗಳು ಬೆಳಕಿಗೆ ಬಂದಿವೆ.
- ಗಡಿಗನೂರು, ಪೀಕಾಕ್‌ಹಿಲ್, ರಾಯದುರ್ಗ, ಅಂದೋಣಿ, ಗುಂದೂರ್, ಅಮರಾವತಿ, ಉತ್ತರ ಆರ್ಕಾಟ್, ವೆಲ್ಲೂರು, ಮಲಗಂ, ದಕ್ಷಿಣ ಆರ್ಕಾಟ್, ಪುದುಚೇರಿ, ತಂಜಾವೂರು, ಕುಂಬಕೋಣಂ, ವಾರಂಗಲ್ ಮುಂತಾದ ಕಡೆ ನಡೆದ

ಸಂಶೋಧನೆಗಳಿಂದ ಹೊಳಪು ಕೊಟ್ಟ ಮೊನಚಾದ ಹಿಡಿಯುಳ್ಳ ಕೈಗೊಡಲಿಗಳು ಸಿಕ್ಕಿವೆ.

- ಗುರ್ಜಾಲ, ನಾಗಲ ದಿನ್ನೆ, ತರ್ಮನಹಳ್ಳಿ, ಆನೆಗೊಂದಿ, ಕೊಲ್ಲಪುರ, ಕೊಂಡಾಪುರ, ಪಾಣಿಗಿರಿ, ಬೆನ್ನಲ್, ರಾಯಲಕೊಂಡಸಲ್ಲಿ ಮುಂತಾದ ಕಡೆ ನಡೆದ ಸಂಶೋಧನೆಗಳು ಶಾತವಾಹನರ ಕುಂಬಗಳ ಸ್ಥಳಗಳಾಗಿದ್ದವು ಎಂಬುದರ ಬಗ್ಗೆ ಬೆಳಕನ್ನು ಚೆಲ್ಲುತ್ತವೆ. ಹೀರಿಕಲ್ ಮತ್ತು ವಡಗಾಂವ್‌ಗಳಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಬಳೆಯಚೂರು, ಮಣಿ, ಹೆಂಚು, ಮಡಿಕೆ ಇತ್ಯಾದಿಗಳನ್ನು ಸಂಶೋಧನೆಯಲ್ಲಿ ಡಾ. ಪಂಚಮುಖಿರವರು ಸಂಗ್ರಹಿಸಿದ್ದಾರೆ.
- ಬನವಾಸಿ, ತಾಳಗುಂದ, ಮಾಸ್ಕಿ, ಪಿಕ್ಲಿಹಾಲ್, ತೆಕ್ಕಲಕೋಟೆ, ಬ್ಯಾಡಗಿ, ಮೆಣಸಿ, ಹಲ್ಲೂರು, ಐಹೊಳೆ, ಪಟ್ಟದಕಲ್ಲು ಇತ್ಯಾದಿ ಕಡೆ ನಡೆದ ಸಂಶೋಧನೆಗಳು ಕರ್ನಾಟಕದ ಪ್ರಾಚೀನ ರಾಜಮನೆತನಗಳ ಬಗ್ಗೆ ಹಾಗೂ ದಕ್ಷಿಣ ಭಾರತದ ವಾಯುಗುಣದ ಬಗ್ಗೆ ಮತ್ತು ವ್ಯಾಪಾರ ಸಂಪರ್ಕದ ಬಗ್ಗೆ ಬೆಳಕು ಚೆಲ್ಲುತ್ತವೆ.
- ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ 19ನೇ ಶತಮಾನದ ವೇಳೆಗೆ ಸಂಶೋಧನೆಗಳು ಆರಂಭವಾದವು. ಚಿತ್ರದುರ್ಗ ಕೋಟೆಯ ಪಕ್ಕದಲ್ಲಿ ಒಂದು ಸಣ್ಣನದಿ ಹರಿಯುತ್ತಿರುವ ಕಣಿವೆಯನ್ನು ಚಂದ್ರವಳ್ಳಿ ಎನ್ನುವರು. ಚಿನ್ನವನ್ನು ಪತ್ತೆಹಚ್ಚುವುದಕ್ಕಾಗಿ ಶಾಸ್ತ್ರಜ್ಞರು ಮತ್ತು ಎಂಜಿನಿಯರುಗಳು ಚಂದ್ರವಳ್ಳಿಯಲ್ಲಿ ಪ್ರಾಯೋಗಿಕ ಗುಳಿಗಳನ್ನು ಅಗೆದಾಗ ಶಾತವಾಹನರ ನಾಣ್ಯಗಳು ಸಿಕ್ಕಿದವು. ಅನಂತರ ಕ್ರಿ.ಶ.1909ರಲ್ಲಿ ಮೈಸೂರು ರಾಜ್ಯದ ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದ ಆರ್.ನರಸಿಂಹಾಚಾರ್ ಅವರು ಚಂದ್ರವಳ್ಳಿಯಲ್ಲಿ ಒಂದು ಚೀನಿ ನಾಣ್ಯವನ್ನು ಪತ್ತೆಹಚ್ಚಿದರು. ಕ್ರಿ.ಶ.1909–10ರಲ್ಲಿ ನರಸಿಂಹಾಚಾರ್ ಮತ್ತು ವೆಂಕಟಸುಬ್ಬಯ್ಯನವರು ಚಂದ್ರವಳ್ಳಿಯಲ್ಲಿ 8 ಗುಳಿಗಳನ್ನು ಅಗೆದು ಚಂದ್ರವಳ್ಳಿ ಸಂಬಂಧವಾದ ಮಹಾಭಾರತದ ವೀರರ ಕಥೆಗಳನ್ನು ಪತ್ತೆಹಚ್ಚಿದರು. ವೆಂಕೋಬರಾಯರು ಕೂಡ ಚಂದ್ರವಳ್ಳಿಯಲ್ಲಿ ಸಂಶೋಧನೆ ನಡೆಸಿದರು. ಕ್ರಿ.ಶ.12ರಲ್ಲಿ ಎಂ.ಎಚ್. ಕೃಷ್ಣರವರು ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಚಂದ್ರವಳ್ಳಿಯಲ್ಲಿ ಶೋಧನೆಯನ್ನಾರಂಭಿಸಿದರು. ಈ ಸಂಶೋಧನೆಯಿಂದ ಶಾತವಾಹನರ ಸಂಸ್ಕೃತಿಯೇ ಅತ್ಯಂತ ಮುಖ್ಯವಾಗಿ ಕಂಡುಬಂದಿದೆ. ಚಂದ್ರವಳ್ಳಿ ನಿವೇಶನವನ್ನು ಎಂ.ಎಚ್.ಕೃಷ್ಣ–ರವರು ಆರು ಭಾಗಗಳಾಗಿ ವಿಂಗಡಿಸಿದ್ದರು. ಎಂ.ಎಚ್.ಕೃಷ್ಣರವರ ಚಂದ್ರವಳ್ಳಿ ಸಂಶೋಧನೆಯಿಂದ ಗುಂಡಾದ ಗುಡಿಸಲುಗಳ ತಳಪಾಯಗಳು, ಮಡಿಕೆ ಚೂರುಗಳು, ನವ ಶಿಲಾಯುಗದ ಉಪಕರಣಗಳು ಕ್ರಿ.ಪೂ. 200ರ ಸೀಸದ ನಾಣ್ಯಗಳು, ಪಾತ್ರೆಗಳು,

ಸಮಾಧಿಯಲ್ಲಿ ಬೂದಿ ತುಂಬಿದ ಎರಡು ಮಡಿಕೆಗಳು, ಇಟ್ಟಿಗೆಗಳು, ಹೆಂಚುಗಳು, ವಿಧವಿಧವಾದ ಮೋಹಕ ಬಣ್ಣದ ಗಾಜಿನ ಬಳೆಗಳು ಮತ್ತು ಶಾತವಾಹನ ರಾಜರ ನಾಣ್ಯಗಳು ಬೆಳಕಿಗೆ ಬಂದಿವೆ. ಎಂ.ಎಚ್.ಕೃಷ್ಣರವರಿಗೆ ಅನೇಕ ರೋಮನ್ ನಾಣ್ಯಗಳು ಸಿಕ್ಕಿದ್ದು, ಒಂದುನಾಣ್ಯದ ಮೇಲೆ ಅಗಸ್ಟಸ್‌ನ ಚಿತ್ರ ಹಾಗೂ ಹಿಮ್ಮುಖದಲ್ಲಿ ಗೇಯಸ್ ಮತ್ತು ಲೂಸಿಯಸ್ ಚಿತ್ರಗಳಿದ್ದವೆಂದು ತಿಳಿದುಬಂದಿವೆ.

- ಕ್ರಿ.ಶ.1947ರಲ್ಲಿ ವ್ಹೀಲರ್‌ವರು ಚಂದ್ರವಳ್ಳಿಯಲ್ಲಿ ಉತ್ಖನನವನ್ನು ನಡೆಸಿದರು. ಮಾರ್ಟಿಮರ್ ವ್ಹೀಲರ್ ನಡೆಸಿದ ಭೂ ಸಂಶೋಧನೆಯಿಂದ 55 ನಾಣ್ಯಗಳು ದೊರೆತಿವೆ. ಅವುಗಳಲ್ಲಿ ಶಾತವಾಹನರ ಮುಖ್ಯವಂಶದ ಮೂರು ರಾಜರ ನಾಣ್ಯಗಳು, ಅವರ ಸಾಮಂತರ 15 ನಾಣ್ಯಗಳು ಸಿಕ್ಕಿವೆ. ವ್ಹೀಲರ್ ಚಂದ್ರವಳ್ಳಿಯಲ್ಲಿ ನಡೆಸಿದ ಉತ್ಖನನದಲ್ಲಿ ಟೈಬೀರಿಯಸ್‌ಗೆ ಸೇರಿದ ಒಂದು ದೀನಾರ ನಾಣ್ಯ (ಡೆನೇರಿಯಸ್) ದೊರಕಿದೆ. ಇದರ ವ್ಯಾಸ 0.7 ಹಾಗೂ ತೂಕ 2.89ಗ್ರಾಂ. ಈ ಮೇಲಿನ ನಾಣ್ಯಗಳಲ್ಲದೆ ಚಂದ್ರವಳ್ಳಿಯಲ್ಲಿ ವ್ಹೀಲರ್‌ರವರಿಗೆ ಆರು ರೋಮನ್ ದೀನಾರಗಳು ದೊರಕಿದ್ದು ಅವುಗಳ ವಿವರಗಳು ತಿಳಿದುಬಂದಿಲ್ಲ. ಈ ರೋಮನ್ ನಾಣ್ಯಗಳಿಂದ ವ್ಹೀಲರ್ ಚಂದ್ರವಳ್ಳಿಯ ವಿವಿಧ ಸಂಸ್ಕೃತಿಗಳ ಕಾಲಮಾನವನ್ನು ಖಚಿತವಾಗಿ ನಿರ್ಧರಿಸಲು ಸಾಧ್ಯವಾಯಿತು ಎಂಬ ಅಂಶವನ್ನು ಮರೆಯುವಂತಿಲ್ಲ.
- ಕ್ರಿ.ಶ.1914–15ರಲ್ಲಿ ಹೈದರಬಾದಿನಲ್ಲಿ ಆರ್ಕಿಯಾಲಜಿ ಇಲಾಖೆ ಸ್ಥಾಪನೆಯಾದ ನಂತರ ಕೊಲ್ಲಾಪುರ, ಪೈಥಾನ್, ಮಸ್ಕಿ ಮುಂತಾದ ಕಡೆ ಸಂಶೋಧನೆಗಳು ಜರುಗಿದವು. ಯಾಸ್ಥಾನಿ ಈ ಸ್ಥಳಗಳಲ್ಲಿ ಶಾತವಾಹನ, ಮೌರ್ಯ ಮತ್ತು ಶಿಲಾಯುಗದ ಅವಶೇಷಗಳನ್ನು ಕಂಡುಹಿಡಿದರು. ಹಾಗೆಯೇ ಕೊಲ್ಲಾಪುರದ ಪಂಚಗಂಗಾ ನದಿಯ ದಡದಲ್ಲಿ ಬ್ರಹ್ಮಪುರಿ ಎಂಬ ಪ್ರಾಚೀನ ನಿವೇಶನವನ್ನು ಕ್ರಿ.ಶ.1940ರಲ್ಲಿ ಉತ್ಖನನ ಮಾಡಿದಾಗ ಪುರಾತನ ಕುಂಬಗಳು ಮತು ಮಣ್ಣಿನ ವಿಗ್ರಹಗಳು ಕಂಡುಬಂದಿವೆ. ಕೆ.ಜಿ. ಕುಂದಣಗಾರರು ಕ್ರಿ.ಶ.1942ರಲ್ಲಿ ಕೊಲ್ಲಾಪುರದಲ್ಲಿ ಸಂಶೋಧನೆ ನಡೆಸಿ ಅಡಿಗೆಮನೆ, ಬಚ್ಚಲುಮನೆ, ಕಣಜ ಇತ್ಯಾದಿ ಇಟ್ಟಿಗೆಗಳ ಕಟ್ಟಡಗಳನ್ನು ಬೆಳಕಿಗೆ ತಂದರು.
- ಕ್ರಿ.ಶ.1943ರಲ್ಲಿ ಕೆ.ಎನ್.ದೀಕ್ಷಿತ್ ಕೊಲ್ಲಾಪುರದಲ್ಲಿ ಸಂಶೋಧನೆ ಮಾಡಿದರು. ಇಲ್ಲಿ ಗ್ರೀಕೋ–ರೋಮನ್ ರೀತಿಯ 4 ಅಂಗುಲದ ಎತ್ತರದ ನಗ್ನ ವೃದ್ಧನ ವಿಗ್ರಹ, ರೋಮನ್ ನಾಣ್ಯಗಳನ್ನು ಪೋಣಿಸಿದ ಸರ, ಮೂರು ಅಂಗುಲದ ಎತ್ತರದ ಕಂಚಿನ ಸಿಂಹ, ಕಂಚಿನ ಮಸಿ ಕುಡಿಕೆ, ಲೋಟಗಳು, ಕಂಚಿನ ಘಂಟೆಗಳು, ತಾಮ್ರದ ಆಟದ

ರಥಗಳು, ತೂಗುಹಾಕುವ ದೀಪ, ನೀಲಾಂಜನ, ಧೂಪದ ಪಾತ್ರೆಗಳು, ಕೊಡಲಿ, ಸುತ್ತಿಗೆ, ಶಾತಕರ್ಣಿ ಪುಳಮಾಯಿಯ 28 ನಾಣ್ಯಗಲು ದೊರಕಿವೆ.

- ಮಾಸ್ಕಿ ಸಂಶೋಧನೆಯಲ್ಲಿ ಚಿನ್ನ ಮತ್ತು ಕಬ್ಬಿಣವನ್ನು ಕರಗಿಸುವ ಒಲೆಗಳು, ಶಂಖದ ಬಳೆಗಳು, ಮಣ್ಣಿನ ವಿಗ್ರಹಗಳು, ಮಣಿಗಳು ಕಂಡುಬಂದಿವೆ. ಬಹುಶಃ ಮಾಸ್ಕಿ ಮಣಿಗಳನ್ನು ತಯಾರಿಸುವ ಕಾರ್ಖಾನೆಯಾಗಿದ್ದಿತು. ಕ್ರಿ.ಪೂ 1ನೇ ಶತಮಾನದ ಬ್ರಾಹ್ಮಿ ಅಕ್ಷರಗಳುಳ್ಳ ಮುದ್ರಿಕೆಗಳು,ಕಪ್ಪು-ಕೆಂಪು ಕುಂಭಗಳು ಹೇರಳವಾಗಿ ಸಿಕ್ಕಿವೆ.
- ಕ್ರಿ.ಶ.1939ರಲ್ಲಿ ಮೈಸೂರು ಪ್ರಾಚ್ಯ ಸಂಶೋಧನಾ ಇಲಾಖೆಯವರೂ ಮತ್ತು ಕ್ರಿ.ಶ.1947ರಲ್ಲಿ ಭಾರತದ ಪ್ರಾಚ್ಯ ಸಂಶೋಧನಾ ಇಲಾಖೆಯವರೂ ಬ್ರಹ್ಮಗಿರಿಯಲ್ಲಿ ಭೂ ಸಂಶೋಧನೆ ನಡೆಸಿ ಮೌರ್ಯರ ಮತ್ತು ಶಾತವಾಹನರ ಕಾಲಕ್ಕೆ ಸೇರಿದ ವಸ್ತುಗಳನ್ನು ಬೆಳಕಿಗೆ ತಂದಿದ್ದಾರೆ. ಎಂ.ಎಚ್.ಕೃಷ್ಣ ಮತ್ತು ವ್ಹೀಲರ್ ಸಂಶೋಧನೆ ನಡೆಸಿದರು. ಒಟ್ಟಿನಲ್ಲಿ ಬ್ರಹ್ಮಗಿರಿ ಉತ್ಖನನವು ಮೌರ್ಯರ ನಗರವಾದ ಇಸಿಲವನ್ನು ತೋರಿಸಿದುದು ಮಾತ್ರವಲ್ಲದೆ, ಅನಂತರದ ಇತಿಹಾಸ ಕಾಲವನ್ನೂ ಮತ್ತು ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯ ನೆಲೆಯನ್ನು ತೋರಿಸಿ ಕೊಟ್ಟಿತು.
- ನಾಗಾರ್ಜುನಕೊಂಡ, ಅಮರಾವತಿ, ಜಗ್ಗಯ್ಯಪೇಟೆ, ಹೋಲಿ, ಬೆಜವಾಡ, ಶಾಲಿಹುಂಡ, ಕೊಟ್ಟೂರು ಮುಂತಾದ ಸ್ಥಳಗಳಲ್ಲಿ ನಡೆದಿರುವ ಸಂಶೋಧನೆಗಳಿಂದ ಬೌದ್ಧ ಮತ್ತು ವೈದಿಕ ಮತಗಳ ವಿಷಯಗಳು ತಿಳಿದುಬಂದಿವೆ. ನಾಗಾರ್ಜುನ-ಕೊಂಡದಲ್ಲಿನ ಉತ್ಖನನಗಳು ಸ್ತೂಪಗಳ ಒಂದು ಗುಂಪನ್ನೆ ಬೆಳಕಿಗೆ ತಂದಿವೆ. ಚಿತ್ರ ಫಲಕಗಳು ಪ್ರಾಕೃತ ಶಾಸನಗಳು ವಿಶೇಷವಾಗಿ ಸಿಕ್ಕಿವೆ. ಅಲ್ಲದೆ ತಾಮ್ರಶಿಲಾಯುಗದ ಅವಶೇಷಗಳೂ ಸಿಕ್ಕಿವೆ.
- ತಿನ್ನವೆಲ್ಲಿ ಹತ್ತಿರ ಆದಿತ್ತ ನಲ್ಲೂರನ್ನು ಕ್ರಿ.ಶ.1827ರಲ್ಲಿಯೇ ಡಾ.ಜೇಗರ್ ಸ್ವಲ್ಪ ಸಂಶೋಧಿಸಿದರು. ಅನಂತರದಲ್ಲಿ 'ರೆ' (Rea) ಕ್ರಿ.ಶ.1899ರಿಂದ ಕ್ರಿ.ಶ.1903ರವರೆಗೆ ಸಂಶೋಧನೆ ಮಾಡಿದರು. ನಂತರ ಕ್ರಿ.ಶ.1903-04ರಲ್ಲಿ ಲಪೀಕೆರವರು ಸಂಶೋಧನೆ ಕೈಗೊಂಡರು. ಆದಿತ್ತ ನಲ್ಲೂರಿನಲ್ಲಿ ಕಬ್ಬಿಣದ ಕತ್ತಿಗಳು, ಕಠಾರಿಗಳು, ಚಿನ್ನ ಮತ್ತು ಕಂಚಿನ ಶಿರೋಮಾಲಡ, ಕಂಚಿನ ಪಾತ್ರೆಗಳು ಮತ್ತು ಪ್ರಾಣಿಗಳ ಶಿಲ್ಪಗಳೂ ಸೇರಿದಂತೆ ಬಹುಸಂಖ್ಯೆಯಲ್ಲಿ ಅವಶೇಷಗಳು ದೊರಕಿವೆ.
- ವ್ಹೀಲರ್ ಕ್ರಿ.ಶ.1945ರಲ್ಲಿ ಅರಿಕೆಮೇಡುವಿನಲ್ಲಿ ನಡೆಸಿದ ಸಂಶೋಧನೆಯಿಂದ ಕ್ರಿ.ಪೂ. ಒಂದು ಮತ್ತು ಕ್ರಿ.ಪೂ. ಎರಡನೇ ಶತಮಾನಗಳಲ್ಲಿದ್ದ ಮುಂದುವರಿದ ನಾಗರಿಕತೆಯ

ಉಪಯುಕ್ತ ಮಾಹಿತಿಗಳು ದೊರಕಿವೆ. ಕ್ರಿ.ಶ.1937ರಲ್ಲಿಯೇ ದುಬ್ರಾಯಿಲ್ ಎಂಬುವರು ಅರಿಕೆಮೇಡು ರೋಮನ್ನರ ಕಾಲೋನಿಯೆಂದು ಗುರ್ತಿಸಿದ್ದರು. ಹಾಗಾಗಿ ಅರಿಕೆಮೇಡು ಎಂಬಲ್ಲಿ ಒಂದು ದೊಡ್ಡ ರೋಮನ್ ಪಾಳ್ಯವೇ ಇದ್ದಿತು. ಅವರು ಇಲ್ಲಿಗೆ ಮದ್ಯವನ್ನು ತುಂಬಿಕೊಂಡು ತರುತ್ತಿದ್ದ ಜಾಡಿಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರಕಿವೆ. ವ್ಹೀಲರ್ ಶೋಧನೆ ನಡೆಸಿದ ಅನಂತರ ಕ್ರಿ.ಶ.1951ರವರೆಗೆ ಪಾಂಡಿಚೇರಿಯ ಫ್ರೆಂಚರು, ಆಫ್ಘಾನಿಸ್ತಾನದ ಶೋಧಕ ತಂಡದ ಡಿಬೇರ್ (De Berr) ಮತ್ತು ಎ.ಹಿಲ್ಮೆ (A.Hilme) ಅರಕಮೇಡುವಿನಲ್ಲಿ ನೀರಿನ ಪಂಪ್ ಹಾಕಿ ಸತತವಾಗಿ ನೀರನ್ನು ತೆಗೆಸಿ ರೇವುಪಟ್ಟಣದ ನೌಕಾ ನಿಲ್ದಾಣ, ವರ್ತಕರ ಮನೆಗಳು, ಅಂಗಡಿಗಳು ತಳಪಾಯ ಮತ್ತು ರಸ್ತೆಗಳನ್ನು ಕಂಡು ಹಿಡಿದರು. ಅರಕಮೇಡು ವೀರನ್ನುಪ್ಪಂ, ಮುದ್ರಪಾಳ್ಯಂ, ಸೊತ್ತಕ್ಕಳನಿ ಮುಂತಾದ ಸ್ಥಳಗಳಲ್ಲಿ ಜೆ.ಎಂ.ಕ್ಯಾಸಲ್ ಮುಂತಾದವರು ಸಂಶೋಧನೆ ಮಾಡಿ ಕ್ರಿ.ಪೂ.250ರ ಕೆಂಪು ಕುಂಭ, ಕಂಚು ವಸ್ತುಗಳನ್ನು ಸಂಗ್ರಹಿಸಿದರು. ಗೌರಿಮೇಡು, ಸಂಗಮೇಡು ಮತ್ತು ಅರಿಕೆಮೇಡುಗಳ ಕೆಳಗಿನ ಪದರಗಳಲ್ಲಿ ಮೆಗಾಲಿಥಿಕ್ ಸಂಸ್ಕೃತಿ ಅವಶೇಷಗಳು ಕಂಡುಬಂದಿವೆ.

- ಪಾಂಡಿಚೇರಿಯ ವೀರಪಟ್ಟಣಂನಲ್ಲಿ ಜರುಗಿದ ಸಂಸ್ಕೃತಿ ಸಂಶೋಧನೆಗಳು ರೋಮ್-ನೊಡನೆ ವ್ಯಾಪಾರ ಸಂಬಂಧಗಳು ಇದ್ದುದರ ಕುರುಹುಗಳನ್ನು ತೋರಿಸುತ್ತದೆ.
- ಕ್ರಿ.ಶ.1955ರಲ್ಲಿ ಜೋಷಿಯವರು ಮಲಪ್ರಭಾ ದಂಡೆಯ ಮೇಲಿನ 21 ನಿವೇಶನಗಳನ್ನು ಪರಿಶೋಧಿಸಿದರು. ಅವುಗಳಲ್ಲಿ ಕೈಗೊಡಲಿಗಳು ಮತ್ತು ಸೀಳುವ ಉಪಕರಣಗಳು ದೊರೆತಿವೆ.
- ಕ್ರಿ.ಶ.1955ರಲ್ಲಿ ಮೈಸೂರು ಪುರಾತತ್ವ ವಿಭಾಗದವರು ಟಿ.ನರಸೀಪುರ ಹತ್ತಿರ ಕಾವೇರಿ ನದಿಯ ದಂಡೆಯ ಮೇಲಿರುವ ನಿವೇಶನದಲ್ಲಿ ಭೂ ಶೋಧನೆಯನ್ನು ನಡೆಸಿದರು. ಟಿ.ನರಸೀಪುರದಲ್ಲಿ ಎಂ.ಶೇಷಾದ್ರಿಯವರು ಉತ್ಖನನ ಕಾರ್ಯ ಕೈಗೊಂಡರು. ನವಶಿಲಾಯುಗದ ಒಂದು ಘಟ್ಟವಿರುವುದು ತಿಳಿದುಬಂದಿದೆ. ಇಲ್ಲಿ ಕೆಂಪು ಕುಂಬಗಳು, ಕಲ್ಲು ಕೊಡಲಿಗಳು, ಬೂದುಬಣ್ಣದ ಕುಂಬಗಳು ಮತ್ತು ಅಧಿಕ ಸಂಖ್ಯೆಯಲ್ಲಿ ಪ್ರಾಣಿಗಳ ಮೂಳೆಗಳು ದೊರಕಿವೆ.
- ಸಂಗನಕಲ್ಲಿನಲ್ಲಿ ಸುಬ್ಬರಾವ್ ಅನ್ಸಾರಿ ಮತ್ತು ನಾಗರಾಜ್‌ರಾವ್ ಉತ್ಖನನ ನಡೆಸಿದರು. ಇಲ್ಲಿ ನವಶಿಲಾಯುಗದ ಅವಶೇಷಗಳು ಮತ್ತು ಶಾತವಾಹನರ ಕುಂಬಗಳು ದೊರೆತಿವೆ.

- ಕ್ರಿ.ಶ.1963ರಲ್ಲಿ ನಾಗರಾಜರಾವ್ ಮತ್ತು 1965ರಲ್ಲಿ ಸಂಕಾಲಿಯಾರವರು ತೆಕ್ಕೊಲ ಕೋಟೆಯಲ್ಲಿ ಉತ್ಖನನ ಕಾರ್ಯ ಕೈಗೊಂಡರು. ಧಾರಾವಾಡದ ಹಲ್ಲೂರಿನಲ್ಲಿ ನಾಗರಾಜ್‌ರಾವ್ ಉತ್ಖನನ ಕಾರ್ಯ ನಡೆಸಿದರು. ಈ ಉತ್ಖನನಗಳು ಕರ್ನಾಟಕದ ಪ್ರಾಚೀನ ರಾಜಮನೆತನಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ.
- ಇತ್ತೀಚೆಗೆ ಹಳೆಬೀಡು ಮತ್ತು ಹಂಪಿಯಲ್ಲಿ ನಡೆದ ಸಂಶೋಧನೆಗಳು ಹೊಯ್ಸಳರು ಮತ್ತು ವಿಜಯನಗರದ ಚರಿತ್ರೆಯ ಮೇಲೆ ಬೆಳಕನ್ನು ಚೆಲ್ಲುತ್ತವೆ. ಹಂಪಿ ಉತ್ಖನನ ವಿಜಯನಗರ ಕಾಲದ ಹಲವಾರು ಪ್ರಮುಖ ಕಟ್ಟಡಗಳ ಅವಶೇಷಗಳನ್ನು ಹೊರಚೆಲ್ಲಿವೆ. ಅವುಗಳಲ್ಲಿ ಮುಖ್ಯವಾದವು ಅರಮನೆಯ ಅವಶೇಷಗಳು, ಕಲ್ಯಾಣಿಗಳು ಮತ್ತು ದೇಗುಲಗಳು ಪತ್ತೆಯಾಗಿವೆ. ಅಲ್ಲದೆ ಹಂಪಿ ಉತ್ಖನನದಲ್ಲಿ ಅನೇಕ ಚೀನಿ ನಾಣ್ಯಗಳು ದೊರಕಿದ್ದು ಅವುಗಳ ಅಧ್ಯಯನ ಇನ್ನೂ ನಡೆಯಬೇಕಾಗಿದೆ. ಅವುಗಳಲ್ಲಿ ಕೆಲವು ಹಂಪಿಯ ಮ್ಯೂಸಿಯಂನಲ್ಲಿದೆ.
- ಇತ್ತೀಚೆಗೆ ಕರ್ನಾಟಕ ಸರ್ಕಾರದ ಪರಾತತ್ವ ಇಲಾಖೆ ಮತ್ತು ಮೈಸೂರು ವಿಶ್ವವಿದ್ಯಾನಿಲಯ ಸಂಯುಕ್ತವಾಗಿ ತಲಕಾಡಿನಲ್ಲಿ ಉತ್ಖನನ ನಡೆಸಿದವು. ಇತಿಹಾಸ ಆರಂಭ ಕಾಲಕ್ಕೆ ಸೇರಿದ ಸ್ತರಗಳಲ್ಲಿ ಒಂದು ಒಲೆ, ಮೂಸೆ, ನಾಣ್ಯದ ಅಚ್ಚು ಇಲ್ಲಿ ದೊರಕಿದವು. ಸುಟ್ಟ ಮಣ್ಣಿನಿಂದ ಮಾಡಿದ ಒಂದು ಅಚ್ಚು ದೊರೆತಿದೆ. ಇದು ವೃತತಾಕಾರದಲ್ಲಿದ್ದು, ಇದರಲ್ಲಿರುವ ವಿನ್ಯಾಸ ಟೈಬೀರಿಯನ್ ನಾಣ್ಯದಲ್ಲಿರುವಂತೆ ಲಿವಿಯ ಸ್ಟೂಲಿನ ಮೇಲೆ ಕುಳಿತು ಕೈಯಲ್ಲಿ ರಾಜದಂಡವನ್ನು ಹಿಡಿದಿರುವ ಹಿಮ್ಮುಖಕ್ಕೆ ಸಮನಾಗಿದೆ. ಪಕ್ಕದಲ್ಲಿ ಬರವಣಿಗೆಯಿದೆ. ಈ ಅಚ್ಚಿನ ಮೇಲ್ಭಾಗದಲ್ಲಿ ತೂಬಿಗಾಗಿ ಬಿಟ್ಟ ರಂಧ್ರವಿಲ್ಲ. ಆದುದರಿಂದ ಇದು ನಾಣ್ಯವನ್ನೇ ತಯಾರು ಮಾಡುವ ಅಚ್ಚು ಎಂಬುದು ಖಚಿತವಾಗುತ್ತದೆ. ರೋಮನ್ ನಾಣ್ಯದ ವಿನ್ಯಾಸವನ್ನು ತಲಕಾಡಿನ ಜನರು ಆರಿಸಿಕೊಂಡಿದ್ದು, ಅವರಿಗೆ ರೋಮನ್ ನಾಣ್ಯಗಳ ಪರಿಚಯ ಹಾಗೂ ಬಳಕೆ ಎಷ್ಟರ ಮಟ್ಟಿಗೆ ಇದ್ದಿತು ಎಂಬುವುದನ್ನು ಖಚಿತಪಡಿಸುತ್ತದೆ. ಒಟ್ಟಿನಲ್ಲಿ ಇದೊಂದು ಮುಖ್ಯವಾದ ಅವಶೇಷ.
- ಪ್ರಾಚ್ಯ ಸಂಶೋಧನಾ ಇಲಾಖೆಯ ಡಾ.ಎಂ.ಶೇಷಾದ್ರಿಯವರು ಸನ್ನತಿಯಲ್ಲಿ ನಡೆಸಿದ ಸಂಶೋಧನೆಯಿಂದ ಶಾತವಾಹನ ನಿವಾಸ ಸ್ಥಾನವೊಂದು ಬೆಳಕಿಗೆ ಬಂದಿದೆ. ಎರಡು ಅಂಗುಲ ವ್ಯಾಸವುಳ್ಳ ಜೇಡಿ ಮಣ್ಣಿನ ಒಂದು ಪದಕ ಉತ್ಖನನದಲ್ಲಿ ದೊರೆತಿದೆ. ಇದರ ಮುಮ್ಮುಖದಲ್ಲಿ ಟೈಬೀರಿಯಸ್‌ನ ಚಿತ್ರವಿದೆ. ಹಿಮ್ಮುಖದಲ್ಲಿ ಆಸನದ ಮೇಲೆ ಕುಳಿತಿರುವ

ವೆಸ್ಟ್ ಚಿತ್ರವಿದೆ. ಆಕೆಯ ಕೈಲಿ ರಾಜದಂಡ ಮತ್ತು ರೆಂಬೆಗಳಿವೆ. ಇದನ್ನು ನೋಡಿದ ಕೂಡಲೆ ಇದು ರೋಮನ್ ಚಕ್ರವರ್ತಿ ಟೈಬೀರಿಯಸ್‌ನ ನಾಣ್ಯದ ಮುಮ್ಮುಖ ಮತ್ತು ಹಿಮ್ಮುಖಗಳ ವಿನ್ಯಾಸವೆಂದು ತಿಳಿಯುತ್ತದೆ. ಕರ್ನಾಟಕದ ಜನಗಳಿಗೆ ರೋಮನ್ ನಾಣ್ಯಗಳ ವಿನ್ಯಾಸದ ಪರಿಚಯ ಎಷ್ಟು ಗಾಢವಾಗಿ ಆಗಿದ್ದಿತೆಂದು ಇದರಿಂದ ಊಹಿಸಬಹುದು. ಹಾಗೆಯೇ ಸನ್ನತಿಯಲ್ಲಿ ಬಣ್ಣದ ಚುಕ್ಕೆಯ ಪಾತ್ರೆಗಳು, ಸ್ಪಟಿಕ ಮತ್ತು ಜೇಡಿಮಣ್ಣಿನ ಪಾತ್ರೆ, ಮಣಿಗಳು, ಕಪ್ಪೆಚಿಪ್ಪಿನ ಬಳೆಗಳು, ಶಾತವಾಹನರ ಕಾಲದ ಹೆಂಚಿನ ಚೂರುಗಳು, ಬೌದ್ಧ ಸ್ಮಾರಕಗಳ ಅವಶೇಷಗಳು ದೊರಕಿವೆ. ಸನ್ನತಿಯಲ್ಲಿರುವ ಆಯತ ಸ್ತಂಭಗಳು ನಾಗಾರ್ಜುನಕೊಂಡ ಮತ್ತು ಅಮರಾವತಿಯಲ್ಲಿರುವ ಬೌದ್ಧ ಸ್ಮಾರಕಗಳ ಹೋಲಿಕೆಯನ್ನು ಹೊಂದಿವೆ. ಒಟ್ಟಿನಲ್ಲಿ ಪುರಾತತ್ವ ಇಲಾಖೆ ಹೆಚ್ಚಿನ ಸಾಧನೆ ಮಾಡಿದೆ. ಆದರೆ ಮಾಡಬೇಕಾದ ಸಂಶೋಧನ ಕಾರ್ಯ ಇನ್ನೂ ಬೇಕಾದಷ್ಟಿದೆ.

### 1.2.3 ಶಾಸನಗಳು (Inscriptions)

ಕರ್ನಾಟಕದ ಇತಿಹಾಸದ ಬಗೆಗಿನ ನಮ್ಮ ಜ್ಞಾನವು ಇಪ್ಪತ್ತನೆಯ ಶತಮಾನದ ಆರಂಭಕಾಲದಿಂದ ಗಣನೀಯವಾಗಿ ಹೆಚ್ಚಿದೆ. ಹಲವು ಪುರಾತತ್ವ ಅವಶೇಷಗಳು ಮತ್ತು ಸಾಹಿತ್ಯ ಕೃತಿಗಳು ಮಾಹಿತಿಯ ಮೂಲಗಳನ್ನು ಬೆಳಕಿಗೆ ತಂದಿವೆ. ಇದರಿಂದ ಕರ್ನಾಟಕದ ಇತಿಹಾಸವನ್ನು ಮುಖ್ಯವಾಗಿ ಹೊಯ್ಸಳರ ಇತಿಹಾಸವನ್ನು ಅಧ್ಯಯನ ಮಾಡಲು ಅನುಕೂಲವಾಗಿದೆ.

ಈ ಶೋಧನೆಗಳ ಶ್ರೇಯ ಮುಖ್ಯವಾಗಿ ಪಾಶ್ಚಾತ್ಯ ವಿದ್ವಾಂಸರೂ ಶಾಸನತಜ್ಞರೂ ಆದ ಕನ್ನಿಂಗ್‌ಹ್ಯಾಂ, ಜೆ.ಎಫ್.ಫ್ಲೀಟ್ ಮತ್ತು ಬಿ.ಎಲ್.ರೈಸ್‌ರವರಿಗೆ ಸಲ್ಲುತ್ತದೆ. ಅಂದಿನ ಬಾಂಬೆ ಸಂಸ್ಥಾನಕ್ಕೆ ಸೇರಿದ ಕರ್ನಾಟಕದ ಉತ್ತರ ಭಾಗಗಳ ಅನೇಕ ಶಾಸನಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸಿ ಡಾ.ಫ್ಲೀಟ್ ಪ್ರಕಟಿಸಿದರು. ಎಪಿಗ್ರಾಫಿಯಾ ಕರ್ನಾಟಿಕಾದ ಹನ್ನೆರಡು ಸಂಪುಟಗಳನ್ನು ಬಿ.ಎಲ್.ರೈಸ್‌ರವರು ಪ್ರಕಟಿಸಿದರೆ, ಉಳಿದ ನಾಲ್ಕು (14–17) ಸಂಪುಟಗಳನ್ನು ಮೈಸೂರು ವಿಶ್ವವಿದ್ಯಾನಿಲಯದ ಪುರಾತತ್ವ ವಿಭಾಗ ಅನುವಾದ ಮತ್ತು ಟಿಪ್ಪಣಿಗಳ ಸಹಿತ ಹೊರತಂದಿತು. ಇವುಗಳ ಜೊತೆಗೆ ಶಾಸನದ ಪಠ್ಯಭಾಗಗಳನ್ನು ಅವುಗಳ ಲಿಪ್ಯಂತರ ಮತ್ತು ಸಂದರ್ಭಸೂಚಿಯೊಂದಿಗೆ ಪ್ರಕಟಿಸಲಾಗಿದೆ. ಹೊಯ್ಸಳ ಕಾಲದ ಪಟ್ಟಣಗಳು ಮತ್ತು ದೇವಾಲಯಗಳ ಇತಿಹಾಸವನ್ನು ಇವು ಮತ್ತಷ್ಟು ಶ್ರೀಮಂತಗೊಳಿಸಿದವು.

ಈಗ ಎಪಿಗ್ರಾಫಿಯಾ ಕರ್ನಾಟಿಕಾ ಮತ್ತು ಮೈಸೂರಿನ ಪುರಾತತ್ವ ವರದಿಗಳಲ್ಲಿರುವ ಶಾಸನಗಳನ್ನು ಪುನರ್‌ವಿಮರ್ಶೆ ಮಾಡಿ, ಮರುಸಂಪಾದಿಸುವ ಕೆಲಸವನ್ನು ಮೈಸೂರು ವಿಶ್ವವಿದ್ಯಾಲಯ ಕೈಗೊಂಡಿದೆ. ಅಲ್ಲದೆ ಎಪಿಗ್ರಾಫಿಯಾ ಇಂಡಿಕಾ, ಇಂಡಿಯನ್ ಆಂಟಿಕ್ವೆರಿ, ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಮತ್ತು ಹೈದರಾಬಾದ್ ಆರ್ಕಿಯಾಲಾಜಿಕಲ್ ಸೀರೀಸ್‌ಗಳು ಹಲವಾರು ಹೊಯ್ಸಳ ಶಾಸನಗಳನ್ನು ಪ್ರಕಟಿಸಿವೆ. ಧಾರಾವಾಡ ಕನ್ನಡ ಸಂಶೋಧನಾ ಸಂಸ್ಥೆಯ ಬಳಿ ಮುಂಬಯಿ-ಕರ್ನಾಟಕಕ್ಕೆ ಸೇರಿದ ಕೆಲವು ಶಾಸನಗಳಿವೆ.

ಅಧ್ಯಯನದ ವಿಷಯದಡಿಯಲ್ಲಿ ಸಾಕಷ್ಟು ಹೊಯ್ಸಳ ಶಾಸನಗಳು ಬರುತ್ತವೆ. ಒಟ್ಟು ಶಾಸನಗಳ ಸಂಖ್ಯೆ ಸುಮಾರು ೨೦೦೦ದಷ್ಟಿವೆ. ಇವುಗಳಲ್ಲಿ ಹೆಚ್ಚಿನ ಶಾಸನಗಳು ಹಾಸನ, ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಿಂದ ದೊರೆತಿವೆ. ಆದರೆ ಅವುಗಳಲ್ಲಿ ಕೆಲವು ಹಾಳಾಗಿದ್ದು ತುಂಡೂ ಆಗಿಬಿಟ್ಟಿವೆ. ಕೆಲವೇ ಕೆಲವು ಪೂರ್ಣವಾಗಿ ಹಾಳಾಗಿವೆ. ಶಾಸನಗಳಲ್ಲಿನ ಪಠ್ಯಗಳು ಕಾವ್ಯಶೈಲಿಯಲ್ಲಿವೆ. ಅವುಗಳನ್ನು ಕಂದ, ವೃತ್ತ, ಚಂಪು ಇತ್ಯಾದಿ ಛಂದಸ್ಸಿನಲ್ಲಿ ರಚಿಸಿ ತಾಮ್ರಪತ್ರಗಳು ಮತ್ತು ಕಲ್ಲಿನ ಮೇಲೆ ಕೆತ್ತಲಾಗಿದೆ. ಅವು ಕನ್ನಡ, ಸಂಸ್ಕೃತ ಮತ್ತು ತಮಿಳು ಲಿಪಿಗಳಲ್ಲಿವೆ.[3]

ಮೇಲ್ನೋಟಕ್ಕೆ ಈ ಶಾಸನಗಳು ಧರ್ಮಾರ್ಥಕ್ಕಾಗಿ ನೀಡಿದ ದಾನಕಾಣಿಕೆಗಳ ದಾಖಲೆ-ಗಳೆಂಬಂತೆ ತೋರಿದರೂ ಅವುಗಳನ್ನು ಸೂಕ್ಷ್ಮವಾಗಿ ಅದ್ಯಯನ ಮಾಡಿದಾಗ ಸಮಾಜದ ಸರ್ವತೋಮುಖ ಅಭಿವೃದ್ಧಿಯಲ್ಲಿ ಪ್ರಭುತ್ವದ ಚಟುವಟಿಕೆಗಳನ್ನು ಅವು ಸಾದರಪಡಿಸುತ್ತವೆ. ಆಡಳಿತ ಯಂತ್ರದಲ್ಲಿನ ಹಲವು ಖಾತೆಗಳ ಸಂಖ್ಯೆ, ದಾನದ ಪರಿಕಲ್ಪನೆ, ವರ್ಣಾಶ್ರಮ ಧರ್ಮವನ್ನಾಧರಿಸಿದ ಸಾಮಜಿಕ ಸಂರಚನೆ, ಅವುಗಳ ನಡುವಿನ ಚಲನಶೀಲತೆ, ಹದಿನೆಂಟು ಸಮಯಗಳು ಹಾಗೂ ಇನ್ನಿತರ ವಿಷಯಗಳ ಬಗ್ಗೆ ಈ ಶಾಸನಗಳು ನಮಗೆ ಮಾಹಿತಿ ನೀಡುತ್ತವೆ.[4] ಉದಾಹರಣೆಗೆ, ನಾಲ್ಕು ವೇದಗಳಲ್ಲಿ ಬರುವ ಮಹಾದಾನಗಳನ್ನು ರಾಜರು ಮಾಡುತ್ತಿದ್ದರೆಂಬುದು ಇವುಗಳಿಂದ ತಿಳಿಯುತ್ತದೆ. ಇಮ್ಮಡಿ ಬಲ್ಲಾಳನ ನೆರಳಗೆ ತಾಮ್ರಪತ್ರವು ಬ್ರಾಹ್ಮಣರನ್ನು ನೆಲೆಗೊಳಿಸುವ ಬಗ್ಗೆ, ಕಲಿಕೆಗೆ ನೀಡುವ ಉತ್ತೇಜನದ ಬಗ್ಗೆ ಹೇಳುತ್ತದೆ. ಅನ್ನದಾನ ಮತ್ತು ಸಂತರ್ಪಣೆ ಈ ಕಾಲದ ಮುಖ್ಯ ಲಕ್ಷಣವಾಗಿತು.[5]

ಹೀಗೆ ಹೊಯ್ಸಳ ಶಾಸನಗಳ ಅಧ್ಯಯನವು ಮೇಲೆ ಹೇಳಿದ ವಿಷಯಗಳ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲುತ್ತದೆ. ವಂಶ, ವಿವಾಹ, ಹರಿಹರ ಪಂಥ ಇತ್ಯಾದಿ ಪರಿಕಲ್ಪನೆಗಳ ಬಗ್ಗೆ ಶಾಸನಗಳು ತಕ್ಕಮಟ್ಟಿಗೆ ಪುರಾವೆಗಳನ್ನೊದಗಿಸುತ್ತವೆ. ಹೊಯ್ಸಳ ಸಮಾಜದ ಉನ್ನತಿಗೆ ಸಂಬಂಧಿಸಿದಂತೆ

ರಾಜ್ಯಾಡಳಿತದ ಚಟುವಟಿಕೆಗಳೇನೆಂಬುದನ್ನು ಸ್ಥೂಲವಾಗಿ ಅಧ್ಯಯನ ಮಾಡಲು ಇವು ಸಾಕಷ್ಟು ನೆಲೆಗಳನ್ನು ಒದಗಿಸುತ್ತವೆ.

### 1.2.4 ಸ್ಮಾರಕಗಳು

ಹೊಯ್ಸಳ ಸಾಮ್ರಾಜ್ಯದಾದ್ಯಂತ ನಮಗೆ ಅನೇಕ ಸ್ಮಾರಕಗಳು ದೊರೆಯುತ್ತವೆ. ಹೊಯ್ಸಳ ದೇವಾಲಯದ ಶಿಲ್ಪಗಳು ಜನರ ಹಲವಾರು ಚಟುವಟಿಕೆಗಳನ್ನು ನಮ್ಮ ಮುಂದೆ ಬಿಚ್ಚಿಡುತ್ತವೆ. ಉದಾಹರಣೆಗೆ, ಚನ್ನರಾಯಪಟ್ಟಣ ತಾಲೂಕಿನ ನುಗ್ಗೆಹಳ್ಳಿಯ ಲಕ್ಷ್ಮೀನಾರಾಯಣ ದೇವಾಲಯದ ಹೊರಗೋಡೆಯ ಮೂರನೇ ಸಾಲಿನಲ್ಲಿ ಗೊಲ್ಲರ ದಿನಚರಿಯ ಚಿತ್ರಣವಿದೆ. ಇದೇ ರೀತಿ, ಸೋಮನಾಥ ದೇವಾಲಯದ ಹೊರಗೋಡೆಯ ಮೂರನೇ ಸಾಲಿನಲ್ಲಿ ಪುತ್ರಕಾಮೇಷ್ಟಿಯಾಗ ಮತ್ತು ದಶರಥ ರಾಜನ ಗಂಡುಮಕ್ಕಳ ನಾಮಕರಣ ವಿಧಿಯ ಅತ್ಯಂತ ಸ್ಪಷ್ಟ ಚಿತ್ರಣವನ್ನು ಕಾಣಬಹುದು. ಬೇಲೂರಿನ ಚೆನ್ನಕೇಶವ ದೇವಾಲಯದ ನಾಲ್ಕು ಬದಿಗಳಲ್ಲಿರುವ ಸಣ್ಣ ಗೋಪುರಗಳ ಮೇಲಿರುವ ಶಿಲ್ಪಗಳಲ್ಲಿ ಕುಸ್ತಿಯ ಹಲವು ಭಂಗಿಗಳನ್ನು ಕೆತ್ತಲಾಗಿದೆ. ಕೃಷ್ಣನನ್ನು ತೊಟ್ಟಿಲಿಗೆ ಹಾಕುವ ಶಾಸ್ತ್ರದ ಸುಂದರ ಚಿತ್ರಣವನ್ನು ಅಮೃತಪುರದ ದೇವಾಲಯದಲ್ಲಿ ನಾವು ಕಾಣಬಹುದು. ಹೀಗೆ ದೇವಾಲಯದ ಶಿಲ್ಪಗಳ ಅಧ್ಯಯನವು ಆ ಕಾಲದ ಸಾಮಾಜಿಕ-ಧಾರ್ಮಿಕ ಆಚರಣೆಗಳನ್ನು ಅರಿಯಲು ನಮಗೆ ನೆರವಾಗುತ್ತವೆ.

### 1.2.5 ಸಾಹಿತ್ಯಾಧಾರಗಳು

ಪುರಾತತ್ವ ಆಧಾರಗಳ ಜೊತೆಗೆ ಸಾಹಿತ್ಯ ಕೃತಿಗಳು ಸಹ ಹೊಯ್ಸಳ ಸಮಾಜದ ಬಹುಮುಖಿ ಚಟುವಟಿಕೆಗಳ ಅಧ್ಯಯನಕ್ಕೆ ಅತ್ಯಮೂಲ್ಯ ಮಾಹಿತಿಯನ್ನು ಒದಗಿಸುತ್ತವೆ. ಚಾರಿತ್ರಿಕ ವ್ಯಕ್ತಿಗಳ ಸುತ್ತಮುತ್ತಲಿನ ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳ ಚಿತ್ರಣವನ್ನು ಅವು ನಮಗೆ ನೀಡುತ್ತವೆ.[6] ಆ ಕಾಲದ ಜನರ ಜೀವನದ ನೈಜ ಚಿತ್ರಣವನ್ನು ಅವು ನಮಗೆ ನೀಡುತ್ತವೆ. ಶಾಸನಗಳು ನಮಗೆ ಅಸ್ಥಿಪಂಜರವನ್ನು ಒದಗಿಸಿದರೆ, ಸಾಹಿತ್ಯವು ಅದಕ್ಕೆ ಆರ್ಥಿಕ-ಸಾಮಾಜಿಕ ರಕ್ತಮಾಂಸವನ್ನು ತುಂಬಿಸಿ ಸಾಂಸ್ಕೃತಿಕ ತೊಡಿಗೆಯನ್ನು ತೊಡಿಸುತ್ತದೆ. ಆದರೂ ಸಾಹಿತ್ಯಾಧಾರವನ್ನು ಪರೀಕ್ಷಿಸಿ ಈ ಪದವನ್ನು ಹಾಗೆಯೇ ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಅದರಿಂದ ಹುಟ್ಟುವ ತೀರ್ಮಾನಗಳನ್ನು ಮಾತ್ರ ನಾವು ಪುರಾವೆಯೆಂದು ಪರಿಗಣಿಸಬಹುದು. ಹೊಯ್ಸಳ ಕಾಲದಲ್ಲಿ ಸಮೃದ್ಧವಾದ ಸಾಹಿತ್ಯ ಕೃಷಿ ನಡೆದಿದೆ. ಸಾಹಿತ್ಯಾಧಾರಗಳನ್ನು ಸಂಸ್ಕೃತ, ಕನ್ನಡವೆಂದು ಎರಡು ಭಾಗಗಳಾಗಿಸಿ ಅಧ್ಯಯನ ಮಾಡಬಹುದು. ಕನ್ನಡ ಸಾಹಿತ್ಯವನ್ನು ಜೈನ, ಶೈವ ಮತ್ತು ವಚನ ಸಾಹಿತ್ಯವೆಂಬ ಮೂರು ಭಾಗಗಳಲ್ಲಿ ಪರಿಶೀಲಿಸಬಹುದು.

### 1.2.5.1 ಸಂಸ್ಕೃತ ಕೃತಿಗಳು

ಇಮ್ಮಡಿ ವಿದ್ಯಾಚಕ್ರವರ್ತಿಯ 'ಗದ್ಯಕರ್ಣಾಮೃತ'ವು ಅರೆಚಾರಿತ್ರಿಕ ಸಂಸ್ಕೃತ ಗದ್ಯ-ವಾಗಿದೆ. ವಿದ್ಯಾಚಕ್ರವರ್ತಿಯ ಇಡೀ ವಂಶವು ಹೊಯ್ಸಳ ಕಾಲದಲ್ಲೇ ಇದ್ದಿತ್ತು. ಉದಾಹರಣೆಗೆ, ಮೊದಲನೆ ವಿದ್ಯಾಚಕ್ರವರ್ತಿಯು ಇಮ್ಮಡಿ ಬಲ್ಲಾಳನ ಆಸ್ಥಾನದಲ್ಲಿದ್ದರೆ, ವೈದ್ಯನಾಥನು ಇಮ್ಮಡಿ ನರಸಿಂಹನ ಕಾಲದಲ್ಲಿದ್ದ. ಇಮ್ಮಡಿ ವಿದ್ಯಾಚಕ್ರವರ್ತಿಯು ಹೊಯ್ಸಳ ಸೋಮೇಶ್ವರನ ಆಶ್ರಯ-ದಲ್ಲಿದ್ದರೆ, ವಾಸುದೇವ ಕವಿಯು ಮುಮ್ಮಡಿ ನರಸಿಂಹನ ಆಸ್ಥಾನದಲ್ಲಿದ್ದ. ಮಹಾದೇವ ಅಥವಾ ಮುಮ್ಮಡಿ ವಿದ್ಯಾಚಕ್ರವರ್ತಿಯು ಮುಮ್ಮಡಿ ಬಲ್ಲಾಳನ ಆಸ್ಥಾನದಲ್ಲಿದ್ದ. 'ರುಕ್ಮಿಣಿ ಕಲ್ಯಾಣ'ವು ಆತನ ಇನ್ನೊಂದು ಕೃತಿ. 'ಗದ್ಯಕರ್ಣಾಮೃತ'ದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಪೌರಾಣಿಕ ಹಿನ್ನಲೆಯಿದ್ದು ಮುಂಬರಲಿರುವ ಚಾರಿತ್ರಿಕ ಘಟನೆಗಳ ನಿರೂಪಣೆ ಇದೆ. ಇಮ್ಮಡಿ ನರಸಿಂಹನನ್ನು ಶಿವನೆಂದೂ ಕಳಾಲದೇವಿಯನ್ನು ಪಾರ್ವತಿಯೆಂದೂ ನಿರೂಪಿಸಲಾಗಿದೆ.

### 1.2.5.2 ಕನ್ನಡ ಕೃತಿಗಳು

ಈ ಕಾಲದಲ್ಲಿ ಅನೇಕ ಕನ್ನಡ ಕೃತಿಗಳು ರಚಿತವಾದವು. ಹೊಯ್ಸಳ ಸಮಾಜದಲ್ಲಿ ಆಗಿಂದಾಗ್ಗೆ ನಡೆಯುತ್ತಿದ್ದ ಬದಲಾವಣೆಗಳು ಮತ್ತು ಚಟುವಟಿಕೆಗಳ ಚಿತ್ರಣವನ್ನು ನಮಗೆ ನೀಡುವ ಕೆಲವು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು.

ರುದ್ರಭಟ್ಟನ 'ಜಗನ್ನಾಥ ವಿಜಯ'ವನ್ನು (ಸಂ:ಡಾ.ಆರ್.ಶಾಮಶಾಸ್ತ್ರಿ) ಕ್ರಿ.ಶ.1180ರಲ್ಲಿ ಸಜ್ಜೆವಳ್ಳ ಚಂದ್ರಮೌಳಿಯನ್ನು ಸ್ತುತಿಸಲು ಇಮ್ಮಡಿ ಬಲ್ಲಾಳನ ಕಾಲದಲ್ಲಿ ರಚಿಸಲಾಯಿತು. ರುದ್ರಭಟ್ಟ ಬ್ರಾಹ್ಮಣ ಕವಿಯಾಗಿದ್ದ. ಜಗನ್ನಾಥ ವಿಜಯದಲ್ಲಿ ಹದಿನೆಂಟು ಅಧ್ಯಾಯಗಳಿವೆ. ಕೃಷ್ಣನ ಕತೆಯ ನಿರೂಪಣೆ ಇದರಲ್ಲಿದೆ. ಕಾವ್ಯದ ಎರಡನೆ ಭಾಗದಲ್ಲಿ ವೃತ್ತಿಗಳು, ಕ್ರೀಡೆಗಳು, ಆಟಗಳು ಮತ್ತು ಲಾಜಾಹೋಮದಂತಹ ಮದುವೆಯ ಶಾಸ್ತ್ರವಿಧಿಗಳ ನಿರೂಪಣೆಯಿದೆ.[7]

ಜನ್ನನ 'ಅನಂತನಾಥಪುರಾಣ'ವು ಜೈನಸಾಹಿತ್ಯದ ಮೇರುಕೃತಿಯಾಗಿದೆ. ಹೊಯ್ಸಳ ಶಾಸನಗಳಲ್ಲಿ ಜನ್ನಕವಿಯನ್ನು ಜನ್ನ, ಜನ್ನಯ್ಯ, ಜನ್ನಿಗನೆಂದು ಕರೆಯಲಾಗಿದೆ. ತನ್ನ ಪಾಂಡಿತ್ಯಕ್ಕಾಗಿ ಅವನು ಕವಿಚಕ್ರವರ್ತಿಯೆಂಬ ಬಿರುದನ್ನು ಗಳಿಸಿದ್ದ. ಕನ್ನಡ ಅಧ್ಯಯನ ಸಂಸ್ಥೆಯ ದೇವೇರಪ್ಪ ಎಚ್. ಮತ್ತು ಪದ್ಮನಾಭ ಎಂ.ಸಿ.ಯವರು ಸಂಪಾದಿಸಿ 1972ರಲ್ಲಿ ಪ್ರಕಟಿಸಿದ ಈ ಕೃತಿಯಲ್ಲಿ ಹದಿನಾಲ್ಕನೆಯ ತೀರ್ಥಂಕರ ಅನಂತಜಿನ್ನನ ಕಥೆಯಿದೆ. ಈ ಕಾವ್ಯದಲ್ಲಿ ಸಿದ್ಧಿಯ ಪರಿಕಲ್ಪನೆಯಂತಹ ಶಾಸ್ತ್ರ ನಿಯಮಗಳ ನಿರೂಪಣೆಯಿದೆ. ಈತನ

ಮತ್ತೊಂದು ಕೃತಿ 'ಯಶೋಧರ ಚರಿತೆ' ಅಹಿಂಸೆಯ ತತ್ವವನ್ನೂ ಜೀವದಯಾಷ್ಟಮಿನೋಂಪಿ ವ್ರತದ ಮಹಿಮೆಯನ್ನೂ ಎತ್ತಿಹಿಡಿಯುತ್ತದೆ.

'ನೇಮಿನಾಥ ಪುರಾಣ' ಮತ್ತು 'ಲೀಲಾವತೀ ಪ್ರಬಂಧ'ಗಳು ನೇಮಿಚಂದ್ರನ ಎರಡು ಜೈನ ಕಾವ್ಯಗಳಾಗಿವೆ. ಈ ಕವಿಯ ಇಮ್ಮಡಿ ಬಲ್ಲಾಳನ ಕಾಲದಲ್ಲಿದ್ದ. 'ನೇಮಿನಾಥ ಪುರಾಣ' ಅಥವಾ 'ಅರ್ಧನೇಮಿ'ಯಲ್ಲಿ ಇಪ್ಪತ್ತೆರಡನೆಯ ತೀರ್ಥಂಕರನ ಕತೆಯಿದೆ. 'ಲೀಲಾವತಿ ಪ್ರಬಂಧ'ದಲ್ಲಿ ರಾಜಕುಮಾರಿ ಲೀಲಾವತಿಯ ವಿದ್ಯಾರ್ಜನೆಯ ಬಗ್ಗೆ ತಿಳಿಯಬಹುದು. ನಿಜವಾದ ಪ್ರೇಮವು ವಿವಾಹದಲ್ಲಿ ಕೊನೆಗೊಳ್ಳುವ ಕಥೆಯಿದು. ವಿವಾಹದ ಶಾಸ್ತ್ರವಾದ ಧಾರೆಯ ಅಂದಿನ ಸಾಮಾಜಿಕ ಆಚರಣೆಗಳಲ್ಲಿ ಒಂದಾಗಿತ್ತು ಎಂಬುದು ಇದರಿಂದ ತಿಳಿಯುತ್ತದೆ.

ನಯಸೇನನ 'ಧರ್ಮಾಮೃತ'ವು ಮಾಹಿತಿಯ ಭಂಡಾರವೇ ಆಗಿದೆ. ಗದಗ ತಾಲೂಕಿನ ಮಾಲಗುಂಡದಲ್ಲಿ ನೆಲೆಸಿದ್ದ ಅಗ್ರಗಣ್ಯ ಬೋಧಕರ ಕುಟುಂಬಕ್ಕೆ ಸೇರಿದವನು ನಯಸೇನ. ಇವನ ಕೃತಿಯು ಚಂಪೂಕಾವ್ಯ ಶೈಲಿಯಲ್ಲಿದೆ. ಹತ್ತನೆಯ ಅಧ್ಯಾಯವು ವೇಶ್ಯೆಯರ ಶಿಕ್ಷಣವನ್ನು ಎತ್ತಿಹಿಡಿಯುತ್ತದೆ. ಹೊಯ್ಸಳರ ಕಾಲದಲ್ಲಿ ಈ ವಿಷಯವು ಹೆಚ್ಚು ಚರ್ಚೆಯಲ್ಲಿತ್ತು.

ವೀರಶೈವ ಕವಿಗಳಲ್ಲಿ ಹರಿಹರ, ರಾಘವಾಂಕರನ್ನು ಇಲ್ಲಿ ಸ್ಮರಿಸಬಹುದು. ಹರಿಹರ ಕವಿಯು ಮೊದಲನೇ ನರಸಿಂಹನ ಆಸ್ಥಾನದಲ್ಲಿ ಲೆಕ್ಕಿಗನಾಗಿದ್ದ. ನಂತರ ರಾಜಾಶ್ರಯವನ್ನು ತೊರೆದು ಹಂಪೆಗೆ ಬಂದು ನೆಲೆಸಿದ. ಹರಿಹರ ತನ್ನ ಜೀವಿತಾವಧಿಯಲ್ಲಿ ವೀರಶೈವ, ಜೈನ, ಬ್ರಾಹ್ಮಣ ಮತ್ತು ವೈಷ್ಣವ ಪಂಥಗಳ ನಡುವಿನ ತೀವ್ರ ಸೆಣಸಾಟವನ್ನು ಕಂಡ. ಈತ ತನ್ನ ರಗಳೆಗಳು ಮತ್ತು 'ಗಿರಿಜಾಕಲ್ಯಾಣ' ಕೃತಿಗಳಿಂದ ಜನಪ್ರಿಯನಾಗಿದ್ದಾನೆ. ಪಿ.ಜಿ.ಹಳಕಟ್ಟಿಯವರು ಸಂಪಾದಿಸಿರುವ 'ಹರಿಹರನ ರಗಳೆಗಳು' ಕೃತಿಯಲ್ಲಿ ಬರುವ ವೈಜಕವ್ವೆ, ಆದಯ್ಯ, ಏಕಾಂತದ ರಮಿತಂದೆ ಇತ್ಯಾದಿ ರಗಳೆಗಳಲ್ಲಿ ಜೈನ ಮತ್ತು ಶೈವಮತಗಳ ನಡುವಿನ ಧಾರ್ಮಿಕ ವ್ಯಾಜ್ಯದ ಬಗ್ಗೆ ಮಾಹಿತಿ ದೊರೆಯುತ್ತದೆ. ವೀರಶೈವ ಮತದ ಬಲವನ್ನು ಈ ಕವಿ ಚೆನ್ನಾಗಿ ನಿರೂಪಿಸಿದ್ದಾನೆ. 'ಬಸವರಾಜದೇವರರಗಳೆ'ಯು ಬಸವಣ್ಣನ ಕತೆಯನ್ನು ಹೇಳುತ್ತದೆ. 'ಗಿರಿಜಾ ಕಲ್ಯಾಣ'ವು ಹಿಂದೂ ವಿವಾಹ ಸಂಪ್ರದಾಯಕ್ಕೆ ಹಿಡಿದ ಕನ್ನಡಿಯಾಗಿದೆ.

ಹೊಯ್ಸಳ ಕಾಲದ ಮತ್ತೊಬ್ಬ ಜನಪ್ರಿಯ ಕವಿ ರಾಘವಾಂಕ. 'ಹರಿಶ್ಚಂದ್ರ ಕಾವ್ಯ', 'ಸೋಮನಾಥ ಚರಿತೆ', 'ಸಿದ್ಧರಾಮ ಚರಿತೆ' ಇವನ ಸುಪ್ರಸಿದ್ಧ ಕೃತಿಗಳು. 'ಸೋಮನಾಥ ಚರಿತೆ'

ಜೈನ–ಶೈವ ವ್ಯಾಜ್ಯದ ಬಗ್ಗೆ ಹೇಳುತ್ತದಾದರೆ, ಸಿದ್ಧರಾಮಚರಿತೆ'ಯು ಸಮಾಜ ಸುಧಾರಕ ಸಿದ್ಧರಾಮನ ಜನೋಪಕಾರಿ ಚಟುವಟಿಕೆಗಳನ್ನು ಒಳಗೊಂಡಿದೆ. 'ಹರಿಶ್ಚಂದ್ರ ಕಾವ್ಯ'ವು ಹೊಯ್ಸಳ ಸಮಾಜದ ಸಾಮಾಜಿಕ ಸಂರಚನೆಯ ಬಗ್ಗೆ ಅರಿವು ನೀಡುತ್ತದೆ.

ಬಿ.ಬೊ.ಹಂಡಿಯವರು ಸಂಪಾದಿಸಿರುವ ಕೆರೆಯ ಪದ್ಮರಸನ 'ದೀಕ್ಷ ಬೋಧೆ'ಯು ಮತ್ತೊಂದು ವೀರಶೈವ ಕೃತಿಯಾಗಿದೆ. ಗುರುಗಳು ತಮ್ಮ ಶಿಷ್ಯರಿಗೆ ದೀಕ್ಷಾತತ್ವಗಳನ್ನು ಹೇಳಿಕೊಡುವ ಚಿತ್ರಣ ಇದರಲ್ಲಿದೆ. ಈ ಕೃತಿಯಲ್ಲಿ ಕವಿ ಸಮಾಜದ ಕೆಡುಕುಗಳನ್ನು ಹೊರಗೆಡವಿದ್ದಾನೆ.

ಆರ್.ಸಿ.ಹಿರೇಮಠರು ಸಂಪಾದಿಸಿದ ಪದ್ಮನಾಂಕನ 'ಪದ್ಮರಾಜ ಪುರಾಣ' (ಕ್ರಿ.ಶ.1400) ಕೃತಿಯು ಶೈವ ಮತ್ತು ವೈಷ್ಣವರ ನಡುವಿನ ಧಾರ್ಮಿಕ ವಾದವಿವಾದ ಮತ್ತು ಚರ್ಚೆಗಳ ಅಧ್ಯಯನಕ್ಕಾಗಿ ಮುಖ್ಯ ಆಕರವಾಗಿದೆ. ಇಮ್ಮಡಿ ನರಸಿಂಹನ ಮಂತ್ರಿಯೂ ಆಸ್ಥಾನಕವಿಯೂ ಆಗಿದ್ದ ಕೆರೆಯ ಪದ್ಮರಸನ ವಂಶಕ್ಕೆ ಸೇರಿದ ಪದ್ಮನಾಂಕ ಕವಿಯು ಪದ್ಮರಸನ ಜೀವನ ಮತ್ತು ಸಾಧನೆಗಳನ್ನು ಈ ಕೃತಿಯ ಮೂಲಕ ಸಾರುತ್ತಾನೆ. ಈ ಕಾವ್ಯದ ಹತ್ತನೇ ಅಧ್ಯಾಯದಲ್ಲಿ ಕೆರೆಯ ಪದ್ಮರಸ ಮತ್ತು ತ್ರಿಭುವನ ತಾತರ ನಡುವೆ ನಡೆದ ಧಾರ್ಮಿಕ ವಾದವಿವಾದವನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಜೊತೆಗೆ, ವಿಷ್ಣುವಿನ ದಶಾವತಾರದ ಬಗ್ಗೆ ಟೀಕೆಮಾಡಿ ಶಿವನ ಮಹತ್ವವನ್ನು ಎತ್ತಿಹಿಡಿಯಲಾಗಿದೆ. ಕೊನೆಯಲ್ಲಿ ತ್ರಿಭುವನ ತಾತ ವೈಷ್ಣವ ಮತದಿಂದ ಶೈವಮತಕ್ಕೆ ಮತಾಂತರ ಹೊಂದುತ್ತಾನೆ.

ಮಲ್ಲಿಕಾರ್ಜುನನ 'ಕಾವ್ಯಸಾರ' ಅಥವಾ 'ಸೂಕ್ತಿಸುಧಾರ್ಣ'ವು ಕನ್ನಡ ಪದ್ಯಗಳ ಭಂಡಾರವೇ ಆಗಿದೆ. ಪ್ರತಿ ಅಧ್ಯಾಯದಲ್ಲಿರುವ ದೀರ್ಘವಾದ ಪ್ರಕಟಣಾ ಮಾಹಿತಿಯ ಪ್ರಕಾರ ಹೊಯ್ಸಳ ರಾಜ ಸೋಮೇಶ್ವರನನ್ನು ಸ್ತುತಿಸಲು ಈ ಕಾವ್ಯವನ್ನು ರಚಿಸಲಾಗಿದೆ. ಹೊಯ್ಸಳ ಕಾಲದ ಬೇಡರ ದಿನಚರಿಯನ್ನು ಈ ಕಾವ್ಯದಲ್ಲಿ ಬಣ್ಣಿಸಲಾಗಿದೆ.[8]

ಸಮಾಜದ ಸಂರಚನೆಯ ತಳಗಟ್ಟನ್ನು ವಿಶ್ಲೇಷಿಸಲು ವಚನ ಸಾಹಿತ್ಯ ಬಹಳ ಉಪಯುಕ್ತವಾದದ್ದು ಎಸ್.ಎಂ.ಅಂಗಡಿಯವರು ಸಂಪಾದಿಸಿರುವ 'ಬಸವಣ್ಣನ ವಚನಗಳು' ಕೃತಿಯು ಕಾಯಕವೇ ಕೈಲಾಸ ಮತ್ತು ಕರ್ತವ್ಯಪರತೆಯನ್ನು ಎತ್ತಿ ಹಿಡಿಯುತ್ತದೆ. ಸಮಾಜದ ದೌರ್ಬಲ್ಯಗಳ ಅಧ್ಯಯನಕ್ಕಾಗಿ 'ಶಿವಶರಣೆಯರ ವಚನಗಳು' ಮುಖ್ಯ ಕೃತಿಗಳಲ್ಲೊಂದಾಗಿದೆ.

ಕಾಳವ್ವೆ, ಕದಿರೆ ರೇಮವ್ವೆ ಮತ್ತು ಅಮ್ಮುಗೆ ರಾಯಮ್ಮನ ವಚನಗಳು ಚತುವರ್ಣ ಪದ್ಧತಿಯ ನಿಷ್ಠುರತೆಯನ್ನು ಬಹಿರಂಗಗೊಳಿಸುತ್ತವೆ. ಅಮ್ಮುಗೆ ರಾಯಯಮ್ಮನಂತೂ ಪವಿತ್ರಗ್ರಂಥಗಳು ಬರೀ ಸುಳ್ಳುಕಂತೆ ಎನ್ನುವಷ್ಟು ಟೀಕಿಸುತ್ತಾಳೆ.

## 1.3 ಹೊಯ್ಸಳರ ನಾಣ್ಯಗಳು

ಕರ್ನಾಟಕದಲ್ಲಿ ವಿಶೇಷ ಪ್ರಾಮುಖ್ಯತೆಯನ್ನು ಪಡೆದು ಜಗತ್ಪ್ರಸಿದ್ಧವಾದ ದೇವಾಲಯ-ಗಳನ್ನು ನಿರ್ಮಿಸಿದ ಹೊಯ್ಸಳರ ನಾಣ್ಯಗಳ ವಿಷಯದಲ್ಲಿ ನಮಗೆ ತಿಳಿದಿರುವ ಮಾಹಿತಿ ಅತ್ಯಲ್ಪ. ಕರ್ನಾಟಕದ ಇತಿಹಾಸದಲ್ಲಿ ಹೊಯ್ಸಳರ ರಾಜ್ಯಭಾರದ ವಿಷಯವನ್ನು ತಿಳಿಯಲು ನಾಣ್ಯಗಳು ಬಹಳ ಸಹಾಯಕವಾಗಿವೆ. ಹೊಯ್ಸಳರ ನಾಣ್ಯಗಳು ಚಾಲುಕ್ಯರ ನಾಣ್ಯಗಳಿಗಿಂತ ಬೇರೆಯಾಗಿವೆ. ಕೆಲವೊಂದು ಹೋಲಿಕೆಗಳು ಮೊದಲ ರಾಜರ ಕಾಲದಲ್ಲಿ ಕಂಡುಬರುತ್ತವೆ. ಹೊಯ್ಸಳರ ಕಾಲದಲ್ಲಿ ಹೊನ್ನು, ಪಣ, ಗದ್ಯಾಣ, ವೀಸ, ಬಳ ಮತ್ತು ಕನಿ ನಾಣ್ಯಗಳು ಬೆಳಕಿಗೆ ಬಂದಿವೆ. 163 grain, 11/2 grain ತೂಕದ ಚಿನ್ನದ ನಾಣ್ಯಗಳು ದೊರಕಿವೆ.[9]

ಹೊಯ್ಸಳ ರಾಜರಲ್ಲಿ ಮೊದಲನೆಯವನಾದ ವಿನಯಾದಿತ್ಯನು ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಿದನು. ಈ ನಾಣ್ಯಗಳ ಮುಂಭಾಗದಲ್ಲಿ 5 ಸಿಂಹಗಳು ಮಧ್ಯದಲ್ಲಿ 'ಶ್ರೀ' ಎಂದು, ಹಿಂಭಾಗದಲ್ಲಿ ಕನ್ನಡದಲ್ಲಿ 'ವಿನಯ' ಎಂಬ ಬರವಣಿಗೆಯು ಕಂಡುಬರುತ್ತದೆ. ಇದು 5.2 grain ತೂಕವಿದೆ. ವಿಷ್ಣುವರ್ಧನನ ನಾಣ್ಯಗಳ ಮುಂಭಾಗದಲ್ಲಿ 2 ಸಿಂಹಗಳನ್ನು ಕಾಣುತ್ತೇವೆ. ಜೊತೆಗೆ ಸೂರ್ಯ-ಚಂದ್ರರುಗಳ ಚಿತ್ರಗಳು ಇವೆ. ಹಿಂಭಾಗದಲ್ಲಿ ಕನ್ನಡ ಲಿಪಿಯಲ್ಲಿರುವ "ಶ್ರೀ ತಲಕಾಡುಗೊಂಡ" ಎಂಬ ಮೂರುಸಾಲಿನ ಕನ್ನಡ ಬರವಣಿಗೆಯು ಕಂಡುಬರತ್ತವೆ. ವಿಷ್ಣುವರ್ಧನನು ತಲಕಾಡನ್ನು ವಶಪಡಿಸಿಕೊಂಡಿದ್ದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.[1] ಈ ವಿಜಯದ ಜ್ಞಾಪಕಾರ್ಥವಾಗಿ ವಿಷ್ಣುವರ್ಧನನು ಈ ರೀತಿಯ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇವುಗಳ ಮುಂಭಾಗದಲ್ಲಿ ಸಿಂಹದ ಮೇಲೆ ಕುಳಿತಿರುವ ದುರ್ಗಿಯ ಚಿತ್ರವಿದೆ. ದುರ್ಗಿಯು ಕಿರೀಟವನ್ನು ಧರಿಸಿ ಶಂಖ ಮತ್ತು ಚಿತ್ರಗಳನ್ನು ಎರಡು ಕೈಯಲ್ಲಿ ಹಿಡಿದಿರುವ ಚೆನ್ನಾಗಿ ಕಾಣುತ್ತದೆ. ಇನ್ನೂ ಎರಡು ಕೈಗಳಲ್ಲಿರುವ ಆಯುಧಗಳು ಸ್ಪಷ್ಟವಾಗಿ ಕಾಣುವುದಿಲ್ಲ. ದುರ್ಗಿಯ ಎರಡು ಭಾಗಗಳಲ್ಲಿ ಸೂರ್ಯ ಮತ್ತು ಚಂದ್ರರುಗಳ ಚಿತ್ರಗಳಿವೆ. ಹಿಂಭಾಗದಲ್ಲಿ "ಶ್ರೀನೊಳಂಬವಾಡಿಗೊಂಡ" ಎಂಬ ಕನ್ನಡ ಬರಹವಿದೆ. ವಿಷ್ಣುವರ್ಧನನು ನೊಳಂಬರನ್ನು ಸೋಲಿಸಿ ಅವರ ರಾಜ್ಯವಾದ ನೊಳಂಬವಾಡಿಯನ್ನು ವಶಪಡಿಸಿಕೊಂಡು "ನೊಳಂಬವಾಡಿ-ಗೊಂಡ" ಎಂಬ ಬಿರುದನ್ನು ಧರಿಸಿದನು. ಈ ವಿಜಯದ ಜ್ಞಾಪಕಾರ್ಥವಾಗಿ ವಿಷ್ಣುವರ್ಧನನು

ಈ ನಾಣ್ಯಗಳನ್ನು ಅಚ್ಚು ಹಾಕಿಸಿದನು. ವಿಷ್ಣುವರ್ಧನನ ಕೊನೆಯ ನಾಣ್ಯಗಳು ಮೊದಲಿನಂತೆಯೇ ಇದ್ದು ಕೊನೆಯ ನಾಣ್ಯದಲ್ಲಿ "ಶ್ರೀಮಲೆಪರೊಳಗೊಂಡ" ಎಂಬ ಶಾಸನವು ಹಿಂಭಾಗದಲ್ಲಿ ಶಾರ್ದೂಲಗಳ ಚಿತ್ರವೂ ಇದೆ.[10]

ಹೊಯ್ಸಳ ದೊರೆ 1ನೇ ನರಸಿಂಹನು ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇವನ ನಾಣ್ಯಗಳು ಸುಮಾರು 63 grain ತೂಕವಿದ್ದು ನಾಣ್ಯದ ಮುಂಭಾಗದಲ್ಲಿ ಸಿಂಹದ ಮೇಲೆ ಕುಳಿತಿರುವ ದುರ್ಗಾದೇವಿಯ ಚಿತ್ರಣವಿದ್ದು ಹಿಂಭಾಗದಲ್ಲಿ "ಶ್ರೀಪ್ರತಾಪನರಸಿಂಹ" ಎಂಬ ಕನ್ನಡ ಲಿಪಿಯ ಬರವಣಿಗೆಯು ಇದೆ. ಇವು ಹೆಚ್ಚಿನ ಮೌಲ್ಯದ ಗದ್ಯಾಯಣ ನಾಣ್ಯಗಳೆರ-ಬೇಕೆಂದು ಹೇಳಬಹುದು.

ಹೊಯ್ಸಳರು ಹೆಚ್ಚಿನ ಶಾಸನಗಳನ್ನು ಬಿಡುಗಡೆ ಮಾಡಿದ್ದರು ಅವರ ನಾಣ್ಯಗಳು ಬಹಳ ಅಪರೂಪ. ನಾಣ್ಯಗಳ ಕೊರತೆಯಿಂದಾಗಿ ಈ ಚಕ್ರಾಧಿಪತ್ಯದ ಚರಿತ್ರೆಯನ್ನು ಪುನರ್ರಚಿಸುವುದು ಕಷ್ಟ. ಬಹಳಕಾಲ ಸಾಮ್ರಾಜ್ಯವನ್ನು ಆಳಿದ ಅನೇಕ ರಾಜರುಗಳ ಪೈಕಿ ಇಬ್ಬರು ಮಾತ್ರ ಅವರ ನಾಣ್ಯಗಳಿಂದ ಪರಿಚಯವಾಗಿದ್ದಾರೆ. ಹೊಯ್ಸಳರ ನಾಣ್ಯಗಳು ಎರಡು ಮುಖಗಳ ನಾಣ್ಯಗಳ ಗುಂಪಿಗೆ ಸೇರಿವೆ. ಮುದ್ರೆಯನ್ನೊತ್ತುತ್ತಿದ್ದ ನಾಣ್ಯಗಳನ್ನು ಹೊಂದಿದ್ದು ಕಲ್ಯಾಣಿ ಚಾಲುಕ್ಯರಿ-ಗಿಂತಲೂ ಈ ನಾಣ್ಯಗಳು ಭಿನ್ನವಾಗಿವೆ. ಹೊಯ್ಸಳರು ಸಾಮಂತರಾಗಿದ್ದರು, ಅವರದೇ ಆದ ಪ್ರತ್ಯೇಕ ನಾಣ್ಯವನ್ನು ಹೊಂದಿರುವುದು ವಿಶೇಷವಾಗಿದೆ.

ಮೇಲೆಯೇ ತಿಳಿಸಿರುವಂತೆ ಹೊಯ್ಸಳರ ನಾಣ್ಯಗಳು ಚಾಲುಕ್ಯರ ನಾಣ್ಯಗಳಿಗಿಂತ ಬೇರೆಯಾಗಿದ್ದು ವೈವಿಧ್ಯಮಯವಲ್ಲದೆ ತೂಕದಲ್ಲೂ ಬೇರೆ ಬೇರೆಯಾಗಿದ್ದವು. ಹೊಯ್ಸಳರ ನಾಣ್ಯವಾದ ವರಹಾ 63ಗ್ರಾಂ ತೂಕವನ್ನು ಹೊಂದಿದ್ದರೆ, ಇದೇ ವರ್ಗದ ಚಾಲುಕ್ಯರ ನಾಣ್ಯದ ತೂಕ 58 ಗ್ರಾಂಗಳಾಗಿವೆ. ಆದರೆ ಚೋಳರ ಮತ್ತು ಹೊಯ್ಸಳರ ನಾಣ್ಯಗಳ ನಡುವೆ ಕೆಲವು ಸಮಾನತೆಗಳನ್ನು ನಾವು ಕಾಣಬಹುದು. ಹೊಯ್ಸಳರ ಸಮಕಾಲೀನ ಚೋಳರು ಹೆಚ್ಚು ಪ್ರಭಾವಶಾಲಿಗಳಾಗಿದ್ದು ಬಹಳಕಾಲ ಕರ್ನಾಟಕದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡು ರಾಜ್ಯವಾಳಿದರು. ಚೋಳರು ಮತ್ತು ಹೊಯ್ಸಳರು ಅನೇಕ ಬಾರಿ ಯುದ್ಧಮಾಡಿ ಕೊನೆಗೆ ಚೋಳರನ್ನು ಹೊಯ್ಸಳರ ದೊರೆ ವಿಷ್ಣವರ್ಧನನು ಕ್ರಿ.ಶ.1116ರಲ್ಲಿ ಸೋಲಿಸಿದನು ಮತ್ತು ತಲಕಾಡನ್ನು ಅವರಿಂದ ವಶಪಡಿಸಿಕೊಂಡನು. ಈ ದಿಗ್ವಿಜಯದ ನೆನಪಿಗೋಸ್ಕರ ಅವನು "ತಲಕಾಡುಗೊಂಡ" ಎಂಬ ಬಿರುದನ್ನು ಪಡೆದುದಲ್ಲದೆ,[11] ಈ ನಾಮಾಂಕಿತವನ್ನು ಒಳಗೊಂಡ

ನಾಣ್ಯವನ್ನು ಬಿಡುಗಡೆಮಾಡಿದನು. ಚೋಳರ ನಾಣ್ಯದ ತೂಕವು ಹೊಯ್ಸಳರ ನಾಣ್ಯಗಳಂತೆ 60 ಗ್ರಾಂ ತೂಕವನ್ನು ಹೊಂದಿದೆ. ಆದ್ದರಿಂದ ಹೊಯ್ಸಳರು ಚೋಳರ ನಾಣ್ಯದ ರಚನೆ ಮತ್ತು ತೂಕಗಳನ್ನು ತಮ್ಮ ನಾಣ್ಯಗಳಲ್ಲಿ ಅನುಸರಿಸಿದರೆಂದು ಗೊತ್ತಾಗುತ್ತದೆ. ಚೋಳರ ಕಾಲದಲ್ಲಿ ಕರ್ನಾಟಕದಲ್ಲಿ ಅವರ ತೂಕಯುತ ನಾಣ್ಯಗಳು ಪೂರ್ಣವಾಗಿ ಅಭಿವೃದ್ಧಿ ಹೊಂದಿದ್ದರಿಂದ ಅವುಗಳನ್ನೇ ಹೊಯ್ಸಳರು ಅಳವಡಿಸಿಕೊಳ್ಳ ಬೇಕಾಯಿತೆಂದು ಎಂ.ಎಚ್.ಕೃಷ್ಣರವರು ವಿವರಿಸುತ್ತಾರೆ. ಚೋಳರನ್ನು ಸೋಲಿಸಿದ ವಿಷ್ಣುವರ್ಧನನು ತನ್ನ ಹೆಸರನ್ನು ಒಳಗೊಂಡ ಚೋಳರ ರೀತಿಯ ನಾಣ್ಯಗಳನ್ನು ಟಂಕಿಸಿದುದು ತಾನು ಅವರನ್ನು ನಾಶಮಾಡಿದೆನೆಂದು ತೋರಿಸಿಕೊಳ್ಳಲು ಈ ಮಾರ್ಗವೇ ತಕ್ಕದೆಂದು ಯೋಚಿಸಿರಬಹುದು.[12]

ಅನೇಕ ಹೊಯ್ಸಳ ಶಾಸನಗಳು ಅವರ ಕಾಲದ ನಾನಾ ರೀತಿಯ ನಾಣ್ಯಗಳನ್ನು ತಿಳಿಸುತ್ತವೆ. ದುರಾದೃಷ್ಟವಶಾತ್ ಈ ಶಾಸನಗಳು ಈ ನಾಣ್ಯಗಳ ಬಗ್ಗೆ ಯಾವ ಉದಾಹರಣೆಯನ್ನು ನೀಡುವುದಿಲ್ಲ. ಆದರೂ ಇಲ್ಲಿರುವ ನಾಣ್ಯಗಳ ಮೇಲಿನ ಅಂಶಗಳನ್ನು ಕಡೆಗಣ್ಣಿನಿಂದ ವೀಕ್ಷಿಸುವುದು ಉಚಿತವಲ್ಲ. ಏಕೆಂದರೆ ಗದ್ಯಾಣ, ಹೊನ್ನು, ಪಣ, ಹಾರ, ವೀಸ, ಬೆಳೆ, ಮತ್ತಿತರ ನಾಣ್ಯಗಳು ಶಾಸನಗಳಿಂದ ತಿಳಿದುಬಂದಿವೆ. ಶಾಸನಗಳ ಆಧಾರದಿಂದ ಹೊಯ್ಸಳ ನಾಣ್ಯಗಳ ಬಗ್ಗೆ ಕೆಳಗಿನ ಪಟ್ಟಿಯನ್ನು ತಯಾರಿಸಲಾಗಿದೆ.[13]

1 ಗದ್ಯಾಣ = 10 ಪಣ

1 ಪಣ = 4 ಹಗಾಸ

1 ಹಗಾಸ = 4 ವೀಸಸ

1 ವರ = 1 ಗದ್ಯಾಣ ಹಣ = 1/10

ವರಹದ ತೂಕ = 62 grain

ಹಣದ ತೂಕ = 6.2 grain

ಹೊಯ್ಸಳ ರಾಜರುಗಳು ಹೊರಡಿಸಿದ ನಾಣ್ಯಗಳನ್ನು ಕೂಲಂಕುಶವಾಗಿ ತಿಳಿಯುವುದು ಇಲ್ಲಿ ಅವಶ್ಯಕ.

## 1.4 ಇದೂವರೆಗೂ ನಡೆದಿರುವ ಅಧ್ಯಯನಗಳ ವಿಮರ್ಶೆ

ಹೊಯ್ಸಳರ ಕಾಲಕ್ಕೆ ಸಂಬಂಧಿಸುದವುಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು:

ಮೊದಲನೆಯದಾಗಿ ಹೊಯ್ಸಳರ ಇರುವಿಕೆಯ ಸ್ಥಳವಾದ ಚಿಕ್ಕದಾಗಿ ಭಾರತದ ಅಥವ ದಕ್ಷಿಣಭಾರತದ ಅಥವ ಕರ್ನಾಟಕದ ಸಾಮಾನ್ಯ ಚರಿತ್ರೆ.

ಎರಡನೆಯದಾಗಿ ವಿಶೇಷವಾಗಿ ಹೊಯ್ಸಳರ ಮೇಲೇ ಬರೆದ ಪುಸ್ತಕಗಳು. ಇಲ್ಲಿ ಮತ್ತೆ ಕೆಲವು ರಾಜಕೀಯ ಚರಿತ್ರೆ, ಆಡಳಿತ, ಕಲೆ, ಧರ್ಮ ಇವುಗಳನ್ನು ಒಂದೇ ಅಥವ ಸಂಯುಕ್ತವಾಗಿರುವುದರ ಮೇಲೆ ಗಮನ ನೀಡುವುದು.

ಮೂರನೆಯ ರೀತಿಯು ಹೊಯ್ಸಳರ ಬೇರೆ ಬೇರೆ ಆಯಾಮಗಳ ಚರಿತ್ರೆಯ ಬಗ್ಗೆ ಮಾಡಿದ ಸಂಶೋಧನೆಗಳು ಪ್ರಕಟವಾಗಿರುವ ನಿಯತಕಾಲಿಕೆಗಳು.

ಕೊನೆಯದಾಗಿ ಕನ್ನಡದಲ್ಲಿ ಪುಸ್ತಕಗಳನ್ನು ಮತ್ತು ಲೇಖನಗಳನ್ನು ಬರೆಯುವ ಇತ್ತೀಚಿನ ರೀತಿ. ಇದು ಅನೇಕ ಯುವ ಬರಹಗಾರರ ಲೇಖನ ಮತ್ತು ಪುಸ್ತಕಗಳನ್ನು ಬರೆಯಲು ಉತ್ತೇಜಿಸಿದೆ ಮತ್ತು ಅವುಗಳಲ್ಲಿ ಈ ಬಗ್ಗೆಯೂ ಬಹಳ ಇದೆ. ಇಲ್ಲಿ ತೆಗೆದುಕೊಂಡಿರುವ ವಿಷಯದ ಅಭ್ಯಾಸವನ್ನು ಅರ್ಥಮಾಡಿಕೊಳ್ಳಲು ಮೇಲೆ ಹೇಳಿದ ಎಲ್ಲ ಸಂಬಂಧಪಟ್ಟವುಗಳನ್ನು ವಿಮರ್ಶಾದೃಷ್ಟಿಯಿಂದ ಅಭ್ಯಾಸ ಮಾಡುವುದು.

ಮೊದಲನೆಯ ರಾಜ್ಯದಲ್ಲಿ ಮೊದಲನೆಯ ಕಾರ್ಯವೆಂದರೆ ಕ್ರಿ.ಶ.1896ರಷ್ಟು ಹಿಂದೆ ಪ್ರಕಟವಾದ ಜೆ.ಜೆ.ಫ್ಲೀಟ್ ರವರ "ಡೈನಾಸ್ಟೀಸ್ ಆಫ್ ದಿ ಕ್ಯಾನರೀಸ್ ಡಿಸ್ಟ್ರಿಕ್ಟ್ಸ್ ಆಫ್ ದಿ ಬಾಂಬೇ ಪ್ರೆಸಿಡೆನ್ಸಿ". ನಿಜವಾಗಿಯೂ ಇದು ಬಾಂಬೇ ಗೆಜೆಟ್ಟೀರ್‌ಗೆ ಈ ವಿದ್ವಾಂಸನು ಬರೆದ ಲೇಖನ. ಇದರ ಮೌಲ್ಯವು ಇದು ಕರ್ನಾಟಕವೂ ಸೇರಿದಂತಹ ಪ್ರಾಂತ್ಯಗಳ ಬಗ್ಗೆ ಮೊದಲ ಅಥವ ಪ್ರಾರಂಭಿಕವಾದ ಚರಿತ್ರೆಯನ್ನು ಬರೆಯುವ ಪ್ರಯತ್ನ ಎಂಬುದಕ್ಕಾಗಿ ಇದೆ. ಶಾಸನಗಳ ಆಧಾರದ ಮೇಲೆ ಸೂಕ್ಷ್ಮವಾಗಿ ಗಮನಿಸಿ ಫ್ಲೀಟ್‌ನು ಎಲ್ಲ ವಿವರಗಳ ಸಹಿತ ಬರೆದ ಒಂದು ಉಪಯುಕ್ತವಾದ ಪುಸ್ತಕವಿದು. ಸಹಜವಾಗಿ ಇದು ಹೊಯ್ಸಳ ವಂಶದ ರಾಜಕೀಯ ಚರಿತ್ರೆಯ ಬಗ್ಗೆ ಇರುವ ಒಂದು ಅಧ್ಯಾಯವು ಒಂದು ಮಹತ್ವಪೂರ್ಣವಾದ ಪ್ರಯತ್ನವಾಗಿದೆ. ಮುಂದೆ ನೂರಾರು ಶಾಸನಗಳು ಸಿಕ್ಕಿ ಅದರಲ್ಲಿರುವ ವಿಚಾರಗಳು ಅಪ್ರಸ್ತುತವೆನಿಸಿದರೂ ಹೊಯ್ಸಳರ ವಂಶದ ಬಗ್ಗೆ ವಿಚಾರಗಳು ಸ್ಥಿರವಾಗಿದೆ. ಈ ಕೃತಿಯು ಮಹತ್ವವಾಗಿದ್ದು ಯಾವುದೇ ಸಂಶೋಧನಾ ವಿದ್ಯಾರ್ಥಿಯು ಇದನ್ನು ಅವನ ಮೊದಲ ಅಭ್ಯಾಸಕ್ಕಾಗಿ ನಿರ್ಲಕ್ಷಿಸುವಂತಿಲ್ಲ.

1957ರಲ್ಲಿ ಪ್ರಕಟವಾದ ಇದೇ ತರಹದ ಕೃತಿಯಾದ ಭಂಡಾರ್ಕರ್‌ರವರ "ಅರ್ಲಿ ಹಿಸ್ಟರಿ ಆಫ್ ಡೆಕ್ಕನ್" ಎಂಬ ಹೆಸರಿನಲ್ಲಿದೆ. ಇದರಲ್ಲಿ ಹೆಚ್ಚಿನ ವಿಸ್ತಾರವಾಗಿಲ್ಲದೇ ಇದ್ದರೂ ಹೆಚ್ಚಿನ ವಿವರಣೆಗಳಿದ್ದು ಹಿಂದಿನ ಪುಸ್ತಕಕ್ಕಿಂತಲೂ ಹೆಚ್ಚು ಉಪಯುಕ್ತವೆನಿಸಿದೆ. ಒಂದು ರೀತಿಯಲ್ಲಿ

ಇದನ್ನು ಹಿಂದಿನ ಪುಸ್ತಕಕ್ಕಿಂತಲೂ ಸುಧಾರಿತ ಆವೃತ್ತಿ ಎಂದು ಹೇಳಬಹುದು. ಆದರೆ ಇದರಲ್ಲಿ ಫ್ಲೀಟ್‌ರವರ ಪುಸ್ತಕದಲ್ಲಿರುವಂತೆ ಶಾಸನಗಳ ಆಳವಾದ ಜ್ಞಾನವಿಲ್ಲ. ಭಂಡಾರ್‌ಕರ್‌ರವರು ಹೊಯ್ಸಳರ ಚರಿತ್ರೆಯ ಬಗ್ಗೆ ಕ್ರಮಬದ್ಧವಾಗಿ ಮತ್ತು ರಾಜಕೀಯ ಅಥವ ಸಾಂಸ್ಕೃತಿಕವಾದ ಚರಿತ್ರೆಯನ್ನು ನಿರೂಪಿಸಿಲ್ಲ. ಏನೇ ಆದರೂ ಕಲ್ಯಾಣದ ಚಾಳುಕ್ಯರ ಮತ್ತು ದೇವಗಿರಿಯ ಸೇವುಣರ ಬಗ್ಗೆ ಬರೆಯುವಾಗ ಈ ವಂಶಗಳ ಮಧ್ಯ ನಡೆದ ರಾಜಕೀಯ ಘಟನೆಗಳ ಬಗ್ಗೆ ವಿವರಗಳಿವೆ.

ಮುಂಬಯಿಯ ಭಾರತೀಯ ವಿದ್ಯಾಭವನವು ವಿವಿಧ ಲೇಖಕರು ಬರೆದ ಭಾರತೀಯ ಚರಿತ್ರೆಯ ಮಾಲಿಕೆಯನ್ನು ಪ್ರಕಟಿಸಿದೆ. ಅದು ಹೇಳಿಕೊಂಡಿರುವಂತೆ ಈ ಮಾಲಿಕೆಯು ಕೇವಲ ಭಾರತೀಯರಿಂದಲೇ ಬರೆದುದಾಗಿದ್ದು ಸಹಜವಾಗಿಯೇ ವಸ್ತುವನ್ನು ಸರಿಯಾಗಿ ಅರ್ಥಮಾಡಿ–ಕೊಂಡಿದ್ದು, ವಿದ್ವಾಂಸರಿಂದ ವಿವರಣೆಗಳನ್ನು ಒಳಗೊಂಡಿರುತ್ತದೆ. ಇದರ ಐದನೆಯ ಭಾಗವು "ಸ್ಟ್ರಗಲ್ ಫಾರ್ ಎಂಪೈರ್"; ಇದರಲ್ಲಿನ ಒಂದು ಪರಿಚ್ಛೇದವು (ಒಂಭತ್ತನೆಯದು) ಎಸ್.ಕೃಷ್ಣಸ್ವಾಮಿ ಐಯ್ಯಂಗಾರ್‌ರವರು ಬರೆದಿದ್ದು ಅದರ ಹೆಸರು "ದಿ ಹೊಯ್ಸಳಾಸ್" ಎಂದಿದೆ. ಈ ಪರಿಚ್ಛೇದವನ್ನು ಬರೆಯುವಾಗ ಇತ್ತೀಚಿನ ಶಾಸನಗಳನ್ನು ಉಪಯೋಗಿಸಿಕೊಂಡಿದ್ದಾರೆ. ಆದರೆ ಈ ಪರಿಚ್ಛೇದವೂ ಕೂಡಾ ಬಹಳ ಚಿಕ್ಕದಾಗಿದ್ದು ಓದುಗರ ಮೇಲೆ ನಿರೀಕ್ಷಿತವಾದಷ್ಟು ಪರಿಣಾಮವನ್ನು ಬೀರುವುದಿಲ್ಲ. ಹೊಯ್ಸಳ ವಂಶದ ಬಗ್ಗೆ ತಿಳಿಯುವುದರ ಬಗ್ಗೆ ಆಸಕ್ತಿಯನ್ನು ವಹಿಸಿದವರಿಗೆ ನಿರಾಶೆಯನ್ನು ಉಂಟು ಮಾಡುತ್ತದೆ. ವಾಸ್ತು ಶಿಲ್ಪ ಮತ್ತು ಶಿಲ್ಪಕಲೆಯ ಬಗ್ಗೆ ಇರುವ ಪರಿಚ್ಛೇದದ ಬಗ್ಗೆಯೂ ಕೂಡಾ ಇದೇ ವಿಮರ್ಶೆಯು ಅನ್ವಯಿಸುತ್ತದೆ. ಕಲೆಯ ಇತರ ಪ್ರಕಾರಗಳ ಬಗ್ಗೆ ಇಲ್ಲಿ ವಿವರವಾಗಿ ಅಭ್ಯಾಸ ಮಾಡಿಲ್ಲ. ಹಾಗಾಗಿ ಅದು ಈ ವಿಷಯದ ಬಗ್ಗೆ ಸಾಧಾರಣವಾಗಿ ಅಭ್ಯಾಸ ಮಾಡುವವರಿಗೆ ಚೆನ್ನಾಗಿದೆಯೇ ಹೊರತು ಹೊಯ್ಸಳ ವಂಶದ ವಿವಿಧ ಸಾಂಸ್ಕೃತಿಕ ವಿಚಾರಗಳ ಬಗ್ಗೆ ಆಳವಾದ ಅಧ್ಯಯನ ಮಾಡುವವರಿಗಲ್ಲ.

ಹೆಚ್ಚು ಕಡಿಮೆ ಇದೇ ವಿಚಾರಕ್ಕೆ ಸಂಬಂಧಿಸಿದಂತೆ "ಕರ್ನಾಟಕ ತ್ರೂ ದಿ ಏಜಸ್" ಎಂಬ ಡಾ॥ ಆರ್.ಆರ್.ದಿವಾಕರ್‌ರವರಿಂದ ಸಿದ್ಧಪಡಿಸಿದ ಗ್ರಂಥವೊಂದಿದೆ. ಇದು ಕರ್ನಾಟಕವನ್ನು ಮತ್ತು ಸಂಸ್ಕೃತಿಯ ಎಲ್ಲ ಮಜಲುಗಳಲ್ಲಿ ವೈಭವೀಕರಿಸುವುದಕ್ಕೋಸ್ಕರ ರಚಿಸಲ್ಪಟ್ಟಿದ್ದು. ಅದು ಬಹಳ ಉಪಯುಕ್ತ ಕಾರ್ಯವಾಗಿದ್ದು ಅದು ಅನೇಕ ವಿದ್ವಾಂಸರಿಂದ ಬರೆಯಲ್ಪಟ್ಟಿದ್ದರೂ ಅದು ಕೇವಲ ರಾಜಕೀಯ ಚರಿತ್ರೆ, ಆಡಳಿತ, ಸಮಾಜ, ಧರ್ಮ, ಸಾಹಿತ್ಯ, ವಿದ್ಯಾಭ್ಯಾಸ, ಕಲೆ ಮತ್ತು ಶಿಲ್ಪಶಾಸ್ತ್ರ ಇವುಗಳ ಬಗ್ಗೆ ತೃಪ್ತಿಕರವಾದ ಪಕ್ಷಿನೋಟವನ್ನು ಮಾತ್ರ ಬೀರುತ್ತದೆ. ಇದಕ್ಕೆ

ಕಾಣಿಕೆಯನ್ನು ನೀಡಿರುವವರು ತಮ್ಮ ಕ್ಷೇತ್ರದಲ್ಲಿ ಒಳ್ಳೆಯ ವಿದ್ವಾಂಸರಾಗಿದ್ದು ಇದನ್ನು ಗೌರವಯುತ ಮತ್ತು ಹಿರಿಮೆಯುಳ್ಳದ್ದನ್ನಾಗಿಸಿದೆ. ಈ ಕೃತಿಯ ಉಪಯುಕ್ತತೆಯನ್ನು ಮನಗಂಡ ಪ್ರಕಾಶಕರು ಇದರ ಕನ್ನಡ ಆವೃತ್ತಿಯನ್ನು ಎರಡು ಭಾಗಗಳಲ್ಲಿ "ಕನ್ನಡ ಪರಂಪರೆ" ಎಂಬ ಹೆಸರಿನಲ್ಲಿ ಹೊರತಂದರು. ಇದು ಎರಡನೆಯ ಮುದ್ರಣವನ್ನೂ ಕಂಡಿತು ಎಂದರೆ ಚರಿತ್ರಕಾರರಿಂದ ಉತ್ತಮ ಪ್ರತಿಕ್ರಿಯೆಯನ್ನು ಹೊಂದಿತು. ಇದು ಒಂದು ಭಾಗದಲ್ಲಿ ಹೊಯ್ಸಳರ ರಾಜಕೀಯ ಚರಿತ್ರೆಯನ್ನೂ ಮತ್ತೊಂದು ಭಾಗದಲ್ಲಿ ಆಡಳಿತ, ಸಮಾಜ ಧರ್ಮ ಮತ್ತು ಕಲೆಗಳನ್ನು ಒಳಗೊಂಡಿದೆ. ರಾಜಕೀಯ ಚರಿತ್ರೆಯನ್ನು ಸ್ವತಂತ್ರವೆಂದು ಪರಿಗಣಿಸ-ಬಹುದಾರರೂ ಇತರ ವಿಷಯಗಳ ಹಾಗೆ ಇಲ್ಲ; ಅಲ್ಲದೇ ವಿಚಾರಗಳು ಬಹಳ ಚಿಕ್ಕದಾಗಿದ್ದು ಓದುಗರ ಮೇಲೆ ಅದು ಯಾವ ವಿಸ್ತೃತವಾದ ಪರಿಣಾಮವನ್ನೂ ಬೀರುವುದಿಲ್ಲ. ಸಂಶೋಧಕನ ದೃಷ್ಟಿಕೋನದಿಂದ ನೋಡುವುದಾದರೆ ಅದರಲ್ಲಿ ಈ ರೀತಿಯ ಕೃತಿಗಳಲ್ಲಿರ ಬಹುದಾದಂತಹ ಅನೇಕ ಕೊರತೆಗಳಿವೆ. ಎರಡನೆಯದಾಗಿ ಇದು ಅನೇಕರ ಕೊಡುಗೆಯಾದ್ದರಿಂದ ಇದನ್ನು ಏಕರೂಪದಿಂದ ಬಂಧಿಸಿಡಬಹುದಾದ ಸೂತ್ರವಿಲ್ಲ. ಇದರಲ್ಲಿ ಒಂದು ಪರಿಚ್ಛೇದವು ಬಿ.ಎಸ್.ಕೃಷ್ಣಸ್ವಾಮಿ ಅಯ್ಯಂಗಾರ್‌ರವರು ಬರೆದ ಹೊಯ್ಸಳರ ರಾಜಕೀಯ ಚರಿತ್ರೆಯ ಬಗ್ಗೆ ಇದೆ. ಇದು ಚಿಕ್ಕದಾಗಿದ್ದರೂ ಅಲ್ಲಿಯವರೆಗೆ ಪ್ರಕಟವಾಗಿದ್ದ ಎಲ್ಲ ವಿಷಯಗಳನ್ನೂ ಅದರ ಪರಿಪೂರ್ಣತೆಗೆ ಒಳಗೊಂಡಿದೆ. ರಾಜಕೀಯ ಚರಿತ್ರೆಯೇ ಅಲ್ಲದೇ ಅದರಲ್ಲಿ ಶ್ರೀವೈಷ್ಣವ, ಶೈವ ಮತ್ತು ಜೈನ ಧರ್ಮಗಳ ಧಾರ್ಮಿಕ ಸ್ಥಿತಿಗತಿಗಳ ಬಗ್ಗೆ ಚೆನ್ನಾಗಿ ಬರೆದಿದೆ. ನಿಜವಾಗಿ ಅದರಲ್ಲಿ ರಾಮಾನುಜರ ತತ್ವಗಳ ಬಗ್ಗೆ ವಿಸ್ತೃತವಾದ ವಿವರಣೆಗಳಿವೆ. ಇಲ್ಲಿ ಇರುವ ಇತರ ವಿಷಯಗಳೆಂದರೆ ವಿದ್ಯಾಭ್ಯಾಸ, ವಿಜ್ಞಾನ, ಕನ್ನಡ ಸಾಹಿತ್ಯ, ಸಂಸ್ಕೃತ ಸಾಹಿತ್ಯ, ಪ್ರಾಕೃತಿ ಸಾಹಿತ್ಯ ಮತ್ತು ಕೊನೆಯಲ್ಲಿ ಕಲೆ ಮತ್ತು ಶಿಲ್ಪಕಲೆ. ಬಹುತೇಕ ಸಾಂಸ್ಕೃತಿಕ ವಿಷಯಯಗಳು ಇಲ್ಲಿ ಬಂದಿವೆ. ಇಲ್ಲಿರುವ ಮೂಲಭೂತವಾದ ದೋಷವೆಂದರೆ ಇದು ಸಾಧಾರಣವಾಗಿ ಎಲ್ಲ ವಿಷಯಗಳನ್ನೂ ಒಳಗೊಂಡಿದ್ದರೂ ಮೂಲದ ಆಧಾರದೊಂದಿಗೆ ಅದರ ಸಂಪೂರ್ಣ ವಿವರಗಳು ದಾಖಲಾಗಿಲ್ಲ. ಕೊನೆಯಲ್ಲಿ ವಿವಿಧ ಆಕರಗಳನ್ನು ಇಲ್ಲಿ ಒಗ್ಗೂಡಿಸುವ ಬದಲಿಗೆ ಹೊಯ್ಸಳ ಬಗೆಗೆ ವಿವಿಧ ಸ್ವತಂತ್ರ ಲೇಖನಗಳನ್ನು ಸಂಬಂಧಿಸದೆ ಕೊಟ್ಟಂತಿದೆ. ಏನೇ ಆದರೂ ಆರಂಭಿಕರಿಗೆ ಇದರ ಕೊಡುಗೆಯನ್ನು ನಿರ್ಲಕ್ಷಿಸುವಂತಿಲ್ಲ.

ಕೆ.ಎ.ನೀಲಕಂಠ ಶಾಸ್ತ್ರಿಅವರ ಸುಪ್ರಸಿದ್ಧ ಮತ್ತು ಜನಪ್ರಿಯ ಕೃತಿಯಾದ "ಎ ಹಿಸ್ಟರಿ ಆಫ್ಟ್ ಸೌತ್ ಇಂಡಿಯ" ವು ಅನೇಕ ಆವೃತ್ತಿಗಳನ್ನು ಮತ್ತು ಅಭಿಪ್ರಾಯಗಳನ್ನೂ ಕಂಡಿದೆ. ಈ ಕೃತಿಯಲ್ಲಿ ಹೊಯ್ಸಳರೂ ಸೇರಿದಂತೆ ದಕ್ಷಿಣ ಭಾರತದ ವಿಚಾರಗಳಿವೆ. ಪ್ರೊ.ಶಾಸ್ತ್ರಿಗಳು ಸಮಾನಾಂತರವಾಗಿ ದಕ್ಷಿಣ ಭಾರತದಲ್ಲಿ ನಡೆಯುತ್ತಿದ್ದ ಎಲ್ಲ ಘಟನೆಗಳನ್ನೂ ಮತ್ತು

ರಾಜಕೀಯ ಘಟನೆಗಳನ್ನು ಹೇಳುವ ಒಂದು ವಿಶಿಷ್ಠ ರೀತಿಯನ್ನು ಹೊಂದಿದ್ದಾರೆ. ಈ ರೀತಿಯಲ್ಲಿ ಹೊಯ್ಸಳರ ಚರಿತ್ರೆಯ ಸ್ವಷ್ಟ ಚಿತ್ರಣವನ್ನು ನೀಡುತ್ತದೆ. ಇದರಲ್ಲಿ ಆಡಳಿತ, ಸಮಾಜ, ಧರ್ಮ, ಸಾಹಿತ್ಯ ಇವುಗಳಿಗೆಬೇರೆಯಾದ ಪರಿಚ್ಛೇದಗಳಿದ್ದರೂ ಕೂಡಾದಕ್ಷಿಣ ಭಾರತಕ್ಕೆ ಸಂಬಂಧಪಟ್ಟಂತೆ ಹೊಯ್ಸಳರ ಕಾಣಿಕೆಯನ್ನು ವೈಚಾರಿಕವಾಗಿ ಬೇರ್ಪಡಿಸಲಾಗುವುದಿಲ್ಲ. ಹೀಗಾಗಿ ಹೊಯ್ಸಳ ವಂಶದವರು ಸಾಂಸ್ಕೃತಿಕ ಕ್ಷೇತ್ರದಲ್ಲಿ ನೀಡಿದ ಕಾಣಿಕೆಯ ಬಗ್ಗೆ ತಿಳಿಯಲಾಗಿಸುವ ಒಬ್ಬ ವಿದ್ಯಾರ್ಥಿ ಅಥವ ಓದುಗನು ಮತ್ತು ತಿಳಿದ ವಿದ್ವಾಂಸರು ಕೊಡುವ ವಿವರಣೆಗಳಲ್ಲಿ ಕಳೆದುಹೋಗಿಬಿಡುತ್ತಾನೆ. ಏನೇ ಆದರೂ ಲೇಖಕನು ಕಲೆ ಅಥವ ಶಿಲ್ಪಶಾಸ್ತ್ರದ ಪರಿಚ್ಛೇದವನ್ನು ತೆಗೆದುಕೊಂಡಾಗ ಪ್ರತಿಯೊಂದು ವಿಭಾಗವೂ ಅದರ ಮುಖ್ಯ ಲಕ್ಷಣಗಳು ಮತ್ತು ಹೊಯ್ಸಳರೂ ಸೇರಿದಂತೆ ಪ್ರತಿಯೊಂದೂ ವಂಶಗಳ ಕಾಣಿಕೆಯ ಬಗ್ಗೆ ವಿವರಿಸುವುದರಿಂದ ಪರಿಸ್ಥಿತಿಯು ಸ್ವಲ್ಪ ಬದಲಾವಣೆಯನ್ನು ಹೊಂದುತ್ತದೆ. ಹಾಗಾಗಿ ಒಂದು ನಿರ್ದಿಷ್ಟ ವಂಶ ಮತ್ತು ಅದರ ಕಾಣಿಕೆಗಳ ಬಗ್ಗೆ ಆಸಕ್ತಿಯುಳ್ಳ ವಿದ್ಯಾರ್ಥಿಗೆ ಇದು ರುಚಿಸುವುದಿಲ್ಲ. ಆದರೂ ನೀಲಕಂಠ ಶಾಸ್ತ್ರಿಗಳ ಈ ಪ್ರಯತ್ನವು ಹೊಯ್ಸಳರ ಕಾಲದ ಸಾಂಸ್ಕೃತಿಕ ಸಾಧನೆಗಳನ್ನು ಅರ್ಥಮಾದಿಕೊಳ್ಳುವುದರ ಹಿನ್ನೆಲೆಯಲ್ಲಿ ಸ್ವಾಗತಾರ್ಹ ಕೃತಿ ಎನಿಸುತ್ತದೆ.

ಕರ್ನಾಟಕದ ಚರಿತ್ರೆಯ ಬಗ್ಗೆ ಕನ್ನಡದಲ್ಲಿ ಅನೇಕರು ಬರೆದ ಅನೇಕ ಕೃತಿಗಳಿವೆ. ಅವುಗಳಲ್ಲಿ ಅನೇಕವು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ಉಪಯೋಗವಾಗುತ್ತದೆ. ಆದರೆ ಅವುಗಳಲ್ಲಿ ಪ್ರಮುಖವಾದುದೆಂದರೆ ಪಿ.ಬಿ.ದೇಸಾಯಿ (ಮತ್ತಿತರರು) ಬರೆದದ್ದು. ಇದು ಇತ್ತೀಚಿನ ಶಾಸನಗಳ ಆಧಾರದ ಮೇಲೆ ಬರೆದಿದ್ದು ಬಹಳ ಉಪಯುಕ್ತವಾದ ಪುಸ್ತಕವಾಗಿದೆ. ಇದರಲ್ಲಿ ಹೊಯ್ಸಳರ ಬಗ್ಗೆ ಇರುವ ಪರಿಚ್ಛೇದವು ಕೇವಲ ವಿಸ್ತಾರವಾಗಿರುವುದಲ್ಲದೇ ಶಾಸನಗಳ ಆಧಾರವಿದ್ದು ಅದು ಅಧಿಕೃತ ಮತ್ತು ಸತ್ಯವಾದುದಾಗಿರುತ್ತದೆ. ಇದು ಹೊಯ್ಸಳರ ರಾಜಕೀಯ ಚರಿತ್ರೆಯ ವಿಚಾರವನ್ನು ಗಮನವಿಟ್ಟುಕೊಂಡಾಗ ಸತ್ಯವಾಗಿದೆ. ಸಾಂಸ್ಕೃತಿಕ ಚರಿತ್ರೆಯನ್ನು ಮುರು ಅಥವ ನಾಲ್ಕು ಪುಟಗಳಲ್ಲಿ ಸಾರಾಂಶೀಕರಿಸಿ ಆ ಕಾಲದ ಮುಖ್ಯ ಆಶಯಗಳಿಗೆ ಒತ್ತು ಕೊಡಲಾಗಿದೆ. ಆದರೆ ಇದು ಹೊಯ್ಸಳರ ಸಾಂಸ್ಕೃತಿಕ ಚರಿತ್ರೆಯ ವಿದ್ಯಾರ್ಥಿಯ ಕುತೂಹಲವನ್ನು ತಣಿಸಲು ಸಾಕಾಗುವುದಿಲ್ಲ. ಆದರೆ ಇದು ಸಾಂಸ್ಕೃತಿಕ ಚರಿತ್ರೆಯನ್ನು ವಿವರವಾಗಿ ಅಭ್ಯಾಸ ಮಾಡಲು ಬಯಸುವ ಯಾವುದೇ ಪ್ರತಿಭಾವಂತ ವಿದ್ಯಾರ್ಥಿಗೆ ಸ್ಪೂರ್ತಿಯನ್ನು ನೀಡುತ್ತದೆ. ಅದು ಈ ಪುಸ್ತಕದ ನಿಜವಾದ ಉಪಯೋಗ. ಈ ಪುಸ್ತಕವು ಪುನರ್ಮುದ್ರಣವಾಗಿದೆ.

ಹಯವದನರಾವ್ ಇವರಿಂದ ಸಂಗ್ರಹ ಮಾಡಿದಂತಹ "ಮೈಸೂರು ಗೆಜೆಟ್ಟೀರ್" ಅನ್ನು ಮರೆಯಲಾಗುವುದಿಲ್ಲ. ಅದು ಸುಮಾರು ಐವತ್ತು ವರ್ಷಗಳ ಹಿಂದೆ ಬರೆದಿದ್ದಾದರೂ ಉತ್ತಮ ಆಧಾರದ ಮೇಲೆ ಕರ್ನಾಟಕದ ಚರಿತ್ರಯಲ್ಲಿ ತನ್ನದೇ ಆದ ಛಾಪು ಹೊಂದಿದೆ. ಅದರ ಒಂದು ಸಂಪುಟದಲ್ಲಿ ಹೊಯ್ಸಳರ ಚರಿತ್ರೆಯನ್ನು ಸಾಂಸ್ಕೃತಿಕ ಆಯಾಮಗಳೊಂದಿಗೆ ಸಾಕಷ್ಟು ವಿವರವಾಗಿ ಕೊಡಲಾಗಿದೆ. ಅದು ಕೇವಲ ರಾಜಕೀಯ ಘಟನೆಗಳಲ್ಲದೇ ಧರ್ಮದ ವಿವಿಧ ಆಯಾಮಗಳನ್ನೂ ಮತ್ತು ಅದರ ಪ್ರಾಮುಖ್ಯತೆಗಳನ್ನೂ ವಿವರಿಸಿದೆ. ಇದು ಕೇವಲ ರಾಜಕೀಯ ಘಟನೆಗಳಲ್ಲದೇ ಮುಖ್ಯವಾದ ಇತರ ಆಯಾಮಗಳಾದ ಧರ್ಮ, ವಿದ್ಯಾಭ್ಯಾಸ, ಶಿಲ್ಪಶಾಸ್ತ್ರ ಮತ್ತು ಶಿಲ್ಪಕಲೆಯೇ ಅಲ್ಲದೆ ನಾಣ್ಯಗಳ ಬಗ್ಗೆಯೂ ಪ್ರಸ್ತಾಪವಿದೆ. ಅದು ಸೈನ್ಯಾಧಿಕಾರಿಗಳ ಮತ್ತು ಮಂತ್ರಿಗಳ ಬಗ್ಗೆಯೂ ಪ್ರಸ್ತಾಪಿಸಿದೆ. ಇದು ಹೆಚ್ಚು ವಿಸ್ತೃತವಾಗಿದ್ದರೂ ಚರಿತ್ರೆಯ ಎಳೆಗಳು ಅಪರೂಪವಾಗಿದ್ದು ಅದನ್ನು ಒಳ್ಳೆಯ ಗೆಜೆಟ್ಟೀರ್ ಎನ್ನಬಹುದೇ ಹೊರತು ತೃಪ್ತಿಕರವಾದ ಚರಿತ್ರೆ ಎನ್ನಲಾಗುವುದಿಲ್ಲ. ಇದು ಮಹಾನ್ ಕಾರ್ಯವನ್ನು ಮಾಡಿರುವ ಈ ಕೃತಿಯ ಮಹತ್ವವನ್ನು ಕಡಿಮೆ ಮಾಡದೇ ಕಾಲದ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣವಾಗಿದೆ. ಆದರೆ ಹೊಯ್ಸಳರಿಗೆ ಸಂಬಂಧಿಸಿದ ಈ ಪರಿಚ್ಛೇದವು ವಿಸ್ತೃತವಾದ ಮತ್ತು ಸಂಬಂಧಿಸಿದ ಕಾರ್ಯಕ್ಕೆ ಬದಲಿಯಾದ ಕೃತಿಯಾಗುವುದಿಲ್ಲ.

ಇನ್ನೊಂದು ಮಹತ್ವದ ಅಭ್ಯಾಸವು ಡಾ॥ಚೂಡಾಮಣಿಯವರಿಂದ ಆಗಿದೆ. ಅವರ ಮಹಾಪ್ರಬಂಧದಲ್ಲಿನ ಮುಖ್ಯ ವಿಚಾರಸರಣಿಯು ನೃತ್ಯ ಮತ್ತು ಸಂಗೀತವಾಗಿದೆ. ಅವರು ಈ ವಿಷಯವನ್ನು ಶಾಸನಗಳ ಮೂರು ಆಯಾಮಗಳಾದ ಶಾಸನ ಕಲೆ, ಸಾಹಿತ್ಯ ಮತ್ತು ಶಿಲ್ಪಕಲೆಗಳಲ್ಲಿ ಅಭ್ಯಾಸ ಮಾಡಿದ್ದಾರೆ. ಶಾಸನಗಳಲ್ಲಿ ಉಲ್ಲೇಖವಾದ ವಸ್ತುಗಳಾದ ಸಂಗೀತ, ನೃತ್ಯ ಮತ್ತು ಸಂಗೀತ ವಾದ್ಯಗಳೊಂದಿಗೆ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯದ ಪುಸ್ತಕಗಳನ್ನು ಸಂಗ್ರಹಿಸಿ ಅವನ್ನು ಕಣ್ಣಿಗೆ ಕಾಣುವ ಶಿಲ್ಪ ಭಂಗಿಗಳಿಗೆ ಹೋಲಿಸಿದ್ದಾರೆ.

ಈಗ ಹೊಯ್ಸಳ ವಂಶದ ಬಗ್ಗೆ ಮಾತ್ರ ಬರೆದ ಕೃತಿಗಳನ್ನು ತೆಗೆದುಕೊಳ್ಳೋಣ. ಮೊದಲ ಮತ್ತು ಮುಖ್ಯವಾದ ಪುಸ್ತಕವೆಂದರೆ ವಿಲ್ಲಿಯಮ್ ಕೊಹ್ಲೋನು ಬರೆದ "ಹೊಯ್ಸಳ ವಂಶ". ಬಹುಶಃ ಹೊಯ್ಸಳರ ಮೇಲೆ ಬರೆದ ಒಂದೇ ವಿಷಯವುಳ್ಳ ಮೊದಲನೆಯ ಗ್ರಂಥ. ಇದರ ಮುಖ್ಯ ವಿಷಯವೆಂದರೆ ರಾಜಕೀಯ ಚರಿತ್ರೆ. ಪರಿಚ್ಛೇದಗಳು ಆಳುವ ರಾಜರ ಮೇಲೆ ವಿಂಗಡಿತವಾಗಿದೆ. ಉಳಿದ ಪರಿಚ್ಛೇದಗಳು ಚಿಕ್ಕವಾಗಿದ್ದರೂ ಸಾಂಸ್ಕೃತಿಕ ಆಯಾಮಗಳಾದ ಆಡಳಿತ, ಸಮಾಜ, ಧರ್ಮ ಮೊದಲಾದುವನ್ನು ಅವುಗಳ ಸ್ವರೂಪದ ಮೇಲೆ ಬರೆದಿದ್ದಾರೆ. ಆದರೂ ಇವು ಬಹಳ ಸಣ್ಣ ಸ್ವರೂಪದ್ದಾದುದರಿಂದ ಹೊಯ್ಸಳರ ಕಾಣಿಕೆಗಳ ಬಗ್ಗೆ

ಮಹತ್ವಪೂರ್ಣವಾದ ಪರಿಣಾಮವನ್ನು ಕೊಡುವುದಿಲ್ಲ. ಈ ವಿಷಯದಲ್ಲಿ ಇನ್ನೊಂದು ಮಹತ್ವಪೂರ್ಣವಾದ ಕೃತಿ ಎಂದರೆ 'ಡಂಕನ್ ಡೆರ್ರೆಟ್'ರವರದ್ದು ಅದು "ದಿ ಹೊಯ್ಸಳಾಸ್" ಎಂಬ ಹೆಸರಿನಿಂದಿದೆ. ಇದು ಅದರ ಲೇಖಕನೇ ಹೇಳಿರುವಂತೆ ಹೊಯ್ಸಳರ ಶಾಸನಗಳು ಮತ್ತು ಅದರ ವಿವರಣೆಗಳಿರುವಒಂದು ಪ್ರಬಂಧ ಮಾತ್ರ. ಡೆರ್ರೆಟ್‌ರವರ ಹಿರಿಮೆಯೇನೆಂದರೆ ಅವರು ಹೊಯ್ಸಳರ ರಾಜಕೀಯ ಘಟನೆಗಳನ್ನು ನೂರಾರು ಶಾಸನಗಳ ಮೂಲಕ ವಿವಿಧ ರೀತಿಗಳಲ್ಲಿ ದೃಶ್ಯೀಕರಿಸುತ್ತಾರೆ. ಅವರು ಹೊಯ್ಸಳರ ರಾಜಕೀಯ ದೃಶ್ಯಗಳು ನಡೆಯುತ್ತಿರುವಾಗ ಅವರೇ ನಿಂತು ನೋಡಿದಂತೆ ವಿವರಿಸಿದ್ದಾರೆ. ಹೊಯ್ಸಳರ ಶಾಸನಗಳ ವಿಶ್ಲೇಷಣೆ ಮತ್ತು ವಿವರಣೆಗಳು ಶ್ಲಾಘನೀಯವಾಗಿದೆ. ಹಾಗಾಗಿ ಹೊಯ್ಸಳರ ಕಾಲದ ರಾಜಕೀಯ ಚರಿತ್ರೆಯನ್ನು ಬಹಳ ಅಧಿಕೃತವಾಗಿ ಮತ್ತು ಸ್ವಾರಸ್ಯಕರವಾಗಿ ಹೇಳಲು ಸಮರ್ಥರಾಗಿದ್ದಾರೆ. ಬಹುಶಃ ಡೆರ್ರೆಟ್‌ರವರ ಈ ಕೃತಿಗಿಂತ ಸಮರ್ಥವಾಗಿ ಮತ್ತು ಅಧಿಕೃತವಾಗಿ ಹೇಳುವ ಬೇರೆ ಯಾವ ಕೃತಿಗಳು ಇಲ್ಲ. ದುರಾದೃಷ್ಟಕರವಾಗಿ ಈ ಕೃತಿಯು ಅವರ ಸಾಂಸ್ಕೃತಿಕ ಚರಿತ್ರೆಯ ಬಗ್ಗೆ ಏನನ್ನೂ ದಾಖಲಿಸಿಲ್ಲ. ಆದರೆ ಅನುಬಂಧ ವಿಭಾಗದಲ್ಲಿ ಅವರು ಚಿಕ್ಕದಾಗಿ ತೆರಿಗೆಪದ್ಧತಿಯ ಬಗ್ಗೆ ವಿಶೇಷವಾಗಿ ಆಡಳಿತದೊಂದಿಗೆ ವಿವರವನ್ನು ಬರೆದಿದ್ದಾರೆ. ಬೇರೆ ಸಮಾಜ, ಆರ್ಥಿಕತೆ, ಸಾಹಿತ್ಯ, ಕಲೆ ಮತ್ತು ಶಿಲ್ಪಕಲೆ ಮೊದಲಾದವುಗಳ ಬಗ್ಗೆ ಏನನ್ನೂ ಬರೆದಿಲ್ಲ.

ಹೊಯ್ಸಳ ಪ್ರಜೆಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನವನ್ನು ಅವರ ಶಿಲ್ಪಗಳ ಸಹಾಯದಿಂದ ಮತ್ತೆ ರಚಿಸುವ ಕಾರ್ಯವು ಹೊಸ ಸಂಶೋಧಕರ ಗಮನವನ್ನು ಸೆಳೆದಿವೆ. ದಯಾಮಂದ ಪಟೇಲರ "ಕೇಶವ ಟೆಂಪಲ್ ಅಟ್ ಸೋಮನಾಥಪುರ–ಒನ್ ಕಲ್ಚರಲ್ ಸ್ಟಡಿ" ಎಂಬ ಪುಸ್ತಕವು ಈ ದೃಷ್ಟಿಯಿಂದ ಉಪಯೋಗಿಯಾಗಿದೆ. ಅವನು ಸೋಮನಾಥಪುರದ ಕೇಶವ ದೇವಾಲಯದ ಎಲ್ಲ ಶಾಸನಗಳನ್ನೂ, ಪೋಷಾಕುಗಳು, ಆಭರಣಗಳು, ಮನೆಯಲ್ಲಿ ಉಪಯೋಗಿಸುವ ಪಾತ್ರೆಗಳು, ರಥಗಳು, ಪ್ರಾಣಿಗಳು, ಆಯುಧಗಳು, ಮನೆಗಳು, ಪೀಠೋಪಕರಣಗಳು ಇತ್ಯಾದಿಗಳನ್ನು ಅತಿ ಸೂಕ್ಷ್ಮವಾಗಿ ಗಮನಿಸಿ ಹೊಯ್ಸಳರ ಕಾಲದ ಜನಜೀವನದ ವಿವರವನ್ನು ಕಟ್ಟಿಕೊಡುವ ಸಲುವಾಗಿ ಅವುಗಳನ್ನು ಸಂಯೋಜನೆಗೊಳಿಸಿ ಅವುಗಳಿಗೆ ಅರ್ಥ ವಿವರಣೆ ನೀಡಿದ್ದಾನೆ. ಈ ಸಂಶೋಧನೆಗಳ ಸಮರ್ಥನೆಗಾಗಿ ಅವನು ಸಾಹಿತ್ಯಿಕ ಆಧಾರಗಳನ್ನೂ ಸಹ ಬಳಸಿಕೊಂಡಿದ್ದಾನೆ.

ಇಂತಹುದೇ ಒಂದು ಸಂಶೋಧನೆಯನ್ನು ಕೆ.ಪದ್ಮನಾಭರವರು ಮಾಡಿದ್ದಾರೆ. ಅವರ ಪುಸ್ತಕವಾದ "ಹೊಯ್ಸಳ ಸ್ಕಲ್ಪಚರ್ಸ್–ಎ ಕಲ್ಚರಲ್ ಸ್ಟಡಿ", ಆ ಕಾಲದ ಹೊಯ್ಸಳ ಪ್ರಜೆಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಚಿತ್ರಣವನ್ನು ಕಟ್ಟಿಕೊಡಲು ಸಂಪೂರ್ಣ ಹೊಯ್ಸಳ

ಶಾಸನಗಳನ್ನು ಆಧಾರವಾಗಿ ತೆಗೆದುಕೊಂಡಿದ್ದಾನೆ. ಅವನು ಹೆಚ್ಚು ವಿಧದ ಪಾತ್ರೆಗಳು, ದಿನಬಳಕೆ ವಸ್ತುಗಳು, ರಥಗಳೂ, ಪ್ರಾಣಿಗಳು, ಮನೆಗಳು, ಪೀಠೋಪಕರಣಗಳು ಇವುಗಳ ಬಗ್ಗೆ ಈ ಹಿಂದೆ ಹೇಳಿದ ಪಟೇಲರ ಪುಸ್ತಕಕ್ಕಿಂತಲೂ ವಿವರವಾಗಿ ತಿಳಿಸಿದ್ದಾನೆ. ಅವನ ಹೊಯ್ಸಳರ ಬಗೆಗಿನ ವಸ್ತುಗಳ ಬಗ್ಗೆ ಮಾಡಿದ ತೌಲನಿಕ ಅಧ್ಯಯನವು ಈ ಹಿಂದೆ ಬಂದ ಎಲ್ಲ ಅಧ್ಯಯನಗಳಿಗಿಂತ ಹೊಯ್ಸಳರ ಕಾಣಿಕೆಗಳನ್ನು ಅರ್ಥಮಾಡಿಕೊಳ್ಳಲು ಹೆಚ್ಚು ಉಪಯೋಗ–ವಾಗಿದೆ. ಶಾಸನಧಾರಿತವಾಗಿ ನೈಜವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಎಲ್ಲ ಸ್ತರಗಳಲ್ಲೂ ಅಧ್ಯಯನವನ್ನು ಮಾಡಿದ್ದಾರೆ. ಅವನು ತನ್ನ ಸಂಶೋಧನೆಗಾಗಿ ವಸ್ತುಗಳನ್ನು ದೂರದ ವಿವಿಧ ದೇವಾಲಯಗಳಿಂದ ಭೌಗೋಳಿಕವಾಗಿ ಮತ್ತು ಕಾಲಾನುಕ್ರಮವಾಗಿ ಆರಿಸಿಕೊಂಡಿದ್ದಾನೆ. ಇದರಿಂದ ಅವನು ವಿಕಾಸ ಮತ್ತು ದೂರ ದೂರ ಪ್ರದೇಶದಲ್ಲಿನ ಜೀವನದ ವಿವಿಧ ರೀತಿಗಳನ್ನೂ ಅದರ ವಿವರಗಳಿಗೆ ಸಂಬಂಧ ಪಟ್ಟಂತೆ ತೋರಿಸಲು ಶಕ್ತನಾಗಿದ್ದಾನೆ. ಇದು ನಿಜವಾಗಿಯೂ ಅಭ್ಯಾಸದಲ್ಲಿನ ಬಹುಮುಖ್ಯವಾದ ಅಂಶ. ಪೂರ್ತಿ ಅಭ್ಯಾಸವು ಚಿತ್ರಗಳು ಮತ್ತು ಛಾಯಚಿತ್ರಗಳಿಂದ ಗಟ್ಟಿಗೊಂಡಿದೆ.

ದೇವಾಲಯಗಳ ಶಿಲ್ಪ ಮತ್ತು ವಾಸ್ತುಶಿಲ್ಪಗಳಿಗೆ ಹೊಯ್ಸಳರ ಕಾಣಿಕೆಯು ಮಹತ್ವ–ದ್ದಾಗಿದ್ದು ಇದು ಎಲ್ಲ ಚರಿತ್ರಕಾರರ ಗಮನವನ್ನೂ ಸೆಳೆದಿದೆ, ಬಹುಶಃ ಹೊಯ್ಸಳರ ಕಲೆಯ ಬಗ್ಗೆ ಬರೆದ ಅತ್ಯುತ್ತಮ ಪುಸ್ತಕವೆಂದರೆ ಎಸ್ ಶೆಟ್ಟರ್‌ರವರು ಬರೆದ "ದಿ ಹೊಯ್ಸಳ ಟೆಂಪಲ್ಸ್". ಇದು ಈ ವಿಷಯದ ಮೇಲೆ ಬರೆದ ವಿಸ್ತೃತವಾದ ಪುಸ್ತಕವಾಗಿದೆ. ರಾಜಕೀಯ ಚರಿತ್ರೆಯನ್ನು ಪ್ರಾರಂಭದಿಂದಲೂ ಅವನು ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿಯನ್ನು ದೇವಾಲಯಗಳ ರಚನೆಗೆ ಆಧಾರವಾಗಿಟ್ಟುಕೊಂಡು ಬರೆದಿದ್ದಾನೆ. ಅವನು ಹೊಯ್ಸಳರ ಶಿಲ್ಪಿಗಳ ಹೆಸರು ಮತ್ತು ಅವರ ಹಿನ್ನೆಲೆಯನ್ನೂ ವಿವರಿಸಿದ್ದಾನೆ. ಹೊಯ್ಸಳರ ದೇವಾಲಯಗಳ ಲಕ್ಷಣಗಳನ್ನು ಆರಿಸಿದ ದೇವಾಲಯಗಳಿಗೆ ಸಂಬಂಧಪಟ್ಟಂತೆ ಪರೀಕ್ಷಿಸಿದ್ದಾನೆ. ಹೀಗಾಗಿ ಹೊಯ್ಸಳರ ದೇವಾಲಯ–ಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ಈ ಪುಸ್ತಕವು ಬಹಳ ಉಪಯೋಗಕ್ಕೆ ಬರುತ್ತದೆ. ಅವನು ನಿಜವಾದ ಶಾಸನಗಳ ಆಧಾರದ ಮೇಲೆ ಇದನ್ನು ಬರೆದಿರುವುದರಿಂದ ಇದು ಕಾಲಾನುಕ್ರಮ–ವಾಗಿದೆ ಎಂದು ಒಪ್ಪಿಕೊಳ್ಳಬಹುದು. ಇದೇ ಲೇಖಕನ ಹೊಯ್ಸಳರ ಶಿಲ್ಪಕಲೆಯ ಬಗೆಗಿನ ಇನ್ನೊಂದು ಪುಸ್ತಕವು 'ಕೋಪನ್ ಹೇಗನ್'ನ ವಸ್ತುಸಂಗ್ರಹಾಲಯದಲ್ಲಿದೆ.

ಹೊಯ್ಸಳರ ಕಲವಿದರು ಮತ್ತು ಅವರ ಕಾರ್ಯಕ್ಕಾಗಿಯೇ ಮೀಸಲಾದ ಇನ್ನೊಂದು ಪುಸ್ತಕವೆಂದರೆ ಅದು ಕೆಲ್ಲೆಸನ್ ಕೊಲ್ಲರ್‌ರು ಬರೆದದ್ದು. ನುರಿತ ಲೇಖಕನಾದ ಇವಳು ಶಿಲ್ಪಗಳ ಲಕ್ಷಣಗಳ ಆಧಾರದ ಮೇಲೆ ಹೊಯ್ಸಳ ಕಲಾವಿದರ ಮೇಲಿನ ಅಭ್ಯಾಸವನ್ನು ಮಾಡಿದ್ದಾಳೆ.

ಅವಳು ಈ ಶಿಲ್ಪಗಳನ್ನು ವಿಶ್ಲೇಷಿಸಿ ಅದರಿಂದ ಅದರ ವಿನ್ಯಾಸ ಮತ್ತು ಅದನ್ನು ಕಆಸಿಕೊಟ್ಟವರನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದಾಳೆ. ಅವಳ ಆಸ್ತಿಯೆಂದರೆ ಹೊಯ್ಸಳ ಕಲಾವಿದರು, ಅವರ ಕೆಲಸ, ಅವರ ಹಿನ್ನೆಲೆ, ಅವರ ಸಾಮಾಜಿಕ ಸಂಬಂಧಗಳು ಇತ್ಯಾದಿ. ಹೀಗೆ ಅವಳು ಶಿಲ್ಪಗಳ ವಿನ್ಯಾಸಗಳನ್ನು ಗುರುತಿಸಲು ಸಾಮಾಜಿಕ ಪದ್ಧತಿಯನ್ನು ಅನುಸರಿಸುತ್ತಾಳೆ. ಯಾವುದೇ ವಿವಾದಕ್ಕೆ ಎಣೆ ಇಲ್ಲದಂತೆ ಇದು ಆರ್.ನರಸಿಂಹಚಾರ್‌ರವರು ಹಲವು ದಶಕಗಳ ಹಿಂದೆಯೇ ಪ್ರಾರಂಭಿಸಿ ಅದನ್ನು ಮುಂದುವರೆಸಿಕೊಂಡು ಹೋದ ಎಮ್.ಹೆಚ್.ಕೃಷ್ಣ ಮತ್ತಿತರರ ವಿಧಾನಕ್ಕಿಂತ ಇದು ಅತ್ಯಂತ ಅಧಿಕೃತವಾದದ್ದು. ಹಾಗೆಯೇ ಕಲಾವಿದರ ವಿವರಗಳನ್ನು ತಿಳಿದುಕೊಳ್ಳುವುದಕ್ಕೆ ಹೆಚ್ಚಿನ ಇವರು ಶಾಸನಗಳು ಮತ್ತು ವಿಂಗಡನೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿಲ್ಲ.

ಆರ್.ನರಸಿಂಹಾಚಾರ್‌ರವರು ಬೇಲೂರು, ಸೋಮನಾಥಪುರ ಮತ್ತು ದೊಡ್ಡಗದ್ದ–ವಳ್ಳಿಯ ಮೇಲೆ ಬರೆದ ಮೂರು ಲೇಖನಗಳು ವಿಶೇಷವಾದ ಗಮನವನ್ನು ಸೆಳೆಯುತ್ತದೆ. ಅವರು ಮೇಲೆ ಹೇಳಿದ ಮೂರು ದೇವಾಲಯಗಳ ಚರಿತ್ರೆಯನ್ನು ಬರೆಯಲು ಶಾಸನಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರು.

ಮೈಸೂರು ವಿಶ್ವವಿದ್ಯಾಲಯದವರು 1970ರಲ್ಲಿ ಹೊಯ್ಸಳ ವಂಶದವರ ಬಗ್ಗೆ ಒಂದು ಸಂಶೋಧನಾ ಗೋಷ್ಠಿಯನ್ನು ನಡೆಸಿದರು. ಅದರ ನಡವಳಿಕೆಗಳನ್ನು ಬಿ.ಶೇಕ್ ಅಲಿಯವರು ಪ್ರಕಟಣೆಗೆ ಸಿದ್ಧಪಡಿಸಿದರು. ಇದೂ ಸಹ ರಾಜಕೀಯ ಚರಿತ್ರೆಯ ಮೇಲೆ ಅನೇಕ ಸಂಶೋಧನಾ ಲೇಖನಗಳನ್ನು ಒಳಗೊಂಡಿದ್ದು ಇದರ ಜೊತೆಗೆ ಸಂಸ್ಕೃತಿಯ ಇತರ ಮಗ್ಗಲುಗಳನ್ನೂ ಒಳಗೊಂಡಿತ್ತು. ನಮ್ಮ ಆಸಕ್ತಿಯು ಸಂಸ್ಕೃತಿಯ ಇತರ ಮಗ್ಗುಲಿನ ವಿಷಯಗಳಲ್ಲಿತ್ತು. ಹೊಯ್ಸಳರ ಕಾಲದ ಮೂರು ಧರ್ಮಗಳಾದ ಶೈವ, ವೈಷ್ಣವ ಮತ್ತು ಜೈನ ಧರ್ಮದ ಬಗ್ಗೆಮೂರು ಸ್ವತಂತ್ರವಾದ ಮಹಾಪ್ರಬಂಧಗಳು ವಿಮರ್ಶೆಯನ್ನು ಮಾಡಿದ್ದವು. ಈ ಮೂರೂ ಪ್ರಬಂಧಗಳು ಆ ಕಾಲದ ಶಾಸನಗಳ ಪ್ರಯೋಜನವನ್ನು ಪಡೆದಿದ್ದವು. ಹೊಯ್ಸಳರ ಕಾಲದ ನಾಣ್ಯಗಳ ಬಗ್ಗೆಯೂ ಒಂದು ಪ್ರಬಂಧವಿತ್ತು. ಇದು ಆ ಕಾಲದ ನೈಜವಾದ ನಾಣ್ಯಗಳ ಮಾದರಿಯನ್ನು ಗಮನದಲ್ಲಿಟ್ಟುಕೊಂಡಿದ್ದು ಆ ಕಾಲದ ನಾಣ್ಯಪದ್ಧತಿಯ ಬಗ್ಗೆಯೂ ತಿಳುವಳಿಕೆಯನ್ನು ಮೂಡಿಸುತ್ತದೆ. ಮುಖ್ಯವಾದ ಹೊಯ್ಸಳದೇವಾಲಯಗಳನ್ನು ವಿವಿಧ ವಿದ್ವಾಂಸರು ಪರೀಕ್ಷೆ ಮಾಡಿದ್ದಾರೆ. ಡಾ॥ಚಿದಾನಂದಮೂರ್ತಿಯವರು ಹೊಯ್ಸಳ ಕಲಾವಿದರಾದ ಮಲ್ಲಿತಮ್ಮನ ಮೂಲ ಸ್ಥಾನವನ್ನು ಹುದುಕಲು ಪ್ರಯತ್ನವನ್ನು ಮಾಡಿದ್ದಾರೆ. ಹೊಯ್ಸಳ

ದೇವಾಲಯದ ಸಾಲಭಂಜಿಕವನ್ನು ಡಾ॥ ಎಸ್.ಶೆಟ್ಟರ್‌ರವರು ವಿವರವಾಗಿ ಪರೀಕ್ಷೆ ಮಾಡಿದ್ದಾರೆ. ಡಾ॥ ಜಾನಕಿಯವರ ಒಂದು ಉಪಯುಕ್ತವಾದ ಲೇಖನದಲ್ಲಿ ಕವಿ ವಿದ್ಯಾಚಕ್ರವರ್ತಿನ್‌ರ ಗುರುತಿನ ಬಗ್ಗೆ ಇದೆ, ಹೀಗೆ ಹೊಯ್ಸಳರ ಕಾಲದ ಸಾಂಸ್ಕೃತಿಕ ಚರಿತ್ರೆಯ ವಿವಿಧ ಆಯಾಮಗಳ ಬಗ್ಗೆವಿವಿಧ ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ. ಇದು ಸಧ್ಯಕ್ಕೆ ಹೊಯ್ಸಳರ ರಾಜಕೀಯ ಮತ್ತು ಸಾಂಸ್ಕೃತಿಕ ಆಯಾಮಗಳೆರಡನ್ನೂ ಒಟ್ಟಿಗೆ ಹೊಂದಿರುವ ಇರುವ ಆತ್ಯುತ್ತಮವಾದ ಪುಸ್ತಕವಾಗಿದೆ. ಈ ಪುಸ್ತಕವು ಹೊಯ್ಸಳರ ಸಾಂಸ್ಕೃತಿಕ ಸಮಸ್ಯೆಗಳನ್ನು ಗುರುತಿಸಲು ಮತ್ತು ಅರ್ಥ ಮಾಡಿಕೊಳ್ಳಲು ಮತು ಈ ಮಟ್ಟಿಗೆ ಹೊಯ್ಸಳರ ಚರಿತ್ರೆಯನ್ನು ಅಭ್ಯಾಸ ಮಾಡಲು ಬಯಸುವ ವಿದ್ಯಾರ್ಥಿಗೆ ಉಪಯುಕ್ತ ಪುಸ್ತಕವಾಗಿದೆ.

ಈ ಭಾಗದಲ್ಲಿ ಬಿ.ಆರ್.ರಾಮಾನುಜರವರ “ಶ್ರೀ ರಾಮಾನುಜ ಇನ್ ಕರ್ನಾಟಕ” ಪುಸ್ತಕವನ್ನು ಸೇರಿಸಲೇಬೇಕು. ಪುಸ್ತಕದ ಹೆಸರೇ ಸೂಚಿಸುವಂತೆ ಇದು ರಾಮಾನುಜರು ಚೋಳ ದೇಶಕ್ಕೆ ಹೊರಟಾಗ ಮತ್ತು ಅವರ ಕರ್ನಾಟಕದಲ್ಲಿ ತಂಗಿದ್ದ ಕಾಲದಲ್ಲಿ ಅವರ ಬೋಧನೆಗಳ ಬಗ್ಗೆ ಇದೆ. ಈ ಮಹಾನ್ ಶ್ರೀವೈಷ್ಣವ ಸಾಧುವನ್ನು ಪ್ರೋತ್ಸಾಹಿಸುವಾಗ ಮತ್ತು ಇತರ ತೊಂದರೆಗಳನ್ನು ಅಲ್ಲಿನ ಶಾಸನಗಳ ಸಹಾಯದಿಂದ ಪರೀಕ್ಷಿಸಲಾಗಿದೆ. ಇದೊಂದು ಉಪಯುಕ್ತ ಲೇಖನವಾಗಿದ್ದು ಇದುಹೊಯ್ಸಳ ಸಾಮ್ರಾಜ್ಯದಲ್ಲಿ ರಾಮಾನುಜರ ಪಾತ್ರವನ್ನು ಅರಿತುಕೊಳ್ಳಲು ಸಹಾಯಕವಾಗಿದೆ. ಈ ಪ್ರಬಂಧದ ಉಪಯುಕ್ತತೆಯು ಅದರಲ್ಲಿ ರಾಮಾನುಜರು ಹೊಂದಿದ್ದ ಸಮಸ್ಯೆಗಳ ಬಗ್ಗೆ ಜೋಡಿಸಿರುವ ಶಾಸನಗಳ ಪಟ್ಟಿಯಿಂದ ಹೆಚ್ಚಿದೆ.

ಹೊಯ್ಸಳರ ಮೇಲೆ ನೇರವಾಗಿ ಸಂಬಂಧವನ್ನು ಹೊಂದಿರುವ ಇನ್ನೊಂದು ಪ್ರಬಂಧವೆಂದರೆ ಆರ್.ವಸಂತರವರ “ನಾರಾಯಣ ಸ್ವಾಮಿ ಅಟ್ ಮೇಲುಕೋಟೆ”. ಇದು ಕೇವಲ ಕಲೆ ಮತ್ತು ಶಿಲ್ಪಶಾಸ್ತ್ರದ ಅಧ್ಯಯನವಲ್ಲದೇ ದೇವಾಲಯದ ಸಾಮಾಜ–ಆರ್ಥಿಕ ವಿಚಾರಗಳ ಅಭ್ಯಾಸವೂ ಆಗಿದೆ. ಮೇಲುಕೋಟೆಯು ರಾಮಾನುಜಾಚಾರ್ಯ ಮತ್ತು ವಿಷ್ಣುವರ್ಧನನ ಜೊತೆ ಆತ್ಮೀಯವಾದ ಸಂಬಂಧವನ್ನು ಹೊಂದಿದ್ದರಿಂದ ಧಾರ್ಮಿಕ ಹಿನ್ನೆಲೆಯನ್ನು ಸಂಪೂರ್ಣವಾಗಿ ಶಾಸನಗಳ ಮತ್ತು ಸಾಹಿತ್ಯದ ಆಧಾರದ ಮೇಲೆ ಪರೀಕ್ಷಿಸಲಾಗಿದೆ. ಅದು ಮೇಲುಕೋಟೆಯಲ್ಲಿ ಕಂಡುಬಂದ ಎಲ್ಲ ಶಾಸನಗಳ ಪಟ್ಟಿಯನ್ನು ಕೊಟ್ಟಿದೆ; ಅದರಲ್ಲೂ ವಿಶೇಷವಾಗಿ ಕ್ರಿ.ಶ.ಹನ್ನೆರಡನೆಯ ಶತಮಾನದ ಹೊಯ್ಸಳರ ಕಾಲದ ಬಹುಮುಖ್ಯವಾದ ಶಾಸನವೊಂದರ ಉಲ್ಲೇಖವಿದೆ. ಹೀಗೆ ಇದು ಹೊಯ್ಸಳರ ಕಾಲದಲ್ಲಿನ ಧಾರ್ಮಿಕ ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳಲು ಅತ್ಯಂತ ಉಪಯುಕ್ತವಾದ ಕೃತಿಯಾಗಿದೆ.

ಹೊಯ್ಸಳರಿಗೆ ಸಂಬಂಧಪಟ್ಟಂತೆ ವಿಶ್ವಾಸನೀಯ ಪತ್ರಿಕೆಗಳಲ್ಲಿ ಪ್ರಕಟವಾದ ಸಂಶೋಧನಾ ಲೇಖನಗಳು ಇತರ ವಂಶಗಳಾದ ಚೋಳ ಮತ್ತು ಪಲ್ಲವ ಅಥವ ವಿಜಯನಗರದ ದೊರೆಗಳಷ್ಟು ಫಲಪ್ರದವಾಗಿಲ್ಲ. ಎಪಿಗ್ರಾಫಿಯಾ ಕರ್ನಾಟಕದ ಸಂಚಿಕೆಗಳು ಮತ್ತು ಮೈಸೂರು ಆರ್ಕಿಯಲಾಜಿಕಲ್ ವಿಭಾಗದ ವಾರ್ಷಿಕ ವರದಿಗಳು ಬಹಳಷ್ಟು ಸಂಶೋಧನಾ ವಸ್ತುಗಳಿಗೆ ಸ್ಥಳವನ್ನು ಒದಗಿಸಿದೆ ಮತ್ತು ಅದು ಉಳಿದ ಇತರ ನಿಯತಕಾಲಿಕಗಳಲ್ಲಿ ಪ್ರಕಟವಾದ ಸಂಶೋಧನಾ ಲೇಖನಗಳ ಬಗ್ಗೆ ವಿವರಿಸುತ್ತದೆ. ಅವುಗಳಲ್ಲಿ ಹೆಚ್ಚಿನವು ಬೆಂಗಳೂರಿನ ಮೈಥಿಕ್ ಸೊಸೈಟಿಯಿಂದ ನಿಯಮಿತವಾಗಿ ಪ್ರಕಟವಾಗುವ ತ್ರೈಮಾಸಿಕ ಪತ್ರಿಕೆಯಲ್ಲಿವೆ. ಎಸ್.ಶ್ರೀಕಂಠಯ್ಯನವರು ಕನಿಷ್ಠ ನಾಲ್ಕು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ; ಒಂದು ಹೊಯ್ಸಳ ಸಾಮ್ರಾಜ್ಯದ ಬಗ್ಗೆ; ಎರಡು ಹೊಯ್ಸಳರ ಕಾಲದಲ್ಲಿ ಜೀವನದ ಬಗ್ಗೆ ಮತ್ತು ಮೂರನೆಯದು ಹಳೇಬೀಡಿನ ಸ್ಥಳವರ್ಣನೆಯದಾಗಿದೆ. ಈ ಪ್ರಬಂಧಗಳ ಮುಖ್ಯ ಉದ್ದೇಶವು ಆ ಕಾಲದ ಆರ್ಥಿಕ ಜೀವನ ಮತ್ತು ಆಡಳಿತದ ಮೇಲೆ ಬೆಳಕು ಚೆಲ್ಲುವುದಾಗಿದೆ. ಕೊನೆಯ ಮತ್ತು ನಾಲ್ಕನೆಯ ಪ್ರಬಂಧವು ಹಳೆಬೀಡಿನ ಸ್ಥಳವರ್ಣನೆಯ ಚೌಕಟ್ಟನ್ನು ಬಹಳ ಚೆನ್ನಾಗಿ ವರ್ಣಿಸಿದೆ.

ಹೆಚ್.ಕೃಷ್ಣಶಾಸ್ತ್ರಿಗಳು ಒಂದು ಪ್ರಬಂಧವನ್ನು ಬರೆದಿದ್ದು ಅದರಲ್ಲಿ ಹೊಯ್ಸಳರ ಮೈಸೂರು ಮತ್ತು ಅಲ್ಲಿಂದಾಚೆಗಿನ ಚಿತ್ರಣವನ್ನು ನೀಡಿದ್ದಾರೆ. ನೈಜವಾಗಿ ಅದರಲ್ಲಿ ಹೊಯ್ಸಳರ ಸಾಮ್ರಾಜ್ಯವು ಇಬ್ಭಾಗವಾದ ಅಲ್ಲಿನ ರಾಜಕೀಯ ಚಟುವಟಿಕೆಗಳ ವಿಮರ್ಶೆಯಗಿದೆ. ಇನ್ನೊಂದು ಮುಖ್ಯವಾದ ಲೇಖನವೆಂದರೆ ವೈಷ್ಣವ ಪಂಥದ ಮೇಲಿನ ಕೃಷ್ಣ ಅಯ್ಯಂಗಾರ್-ರವರದು. ಅದು ಕರ್ನಾಟಕದಲ್ಲಿನ ರಾಮಾನುಜರ ಚಟುವಟಿಕೆಗಳ ಮತ್ತು ಅವರು ಇಲ್ಲಿ ಕೈಗೊಂಡ ಕಾರ್ಯಗಳ ಬಗೆಗೆ ಇದೆ. ಸಿ.ಕೆ.ನಾಗರಾಜಾವ್ ಅವರ ಲೇಖನವು ಬಹಳ ಆಸಕ್ತಿಕರವಾಗಿದ್ದು ಅದು ವಿಷ್ಣುವರ್ಧನನ ಮಕ್ಕಳ ಸಂಖ್ಯೆಯದಾಗಿದ್ದು ಅವರನ್ನು ಗುರುತಿಸು-ವುದಾಗಿದೆ. ಓ.ನರಸಿಂಹ ಅಯ್ಯಂಗಾರ್‌ರವರು ಲಭ್ಯವಿರುವ ಶಾಸನಗಳ ಆಧಾರದ ಮೇಲೆ ವಿಷ್ಣುವರ್ಧನನ ಮರಣದ ದಿನಾಂಕವನ್ನು ನಿರ್ಧರಿಸಲು ಪ್ರಯತ್ನಿಸಿದ್ದಾರೆ. ಇದು ರಾಜಕೀಯ ಚರಿತ್ರೆಯ ವಿದ್ಯಾರ್ಥಿಗಳಿಗೆ ಆಸಕ್ತಿಕರ ವಿಷಯವಾಗಿದೆ.

ಸುಪ್ರಸಿದ್ಧ ವಿದ್ವಾಂಸರಾದ ಶ್ರೀ ಎ.ವೆಂಕಟಸುಬ್ಬಯ್ಯನವರು ಎರಡು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ. ಮೊದಲನೆಯದು ಪ್ರಸಿದ್ಧ ಕಳಾಮುಖ ಉಪಾಧ್ಯಾಯರಾದ ರಾಜಗುರು ಕ್ರಿಯಾಶಕ್ತಿಗೆ ಸಂಬಂಧಿಸಿದ್ದು. ಅವರು ಹೊಯ್ಸಳರ ಕಾಲದಲ್ಲಿದ್ದರು ಮತ್ತು ಆ ಮಹಾ

ಉಪಾಧ್ಯಾಯರ ವಂಶವಾಹಿನಿಯನ್ನು ಗುರುತಿಸಿದ್ದಾರೆ ಮತ್ತು ಪರೋಕ್ಷವಾಗಿ ಅದು ಆ ಕಾಲದ ಕಳಾಮುಖ ಶೈವ ಪಂಥದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಅವರ ಶಾಸನಗಳ ವಿಷಯಗಳ ಅಳವಡಿಕೆಯು ಅದ್ಭುತವಾದದ್ದು. ಎರಡನೆಯ ಲೇಖನವು ಒಂದು ಶಾಸ್ತ್ರೀಯ ಲೇಖನವಾಗಿದ್ದು ಅದು ಆ ಕಾಲದ ಕೋಡೀಯ ಮಠದ ಮೇಲಾಗಿದ್ದು ಅದು ಹನ್ನೆರಡನೆಯ ಶತಮಾನದ ವಿಶ್ವವಿದ್ಯಾಲಯವಾಗಿತ್ತೆಂದು ವರ್ಣಿಸುತ್ತಾರೆ. ಅದು ಬಳ್ಳಿಗಾವೆಯ ಕೋಡೀಯ ಮಠಕ್ಕೆ ಸಂಬಂಧಿಸಿದ್ದದಾರೂ ನೈಜವಾಗಿ ಅದು ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದ ಪದ್ಧತಿಯ ಮೇಲಿನ ವಿದ್ವತ್‌ಪೂರ್ಣವಾದ ಬರವಣಿಗೆಯಾಗಿದೆ.

ರಾಣಿ ಶಾಂತಲಾದೇವಿಯು ಬಹುಮುಖ ಪ್ರತಿಭೆಯ ಮಹಿಳೆಯಾಗಿದ್ದು ಅವಳ ವ್ಯಕ್ತಿತ್ವವು ಅವಳ ಮೇಲೆ ಒಂದು ಲೇಖನವನ್ನು ಬರೆಯಲು ಆಕರ್ಷಿಸಿತು. ಅವರು ಶಾಂತಲಾ–ದೇವಿಯ ಹೆಸರನ್ನು ನೆಪಮಾತ್ರಕ್ಕೆ ಶಾಸನಗಳಲ್ಲಿ ಬರೆಸಿದ್ದು ಮತ್ತು ಅವಳು ವಿಷ್ಣುವರ್ಧನನ ರಾಣಿಯಾಗಿದ್ದಳೆಂದು ಸರಿಯಾಗಿ ಗುರುತಿಸಿದ್ದಾರೆ. ಆರ್.ವಸಂತರವರು ಶೈವರ ಸಮಸ್ಯೆಯನ್ನು ಚೋಳರು ನಿರ್ವಹಿಸಿದ ಪಾತ್ರದ ಹಿನ್ನೆಲೆಯಲ್ಲಿ ವಿಸ್ತೃತವಾದ ರೀತಿಯಲ್ಲಿ ಬರೆದಿದ್ದಾರೆ. ಹೊಯ್ಸಳ ಎಂಬ ಪದವೇ ವಿವಾದಾತ್ಮಕವಾಗಿದ್ದು ಆ ಬಗ್ಗೆ ಜೋಶಿಯವರು ವಿಮರ್ಶಿಸಿದ್ದಾರೆ. ಇದೇ ಸಮಸ್ಯೆಯು ಅವರ ಮೂಲದ ಬಗೆಗೆಯೂ ಎರಡು ಅಥವ ಹೆಚ್ಚು ವಿದ್ವಾಂಸರನ್ನು ಆಕರ್ಷಿಸಿದ್ದು ಅವರುಗಳು ವಿವಿಧವಾದ ವಿವರಣೆಯನ್ನು ಕೊಟ್ಟಿದ್ದಾರೆ. ಈ ಸಮಸ್ಯೆಗೆ ಸಂಬಂಧಪಟ್ಟಿದ್ದು ಸೊಸೆವೂರು ಅಥವ ಸಸಕಪುರವನ್ನು ಗುರುತಿಸುವಿಕೆ ಮತ್ತು ಈ ಪ್ರಶ್ನೆಯನ್ನು ಎಮ್.ಹನುಮಂತ ರಾವ್‌ರವರು ವಿಶ್ಲೇಷಿಸಿದ್ದಾರೆ.

ವಿದ್ವಾಂಸರನ್ನು ಆಕರ್ಷಿಸಿದ ಇನ್ನೊಂದು ವಿಷಯವೆಂದರೆ ಹೊಯ್ಸಳ ಕಲಾವಿದರದ್ದು. ಆರ್.ನರಸಿಂಹಾಚಾರ್ ಮತ್ತು ಎಮ್.ಶೇಷಾದ್ರಿಯವರಿಂದ ಪ್ರಾರಂಭವಾದ ಸಂಶೋಧನೆ–ಯನ್ನು ಮುಂದಿನ ವಿದ್ವಾಂಸರು ಮುಂದುವರೆಸಿದ್ದಾರೆ. ಎಮ್.ಶೇಷಾದ್ರಿಯವರು "ಸಮ್ ನೋಟಬಲ್ ಹೊಯ್ಸಳ ಸ್ಕಲ್ಪಚರ್ಸ್ ಆಫ್ ಮೈಸೂರ್" ಎಂಬ ಹೆಸರಿನಲ್ಲಿ ಪ್ರಕಟಿಸಿದ್ದು ಅದರಲ್ಲಿ ಮಲ್ಲಿತಮ್ಮ, ದಾಸೋಜ, ಚವನ ಮೊದಲಾದವರ ಬಗ್ಗೆ ವಿಶ್ಲೇಷಿಸಿದ್ದಾರೆ. ಮುಂದೆ ಅವರು ಒಬ್ಬ ಪ್ರಸಿದ್ಧ ಶಿಲ್ಪಿ ಮಲ್ಲಿತಮ್ಮನ ಬಗ್ಗೆ ಒಂದು ಪ್ರಬಂಧವನ್ನು ಬರೆದು ಪ್ರಕಟಿಸಿದರು. ಅವರು ಅಮೆರಿಕಾವನ್ನು ಸಂದರ್ಶಿಸಿದ ಮೇಲೆ ಅಲ್ಲಿನ ಕಲಾ ವಸ್ತುಸಂಗ್ರಹಾಲದಲ್ಲಿದ್ದ ಕೆತ್ತಿದ ಪ್ರತಿಮೆಗಳ ಮೇಲೆ ಒಂದು ಲೇಖನವನ್ನು ಪ್ರಕಟಿಸಿದರು. ಅದನ್ನೇ ಎಮ್.ಎಸ್.ನಾಗರಾಜ ರಾವ್‌ರವರೂ ಪ್ರಕಟಿಸಿದರು. ಕೊನೆಯಲ್ಲಿ ಶೇಷಾದ್ರಿಯವರೂ ಈ ಎಲ್ಲಾ ಲೇಖನಗಳನ್ನೂ ಒಟ್ಟುಗೂಡಿಸಿ

ಅದಕ್ಕೆ ಇನ್ನೂ ಹೆಚ್ಚು ಮಾಹಿತಿಗಳನ್ನು ಸೇರಿಸಿ ಒಂದು ದೊಡ್ಡ ಲೇಖನವನ್ನು ಬರೆದರು. ಎ.ವಿ.ನರಸಿಂಹಮೂರ್ತಿಯವರು ಅನೇಕ ಹೆಸರಿರುವ ಎಲ್ಲಾ ಶಿಲಾ ಶಾಸನಗಳನ್ನೂ ಸಂಗ್ರಹಿಸಿ ಅದಕ್ಕೆ ಹೊಯ್ಸಳ ಶಿಲ್ಪಿಗಳ ಹೆಸರನ್ನು ತಿಳಿಯಲು ವಿವರಣೆಯನ್ನು ನೀಡಿದ್ದಾರೆ. ಎಸ್.ಶೆಟ್ಟರ್‌ರವರೂ ತಮ್ಮ ಒಂದು "ಹೊಯ್ಸಳ ಆರ್ಟಿಸ್ಟ್ಸ್ ಅಂಡ್ ದೇರ್ ಪೆರೆಗ್ರಿನೇಷನ್" ಎಂಬ ಲೇಖನವನ್ನು ಬರೆದಿದ್ದಾರೆ. ಪ್ರಸಿದ್ಧ ಶಿಲ್ಪಿ ದಾಸೋಜನು ಬಳ್ಳಿಗಾವೆಯವನೆಂದು ಹೆಚ್.ಆರ್.ರಘುನಾಥ್‌ರವರು ತಮ್ಮ ಪ್ರಕಟಿತ ಲೇಖನದಲ್ಲಿ ಹೆಸರಿರುವ ಶಾಸನದ ಆಧಾರದ ಮೇಲೆ ಬರೆದಿದ್ದಾರೆ. ಭಾಷಾ ವಿವಾದದ ಮೇಲೆ ಆಧಾರಿತವಾಗಿ ಡಾ॥ಚಿದಾನಂದ ಮೂರ್ತಿಯವರು ಮಲ್ಲಿನಾಥನ ಜನ್ಮಸ್ಥಳವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

ಶ್ರೀಕಾನ್‌ಟಿಕ ಎಂಬ ಗೌರವ ಸಂಚಿಕೆಯು ಅನೇಕ ಸಂಶೋಧನಾ ಲೇಖನಗಳನ್ನು ಒಳಗೊಂಡಿದೆ. ಅದರಲ್ಲಿ ಕೆಲವು ಹೊಯ್ಸಳರ ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಪಟ್ಟಿವೆ. ಎಸ್.ಶೆಟ್ಟರ್‌ರವರು ಶಾಸನಗಳ ಆಧಾರದ ಮೇಲೆ ಹೊಯ್ಸಳ ದೇವಾಲಯಗಳ ಬೆಳವಣಿಗೆ ಎಂಬ ವಿಷಯದ ಮೇಲೆ ಒಂದು ಪ್ರಬಂಧವನ್ನು ಬರೆದಿದ್ದಾರೆ. ಕೆ.ವಿ.ರಾಮನ್‌ರವರು ಇನ್ನೂ ಪೂರ್ತಿಯಾಗಿ ಸಂಶೋಧನೆ ಮಾಡದ ಆಯಾಮವಾದ ವಿಜಯನಗರದ ಕಲೆಯ ಮೇಲೆ ಹೊಯ್ಸಳರ ಪ್ರಭಾವ ಎಂಬ ಮುಖ್ಯವಾದ ಪ್ರಬಂಧವನ್ನು ಬರೆದಿದ್ದಾರೆ. ವಸಂತರವರು ರಾಮಾನುಜರ ತೊಣ್ಣೂರಿನ ಸಂಬಂಧದ ಬಗೆಗೆ ಒಂದು ಲೇಖನವನ್ನು ಬರೆದಿದ್ದಾರೆ. ಪ್ರಸಿದ್ಧ ಹಿಂದಿ ವಿದ್ವಾಂಸರಾದ ಎಮ್.ಎಸ್.ಕೃಷ್ಣಮೂರ್ತಿಯವರು ಹೊಯ್ಸಳರ ಕೃಷಿಯ ಬಗ್ಗೆ ವಿಮರ್ಶೆ ಮಾಡಿದ್ದಾರೆ. ಈ ಎಲ್ಲ ಪ್ರಬಂಧಗಳ ಇರುವಿಕೆಯಿಂದ ಈ ಕೆಲಸಗಳು ಚರಿತ್ರೆಯ ವಿದ್ಯಾರ್ಥಿಗೆ ಬಹಳ ಮುಖ್ಯವಾಗಿದೆ.

ಹೊಯ್ಸಳ ದೊರೆಗಳು ಇತರ ಭಾಷಿಕರಾದ ತಮಿಳು, ತೆಲುಗು, ಮಲೆಯಾಳಮ್ ಪ್ರದೇಶದವರನ್ನು ಪ್ರೋತ್ಸಾಹಿಸಿದರು. ಎ.ವಿ.ನರಸಿಂಹಮೂರ್ತಿಯವರು ಹೊಯ್ಸಳರು ಒಂದು ಕೇರಳ ಕುಟುಂಬಕ್ಕೆ ಕೊಟ್ಟ ಪ್ರೋತ್ಸಾಹ ಮತ್ತು ಆಶ್ರಯದ ಬಗ್ಗೆ ಒಂದು ಲೇಕನವನ್ನು ಪ್ರಕಟಿಸಿದ್ದಾರೆ. ಇದು ಪ್ರಸಿದ್ಧ ಕುಂಜುಣಾಂಬಿ ಮತ್ತು ಅವನ ಹಿರಿಯರ ಬಗೆಗೆ ಆಧರಿಸಿದೆ. ಟಿ.ಡಿ.ಪಟೇಲ್‌ರವರು ಹೊಯ್ಸಳರ ಕಾಲದಆಭರಣ ಮತ್ತು ಒಡವೆಗಳ ಬಗ್ಗೆ ಒಂದು ಲೇಖನವನ್ನು ಶಿಲ್ಪಗಳ ಆಧಾರದ ಮೇಲೆ ಪ್ರಕಟಿಸಿದ್ದಾರೆ. ಸೌತ್ ಇಂಡಿಯನ್ ಸ್ಟಡೀಸ್ ಎಂಬ ಸ್ಮರಣಾರ್ಥ ಪುಸ್ತಕದಲ್ಲಿ ಟಿ.ವಿ.ಮಹಾಲಿಂಗಂರವರು ಹೊಯ್ಸಳರ ಶಿಲ್ಪಕಲೆ ಎಂಬ ವಿಷಯದ ಮೇಲೆ ಒಂದು ಲೇಖನವನ್ನು ಬರೆದಿದ್ದಾರೆ. ಈ ಎಲ್ಲ ಲೇಕನಗಳೂ ಸಹ ಹೊಯ್ಸಳರ ಚರಿತ್ರೆಯ ವಿದ್ಯಾರ್ಥಿಗೆ ಬಹಳ ಉಪಯುಕ್ತ ಬೆಲೆಯುಳ್ಳದ್ದಾಗಿದೆ.

"ಹೊಯ್ಸಳ ವಾಸ್ತುಶಿಲ್ಪ" ಎಂಬ ಎಸ್.ಶ್ರೀಕಂಠಶಾಸ್ತ್ರಿಯವರ ಪುಸ್ತಕವು ಸಂಪೂರ್ಣ–ವಾಗಿ ಹೊಯ್ಸಳರ ಶಿಲ್ಪ ಮತ್ತು ಶಿಲ್ಪಕಲೆಯ ವಿಚಾರಕ್ಕಾಗಿಯೇ ಮೀಸಲಾಗಿದೆ. ಈ ಪುಸ್ತಕವು ಪ್ರಕಟಣೆಗೊಂಡ ಆಗಿನ ಕಾಲದವರೆಗಿನ ನಮಗೆ ಗೊತ್ತಿರುವ ಹೊಯ್ಸಳರು ಕಟ್ಟಿದ ಎಲ್ಲ ಸಣ್ಣ ಮತ್ತು ದೊಡ್ಡ ದೇವಾಲಯಗಳನ್ನೂ ಒಳಗೊಂಡಿದೆ. ಅದು ತೌಲನಿಕ ಅಭ್ಯಾಸಗಳು, ವಿನ್ಯಾಸದ ಬಗ್ಗೆ ಚರ್ಚೆಗಳು ವ್ಯತ್ಯಾಸಗಳು ಇವಾವುದೂ ಇಲ್ಲದ ಒಂದು ಸತ್ಯವಾದ ಅಭ್ಯಾಸವಾಗಿದೆ. ಕನ್ನಡದಲ್ಲಿ ಈ ರೀತಿಯ ಪುಸ್ತಕವು ಇದೊಂದೇ ಆಗಿರುವುದರಿಂದ ಈ ಪುಸ್ತಕಕ್ಕೆ ಮೌಲ್ಯ ಮತ್ತು ಪ್ರಯೋಜನಗಳು ಇವೆ.

ಬಿ.ವೆಂಕಟರಾವ್ ಅವರ 'ಮೈಸೂರು ದೇಶದ ವಾಸ್ತುಶಿಲ್ಪ' ಎಂಬ ಪುಸ್ತಕವು ಹಳೆಯ ಮೈಸೂರು ಪ್ರಾಂತ್ಯದ ಶಿಲ್ಪವೈಭವದ ಬಗ್ಗೆ, ಅದರಲ್ಲೂ ವಿಶೇಷವಾಗಿ ಈಗಿನ ದಕ್ಷಿಣ ಕರ್ನಾಟಕದ ಬಗ್ಗೆ ಪ್ರಸ್ತಾಪವಿದ್ದು ಇದು ಅತ್ಯುತ್ತಮವಾಗಿದೆ. ಅದರಲ್ಲಿ ಹೊಯ್ಸಳ ದೇವಾಲಯಗಳ ಬಗೆಗೆ ಒಂದು ಸುಂದರ ವಿಭಾಗವಿದೆ. ಇದರಲ್ಲಿ ಹೊಯ್ಸಳರ ಎಲ್ಲ ದೇವಾಲಯಗಳ ಬಗೆಯೂ ಇಲ್ಲದಿದ್ದರೂ ಹೊಯ್ಸಳ ದೇವಾಲಯಗಳ ವಿಶೇಷ ಲಕ್ಷಣಗಳು ಮತ್ತು ಶಿಲ್ಪಗಳ ಬಗ್ಗೆಅಭ್ಯಾಸ ಮಾಡಲಾಗಿದೆ ಮತ್ತು ಕೆಲವು ದೊಡ್ಡ ಸ್ಮಾರಕಗಳ ಬಗೆಯೂ ವಿವರಿಸಲಾಗಿದೆ. ಹೀಗೆ ಇದು ಹೊಯ್ಸಳ ಕಲೆಯ ಬಗ್ಗೆ ತಿಳಿದುಕೊಳ್ಳಲು ಉಪಯುಕ್ತ ಪೀಠಿಕೆಯಾಗಿ ಕಾರ್ಯ ಮಾಡುತ್ತದೆ.

ಕರ್ನಾಟಕ ಶಾಸನ ಮತ್ತು ಕಲೆ ಎಂಬ ಹೆಸರಿನಲ್ಲಿ ರಘುನಾಥ ಭಟ್‌ರವರು ಲೇಖನಗಳ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ನಾಲ್ಕು ಲೇಖನಗಳು ಹೊಯ್ಸಳರ ಸಾಂಸ್ಕೃತಿಕ ಚರಿತ್ರೆಯ ಬಗ್ಗೆ ಇದೆ. ಇದರಲ್ಲಿ ಮೊದಲನೆಯದು ಹೊಯ್ಸಳರ ದೇವಾಲಯದ ನಕ್ಷತ್ರಾಕಾರದ ಬಗೆಗಿನ ನಕ್ಷೆಯು ಇದೆ. ಎರಡಾನೆಯದು ದೊಡ್ಡಗಡವನಹಳ್ಳಿಯ ಲಕ್ಷ್ಮೀದೇವಿ ದೇವಸ್ಥಾನದ ಅಭ್ಯಾಸಕ್ಕೆ ಮೀಸಲಾಗಿದೆ. ಮುಂದಿನದುಹೊಯ್ಸಳರ ಕಾಲದ ಲಕ್ಷ್ಮಣೇಶ್ವರ ದೇವಾಲಯಕ್ಕೆ ಸಂಬಂಧಿಸಿದ್ದು.

## ಹೊಯ್ಸಳರ ಬಗ್ಗೆ ಇತ್ತೀಚಿನ ಕೆಲಸಗಳು

ಈ ಎಲ್ಲ ಕಾರ್ಯಗಳ ನಡುವೆ ಕೆ.ಆರ್ ವೆಂಕಟರಮಣರವರ ಮಹಾಪ್ರಬಂಧದ ರೀತಿಯಲ್ಲಿ ಅನೇಕ ಪ್ರಬಂಧಗಳು ಹೊಯ್ಸಳರ ತಮಿಳುನಾಡಿನ ಚಟುವಟಿಕೆಗಳ ಬಗ್ಗೆ ವಿವರಿಸುತ್ತವೆ. ಎಮ್.ರಾಧಾರವರ ಪ್ರಬಂಧವಾದ ಮೂರನೆಯ ನರಸಿಂಹನ ಕಾಲ ಮತ್ತು

ಜೀವನ, ಸಂಪತ್‌ಕುಮಾರಾಚಾರ್‌ರವರ ಹೊಯ್ಸಳರ ಕಾಲದಲ್ಲಿ ಜೀವನ, ಲೀಲಾ ಶಾಂತಕುಮಾರಿಯವರ ಪುರಾತನ ಕರ್ನಾಟಕದಲ್ಲಿ ಅಗ್ರಹಾರಗಳು, ವಿದ್ಯಾಮೋಹನರಾವ್‌ರವರ ಹೊಯ್ಸಳರ ಕಾಲದಲ್ಲಿ ಧಾರ್ಮಿಕ ಪರಿಸ್ಥಿತಿಗಳು, ಚನ್ನಕ್ಕ ಎಲಿಗಾರ್‌ರವರ ಶಾಸನಗಳಲ್ಲಿ ಸ್ತ್ರೀ ಸಮಾಜ, ಮೈಸೂರು ನಾಗರಾಜ್ ಶರ್ಮರವರ ಹೊಯ್ಸಳ ಶಿಲ್ಪದಲ್ಲಿ ಶಿವ, ಹೆಚ್.ಎಸ್.ಉಷಾರಾಣಿಯವರ ಹೊಯ್ಸಳರ ಕಾಲದಲ್ಲಿ ಕೃಷಿ ಪದ್ಧತಿ, ಎನ್.ಸರಸ್ವತಿಯವರ ಹೊಯ್ಸಳರ ಕಲೆಯಲ್ಲಿ ಮಹಿಳೆ, ಅಂಜನಯ್ಯರವರ ವಿಷ್ಣುವರ್ಧನನ ಜೀವಿತಕಾಲ, ಹಾಗೂ ಎಮ್.ಬಿ.ಪದ್ಮರವರ ಮಧ್ಯಕಾಲೀನ ಕರ್ನಾಟಕದಲ್ಲಿ ಮಹಿಳೆಯ ಸ್ಥಾನ, ಎನ್.ಸಿ.ಸುಜಾತರವರ ಹೊಯ್ಸಳರ ಕಾಲದಲ್ಲಿ ಮಹಿಳೆಯರ ಸ್ಥಾನ, ಟಿ.ಬಿ.ಅಣ್ಣಯ್ಯರವರ ವೀರಸೋಮೇಶ್ವರನ ಜೀವಿತಾವಧಿಯ ಸಾಧನೆಗಳು, ಹೆಚ್.ಎಸ್ ಶ್ರೀಧರ್‌ರವರ ಹೊಯ್ಸಳರ ಕಾಲದ ನಾಡಗೌಡರು, ಕೆ.ಎಮ್.ಮಹದೇವಸ್ವಾಮಿಯವರ ಹೊಯ್ಸಳರ ಕಾಲದಲ್ಲಿ ನಗರೀಕರಣ, ಡಿ.ಎ.ಗಿರಿಜಮ್ಮನವರ ಹೊಯ್ಸಳರ ಕಾಲದಲ್ಲಿ ರಾಜ್ಯ ಮತ್ತು ಸಮಾಜ, ಎಸ್.ಎಲ್.ಕೆಂಪರಾಜುರವರ ಹೊಯ್ಸಳರ ಕಾಲದಲ್ಲಿ ದಂಡನಾಯಕರು, ಸಿ.ಎಸ್.ಶಿಲ್ಪಶ್ರೀಯವರ ಹೊಯ್ಸಳರ ಕಾಲದಲ್ಲಿ ದಾನ ಜ಼ಕಿಯಾ ಅನ್ಸಾರಿರವರ ಮಧ್ಯಕಾಲೀನ ಕರ್ನಾಟಕದಲ್ಲಿ ಸಾಮಂತ ಕುಟುಂಬಗಳು, ವೆಂಕಣಗುಡ್ಡರವರ ಹೊಯ್ಸಳರ ನೀತಿಗಳು, ಎನ್.ಸಾವಿತ್ರಿರವರ ಹೊಯ್ಸಳರ ಕಾಲದಲ್ಲಿ ಶಿಕ್ಷಣ ಇವು ಮಹತ್ವವಾದವು.

ಎಮ್.ವಿ.ಕೃಷ್ಣಪ್ಪ, ಎಮ್.ಎಸ್.ಕೃಷ್ಣಮೂರ್ತಿ, ಜ್ಯೋತ್ಸ್ನ ಕಾಮತ್, ಟಿ.ವಿ.ಮಹಾಲಿಂಗಮ್, ಎ.ಎಸ್.ಅಲ್ತೇಕರ್, ಎಮ್.ಹೆಚ್.ಕೃಷ್ಣ, ಎ.ಅಪ್ಪದುರೈ, ಕೆ.ಕೃಷ್ಣಮೂರ್ತಿ, ಎಮ್.ಕೆ.ಧುವಾಲಿಕರ್, ದಯಾನಂದ ಪಾಟೀಲ್, ಆರ್.ಎಸ್.ಗುಪ್ತ, ಎನ್.ರಂಗರಾಜು ಮತ್ತಿತರರು ಹೊಯ್ಸಳರ ಬಗ್ಗೆ ಉಪಯುಕ್ತ ಕಾರ್ಯವನ್ನು ಮಾಡಿದ್ದಾರೆ.

ಈ ಮೇಲಿನ ಎಲ್ಲಾ ಸಾಹಿತ್ಯಗಳ ವಿಮರ್ಶೆಯಿಂದ ಹೊಯ್ಸಳರ ಅವನತಿಗೆ ಸಂಬಂಧಿಸಿದ ಅನೇಕ ಕಾರಣಗಳನ್ನು, ಸಂಗತಿಗಳನ್ನು, ಸಂದರ್ಭಗಳನ್ನು ಕುರಿತು ದೀರ್ಘವಾಗಿ ಪರಾಮರ್ಶಿಸಬಹುದಾಗಿದೆ. ಈ ಮೇಲ್ಕಂಡ ಎಲ್ಲಾ ಸಾಹಿತ್ಯಾಧಾರಗಳು ಸಹ ಹೊಯ್ಸಳರ ಅವನತಿಗೆ ಸಂಬಂಧಿಸಿದ ಆಡಳಿತಾತ್ಮಕ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ಮುಖ್ಯವಾಗಿ ಸೈನಿಕ ಕಾರಣಗಳನ್ನು ಕುರಿತು ದೀರ್ಘವಾಗಿ ಚರ್ಚಿಸಿ ಸತ್ಯಾಂಶವನ್ನು ಹೊರತೆಗೆಯುವಲ್ಲಿ ಸಹಾಯಕವಾಗುತ್ತದೆ. ಹಾಗಾಗಿ ನನ್ನ ಮಹಾಪ್ರಬಂಧದ ರಚನೆಯಲ್ಲಿ ಈ ಎಲ್ಲಾ ಪ್ರಮುಖ ಆಕರಗಳನ್ನು ಸಾಹಿತ್ಯಿಕ ವಿಮರ್ಶೆಯಲ್ಲಿ ಬಳಸಿಕೊಳ್ಳುತ್ತೇನೆ.

## 1.4 ‘ಅವನತಿ’ ಪದದ ಅರ್ಥ

"ಹೊಯ್ಸಳ ರಾಜ ಸಂತತಿಯ ಅವನತಿ" ಒಂದು ಅಧ್ಯಯನ ಎಂಬ ನನ್ನ ಸಂಶೋಧನಾ ಮಹಾಪ್ರಬಂಧವು ಮುಖ್ಯವಾಗಿ ಹೊಯ್ಸಳ ರಾಜ ಸಂತತಿಯ ಅವನತಿಯ ಬಗ್ಗೆ ದೀರ್ಘವಾಗಿ ವಸ್ತುನಿಷ್ಟವಾಗಿ ಹಾಗೂ ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಲಾಗುತ್ತದೆ. ಆದ ಕಾರಣ ಇಡೀ ಪ್ರಬಂಧವು ಹೊಯ್ಸಳರ ಅವನತಿಯು ಹೇಗೆ, ಏಕೆ, ಹಾಗೂ ಯಾವ ರೀತಿಯಲ್ಲಿ ಮುಖ್ಯವಾಗಿ ಎಷ್ಟು ಹಂತಗಳಲ್ಲಿ ಆಯಿತು ಎಂಬುದನ್ನು ಚರ್ಚಿಸುತ್ತದೆ. ಆದ್ದರಿಂದ ‘ಅವನತಿ’ ಎಂಬುದು ನನ್ನ ಪ್ರಬಂಧದ ಮುಖ್ಯ ಚರ್ಚಾಸ್ಪದ ಪದವಾಗಿರುತ್ತದೆ. ಆದ್ದರಿಂದ ಈ ಪದದ ಅರ್ಥವನ್ನು ಕುರಿತು ಚರ್ಚಿಸುವುದು ಸಂಶೋಧನಾ ಕ್ರಮ ವಿಧಾನದ ರೀತಿಯಲ್ಲಿ ಸೂಕ್ತವಾದುದು. ಅವನತಿ ಎಂಬ ಕನ್ನಡ ಪದಕ್ಕೆ ಕನ್ನಡ ಭಾಷೆಯಲ್ಲಿ ನಶಿಸಿ ಹೋಗುವುದು, ಕೊನೆಗೊಳ್ಳುವುದು, ಅಸ್ತಿತ್ವವನ್ನು ಕಳೆದುಕೊಳ್ಳುವುದು ಎಂದು ಅರ್ಥ ಬರುತ್ತದೆ. ಅವನತಿ ಎಂಬ ಕನ್ನಡ ಪದದ ಆಂಗ್ಲ ಭಾಷೆಯ ಸಮಾನಾಂತರ ರೂಪಾಂತರವು Decline ಎಂದಾಗಿರುತ್ತದೆ. Decline ಎಂಬ ಪದಕ್ಕೆ ಆಂಗ್ಲ ಭಾಷೆಯಲ್ಲಿ ಕುಗ್ಗು, ಕ್ಷೀಣಿಸು, ಇಳಿತವಾಗು, ಕ್ಷಯಿಸು, ಅವಸಾನ, ನಾಶ ಎಂಬ ಅರ್ಥಗಳು ಬರುತ್ತದೆ. ಮಧ್ಯಯುಗದ ಇತಿಹಾಸದಲ್ಲಿ ದಕ್ಷಿಣ ಭಾರತದಲ್ಲಿಯೇ ಆಡಳಿತಾತ್ಮಕವಾಗಿ, ಆರ್ಥಿಕವಾಗಿ, ಮಿಲಿಟರಿ ಶಕ್ತಿಯಾಗಿ ಅತ್ಯಂತ ದಕ್ಷ, ಸದೃಢ, ಪ್ರಬಲ, ರಾಜ್ಯವಾಗಿದ್ದ ಹೊಯ್ಸಳರು ಯಾವ ರೀತಿಯಲ್ಲಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡು ಇತಿಹಾಸದಿಂದ ತೆರೆಯ ಮರೆಗೆ ಹಂತಹಂತವಾಗಿ ಹೇಗೆ ಜಾರಿ ಹೋಯಿತು ಎಂಬುದನ್ನು ಈ ಮಹಾಪ್ರಬಂಧದಲ್ಲಿ ಕೂಲಂಕುಷವಾಗಿ ಚರ್ಚಿಸಲಾಗಿದೆ. ಆದ್ದರಿಂದ ಅವನತಿ ಅಥವಾ Decline ಪದದ ಅರ್ಥ ಇಲ್ಲಿ ತೋರಿಸುವುದು ಸಮಂಜಸವೆನಿಸುತ್ತದೆ.

## 1.5 ಅಧ್ಯಯನದ ವ್ಯಾಪ್ತಿ

ಅಧ್ಯಯನದ ವ್ಯಾಪ್ತಿಯು ಹೊಯ್ಸಳ ವಂಶದ ಸಂಪೂರ್ಣ ಚರಿತ್ರೆಯನ್ನು ವ್ಯಾಪಿಸುತ್ತದೆ. ಈ ಸಂಶೋಧನೆಯು ಹೊಯ್ಸಳ ವಂಶದ ಪತನಕ್ಕೆ ಕಾರಣವನ್ನು ಪತ್ತೆ ಮಾಡಲು ಸಹಾಯ ಮಾಡುತ್ತದೆ. ಈ ಕಾರ್ಯವು ವಿಶೇಷವಾಗಿ ಮಧ್ಯಕಾಲೀನ ಕರ್ನಾಟಕದ ಚರಿತ್ರೆಗೆ ಮತ್ತು ಸಾಮಾನ್ಯವಾಗಿ ಭಾರತದ ಚರಿತ್ರೆಗೆ ಒಂದು ಕಾಣಿಕೆಯಾಗುತ್ತದೆ.

## 1.6 ಸಂಶೋಧನಾ ವಿಧಾನ

ಪ್ರಸ್ತುತ ಸಂಶೋಧನೆಯಲ್ಲಿ ಸಂಶೋಧನಾ ಮಾರ್ಗದ ತತ್ವಗಳನ್ನು ಅಳವಡಿಸಿಕೊಳ್ಳ-ಲಾಗುತ್ತದೆ. ವಿಷಯ ಸಂಗ್ರಹಣೆ ಬಾಹ್ಯವಿಮರ್ಶೆ, ಆಂತರಿಕ ವಿಮರ್ಶೆಯ ಸೂತ್ರಗಳು,

ವಿಶ್ಲೇಷಣೆ ಕ್ರಮಗಳು ಮತ್ತು ನಿರೂಪಣಾ ತತ್ವಗಳನ್ನು ಸಂಶೋಧನೆಯಲ್ಲಿ ಅಳವಡಿಸಿ–ಕೊಳ್ಳಲಾಗುತ್ತದೆ. ಪ್ರಸ್ತುತ ಸಂಶೋಧನಾ ವಿಷಯದಲ್ಲಿ ಸಂಶೋಧನಾ ವಿಧಾನಗಳಿಂದ ವಿಮರ್ಶೆ, ವಿಶ್ಲೇಷಣೆ, ಸಮಂಜಸ, ಸಮಗ್ರತೆ, ಸಂಯೋಜನೆ, ಅಡಿಟಿಪ್ಪಣಿ, ಗ್ರಂಥವಿವರಣಾ ಪಟ್ಟಿ, ಗ್ರಂಥಸೂಚಿ, ಗ್ರಂಥಪಟ್ಟಿ, ಅನುಬಂಧ, ಪರಿವಿಡಿಗಳನ್ನು ಬಳಸಿಕೊಳ್ಳುತ್ತೇನೆ.ಹೀಗೆ ಪ್ರಸ್ತುತ ಸಂಶೋಧನಾ ವಿಷಯಕ್ಕೆ ಸಂಶೋಧನಾ ಕ್ರಮ ವಿಧಾನಗಳನ್ನು ಅನುಕೂಲ ರೀತಿಯಲ್ಲಿ ಬಳಸಿಕೊಳ್ಳಲಾಗಿದೆ.

## 1.7 ಅಧ್ಯಯನದ ವಸ್ತುನಿಷ್ಠತೆ

- ಈ ಕೆಲಸದ ಮುಖ್ಯ ಉದ್ದೇಶವೆಂದರೆ ಹೊಯ್ಸಳ ವಂಶದ ಪತನಕ್ಕೆ ಕಾರಣವನ್ನು ಕಂಡುಹಿಡಿಯುವುದು.
- ಹೊಯ್ಸಳರು ಮತ್ತು ದೇವಗಿರಿಯ ಸೇವುಣರ ನಡುವಿನ ಶತೃತ್ವದ ಬಗ್ಗೆ ತಿಳಿಯುವುದು.
- ಹೊಯ್ಸಳ ದೊರೆಗಳ ಮಿತಿಮೀರಿದ ತಮಿಳುನಾಡಿನ ವ್ಯವಹಾರಗಳಲ್ಲಿ ಮಗ್ನರಾಗಿ ಇರುವುದು, ದ್ವಾರಸಮುದ್ರದ ಮೇಲೆ ಮಲ್ಲಿಕಾಫರನ ಮತ್ತಿತರ ದಾಳಿಗಳು, ಇವು ಸಾಮ್ರಾಜ್ಯವನ್ನು ದುರ್ಬಲಗೊಳಿಸಿರುವುದು.
- ಮೂರನೆಯ ಬಲ್ಲಾಳನು ಎದುರಿಸಿದ ಸಮಸ್ಯೆಗಳ ಪರಿಣಾಮ ಹೊಯ್ಸಳ ವಂಶದ ಕಣ್ಮರೆ.
- ಹೊಯ್ಸಳರ ಅಧಿಕಾರವನ್ನು ಪುನರುತ್ಥಾನಗೊಳಿಸುವಲ್ಲಿ ನಾಲ್ಕನೆಯ ವಿರುಪಾಕ್ಷನ ವೈಫಲ್ಯತೆ
- ಹೇಗೆ ಮೂರನೆಯ ಬಲ್ಲಾಳನ ಸಾವು ಮಾಂಡಲೀಕನಾಗಿದ್ದ ಹರಿಹರನಿಗೆ ಎಡೆ ಮಾಡಿಕೊಟ್ಟಿತು, ಹೊಯ್ಸಳ ಸಾಮ್ರಾಜ್ಯವನ್ನು ವಿಲೀನಗೊಳಿಸಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪನೆಗೊಳಿಸುವಿಕೆ.

## 1.8 ಅಧ್ಯಯನದ ವಿಭಾಗೀಕರಣ

### ಮೊದಲ ಅಧ್ಯಾಯ

ಈ ಅಧ್ಯಯನವು ಹೊಯ್ಸಳರ ಕಾಲದಲ್ಲಿ ಒಳಪಟ್ಟ ರಾಜ್ಯದ ಭೌಗೋಳಿಕ ಹಿನ್ನಲೆಯ ಬಗ್ಗೆ ಚರ್ಚಿಸಲಾಗುವುದು. ಇದರಲ್ಲಿ ಪ್ರಮುಖವಾಗಿ ಕರ್ನಾಟಕ ಪ್ರದೇಶಗಳಾದ ತೀರಪ್ರದೇಶ, ಉತ್ತರ ಮೈದಾನ ಪ್ರದೇಶ, ಮಲೆನಾಡು ಪ್ರದೇಶ, ದಕ್ಷಿಣ ಬಯಲು ಪ್ರದೇಶದ ಬಗ್ಗೆ ಸವಿಸ್ತಾರದ

ಮಾಹಿತಿಯನ್ನು ಒಳಗೊಂಡಿದೆ. ಅಲ್ಲದೇ ಕರ್ನಾಟಕದ ಪ್ರಮುಖ ನದಿಗಳ ಬಗೆಯೂ ಸಹ ಈ ಅಧ್ಯಯನದಿಂದ ತಿಳಿಯಬಹುದು. ನಂತರ ಮುಂದುವರಿಯುತ್ತಾ ಹೊಯ್ಸಳ ಸಾಮ್ರಾಜ್ಯದ ವಿಸ್ತಾರ ಮತ್ತು ಅದರ ಮೇಲ್ಮೈಲಕ್ಷಣದ ಬಗ್ಗೆ ತಿಳಿಸಲಾಗಿದೆ. ಅಂದರೆ ವಿಸ್ತಾರ ಹೊಂದಿದ್ದ ಪ್ರದೇಶಗಳಿಂದ ಆರ್ಥಿಕತೆಯ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರುತ್ತದೆ ಎಂಬುವುದರ ಬಗ್ಗೆ ಚರ್ಚಿಸಲಾಗಿದೆ. ಇದರ ಜೊತೆಗೆ ಹೊಯ್ಸಳರ ಕಾಲದಲ್ಲಿದ್ದ ಮುಖ್ಯ ಬೆಳೆಗಳು ಮತ್ತು ವಾಣಿಜ್ಯ ಬೆಳೆಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಯಾವುದೇ ಸಾಮ್ರಾಜ್ಯದ ಬಗ್ಗೆ ತಿಳಿಯಲು ನಮಗೆ ಆಧಾರಗಳು ಪ್ರಮುಖ. ಅದೇ ರೀತಿ ಹೊಯ್ಸಳರ ಬಗ್ಗೆ ತಿಳಿಯಲು ಆಧಾರಗಳು ಅವಶ್ಯಕ. ಈ ಮೊದಲ ಅಧ್ಯಾಯದಲ್ಲಿ ಆಧಾರಗಳು ಹೊಯ್ಸಳರ ಬಗ್ಗೆ ಮಾಹಿತಿ ನೀಡುತ್ತದೆ. ಅಲ್ಲದೇ ಆಧಾರದ ಪ್ರಮುಖ ಭಾಗಗಳಾದ ಸಾಹಿತ್ಯಾಧಾರಗಳು ಮತ್ತು ಪುರಾತತ್ವ ಆಧಾರಗಳನ್ನು ಸಹ ಒಳಗೊಂಡಿದೆ. ಅಂದರೆ ಸಾಹಿತ್ಯ ಆಧಾರಗಳಿಗೆ ಸಂಬಂಧಿಸಿದಂತೆ ಯಾವ ಯಾವ ಕವಿಗಳು ರಚಿಸಿದ ಕೃತಿಗಳು ಹೊಯ್ಸಳರ ಬಗ್ಗೆ ಮಾಹಿತಿ ನೀಡುತ್ತದೆ ಎಂಬುದನ್ನು ತಿಳಿಯಬಹುದು. ಆಧಾರದಲ್ಲೇ ಪ್ರಮುಖವಾದ ಪುರಾತತ್ವ ಆಧಾರಗಳು, ಸಾಹಿತ್ಯ ಆಧಾರ–ಗಳಿಗಿಂತಲೂ ಹೆಚ್ಚಿನ ಮಾಹಿತಿ ನೀಡುತ್ತದೆ. ಇದರ ಪ್ರಮುಖ ಭಾಗಗಳಾದ ಭೂಸಂಶೋಧನೆ, ಶಾಸನಗಳು, ನಾಣ್ಯಗಳು, ಸ್ಮಾರಕಗಳು ಹೇಗೆ ಹೊಯ್ಸಳರ ಬಗ್ಗೆ ಮಾಹಿತಿ ನೀಡುತ್ತದೆ ಎಂಬುದನ್ನು ತಿಳಿಯಬಹುದು. ಈ ಅಧ್ಯಾಯದಲ್ಲಿ ಇದೂವರೆಗೂ ನಡೆದಿರುವ ಅಧ್ಯಯನಗಳ ವಿಮರ್ಶೆಯನ್ನು ಒಳಗೊಂಡಿದೆ. ಇದರ ಜೊತೆಗೆ ಹೊಯ್ಸಳರ ಬಗ್ಗೆ ಇತ್ತೀಚಿನ ಯಾವ ರೀತಿಯ ಕೆಲಸಗಳು ನಡೆದಿವೆ ಎಂಬುದನ್ನು ತಿಳಿಯಬಹುದು. ಈ ಒಂದು ಅಧ್ಯಯನದಲ್ಲಿ ಪ್ರಮುಖವಾಗಿ ನೋಡುವುದಾದರೆ ಅವನತಿ ಪದದ ಅರ್ಥ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ವಸ್ತುನಿಷ್ಟತೆ, ಸಂಶೋಧನಾ ವಿಧಾನಗಳ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ನೀಡಲು ಈ ಮೊದಲ ಅಧ್ಯಯನದಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ.

## ಎರಡನೆಯ ಅಧ್ಯಾಯ

ಎರಡನೇ ಅಧ್ಯಯನದಲ್ಲಿ ಹೊಯ್ಸಳರು ಯಾವ ವಂಶಕ್ಕೆ ಸೇರಿದವರು ಮತ್ತು ಮೂಲ ಯಾವುದು ಎಂಬುದನ್ನು ತಿಳಿಯಬಹುದಾಗಿದೆ. ಅಲ್ಲದೇ ಚೋಳರಿಗೂ ಮತ್ತು ಹೊಯ್ಸಳರಿಗೂ ಹೇಗೆ ವೈರತ್ವ ಬೆಳೆಯಿತು ಹಾಗೂ ಹೇಗೆ ಚಾಳುಕ್ಯರ ಸಾಮಂತರಾದರು ಎಂಬುದನ್ನು ಎರಡನೇ ಅಧ್ಯಾಯದಲ್ಲಿ ತಿಳಿಸಲಾಗಿದೆ. ಈ ಒಂದು ಅಧ್ಯಾಯದಿಂದ ತಿಳಿಯುವ ಮತ್ತೊಂದು ವಿಷಯವೆಂದರೆ ಇವರ ಜನ್ಮಸ್ಥಳವಾಗಿದೆ. ಅಂದರೆ ಅವರು ತಮ್ಮ ಸ್ಥಳವೆಂದು ಹೇಳಿಕೊಂಡ ಸೊಸೆವೂರಿನ ಬಗ್ಗೆ ಸವಿಸ್ತಾರವಾದ ಮಾಹಿತಿ ನೀಡುತ್ತದೆ. ನಂತರ ಹೊಯ್ಸಳ ಎಂಬ ಹೆಸರು

ಹೇಗೆ ಬಂದಿತು ಮತ್ತು ಸಳ ಹೇಗೆ ಹೊಯ್ಸಳ ಸಾಮ್ರಾಜ್ಯದ ಸ್ಥಾಪಕನಾದ ಎಂಬುವುದರ ಬಗೆಯೂ ಮಾಹಿತಿ ನೀಡುತ್ತದೆ. ಹೊಯ್ಸಳರ ಮೂಲಕ್ಕೆ ಸಂಬಂಧಿಸಿದಂತೆ ಹಲವಾರು ಕಥೆಗಳು ಸಿಗುತ್ತದೆ. ಅದರಲ್ಲೂ ಪ್ರಮುಖವಾಗಿ ವಸಂತಿಕಾ ದೇವಿಯ ಕಥೆಯನ್ನು ಸಹ ತಿಳಿಯ-ಬಹುದಾಗಿದೆ. ಹೊಯ್ಸಳರ ಮೂಲದ ಬಗ್ಗೆ ವಿಭಿನ್ನವಾದ ಕಥೆಗಳು ಲಭ್ಯವಾಗಿರುವುದನ್ನು ಈ ಎರಡನೇ ಅಧ್ಯಾಯದಲ್ಲಿ ಕಾಣಬಹುದಾಗಿದೆ. ಹೊಯ್ಸಳ ವಂಶದ ಬಗ್ಗೆ ಆಳವಾದ ಅಧ್ಯಯನ ಮಾಡಿದ ಡಾ||ಡೆರೆಟ್ಟ್‌ರವರ ವಿಮರ್ಶೆಯನ್ನು ಸಹ ಈ ಅಧ್ಯಯನವು ಒಳಗೊಂಡಿದೆ. ಈ ಒಂದು ಅಧ್ಯಯನದಿಂದ ಹೊಯ್ಸಳರ ಮೂಲದ ಬಗ್ಗೆ ಹೇಳಿದ ಕಥೆಯೊಂದರ ಬಗ್ಗೆ ಡಾ||ಬಿ.ಆರ್.ಜೋಷಿಯವರು ನೀಡಿದ ಮಾಹಿತಿಯನ್ನು ತಿಳಿಯಬಹುದು. ನಂತರ ಹೊಯ್ಸಳ ಎಂಬ ಪದವನ್ನು ಎಲ್ಲಾ ಶಾಶನಗಳಲ್ಲಿ ಏಕಪ್ರಕಾರವಾಗಿ ಬಳಕೆಯಾಗಿಲ್ಲ. ಯಾವ ಯಾವ ಪದಗಳನ್ನು ಬಳಕೆ ಮಾಡಿದ್ದಾರೆ ಎಂಬುದನ್ನು ತಿಳಿಯಬಹುದು. ಮುಂದುವರಿಯುತ್ತಾ ಹೊಯ್ಸಳ ವಂಶದ ಮೂಲದ ವಿಚಾರವಾಗಿ ವಿದ್ವಾಂಸರು ತರ್ಕಬದ್ಧವಾಗಿ ದಾಖಲೆಗಳನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಅವುಗಳ ಬಗೆಯೇ ಸಹ ತಿಳಿಯಬಹುದು. ತಮಿಳು ಸಾಹಿತ್ಯವು ಹೊಯ್ಸಳರ ಮೂಲದ ಬಗ್ಗೆ ತಿಳಿಸಿದೆ. ನಂತರ ಕೆಪಿಲರ್‌ನು ಪಾಳ್ಯಗಾರ ಇರುಂಕೊವೆಲ್ ಮತ್ತು ಆ ಪದ್ಯಗಳು ವೆಲರ್‌ನ ಹಿಂದಿನ ಚಾರಿತ್ರಿಕ ವೈಭವವನ್ನು ಕುರಿತು ಹೇಳುತ್ತಾನೆ. ಮೂಲದ ಬಗ್ಗೆ ಹಲವಾರು ಮಾಹಿತಿಗಳನ್ನು ನೀಡಿದ ಹಾಗೆ ಹೊಯ್ಸಳ ಎಂಬ ಪದದ ಅರ್ಥವನ್ನು ಸಹ ಈ ಅಧ್ಯಯನದಿಂದ ತಿಳಿಯಬಹುದು. ವಿಜಯನಗರ ಸಾಮ್ರಾಜ್ಯವು ಪತನಗೊಂಡ ನಂತರ ರಾಜ ಒಡೆಯರ್ ನಿಜವಾಗಿ ಹೊಯ್ಸಳರ ವಂಶಕ್ಕೆ ಸೇರಿದವರು ಎಂಬುದರ ಬಗ್ಗೆ ತಿಳಿಯಬಹುದು. ದ್ವಾರಸಮುದ್ರದ ಹೊಯ್ಸಳರ ಬಗ್ಗೆ ಹಲವಾರು ಸಾಹಿತ್ಯಿಕ ಕೃತಿಗಳು ಬಹಳ ಮಾಹಿತಿಯನ್ನು ಒದಗಿಸುತ್ತದೆ. ಅಲ್ಲದೆ ಮುಸ್ಲಿಮ್ ಚಿರತ್ರೆಕಾರರು ಸಹ ಹೊಯ್ಸಳರ ಅಂತಿಮ ವರ್ಷಗಳ ಚರಿತ್ರೆಯ ಬಗ್ಗೆ ಯಾವ ಕೃತಿ ಮಾಹಿತಿ ನೀಡುತ್ತದೆ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಯಬಹುದು. ಮೇಲೆ ತಿಳಿಸಿದ ಎಲ್ಲಾ ವಿವರಗಳು ನನ್ನ ಮಹಾ ಪ್ರೌಢಪ್ರಬಂಧದಲ್ಲಿ 2ನೇ ಅಧ್ಯಾಯದಲ್ಲಿ ಒಳಗೊಂಡಿದೆ.

## ಮೂರನೆಯ ಅಧ್ಯಾಯ

ಹೊಯ್ಸಳರು ಸಾಮ್ರಾಜ್ಯ ಸ್ಥಾಪನೆ ಮಾಡಬೇಕಾದರೆ ಅವರ ಕ್ರಮ ಹಾಗೂ ಯೋಜನೆಗಳ ಬಗ್ಗೆ ಸಾಕಷ್ಟು ಬೆಳಕು ಚೆಲ್ಲುವ ಪ್ರಯತ್ನವನ್ನು ಈ ಶೀರ್ಷಿಕೆಯಲ್ಲಿ ಮಾಡಿಕೊಳ್ಳಲಾಗಿದೆ. ಈ ಒಂದು ಅಧ್ಯಯನದಲ್ಲಿ ಸಳ ಹೊಯ್ಸಳ ಸಾಮ್ರಾಜ್ಯದ ಸ್ಥಾಪಕ ಎಂಬುದರ ಬಗ್ಗೆ ಹಲವಾರು ಗೊಂದಲಗಳು ಇವೆ. ಈ ಒಂದು ವಿಷಯಕ್ಕೆ ಸಂಬಂಧಿಸಿದಂತೆ

ಜಾನ್ ಫೈಲ್‌ಪುಲ್‌ಫ್ಲೀಟ್ ಮತ್ತು ಸಿ.ಹಯವದನರಾವ್‌ರವರು ತಮ್ಮದೇ ಆದ ಅಭಿಪ್ರಾಯಗಳನ್ನು ಮಂಡಿಸಿರುವುದನ್ನು ಇದರಲ್ಲಿ ಕಾಣಬಹುದು. ಸಳನ ನಂತರ ಬಂದ ವಿನಯಾದಿತ್ಯನು ಆಳ್ವಿಕೆಯ ಬಗ್ಗೆ ಹಾಗೂ ಚೋಳರ ಮತ್ತು ಹೊಯ್ಸಳರಿಗೂ ನಡೆದ ಕದನದ ಬಗ್ಗೆ ತಿಳಿಯಬಹುದಾಗಿದೆ. ನಂತರ ಬಂದ ನೃಪಕಾಮನ ಬಗ್ಗೆ ಮತ್ತು ಅವನಿಗೆ ಇದ್ದ ಬಿರುದುಗಳನ್ನು ಅಲ್ಲದೇ ಕೆಂಗಾಳ್ವರು ಜೊತೆ ನಡೆದ ಯುದ್ಧದ ಬಗ್ಗೆಯೂ ಸಹ ಮಾಹಿತಿಯನ್ನು ಒಳಗೊಂಡಿದೆ. ಹೊಯ್ಸಳ ರಾಜರಲ್ಲೇ ಪ್ರಮುಖನಾದ ಎರಡನೆಯ ವಿನಯಾದಿತ್ಯನ ಬಗ್ಗೆ ಮತ್ತು ಸಾಮಂತರಾಗಿ ಚಾಲುಕ್ಯರೊಡನೆ ಸಮಬಂಧಗಳ ಬಗ್ಗೆ ಹಾಗೂ ವಿನಯಾದಿತ್ಯ ಕೈಗೊಂಡ ಯುದ್ಧಗಳ ಬಗ್ಗೆ ಮಾಹಿತಿ ನೀಡುತ್ತದೆ. ಅಲ್ಲದೆ ಈ ಒಂದು ಅಧ್ಯಯನದಲ್ಲಿ ವಿನಯಾದಿತ್ಯ ಸೊಸೆವೂರಿನಿಂದ ದೋರಸಮುದ್ರಕ್ಕೆ ರಾಜಧಾನಿ ವರ್ಗಾವಣೆ ಮಾಡಿದ ಬಗ್ಗೆಯೂ ಸಹ ಮಾಹಿತಿ ನೀಡಲಾಗಿದೆ. ನಂತರ ಸಿಂಹಾಸನವೇರಿದ ಎರೆಯಂಗ ಮತ್ತು ಅವನ ಜೀವನದ ಬಗ್ಗೆ ಸಂಕ್ಷಿಪ್ತವಾದ ಮಾಹಿತಿ ಈ ಮೂರನೇ ಅಧ್ಯಯನದಲ್ಲಿ ನೋಡಬಹುದು. ಎರೆಯಂಗನ ನಂತರ ಅಧಿಕಾರಕ್ಕೆ ಬಂದ ಮೊದಲನೆಯ ಬಲ್ಲಾಳನ ಆಕಾಂಕ್ಷೆಗಳು ಮತ್ತು ಜಗದೇವನ ವಿರುದ್ಧ ಬಲ್ಲಾಳನ ಕದನದ ಬಗ್ಗೆ ಮಾಹಿತಿ ಒದಗಿಸಿದ್ದೇನೆ. ಮುಂದುವರಿಯುತ್ತಾ ಬಲ್ಲಾಳ ಕಲ್ಯಾಣದ ಚಾಳುಕ್ಯರ ಸಾಮಂತರ ಮೇಲೆ ಮಾಡಿದ ದಾಳಿಗಳ ಬಗ್ಗೆಯೇ ಮಾಹಿತಿಯನ್ನು ಒಳಗೊಂಡಿದೆ. ಇದರ ಜೊತೆಗೆ ಬಲ್ಲಾಳನ ವೈಯಕ್ತಿಕ ಜೀವನದಲ್ಲಿ ನಡೆದ ಘಟನೆಗಳ ಬಗ್ಗೆಯೂ ಸಹ ಮಾಹಿತಿ ನೀಡಲಾಗಿದೆ. ಇದರ ಜೊತೆಗೆ ಕಲ್ಯಾಣಿ ಚಾಲುಕ್ಯರ ಜಹಗೀರುಗಳ ಮೇಲೆ 1ನೇ ಬಲ್ಲಾಳನ ದಾಳಿ ಬಗೆ ಮಾಹಿತಿ ನೀಡಲಾಗಿದೆ. ಬಲ್ಲಾಳನ ವಿಫಲತೆ ಮತ್ತು ಬಲ್ಲಾಳನ ಮರಣಕ್ಕೆ ಸಂಬಂಧಿಸಿದಂತೆ ಹಲವು ಮಾಹಿತಿಗಳನ್ನು ನೀಡಲಾಗಿದೆ. ಈತನ ನಂತರ ಅಧಿಕಾರಕ್ಕೆ ವಿಷ್ಣುವರ್ಧನನ ಬಗ್ಗೆ ಈ 3ನೇ ಅಧ್ಯಯನದಲ್ಲಿ ತಿಳಿಯಬಹುದಾಗಿದೆ. ಪ್ರಾರಂಭದಲ್ಲಿ ವಿಷ್ಣುವರ್ಧನನ ವೈಯಕ್ತಿಕ ಜೀವನದ ಬಗ್ಗೆ ಮಾಹಿತಿ ತಿಳಿಸಲಾಗಿದೆ. ವಿಷ್ಣುವರ್ಧನ ಅಧಿಕಾರಕ್ಕೆ ಹೊಯ್ಸಳ ರಾಜ್ಯವು ಯಾವ ಯಾವ ಜಿಲ್ಲೆಗಳನ್ನು ಒಳಗೊಂಡಿತ್ತು ಮತ್ತು ಎಲ್ಲಿಯವರೆಗೂ ಹಬ್ಬಿತ್ತು ಎಂಬುದರ ಬಗ್ಗೆಯೂ ತಿಳಿಸಲಾಗಿದೆ. ಅಲ್ಲದೆ ವಿಷ್ಣುವರ್ಧನನ ಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಲಾಗಿದೆ.

## ನಾಲ್ಕನೆಯ ಅಧ್ಯಾಯ

ನಾಲ್ಕನೆಯ ಅಧ್ಯಾಯದಿಂದ ಸಾರ್ವಭೌಮಾಧಿಕಾರದ ಬಗ್ಗೆ ಸವಿಸ್ತಾರವಾಗಿ ತಿಳಿಸಲಾಗಿದೆ. ಆದರೆ ಈ ಒಂದು ಅಧ್ಯಾಯದಲ್ಲಿ 1ನೇ ಬಲ್ಲಾಳ ಅಧಿಕಾರಕ್ಕೆ ಬಂದ ಬಗೆಯನ್ನು ತಿಳಿಸಲಾಗಿದೆ. ಅಲ್ಲದೇ ಬಲ್ಲಾಳನ ಸಾಧನೆಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. 1ನೇ

ಬಲ್ಲಾಳನು ಜಗದೇವನ ಮೇಲೆ ದಾಳಿ ಮಾಡಿದ್ದನ್ನು ಸವಿಸ್ತಾರವಾಗಿ ತಿಳಿಸಲಾಗಿದೆ. ನಂತರ ಅಧಿಕಾರಕ್ಕೆ ಬಂದ ವಿಷ್ಣುವರ್ಧನನ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ವಿಷ್ಣುವರ್ಧನ ಅಧಿಕಾರಕ್ಕೆ ಬರುವ ಮೊದಲು ಮಾಡಿದ ಯುದ್ಧಗಳ ಬಗ್ಗೆ ತಿಳಿಸಲಾಗಿದೆ. ಅದರಲ್ಲಿ ಪ್ರಮುಖವಾಗಿ ಎರೆಯಂಗ ಮತ್ತು ವಿಷ್ಣುವರ್ಧನನು ಜೊತೆಗೂಡಿ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದ ಬಗ್ಗೆ ಮತ್ತು ಅದರಿಂದ ಆದ ಪರಿಣಾಮಗಳ ಬಗ್ಗೆ ಸಂಕ್ಷಿಪ್ತವಾದ ಮಾಹಿತಿಯನ್ನು ಪ್ರಾರಂಭದಲ್ಲಿ ತಿಳಿಸಲಾಗಿದೆ. ಅಲ್ಲದೆ 1ನೇ ಬಲ್ಲಾಳನ ಕಾಲದಲ್ಲಿಯೂ ಸಹ ವಿಷ್ಣುವರ್ಧನ ಯುದ್ಧಗಳಲ್ಲಿ ಮತ್ತು ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರ ಬಗ್ಗೆ ತಿಳಿಸಲಾಗಿದೆ. ಅದರಲ್ಲಿ ಪ್ರಮುಖವಾಗಿ ಜಗದ್ದೇವನ ವಿರುದ್ಧ ದಾಳಿಗಳ ಬಗ್ಗೆ ಮತ್ತು ಪರಿಣಾಮದ ಬಗ್ಗೆ ತಿಳಿಸಲಾಗಿದೆ. ನಂತರ ವಿಷ್ಣುವರ್ಧನನ ಪಟ್ಟಾಭಿಷೇಕದ ಬಗ್ಗೆ ಮಾಹಿತಿ ನೀಡಲಾಗಿದೆ. ವಿಷ್ಣುವರ್ಧನನ ಕಾಲದ ದಿಗ್ವಿಜಯಗಳನ್ನು ಎರಡು ಭಾಗಗಳಲ್ಲಿ ಅಧ್ಯಯನ ಮಾಡಬಹುದು. ಅದರ ಬಗ್ಗೆ ಈ ಒಂದು ಅಧ್ಯಯನದಲ್ಲಿ ತಿಳಿಸಲಾಗಿದೆ. ಅಲ್ಲದೇ ವಿಷ್ಣುವರ್ಧನನು ಅಧಿಕಾರಕ್ಕೆ ಬಂದಾಗ ತಾನು ಹೊಂದಿದ ಆಶಯಗಳನ್ನು ಮತ್ತು ಯುದ್ಧಗಳನ್ನು ಕೈಗೊಳ್ಳಲು ರೂಪಿಸಿಕೊಂಡ ಯೋಜನೆಗಳ ಬಗ್ಗೆಯೂ ಸಹ 4ನೇ ಅಧ್ಯಾಯದಲ್ಲಿ ತಿಳಿಸಲಾಗಿದೆ. ನಂತರ ತಲಕಾಡು ಯುದ್ಧದ ಬಗ್ಗೆ ಸವಿಸ್ತಾರವಾಗಿ ವಿವರಿಸಲಾಗಿದೆ. ತಲಕಾಡಿನ ದಿಗ್ವಿಜಯದ ನಂತರ ಹೆಂಜೇರು ಮತ್ತು ನಿಡುಗಲ್‌ನ ಮೇಲೆ ಮಾಡಿದ ದಾಳಿಗಳ ಬಗ್ಗೆ ವಿವರಿಸಲಾಗಿದೆ. ಇದಾದ ನಂತರ ಕಂಚಿಯ ಮೇಲೆ ಮಾಡಿದ ದಾಳಿ ಮತ್ತು ದಂಡನಾಯಕ ಜೋಕಿಮಯ್ಯನ ಪಾತ್ರದ ಬಗೆ ಮತ್ತು ಈ ದಿಗ್ವಿಜಯದ ನಂತರ ಧರಿಸಿಕೊಂಡ ಬಿರುದುಗಳ ಬಗ್ಗೆ ಮಾಹಿತಿಯನ್ನು ತಿಳಿಸಲಾಗಿದೆ. ಇದಾದ ನಂತರ ನೀಲಗಿರಿ ಪ್ರದೇಶ ಕೊಯತೂರ, ತೆರೆಯೂರ್‌ಗಳನ್ನು ಹೇಗೆ ವಶಪಡಿಸಿಕೊಂಡನು. ಈ ಎಲ್ಲಾ ಮಾಹಿತಿಗಳು 4ನೇ ಅಧ್ಯಾಯದಲ್ಲಿ ಅಡಕವಾಗಿದೆ. ಈ ಎಲ್ಲಾ ದಿಗ್ವಿಜಯಗಳ ನಂತರ ಚಾಲುಕ್ಯರ ವಿರುದ್ಧ ಕೈಗೊಂಡ ಯುದ್ಧಗಳ ಬಗ್ಗೆ ತಿಳಿಸಲಾಗಿದೆ. ಇದರ ಜೊತೆಯಲ್ಲಿ ವಿಷ್ಣುವರ್ಧನನ ಪತ್ನಿಯರು ಮತ್ತು ಅವರ ಮಕ್ಕಳ ಬಗ್ಗೆಯೂ ಸಹ ಮಾಹಿತಿ ನೀಡಲಾಗಿದೆ. ನಂತರ 1ನೇ ನರಸಿಂಹನು ಅಧಿಕಾರಕ್ಕೆ ಬಂದನು. ಈತನು ಅಧಿಕಾರಕ್ಕೆ ಬಂದಾಗ ಎದುರಿಸಿದ ಸಮಸ್ಯೆಗಳ ಬಗ್ಗೆ, ಮಾಡಿದ ಯುದ್ಧಗಳ ಬಗ್ಗೆಯೂ ಸಹ ವಿಷಯಗಳು ಒಳಗೊಂಡಿದೆ.

## ಐದನೆಯ ಅಧ್ಯಾಯ

ಹೊಯ್ಸಳ ಸಾಮ್ರಾಜ್ಯದ ಎರಡನೆಯ ವೀರಬಲ್ಲಾಳನು ಹೊಯ್ಸಳ ವಂಶದ ಅಪ್ರತಿಮ ದೊರೆಯೆಂದು ಗೌರವಿಸಲ್ಪಟ್ಟನು. ಎರಡನೆಯ ವೀರಬಲ್ಲಾಳನ ಪ್ರಾರಂಭಿಕ ಜೀವನದ ಬಗ್ಗೆ ತಿಳಿಸಲಾಗಿದೆ. ಹಾಗೂ ಈತ ರಾಜ್ಯದ ಆಡಳಿತದಲ್ಲಿ ಪಾಲ್ಗೊಂಡಿದ್ದರ ಬಗ್ಗೆ ಮಾಹಿತಿಯನ್ನು

ನೀಡಲಾಗಿದೆ. ವೀರಬಲ್ಲಾಳನು ಸಿಂಹಾಸನಕ್ಕಾಗಿ ತಂದೆಯ ವಿರುದ್ಧ ದಂಗೆ ಎದ್ದನೇ ಎಂಬುದರ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳು ಇರುವುದರ ಬಗ್ಗೆಯೂ ಈ ಅಧ್ಯಾಯದಲ್ಲಿ ತಿಳಿಸಲಾಗಿದೆ. ಈತನ ಪಟ್ಟಾಭಿಷೇಕದ ಬಗ್ಗೆ ಮಾಹಿತಿ ನೀಡಲಾಗಿದೆ. ಪಟ್ಟಾಭಿಷೇಕದ ನಂತರ ವೀರಬಲ್ಲಾಳನ ವಿಜಯ ಯಾತ್ರೆಗಳನ್ನು ತಿಳಿಸಲಾಗಿದೆ. ನಂತರ ಉಚ್ಚಂಗಿಯ ಪಾಂಡ್ಯರ ಮೇಲೆ ದಾಳಿ ಮಾಡಿದ್ದನ್ನು ಸವಿಸ್ತಾರವಾಗಿ ವಿವರಿಸಲಾಗಿದೆ. ಈ ಒಂದು ದಾಳಿಯಲ್ಲೇ ಪ್ರಮುಖವಾದ ಕಾಮದೇವನ ವಿರುದ್ಧ ದಾಳಿಯು ಪ್ರಮುಖವಾಗಿದೆ. ಅದನ್ನು ಸಹ ಈ 5ನೇ ಅಧ್ಯಾಯದಲ್ಲಿ ಅಳವಡಿಸಲಾಗಿದೆ. ಇದರ ಜೊತೆಯಲ್ಲೇ ಅವನು ಈ ದಿಗ್ವಿಜಯಗಳಿಂದ ಪಡೆದುಕೊಂಡ ಬಿರುದುಗಳು ಯಾವುವು ಎಂಬುದನ್ನು ತಿಳಿಸಲಾಗಿದೆ. ಎರಡನೆಯ ವೀರಬಲ್ಲಾಳನು ಕಲಚೂರ್ಯರ ಮತ್ತು ಕಲ್ಯಾಣದ ಚಾಳುಕ್ಯರ ಬಗೆಗೆ ಅನುಸರಿಸಿದ ನೀತಿಯನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ. ಈ ಸಾಧನೆಯ ಹೆಗ್ಗುರುತಾಗಿ ಈತ ಪಡೆದುಕೊಂಡ ಬಿರುದಿನ ಬಗ್ಗೆಯೂ ಈ ಅಧ್ಯಾಯವು ಒಳಗೊಂಡಿದೆ. ಈ ನೀತಿಯ ನಂತರ ದೇವಗಿರಿಯ ಸೆವುಣರೊಡಗಿನ ಘರ್ಷಣೆಯನ್ನು 5ನೇ ಅಧ್ಯಯನದಲ್ಲಿ ತಿಳಿಯಬಹುದಾಗಿದೆ. ಈ ಒಂದು ಕನದಲ್ಲಿ ಸೇವುಣರನ್ನು ಸೋಲಿಸಿದ ನಂತರ ವಶಪಡಿಸಿಕೊಂಡ ಪ್ರದೇಶಗಳ ಬಗ್ಗೆಯೂ ಮತ್ತು ಆತ ಪಡೆದುಕೊಂಡ ಬಿರುದುಗಳ ಬಗ್ಗೆಯೂ ಸಹ ತಿಳಿಯಬಹುದು. ಎರಡನೆಯ ಬಲ್ಲಾಳ ಮತ್ತು ಚೋಳರ ನಡುವೆ ಇದ್ದ ಸಂಬಂಧ ಮತ್ತು ಪಾಂಡ್ಯರಿಂದ ಹೇಗೆ ಚೋಳರ ರಾಜ್ಯವನ್ನು ಸಂರಕ್ಷಿಸಿದರು ಎಂಬುದನ್ನೂ, ಜೊತೆಗೆ ಇದರಿಂದ ಪ್ರತಾಪ ನರಸಿಂಹ ಮತ್ತು ಎರಡನೆಯ ಬಲ್ಲಾಳ ಪಡೆದುಕೊಂಡ ಬಿರುದುಗಳು ಯಾವುವು ಎಂಬುದನ್ನೂ ಈ ಅಧ್ಯಯನವು ಒಳಗೊಂಡಿದೆ. ಇಷ್ಟೆಲ್ಲಾ ಸಾಧನೆಗೈದ ಎರಡನೆಯ ವೀರಬಲ್ಲಾಳನ ಮರಣ ಮತ್ತು ಆತನ ಸಾಧನೆಗಳು ಏನೇನು ಎಂಬುವುದನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ನಂತರ ಅಧಿಕಾರಕ್ಕೆ ಬಂದ ಎರಡನೆಯ ವೀರನರಸಿಂಹ, ಆತನು ಯುವರಾಜನಾಗಿದ್ದಾಗಲೇ ಮಾಡಿದ ಸಾಧನೆಗಳ ಬಗ್ಗೆ ಈ 5ನೇ ಅಧ್ಯಾಯವು ಒಳಗೊಂಡಿದೆ. ಮೂರನೆಯ ರಾಜೇಂದ್ರನನ್ನು ಸೆರೆಯಿಂದ ಬಿಡಿಸಲು ಎರಡನೆಯ ನರಸಿಂಹನ ಸಹಾಯದ ಬಗ್ಗೆ ಈ ಅಧ್ಯಾಯದಲ್ಲಿ ತಿಳಿಸಲಾಗಿದೆ. ಎರಡನೆಯ ನರಸಿಂಹ ಮತ್ತು ಸೇವುಣರ ನಡುವಿನ ಕದನಗಳನ್ನು ಹಾಗೂ ಚೋಳ ಸಾಮ್ರಾಜ್ಯದಲ್ಲಿ ತಲೆದೋರಿದ ಬಿಕ್ಕಟ್ಟು ಮತ್ತು ಇದರಲ್ಲಿ ಎರಡನೆಯ ನರಸಿಂಹನ ಮಧ್ಯಪ್ರವೇಶದ ಬಗ್ಗೆಯೂ ಮಾಹಿತಿಗಳು ಒಳಗೊಂಡಿದೆ. ಇದರ ಜೊತೆಗೆ ಆತನ ಆಲೋಚನೆಗಳ ಬಗ್ಗೆ ನನ್ನ ಈ ಪ್ರೌಢಪ್ರಬಂಧದ 5ನೇ ಅಧ್ಯಯನದಲ್ಲಿ ಅಳವಡಿಸಲಾಗಿದೆ.

## ಆರನೆಯ ಅಧ್ಯಾಯ

ಈ ಅಧ್ಯಾಯದಲ್ಲಿ ರಾಜ ವೀರಸೋಮೇಶ್ವರನ ಆಡಳಿತದ ಸಂದರ್ಭದಲ್ಲಿ ಹೊಯ್ಸಳರ ಅವನತಿ ಅದೋಗತಿಗೆ ತೆರಳಿತು. ಇವುಗಳ ನ್ಯೂನತೆಗಳ ಬಗ್ಗೆ ಈ ಒಂದು ಅಧ್ಯಾಯವು ತಿಳಿಸುತ್ತದೆ. ಈ ಆರನೇ ಅಧ್ಯಾಯದಲ್ಲಿ ವೀರಸೋಮೇಶ್ವರನ ಜೀವನಯಾತ್ರೆ ಮತ್ತು ತಮಿಳುನಾಡಿನ ವ್ಯವಹಾರದಲ್ಲಿ ಹೇಗೆ ಸಕ್ರಿಯವಾಗಿ ಪಾಲ್ಗೊಂಡನೆಂಬುದು ತಿಳಿಯುತ್ತದೆ. ಕಣ್ಣಾನೂರು ಹೇಗೆ ವೀರಸೋಮೇಶ್ವರನ ಮುಖ್ಯ ಸ್ಥಳವಾಗಿತ್ತು ಎಂಬುವುದನ್ನು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಬಹುದು. ಬಾಲ್ಯದಿಂದಲೂ ತಮಿಳುನಾಡಿನ ವ್ಯವಹಾರದಲ್ಲಿ ಸಕ್ರಿಯವಾಗಿ ತೊಡಗಿದ್ದ ಈತನಿಗೆ ಚೋಳ ಸಾಮ್ರಾಜ್ಯದ ಬಗೆಗೆ ತಂದೆಯವರ ನೀತಿಯನ್ನು ಹೇಗೆ ಮುಂದುವರಿಕೆ ಮಾಡಿದನು ಎಂಬುದನ್ನು ತಿಳಿಯಬಹುದು. ವೀರಸೋಮೇಶ್ವರನು ಸೆವುಣರ ವಿರುದ್ಧ ಯುದ್ಧ ಮಾಡಲು ಕಾರಣಗಳು ಮತ್ತು ಪರಿಣಾಮಗಳೇನು ಎಂಬುವುದು ಸಹ ಒಳಗೊಂಡಿದೆ. ಹೊಯ್ಸಳರು ಮತ್ತು ಪಾಂಡ್ಯರು ಹೊಂದಿದ್ದ ಸಂಬಂಧ ಹಾಗೂ 3ನೇ ಸೋಮೇಶ್ವರನು ಪಾಂಡ್ಯರಿಗೆ ಯಾವ ರೀತಿ ಸಹಾಯ ಮಾಡಿದನು ಎಂಬುದನ್ನು ತಿಳಿಯಬಹುದಾಗಿದೆ. ಈ ಹೊಯ್ಸಳರು ಪಾಂಡ್ಯರೊಡನೆ ಸ್ನೇಹಯುತ ಮೈತ್ರಿಯ ಬಗ್ಗೆ ಚೋಳರ ಅತೃಪ್ತಿಯ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಹೊಯ್ಸಳರ ಮತ್ತು ಪಾಂಡ್ಯರ ನಡುವಿನ ಈ ಸಂಬಂಧದಲ್ಲಿ ಹೇಗೆ ಅಪಶ್ರುತಿ ಉಂಟಾಯಿತು. ಅಲ್ಲದೆ ತಮಿಳುನಾಡಿನಲ್ಲಿ ಬದಲಾಗುತ್ತಿರುವ ಮೈತ್ರಿಗಳಿಂದ ಉಂಟಾಗುವ ಪರಿಣಾಮವೇನು. ಇವೆಲ್ಲಾ ಮಾಹಿತಿಗಳು ಈ ಅಧ್ಯಾಯ ಒಳಗೊಂಡಿದೆ. ವೀರ ಸೋಮೇಶ್ವರನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯವು ವಿಭಜನೆಗೊಂಡಿತ್ತು. ಈ ವಿಭಜನೆ ಮಾಡುವ ತೀರ್ಮಾನಕ್ಕೆ ಸೋಮೇಶ್ವರನು ಬರಲು ಕಾರಣವೇನು ಅಲ್ಲದೆ ವೀರ ಸೋಮೇಶ್ವರನು ಹೇಗೆ ಆಳ್ವಿಕೆ ನಡೆಸಿದನು ಎಂಬುದರ ಒಂದು ನೋಟವನ್ನು ಈ 6ನೇ ಅಧ್ಯಾಯದಲ್ಲಿ ತಿಳಿಯಬಹುದು. ಕಣ್ಣಾನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದಕ್ಷಿಣ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದ ಸೋಮೇಶ್ವರನ ಪುತ್ರನ ಬಗ್ಗೆಯೂ ಈ ಅಧ್ಯಾಯವು ಒಳಗೊಂಡಿದೆ. ಸೋಮೇಶ್ವರನ ಮತ್ತೊಬ್ಬ ಮಗನಾದ ಮೂರನೇ ನರಸಿಂಹ ಅಧಿಕಾರಕ್ಕೆ ಬಂದ ಬಗ್ಗೆ ಹಾಗೂ ಸೋಮೇಶ್ವರನು ಹೊಯ್ಸಳ ಸಾಮ್ರಾಜ್ಯವನ್ನು 2 ವಿಭಾಗಗಳಾಗಿ ಮಾಡಿದರ ಬಗ್ಗೆ ಕೆಲವು ಶಿಲಾಲೇಖನವು ಏನು ತಿಳಿಸಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಅಲ್ಲದೆ ಭೂಭಾಗದ ವಿಷಯಕ್ಕಾಗಿ ನರಸಿಂಹನಿಗೂ ಮತ್ತು ರಾಮನಾಥನ ನಡುವೆ ನಡೆದ ಕದನದ ಬಗ್ಗೆ ತಿಳಿಸಲಾಗಿದೆ. ವೀರನರಸಿಂಹನು ಕೈಗೊಂಡ ಇನ್ನಿತರ ದಂಗೆಗಳನ್ನು ಸಹ ಈ ಅಧ್ಯಾಯವು ಒಳಗೊಂಡಿದೆ. ಈತ ಹೊಂದಿದ ಬಿರುದುಗಳು ಮತ್ತು ಬಿರುದುಗಳ ಅರ್ಥವನ್ನು ಸಹ ಈ ಅಧ್ಯಾಯದಲ್ಲಿ ಕಾಣಬಹುದಾಗಿದೆ.

## ಏಳನೆಯ ಅಧ್ಯಾಯ

ಅವನತಿಯ ಹಂಚಿನಲ್ಲಿದ್ದ ಈ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಲು 3ನೇ ವೀರಬಲ್ಲಾಳನ ಕೊಡುಗೆ ಅಪಾರ. ಈತನು ತನ್ನನ್ನು ಸಂಪೂರ್ಣವಾಗಿ ಯುದ್ಧದಲ್ಲಿ ತೊಡಗಿಸಿಕೊಳ್ಳುವುದಲ್ಲದೆ ಅನೇಕ ರೀತಿಯ ಯುದ್ಧ ಕಲೆಯನ್ನು ತಿಳಿದಿರುತ್ತಾನೆ. 3ನೇ ವೀರಬಲ್ಲಾಳ ಅಧಿಕಾರಕ್ಕೆ ಬಂದಾಗ ಹೊಯ್ಸಳ ಸಾಮ್ರಾಜ್ಯದ ಪರಿಸ್ಥಿತಿ ಹೇಗಿತ್ತು ಎಂಬುದನ್ನು ಪ್ರಾರಂಭದಲ್ಲಿ ತಿಳಿಯಬಹುದಾಗಿದೆ. ಕೆಲವು ಶಾಸನಗಳು 3ನೇ ವೀರಬಲ್ಲಾಳನ ಬಗ್ಗೆ ಹಲವು ವಿಷಯಗಳನ್ನು ತಿಳಿಸಿದೆ. ಕೆಲವು ಶಾಸನಗಳು ದ್ವಾರಸಮುದ್ರ ರಾಜಧಾನಿಯಾಗಿದಂತೆ ಇನ್ನೂ ಹಲವು ಪ್ರದೇಶಗಳು ರಾಜಧಾನಿಯಾಗಿತ್ತು ಎಂದಿದೆ. ಅವುಗಳು ಯಾವುವು ಎಂಬುದು ನನ್ನ ಪ್ರೌಢಪ್ರಬಂಧದಲ್ಲಿ ತಿಳಿಸಲಾಗಿದೆ. 1368ರ ಶಾಸನವು ವೀರಬಲ್ಲಾಳನ ಮರಣದ ಬಗ್ಗೆ ತಿಳಿಸಿದೆ. ಐತಿಹಾಸಿಕ ಮಹತ್ವವುಳ್ಳ ಕೃತಿ ರುಕ್ಮಿಣಿ ಕಲ್ಯಾಣವು ಹಲವಾರು ಅಧ್ಯಯನ ಒಳಗೊಂಡಿದ್ದು ಇದು ಹೊಯ್ಸಳರ ಬಗ್ಗೆ ಮತ್ತು ಅದರಲ್ಲೂ 3ನೇ ವೀರಬಲ್ಲಾಳನ ಬಗ್ಗೆ ಹಲವಾರು ಮಾಹಿತಿಗಳನ್ನು ಮತ್ತು ಈ ಕೃತಿ ರಚಿಸಿದ ಲೇಖಕರ ಬಗ್ಗೆಯೂ ಈ ಒಂದು ಅಧ್ಯಾಯ ಮಾಹಿತಿಯನ್ನು ಒಳಗೊಂಡಿದೆ. ಅದೇ ರೀತಿ ಅರುಣಾಚರ ಪುರಾಣಮ್ ಎಂಬ ಸ್ಥಳೀಯ ಪುರಾಣದಲ್ಲಿ ವೀರಬಲ್ಲಾಳನ ಕುರಿತಂತೆ ಐತಿಹಾಸಿಕ ಮಾಹಿತಿಗಳನ್ನು ನೀಡಿದೆ. ಈತನ ಬಗೆ ಯಾವ ಮಾಹಿತಿಗಳು ಈ ಪುರಾಣದಿಂದ ಲಭ್ಯವಾಗಿದೆ ಎಂಬುದನ್ನು ತಿಳಿಸಲಾಗಿದೆ. ವಿದೇಶಿ ಬರಹಗಾರರಲ್ಲಿ ಪ್ರಮುಖನಾದ ಅಮೀರ್ ಖುಸ್ರು ದಿಲ್ವವಿಯ ತೈಯ್ಕ-ಇ-ಅಲೈನಲ್ಲಿ ಅಲ್ಲಾವುದ್ದೀನ್‌ನ ದಾಳಿಗಳ ಬಗ್ಗೆ ಸವಿಸ್ತಾರವಾಗಿ ತಿಳಿಸಿದ್ದಾನೆ. ಈ ಒಂದು ಅಧ್ಯಯನದಲ್ಲಿ ಮೂರನೇ ಬಲ್ಲಾಳನ ರಾಜಕೀಯ ಇತಿಹಾಸ ಮತ್ತು ಈತನ ಕಾಲದಲ್ಲಿ ದಕ್ಷಿಣ ಭಾರತದ ಪರಿಸ್ಥಿತಿಯ ಬಗ್ಗೆ ಚಿತ್ರಿಸಲಾಗಿದೆ. ಮೂರನೆಯ ವೀರಬಲ್ಲಾಳನಿಗೆ ನಡೆದ ಪಟ್ಟಾಭಿಷೇಕದ ಮಾಹಿತಿಯನ್ನು ಈ 7ನೇ ಅಧ್ಯಾಯದಲ್ಲಿ ನೋಡಬಹುದಾಗಿದೆ. ಮೂರನೇ ಬಲ್ಲಾಳ ಕೈಗೊಂಡ ಯುದ್ಧಗಳ ಬಗ್ಗೆ ಸಂಪೂರ್ಣವಾದ ಮಾಹಿತಿ ಈ ಪ್ರೌಢಪ್ರಬಂಧವು ಒಳಗೊಂಡಿದೆ. ಇದರ ಜೊತೆಗೆ ರಾಜಕೀಯ ಕುತಂತ್ರದಿಂದಾಗಿ ಹೊಯ್ಸಳರ ಸಾಮ್ರಾಜ್ಯವು ಅವನತಿಯ ಹಾದಿ ಹಿಡಿಯಿತು ಮತ್ತು ವಿಜಯನಗರದೊಂದಿಗೆ ಹೇಗೆ ವಿಲೀನವಾಯಿತು ಎಂಬುದನ್ನು ಒಳಗೊಂಡಿದೆ. ಮೂರನೇ ವೀರಬಲ್ಲಾಳ ಮತ್ತು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಲ್ಲಿ ಅವನ ಪಾತ್ರದ ಬಗ್ಗೆ ವಿವರಣೆಯನ್ನು ನೀಡುತ್ತಿದ್ದೇನೆ. ಈ ಮೇಲೆ ತಿಳಿಸಿದ ಎಲ್ಲಾ ಮಾಹಿತಿಗಳ ಜೊತೆಗೆ ಬಲ್ಲಾಳನ ಅತ್ಯುನ್ನತ ಪ್ರಯತ್ನಗಳು ಉತ್ತರದ ರಕ್ಷಣೆ, ಬಲ್ಲಾಳನ ತಂತ್ರಗಳು, ಅಧಿಕಾರದ ವಿಕೇಂದ್ರೀಕರಣ, ಹರಿಹರನ ಉದಯದ ಬಗೆಗಿನ ಎಲ್ಲಾ ಮಾಹಿತಿಗಳನ್ನು ಈ 7ನೇ ಅಧ್ಯಾಯದಲ್ಲಿ ನೀಡಿದ್ದೇನೆ.

## ಎಂಟನೆಯ ಅಧ್ಯಾಯ

ಹೊಯ್ಸಳರು ತಮ್ಮ ಆಡಳಿತದ ಅವಧಿಯಲ್ಲಿ ಚೋಳರು ಹಾಗೂ ಪಾಂಡ್ಯರ ನಡುವೆ ಇದ್ದ ಭಿನ್ನಾಭಿಪ್ರಾಯದಲ್ಲಿ ತಲೆ ಹಾಕಿ ಹಾಗೂ ಅವರ ಆಡಳಿತಕ್ಕೂ ತಲೆ ಹಾಕಿ ತಮ್ಮ ಆಡಳಿತ ನಿಯಮಗಳನ್ನು ಪಾಲಿಸದೆ ಹಾಗೂ ರಾಜಧಾನಿಯಾದ ದ್ವಾರಸಮುದ್ರವನ್ನು ಅಪರೂಪಕ್ಕೆ ಭೇಟಿ ನೀಡುತ್ತಿದ್ದುದರಿಂದ ಅಲ್ಲಿನ ಆಡಳಿತದ ಬಗ್ಗೆ ಆಸಕ್ತಿ ವಹಿಸದ ಕಾರಣ ಇಲ್ಲಿನ ಸಾಮಂತರು ಮೈಸೂರು, ಕೊಡಗು ಜಿಲ್ಲೆಗಳಲ್ಲಿ ಹಾಗೂ ಹುಣಸೂರು ತಾಲ್ಲೂಕುಗಳಲ್ಲಿ ಆಡಳಿತ ಚಿಕ್ಕಾಣಿ ಹಿಡಿದರು. ಇವರುಗಳಲ್ಲಿ ಪ್ರಮುಖರಾದವರನ್ನು ಈ ೮ನೇ ಅಧ್ಯಾಯದಲ್ಲಿ ತಿಳಿಸಲಾಗಿದೆ. ಸಾಮಂತರಾದ ಚೆಂಗಾಳ್ವರು ಮತ್ತು ಹೊಯ್ಸಳರ ರಾಜರೊಡನೆ ಯಾವುದಾದರೂ ಘರ್ಷಣೆ ಪ್ರಾರಂಭವಾಗಿತ್ತೆ ಎಂಬುದರ ಬಗ್ಗೆ ಮತ್ತು ಪ್ರಾರಂಭವಾಗಿದ್ದರೆ ಯಾವ ಹೊಯ್ಸಳರ ಜೊತೆ ಯುದ್ಧದಲ್ಲಿ ತೊಡಗಿದ್ದರು ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ. ಮತ್ತೊಬ್ಬರು ಸಾಮಂತರಾದ ಕೊಂಗಾಳ್ವರು ಯಾವ ಪ್ರದೇಶಗಳನ್ನು ಒಳಗೊಂಡಂತೆ ಆಳ್ವಿಕೆ ನಡೆಸಿದರೂ ಮತ್ತು ವಿನಯಾದಿತ್ಯ, ವಿಷ್ಣುವರ್ಧನ, 1ನೇ ನರಸಿಂಹನ ಕಾಲದಲ್ಲಿ ಕೊಂಗಾಳ್ವರು ಯಾವ ರೀತಿಯ ಸಂಬಂಧ ಹೊಂದಿದ್ದರು ಎಂಬುದರ ಬಗ್ಗೆ ಈ ಅಧ್ಯಾಯ ಮಹತ್ವದ ಮಾಹಿತಿಯನ್ನು ಒದಗಿಸುತ್ತದೆ. ಹಾನಗಲ್ಲಿನ ಕದಂಬರ ಮೇಲೆ ವಿಷ್ಣುವರ್ಧನನು ಮಾಡಿದ ದಾಳಿಗಳು ಮತ್ತು ನಂತರ ಅಧಿಕಾರಕ್ಕೆ ಬಂದ ನರಸಿಂಹ ಮತ್ತು ಎರಡನೆಯ ಬಲ್ಲಾಳನ ಕಾಲದಲ್ಲಿ ಕದಂಬರ ನಡುವಿನ ಸಂಬಂಧ ಹೇಗಿತ್ತು ಎಂಬುದನ್ನು ನೋಡಬಹುದಾಗಿದೆ. ಚರಿತ್ರೆಯಲ್ಲಿ ಪ್ರಾಚೀನ ಪೊಂಬುಚರ್ಪುರದ ಸಂತಾರರು ಮುಖ್ಯವಾದ ಪಾತ್ರವನ್ನು ನಿರ್ವಹಿಸಿದರು. ಅವರ ಪಾತ್ರದ ಬಗ್ಗೆ ೮ನೇ ಅಧ್ಯಾಯದಲ್ಲಿ ತಿಳಿಯಬಹುದು. ವಿಷ್ಣುವರ್ಧನ, ನರಸಿಂಹನ ಎರಡನೆಯ ಬಲ್ಲಾಳನ ಆಳ್ವಿಕೆಯಲ್ಲಿ ಇವರಿಗೂ ಮತ್ತು ಸಂತಾರರ ನಡುವಿನ ಸಂಬಂಧದ ಬಗ್ಗೆ ತಿಳಿಯಬಹುದು. ಹೊಸನುಂದದ ಸಂತಾರರ ಬಗ್ಗೆ ಈ ಅಧ್ಯಾಯವು ಒಳಗೊಂಡಿದೆ. ಸೇವುಣರು ಮತ್ತು ಸಾಂತಾರರ ದೊರೆ ಬೀರರಸನ ವಿರುದ್ಧ ನಡೆದ ಯುದ್ಧದ ಬಗ್ಗೆ ತಿಳಿಯಬಹುದು. ಮೇಲೆ ತಿಳಿಸಿದ ಎಲ್ಲಾ ಸಾಮಂತರು ಸಹ ಹೊಯ್ಸಳ ರಾಜರ ದೌರ್ಬಲವನ್ನು ತಿಳಿದು ಸ್ವತಂತ್ರ ಸಾಮಂತರಾಗಿ ಇವರ ವಿರುದ್ಧ ನಿಂತಿದ್ದು ವಿಪರ್ಯಾಸವೇ ಸರಿ. ಇವರುಗಳ ಬಗ್ಗೆ ಈ ಅಧ್ಯಾಯದಲ್ಲಿ ಸಾಕಷ್ಟು ಚರ್ಚಿಸಿ ಶೀರ್ಷಿಕೆಗೆ ಸೇರಿಸಲಾಗಿದೆ.

## ಒಂಭತ್ತನೆಯ ಅಧ್ಯಾಯ

ಈ ಅಧ್ಯಾಯದಲ್ಲಿ ಹೊಯ್ಸಳರು ತಮ್ಮ ಸಾಮ್ರಾಜ್ಯದ ಸ್ಥಿತಿಗತಿಗಳ ಬಗ್ಗೆ ತಿಳಿಯದೆ ನೆರೆಯ ಗಡಿಪ್ರದೇಶವಾದ ತಮಿಳು ರಾಜ್ಯಗಳನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡರು. ಇಷ್ಟೇ

ಅಲ್ಲದೆ ವಿವಾಹ ಸಂಬಂಧಗಳಿಗೆ ಒಳಪಟ್ಟು ಚೋಳರು ಮತ್ತು ಪಾಂಡ್ಯರ ನಡುವಿನ ಭಿನ್ನಾಭಿಪ್ರಾಯವನ್ನು ತಡೆಯಲು ರಾಜಕೀಯದಲ್ಲಿ ಹಸ್ತಕ್ಷೇಪ ಮಾಡಿದರು. ಇದರ ಫಲವಾಗಿ ತಮ್ಮ ರಾಜಧಾನಿಯನ್ನು ಹೊಯ್ಸಳರು ಮರೆತಂತೆ ಹಾಗಿತ್ತು. ಇದರ ಜೊತೆಗೆ ಇತರ ರಾಜ್ಯಗಳ ಸಮಕಾಲದಲ್ಲಿ ಬೆಳವಣಿಗೆಗೆ ಬಂದಿದ್ದವು. ಇತರ ರಾಜ್ಯಗಳ ಮೇಲೆ ಹೊಯ್ಸಳರ ಪ್ರಭಾವ ಹೇಗಿತ್ತು ಎಂಬುದನ್ನು ೨ನೇ ಅಧ್ಯಾಯದಲ್ಲಿ ನೋಡಬಹುದು. ಈ ಒಂದು ಅಧ್ಯಾಯದಲ್ಲಿ ಹೊಯ್ಸಳರು ಮತ್ತು ತಮಿಳು ರಾಜ್ಯಗಳು ಹೊಂದಿದ ಸಂಬಂಧದ ಬಗ್ಗೆ ತಿಳಿಯಬಹುದು. ವಿಷ್ಣುವರ್ಧನ ಚೋಳರ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದರ ವಿವರವನ್ನು ಒಳಗೊಂಡಿದೆ. ಆಂಧ್ರಪ್ರದೇಶದಲ್ಲಿ ಹೊಯ್ಸಳರ ಪ್ರಭಾವ ಹೇಗಿತ್ತು ಎಂಬುವುದು ಸಹ ಈ ಅಧ್ಯಾಯವು ಒಳಗೊಂಡಿದೆ. ಕಂಚಿಯಲ್ಲಿ ಹೊಯ್ಸಳರು ಯಾವ ರೀತಿಯಲ್ಲಿ ಪ್ರಭಾವ ಬೀರಿದರೂ ಮತ್ತು ೧೩೩೫ರಲ್ಲಿ ಕಂಚಿಯಲ್ಲಿ ಹೊಯ್ಸಳರ ಮತ್ತೊಂದು ಅಂತರ್ ವಿರಾಮದ ಬಗ್ಗೆ ೨ನೇ ಅಧ್ಯಾಯದಲ್ಲಿ ಸೇರಿಸಲಾಗಿದೆ. ಹೊಯ್ಸಳರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಪ್ರದೇಶಗಳನ್ನು ಹೇಗೆ ವಶಪಡಿಸಿಕೊಂಡರು. ಅಲ್ಲಿ ಹೊಯ್ಸಳ ರಾಜರು ಯಾವ ರೀತಿಯ ಪ್ರಭಾವ ಬೀರಿದರು ಎಂಬುದನ್ನು ತಿಳಿಯಬಹುದು. ತಮಿಳುನಾಡಿನಲ್ಲಿ ಹೊಯ್ಸಳರ ರಾಜ್ಯಭಾರದ ಬಗ್ಗೆ ಮಹತ್ವದ ಮಾಹಿತಿಗಳನ್ನು ತಿಳಿಸಿದ್ದೇನೆ. ಇದರ ಜೊತೆಯಲ್ಲೇ ರಾಜ್ಯದ ವಿಭಜನೆ ಹಾಗೂ ಎರಡನೇ ಬಲ್ಲಾಳ ಮತ್ತು ಚೋಳರಿಗೂ ಇವರ ಸಂಬಂಧದ ಬಗ್ಗೆ ಹಾಗೂ ಬಲ್ಲಾಳ ಹೊಂದಿದ ಬಿರುದುಗಳನ್ನು ಸಹಿ ಸಮಗ್ರವಾಗಿ ಸಂಗ್ರಹಿಸಿ ಈ ಅಧ್ಯಾಯದಲ್ಲಿ ಅಳವಡಿಸಲಾಗಿದೆ. ಎರಡನೇ ಬಲ್ಲಾಳ ಹೇಗೆ ಚೋಳರೊಂದಿಗೆ ಸಂಬಂಧ ಹೊಂದಿದ್ದಂತೆ ಎರಡನೇ ನರಸಿಂಹ ಮತ್ತು ಸೋಮೇಶ್ವರ ಸಹ ತಮಿಳು ದೇಶದೊಂದಿಗೆ ಯಾವ ರೀತಿಯ ಬಾಂಧವ್ಯ ಬೆಳೆಸಿದರು ಎಂಬುದನ್ನು ನೋಡಬಹುದು. ಇದರ ಜೊತೆಗೆ ವೀರಸೋಮೇಶ್ವರನ ಮುಖ್ಯ ಸ್ಥಳವಾಗಿ ಕಣ್ಣಾನೂರು ಯಾವ ರಿತಿಯ ಪ್ರಭಾವ ಬೀರಿದೆ, ಪಾಂಡ್ಯರೊಡನೆ ಮಾಡಿಕೊಂಡ ಒಪ್ಪಂದ ತಮಿಳು ದೇಶದಲ್ಲಿ ಸೋಮೇಶ್ವರನ ಕೊನೆಯ ದಿನಗಳು, ಹೊಯ್ಸಳ ಸಾಮ್ರಾಜ್ಯದ ವಿಭಜನೆ ಎಲ್ಲವುಗಳ ಸಮಗ್ರ ಮಾಹಿತಿಯನ್ನು ನನ್ನ ಪ್ರೌಢಪ್ರಬಂಧದಲ್ಲಿ ದಾಖಲಿಸಲಾಗಿದೆ.

ಮೂರನೆಯ ಬಲ್ಲಾಳ ಮತ್ತು ತಮಿಳುದೇಶದ ನಡುವಿನ ಸಂಬಂಧ ಚೋಳರ ಆಳ್ವಿಕೆಯ ಅಂತ್ಯ ಮತ್ತು ಪಾಂಡ್ಯರು ತಮಿಳುನಾಡಿನಲ್ಲಿ ಪ್ರಬಲ ಶಕ್ತಿಯಾಗಿ ಉದಯವಾಗಿದ್ದು ಮೂರನೆಯ ಬಲ್ಲಾಳ ಮತ್ತು ಪಾಂಡ್ಯ ಸಾಮ್ರಾಜ್ಯದ ನಡುವೆ ಇದ್ದ ವಾತಾವರಣ ಪಾಂಡ್ಯ ಸಾಮ್ರಾಜ್ಯದಲ್ಲಿ ಆಂತರಿಕ ಯುದ್ಧ, ತನ್ನ ಹಿಂದಿನವರು ಕಳೆದುಕೊಂಡ ಪ್ರದೇಶಗಳನ್ನು ವಶಪಡಿಸಿಕೊಳ್ಳುವಲ್ಲಿ ಬಲ್ಲಾಳನ ಆಸರೆ ಎಲ್ಲವೂ ಒಳಗೊಂಡಿದೆ.

## ಹತ್ತನೆಯ ಅಧ್ಯಾಯ

ಹೊಯ್ಸಳರ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲಿ ಮರೆಯಲಾರದ ಒಂದು ಸಾಮ್ರಾಜ್ಯ. ಏಕೆಂದರೆ ಇವರ ಕಾಲದಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಹೆಚ್ಚಿನ ಆದ್ಯತೆ ನೀಡಲಾಯಿತು ಮತ್ತು ಅವುಗಳ ಪ್ರೋತ್ಸಾಹಕ್ಕೆ ಇಲ್ಲಿನ ರಾಜರುಗಳ ಕೊಡುಗೆ ಅಪಾರ. ಇಂತಹ ಸಂದರ್ಭದಲ್ಲಿ ಬಲಿಷ್ಠ ರಾಜರುಗಳನ್ನೊಳಗೊಂಡ ಈ ಸಾಮ್ರಾಜ್ಯವು ಅನೇಕ ಯುದ್ಧಗಳನ್ನು ಮಾಡಿ ತಮಿಳುನಾಡು ಪ್ರದೇಶವನ್ನು ಸ್ವಲ್ಪ ಭಾಗಗಳಲ್ಲಿ ತನ್ನ ಆಡಳಿತದ ಪರಕಾಷ್ಠತೆಯನ್ನು ಮುಟ್ಟಿತು.

ಹೊಯ್ಸಳರು ತಮ್ಮ ಆಡಳಿತದಲ್ಲಿ ಜನಪರ ಕೆಲಸಗಳಿಗೆ ಹೆಸರುವಾಸಿಯಾಗಿದ್ದರು. ವಿದ್ಯೆಯನ್ನು ನೀಡಲು ಸಹಕಾರ ನೀಡುತ್ತಿದ್ದರು. ಅನೇಕ ಸಾಮಂತ ರಾಜರುಗಳು ಇವರಿಗೆ ವಿಧೇಯರಾಗಿದ್ದರು. ಇವರ ಆಡಳಿತದ ದುರ್ಬಲತೆಯಿಂದ ಅನೇಕ ಸಾಮಂತ ಕುಟುಂಬಗಳು ಅಧಿಕಾರಕ್ಕೆ ಬಂದವು.

ಹೊಯ್ಸಳರು ನೆರೆಯ ಪ್ರದೇಶಗಳ ಆಕ್ರಮಣದಿಂದಾಗಿ ಭಾರತದಾದ್ಯಂತ ಹೆಸರುವಾಸಿ-ಯಾದರು. ಇವರ ಎದುರು ದೆಹಲಿಯ ಸುಲ್ತಾನರು ಆಡಳಿತ ಚಿಕ್ಕಣಿಯನ್ನು ಉತ್ತರದ ಭಾರತದಲ್ಲಿ ಹಿಡಿದಿದ್ದರು. ಆದರೂ ಕೂಡ ಧೈರ್ಯಗುಂದದೆ ಇತರ ನೆರೆಯ ರಾಜಗಳ ಜೊತೆಗೆ ಯುದ್ಧದಲ್ಲಿ ತೊಡಗಿಕೊಂಡು ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದರು. ಇದರಿಂದ ಸಾಕಷ್ಟು ಅನುಕೂಲತೆಗಳಿಗಿಂತ ಅನಾನುಕೂಲತೆಗಳೇ ಹೆಚ್ಚಾಯಿತು. ಏಕೆಂದರೆ ತಮಿಳು-ನಾಡಿನ ಚೋಳರು ಮತ್ತು ಪಾಂಡ್ಯರ ಆಡಳಿತದಲ್ಲಿ ತಲೆಹಾಕಿದ್ದು ಹಾಗೂ ಪ್ರಮುಖವಾಗಿ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡಿದ್ದು ಇದರಿಂದ ತಿಳಿಯುತ್ತದೆ. ಹಾಗೂ ಹೊಯ್ಸಳರ ರಾಜರು ಪ್ರಬಲರಾಗಿ ಬಂದಂತವರು ಕೆಲವರು. 1ನೇ ಬಲ್ಲಾಳ, ವಿಷ್ಣುವರ್ಧನ, 2ನೇ ವೀರಬಲ್ಲಾಳ, 3ನೇ ಸೋಮೇಶ್ವರ ಇನ್ನಿತರ ರಾಜರುಗಳು ಅಷ್ಟೇ ಧೈರ್ಯಶಾಲಿಗಳು ಆಗಿರಲಿಲ್ಲವಾದ್ದರಿಂದ ಅನೇಕ ತೊಂದರೆಗಳು ಎದುರಾದವು. ಇವುಗಳನ್ನು ಎದುರಿಸುವ ಸಾಹಸಕ್ಕೆ ಹೋಗಲಿಲ್ಲ. ಈ ಕಾರಣದಿಂದಾಗಿ ಹೊಯ್ಸಳರ ಸಾಮ್ರಾಜ್ಯವು ಅವನತಿಯತ್ತ ಸಾಗಿತು.

ಒಟ್ಟಾರೆಯಾಗಿ ಪ್ರೌಢಪ್ರಬಂಧದ ಅಧ್ಯಯನದಿಂದಾಗಿ ಹೊಯ್ಸಳ ರಾಜ ಸಂತತಿಯ ಅವನತಿಯ ಬಗ್ಗೆ ಹಾಗೂ ಪ್ರತಿಯೊಬ್ಬ ರಾಜರ ಆಡಳಿತ ಹಾಗೂ ಅವರ ನೀತಿನಿಯಮಗಳ ಬಗ್ಗೆ ಸಾಕಷ್ಟು ವಿಷಯಗಳ ಬಗ್ಗೆ ಚರ್ಚಿಸಲಾಗಿದೆ.

## ಅಡಿಟಿಪ್ಪಣಿಗಳು

1. ಗುರುರಾಜಚಾರ್, ಎಸ್ "ಸಮ್ ಆಸ್ಪೆಕ್ಟ್ ಆಫ್ ಎಕನಾಮಿಕ್ಸ್ ಅಂಡ್ ಸೊಷಿಯಲ್ ಲೈಫ್ ಇನ್ ಕರ್ನಾಟಕ" (Some Aspects of Economics and Social life in karnataka) ಕ್ರಿ.ಶ.1000-1300 ಪ್ರಸಾರಂಗ ಮೈಸೂರು 1974, ಪು.1
2. ಬಸವರಾಜ ಕೆ.ಆರ್ "ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ" ಚಾಲುಕ್ಯ ಪ್ರಕಾಶನ ಧಾರವಾಡ 1984 ಪುಟ 4 ಮತ್ತು 5
3. ಎ.ಕ.ಸಂ 7 ನಾ.ಮ ಎನ್.ಐ 1145 ಕ್ರಿ.ಶ.ನಂ 64
4. ಮೈ.ಪ್ರಾ.ವ 1923 ನಂ 1 ಪುಟ 31-34
5. ಎ.ಕ. 5 (೦) ಬೆ ಬಿ2 1183 ನಂ. 37 ಎಲ್ಲೆದಹಳ್ಳಿ
6. ಶಾಸ್ತ್ರಿ ಕೆ.ಎ.ಎನ್ Source of Indian History with special Reference to South India, Bombay 1964 ಪು. 64
7. ಗುರುರಾಜಾಚಾರ್ ಎಸ್, ಪೂರ್ವೋಕ್ತ ಪು.2
8. ವಿದ್ಯಾಚಕ್ರವರ್ತಿ, ಗದ್ಯಕರ್ಣಮಿತ್ರ A Critical study ಮತ್ತು ಜಾನಕಿರವರ ಸಂಪಾದನೆ ಅಪ್ರಕಟಿತ ಪ್ರಬಂಧ, ಮದ್ರಾಸ್ 1965, ಪು. 43.
9. ರುದ್ರಭಟ್ಟ : ಜಗನ್ನಾಥ ವಿಜಯ ಸಂ: ಶಾಮಶಾಸ್ತ್ರಿ ಮೈಸೂರು ವಿಶ್ವವಿದ್ಯಾನಿಲಯ 1976 ಸರ್ಗ 10 ಕವನ 132 ಮತ್ತು 133.
10. ಜನ್ನ : ಅನಂತನಾಥಪುರಾಣ: ಸಂ ದೇವೀರಪ್ಪ ಹೆಚ್. 2ನೇ ಸರ್ಗ. ಪದ್ಯ 74ರ ವಚನ. ಕೆ.ಎ.ಎಸ್ ಮೈಸೂರು.
11. ನೇಮಿಚಂದ್ರ : ಲೀಲಾವತಿ ಪ್ರಬಂಧ ಸಂ: ವೆಂಕಟರಾಮಪ್ಪ ಮತ್ತು ಡಿ ಜವರೇಗೌಡ ಶಾರದ ಮಂದಿರ, 1966, ಮೈಸೂರು ಸರ್ಗ 111 ಪು 283.
12. ನಯಸೇನ : ಧರ್ಮಾಮೃತ ಸಂ : ಶಾಮಶಾಸ್ತ್ರಿ ಆರ್ ಮೈಸೂರು 1923 ಸರ್ಗ 10 ಪುಟ 8 ಭಾಗ 2
13. ಪದ್ಮನಾಯ್ಕ: ಪದ್ಮರಾಜಪುರಾಣ ಸಂ: ಆರ್.ಸಿ.ಹಿರೇಮಠ ಧಾರವಾಡ, ಮುರುಗರಾಜ-ಮಠ ಪ್ರಕಾಶನ 1958 ಸರ್ಗ 10 ಪುಟ 174 – 258

# ಅಧ್ಯಾಯ-2
# ಹೊಯ್ಸಳರ ಮೂಲ

ಹೊಯ್ಸಳರು ಕ್ರಿ.ಶ.10 ಮತ್ತು 11ನೆಯ ಶತಮಾನದ ಎಲ್ಲ ರಾಜಮನೆತನದವರಂತೆ ಅವರ ವಂಶಾವಳಿಯನ್ನು ಪುರಾಣದ ಕಾಲವೆಂದು ಗುರುತಿಸಿದ್ದಾರೆ. ಅವರ ವಂಶವನ್ನು ಯದುವಂಶಕ್ಕೆ ಸಂಬಂಧಿಸಿದ್ದೆಂದು ಉಲ್ಲೇಖಿಸಿದ್ದಾರೆ. ಅವರು 11ನೆಯ ಶತಮಾನದಲ್ಲಿದ್ದ ರಾಜಕೀಯ ಗೊಂದಲದ ಲಾಭ ಪಡೆದುಕೊಂಡು ನಿಧಾನವಾಗಿ ಅಧಿಕಾರದ ಗದ್ದುಗೆಯನ್ನೇರ-ತೊಡಗಿದರು. ಅವರು ಪಶ್ಚಿಮ ಘಟ್ಟಪ್ರದೇಶದಲ್ಲಿದ್ದು ಕ್ರಮೇಣವಾಗಿ ಅಲ್ಲಿದ್ದ 'ಮಾಲೆಪರು' ಎಂಬ ಮೂಲ ನಿವಾಸಿಗಳನ್ನು ಸೋಲಿಸಿ "ಮಾಲೆಪರೊಳ್ಗಂಡ" (ಮಾಲೆಪರ ರಾಜ) ಎಂದು ಕರೆದುಕೊಂಡರು. ಅಲ್ಲಿಂದ ಮುಂದೆ ಅವರು ನಿಧಾನವಾಗಿ ತಮ್ಮ ರಾಜ್ಯವನ್ನು ವಿಸ್ತರಿಸುತ್ತಾ ಹೋದರು. 'ಮಾಲೆಪರೊಳ್ಗಂಡ' ಎಂಬ ಬಿರುದು ಸಾಮಾನ್ಯವಾಗಿ ವಿಷ್ಣುವರ್ಧನನ ಸಾಧನೆ-ಗಳನ್ನು ವಿವರಿಸುವ ಎಲ್ಲ ಶಾಸನಗಳಲ್ಲಿಯೂ ಕಂಡುಬರುತ್ತದೆ. ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ರಾಜೇಂದ್ರ ಚೋಳರ ನಾಯಕತ್ವದಲ್ಲಿ ಚೋಳರು ಮೈಸೂರನ್ನು ಆಳುತ್ತಿದ್ದ ಗಂಗರನ್ನು ಸೋಲಿಸಿದರು ಸ್ವಾಭಾವಿಕವಾಗಿಯೇ ಗಂಗರು ಹೊಯ್ಸಳರ ಆಶ್ರಯ ಪಡೆಯಬೇಕಾಯಿತು. ಚೋಳರು ಮತ್ತು ಹೊಯ್ಸಳರು ತಮ್ಮತಮ್ಮಲ್ಲೇ ಮೇಲಾಟವಾಡ-ತೊಡಗಿದರು. ಅಧಿಕಾರಕ್ಕೆ ಬಂದ ಸುಮಾರು ಒಂದು ನೂರು ವರ್ಷದ ನಂತರ ಅವರು ಪಶ್ಚಿಮದ ಚಾಳುಕ್ಯರಿಗೆ ಸಾಮಂತರಾಗಲು ತೀರ್ಮಾನಿಸಿದರು. ವಿನಯಾದಿತ್ಯನ ಕಾಲದಿಂದ ಎರಡನೆಯ ವೀರಬಲ್ಲಾಳನವರೆಗಿನ ಹೊಯ್ಸಳರ ಶಾಸನಗಳು ಚಾಳುಕ್ಯರೊಂದಿಗಿನ ಅವರ ರಾಜನಿಷ್ಠೆಯ ಬಗ್ಗೆ ಹೇಳುತ್ತವೆ. ವಿನಯಾದಿತ್ಯ, ವಿಷ್ಣುವರ್ಧನ ಮತ್ತು ಮೊದಲನೆಯ ನರಸಿಂಹ ಇವರು 96000 ಗಂಗವಾಡಿಯ ರಾಜರಾಗಿದ್ದರು ಮತ್ತು ಎರೆಯಂಗನು ಇವರ ಆಶ್ರಯದಲ್ಲಿ ಪಶ್ಚಿಮದ ಚಾಳುಕ್ಯರ ಸೈನ್ಯದ ದಳಪತಿಯಾಗಿದ್ದನು. 11ನೆಯ ಶತಮಾನದ ಪ್ರಾರಂಭದಲ್ಲಿ ಚೋಳರ ವಿರುದ್ಧದ ಯುದ್ಧದ ಕಾಲದಲ್ಲಿ ಇವರು ಅಪ್ರತಿಮ ಸೇವೆಯನ್ನು ಸಲ್ಲಿಸಿದ್ದರು. ಹೊಯ್ಸಳರು ವೀರಬಲ್ಲಾಳನ ನೇತೃತ್ವದಲ್ಲಿ ಚಾಳುಕ್ಯರ ಸಾಮಂತತೆಯನ್ನು ಕಿತ್ತೊಗೆದರು. ವೀರಬಲ್ಲಾಳನು ಮೊದಲನೆಯ "ದಕ್ಷಿಣದ ದೊರೆ" ಎನಿಸಿಕೊಂಡನು. ಅವರು ತೆರೆಮರೆ-ಯಲ್ಲಿದ್ದುಕೊಂಡೇ ಸ್ವಾತಂತ್ರವನ್ನು ಪಡೆಯುವ ರಾಜಕೀಯ ಮುತ್ಸದ್ದಿತನವನ್ನು ತೋರಿಸಿದರು.

ಇವರ ವಂಶಾವಳಿಯು ಶಾಸನಗಳಿಂದ ಸ್ಪಷ್ಟವಾಗಿತ್ತು. ಅವರು ಸಸಕಪುರ-ಸೊಸೆವೂರು-ಸೊಸವೂರನ್ನು ಅವರ ಜನ್ಮಸ್ಥಳವೆಂದು ಹೇಳಿಕೊಂಡರು. ಈ ಸ್ಥಳವು ಹಿಂದಿನ ಕಡೂರು ಜಿಲ್ಲೆಯ (ಈಗಿನ ಚಿಕ್ಕಮಗಳೂರು) ಮೂಡಿಗೆರೆ ತಾಲ್ಲೂಕಿನ ಅಂಗಡಿ ಎಂಬ

ಸ್ಥಳವಾಗಿತ್ತು. ಇದು ಮಂಜಿರಾಬಾದ್ ಪ್ರಾಂತ್ಯಕ್ಕೆ ಸೇರಿದುದಾಗಿತ್ತು. (ಎಪಿಸಿ VI ಎಂಜಿ 9, 15,16,ಮತ್ತು 18) ಎಂ.ಜಿ.16 of c.1164 A.D. ಇದು ಸೊಸೆವೂರು ಪಟ್ಟಣಸ್ವಾಮಿಕ್ಕೆ ಸಂಬಂಧಿಸಿದ್ದಾಗಿತ್ತು. ಎಂ.ಜಿ.16 of ಕ್ರಿ.ಶ.1060 ಇದು ಸೊಸೆವೂರು ವ್ಯಾಪಾರಿಗಳಾದ ಮೊದಲನೆಯ ಲೋಕಜಿತನ ಸ್ಮಾರಕಕ್ಕೆ ಸಂಬಂಧಿಸಿದ್ದು ಇದು ನಗರದವರಿಂದ ಸ್ಥಾಪಿಸಲ್ಪಟ್ಟಿ-ದ್ದಾಗಿತ್ತು. ಕ್ರಿ.ಶ.1040ರ Mg.18 ನ 15-16ನೆಯ ಸಾಲುಗಳು ವಜ್ರಪಾಣಿಬ್ರತ್ರೀಶ್ವರನು ತೀರಿಕೊಂಡ ಸೊಸೆವೂರಿನ ಬಗ್ಗೆ ಹೇಳುತ್ತದೆ. ಕ್ರಿ.ಶ.1220ಯ Bl.112 ವಸಂತನ ಪ್ರೀತಿಯಾದ ದೇವತೆ ಮತ್ತು ಸಳನಿಂದ ಕಟ್ಟಲ್ಪಟ್ಟದ್ದ ಸಸಕಪುರದ ಬಗ್ಗೆ ಹೇಳುತ್ತದೆ.

ವಿಜಯನಗರದ ಅಚ್ಯುತರಾಯ (ಬಿ.ಎಲ್.197) ನ ಒಂದು ಶಾಸನದ ಮೂಲಕ ಮೂಡಿಗೆರೆ ತಾಲೂಕಿನ ಅಂಗಡಿಯೇ ಅಂದಿನ ಸೊಸವೂರು ಎಂದು ಗುರುತಿಸಲ್ಪಟ್ಟದೆ. ಪಶ್ಚಿಮ ಘಟ್ಟಗಳ ಸೆರಗಿನಲ್ಲಿ ಮೂಡಿಗೆರೆ ತಾಲೂಕಿನಲ್ಲಿ ಅಂಗಡಿ ಎಂಬ ಸ್ಥಳವಿದೆ ಎಂಬುದನ್ನು ಡಾ॥ ಎಸ್.ಕೆ.ಅಯ್ಯಂಗಾರ್ ರವರು ಗುರುತಿಸಿದ್ದಾರೆ. ಇದು ಮಂಗಳೂರಿನ ಘಾಟಿ ರಸ್ತೆಯು ನೈರುತ್ಯದ ಸಕಲೇಶಪುರ ಮತ್ತು ಆಗ್ನೇಯದ ಬೇಲೂರು ರಸ್ತೆಗಳು ಕೂಡುವಲ್ಲಿ ಇದೆಯಾದ್ದರಿಂದ ಈ ಹೆಸರು ಬಂದಿದೆ. ಇದು ಮೈಸೂರು ಅರಸರ ಆಳ್ವಿಕೆಯ ತೊಟ್ಟಿಲಾಗಿತ್ತು ಎಂಬ ಹೆಮ್ಮೆಗೆ ಪಾತ್ರವಾಗಿದೆ. (ಏನ್ಶಿಯೆಂಟ್ ಇಂಡಿಯ- 1911, ಪುಟ. 228)

ಸಳ ಮತ್ತು ಹುಲಿಯ ಘಟನೆಯ ಮೂಲಕ ಸೊಸೆವೂರು ಪ್ರಸಿದ್ಧಿಗೆ ಬಂದು ಪೊಯ್ಸಳ ಅಥವ ಹೊಯ್ಸಳ ಎಂಬ ಹೆಸರು ಬಂದು ಅವರ ವಂಶಾವಳಿಗೆ ಕಾರಣವಾಯಿತು. (ಎಪಿ ಸಿ. 6, ಸಿ.ಕೆ.20 ಮತ್ತು 37) ಯದುವಂಶದ ಮುಕುಟಮಣಿಯಾದ ಸಳನು ಸಸಾಂಕಪುರದ ವಾಸಂತಿಕಾ ದೇವಿಯನ್ನು ಗಂಧ ಹೂವುಗಳಿಂದ ಅರ್ಚಿಸುತ್ತಿರಬೇಕಾದರೆ ಒಂದು ಹುಲಿಯು ಕಾಡಿನಿಂದ ಹೊರಗೆ ಜಿಗಿಯುತ್ತಾ ಬಂದಿತು. ಆಗ ಅಲ್ಲಿದ್ದ ಜಿನಮುನಿಯು ತನ್ನ ಕುಂಚವನ್ನು ಸಳನಿಗೆ ಕೊಟ್ಟು 'ಪೊಯ್' ಎಂದು ಹೇಳಿದ. ಹಾಗಾಗಿ ಅಂದಿನಿಂದ ಪೊಯ್ಸಳ ಎಂಬುದು ಯದುರಾಜರ ನಾಮಧೇಯವಾಯಿತು. ಕ್ರಿ.ಶ.1130ರ ಸಿ.ಎಮ್. 137 ರಂತೆ ಸಳನು ವ್ರತಬದ್ಧನಾಗಿ ಕಾಡಿನಲ್ಲಿ ಹೋಗುತ್ತಿರುವಾಗ ಭೀಕರವಾದ ಹುಲಿಯ ಕಾಣಿಸಿಕೊಂಡು ಮುನಿಯ ಸಲಹೆಯಂತೆ ಸಳನು ಆ ಹುಲಿಯನ್ನು ಕೊಂದದ್ದರಿಂದ ಅವನಿಗೆ ಕಿರೀಟವೂ ಅವನ ವಂಶಕ್ಕೆ ಹೊಯ್ಸಳ ಎಂದೂ ಹೆಸರು ಬಂತು. ನಿಜವಾಗಿ ನೀನು ಪ್ರತಿಷ್ಠಿತ ವ್ಯಕ್ತಿಯಾಗುವೆ ಅಲ್ಲದೆ ಈ ವಂಶದ ಸಂಸ್ಥಾಪಕನೂ ಆಗುವಿಯೆಂದು ಆಗಮದಲ್ಲಿ ಪರಿಣಿತಿಯನ್ನು ಪಡೆದು ತಮ್ಮ

ತಪಃಶಕ್ತಿಯ ಪ್ರಭಾವದಿಂದ ಸಳನು ಎರಡು ವಿಧದ ಖ್ಯಾತಿಗೆ ಭಾಜನನಾಗುತ್ತೀಯೆ ಎಂದೂ ನುಡಿದನು.

ಅಂದಿನ ವಸಂತಿಕಾ ದೇವಾಲಯವು ಇಂದಿಗೂ ವಸಂತಮ್ಮ ದೇವಾಲಯವಾಗಿ ಸ್ಥಳೀಯವಾಗಿ ಪ್ರಸಿದ್ಧಿ ಹೊಂದಿದೆ. ಇಂದಿಗೂ ಅಲ್ಲಿ ಇತರ ಕೆಲವು ದೇವಸ್ಥಾನಗಳು ಅಳಿವಿನ ಸ್ಥಿತಿಯಲ್ಲಿದ್ದು ಅದರಲ್ಲಿ ಕೆತ್ತನೆಗಳಿವೆ. ಎಸ್.ಬಿ.28 ರಂತೆ ಈ ಘಟನೆಗೆ ಕಾರಣವಾದ ಮುನಿಯ ಹೆಸರು ಸುದತ್ತ ಎಂದು ತಿಳಿದು ಬರುತ್ತದೆ. ಅವನು ಪದ್ಮಾವತಿ ದೇವಿಯ ಸಹಾಯದಿಂದ ಸಳನಿಗೆ ಒಂದು ರಾಜ್ಯವನ್ನು ಕಟ್ಟಿಕೊಟ್ಟ. ಇನ್ನೊಂದು ಕಥೆಯ ಪ್ರಕಾರ ಈ ಮುನಿಯು ಮತ್ತೊಬ್ಬ ಸಿದ್ಧನಿಂದ ಕಳುಹಿಸಲ್ಪಟ್ಟಿದ್ದು ಆ ಸಿದ್ಧನು ವಸಂತಿಕಾ ದೇವಾಲಯದ ಒಳಗೆ ಮನೆ ಮಾಡಿಕೊಂಡಿದ್ದು ಹುಲಿಯು ಬರುವ ಬಗ್ಗೆ ತಿಳಿಸಿದ್ದ ಎಂದು ಹೇಳುತ್ತದೆ. ಬಿ.ಎಲ್.171 ರಂತೆ ಒಮ್ಮೆ ಸಳನು ಕಾಡಿನಲ್ಲಿ ಹೋಗುತ್ತಿರುವಾಗ ಒಂದು ಮೊಲವು ಒಂದು ಹುಲಿಯನ್ನು ಎದುರಿಸುತ್ತಿದ್ದನ್ನು ನೋಡಿದನು. ಅದೇ ಸಮಯದಲ್ಲಿ ಅಲ್ಲಿಗೆ ಬಂದ ಋಷಿಯು ಈ ನೆಲದ ಮಹಿಮೆಯನ್ನು ಅರಿತು ಆ ಹುಲಿಯನ್ನು ಕೊಲ್ಲಲು ಹೇಳುತ್ತಿದ್ದಂತೆಯೇ ಸಳನು ತನ್ನ ಕಠಾರಿಯಿಂದ ಅದನ್ನು ಇರಿದು ಕೊಂದನು. ಇದು ಹೊಯ್ಸಳ ವಂಶಕ್ಕೆ ಕೀರ್ತಿರೂಪವಾಗಿಯೇ ಇತ್ತು. ಹಾಗಾಗಿ ಅವನಿಗೆ ಮತ್ತು ಯದುವಂಶಕ್ಕೆ ಪೊಯ್ಸಳ ವಂಶ ಎಂಬ ಹೆಸರು ಬಂದಿತು ಮತ್ತು ಆ ಸ್ಥಳಕ್ಕೆ ಸಸಕಪುರ ಎಂಬ ಹೆಸರು ಬಂದಿತು. ಹೆಚ್.ಎನ್.65 (ಇ ಸಿ.ವಿ, ಭಾಗ 2 ರಂತೆ) ಆ ಮುನಿಯು ಸಳನ ಧೈರ್ಯವನ್ನು ಪರೀಕ್ಷೆ ಮಾಡಬಸಿದ್ದು, ಆವನು ಮಂತ್ರಸಿದ್ಧಿಯಲ್ಲಿ ಪ್ರವೀಣನಾಗಿದ್ದು ಸಳನಿಗೆ ಒಂದು ಸಾಮ್ರಾಜ್ಯವನ್ನು ಕೊಡಬಯಸಿದ್ದ. ಹಾಗಾಗಿ ಅವನು ವಾಸಂತಿಕಾ ದೇವಿಯನ್ನು ಸಸಕಪುರಕ್ಕೆ ತರಲು ಬೇಕಾದ ಕ್ರಿಯೆಗಳನ್ನು ಮಾಡುತ್ತಿದ್ದ. ಈ ಪ್ರಯತ್ನಗಳಿಗೆ ತಡೆಹಾಕಲು ವಾಸಂತಿಕಾದೇವಿಯು ಹುಲಿಯ ರೂಪದಲ್ಲಿ ಪ್ರತ್ಯಕ್ಷಳಾದಳು. ಆ ಸಮಯದಲ್ಲಿ ಮುನಿಯ ಆದೇಶದಂತೆ ಸಳನು ಅದನ್ನು ತನ್ನ ಬೆತ್ತದಿಂದ ಹೊಡೆದು ಕೊಂದನು. ಬಿ.ಎಲ್.112 ರಂತೆ ಅದು ಬೆತ್ತದ ಕೋಲಲ್ಲದೆ ಬೆತ್ತದ ಸಳವಾಗಿತ್ತು ಎಂದು ತಿಳಿಯುತ್ತದೆ. ಎ.ಕೆ.108 ರಂತೆ ಅದು ಕುಂಚದ ಸೆಳೆಯಾಗಿದ್ದು ಅದು ಯೋಗಿಯ ಕೈಯಲ್ಲಿನ ಬೆತ್ತದ ಕೋಲಾಗಿದ್ದು ಅಥವ ನವಿಲುಗರಿಯೊಂದ ಮಾಡಿದ್ದ ಬೀಸಣಿಗೆಯಾಗಿತ್ತು. ಅದು ಬೆತ್ತದ ಕಡ್ಡಿಯಾಗಿದ್ದು ಅದಕ್ಕೆ ಜೈನ ಸಂಪ್ರದಾಯದಂತೆ ನವಿಲುಗರಿಯಿಂದ ಮಾಡಿದ ಪುಚ್ಛವನ್ನು ಮೇಲೆ ಸಿಕ್ಕಿಸಿಲಾಗಿತ್ತು. ಆದರೆ ಬಿ.ಎಲ್.74ಕ್ಕಿಂತ ಭಿನ್ನವಾದದ್ದೆಂದರೆ ಅದನ್ನು ಕಬ್ಬಿಣದ ಸಲಾಕೆಯೆಂದು ಹೇಳಿದೆ. ಆದರೆ ಅದು ಜೈನ ಸಂಪ್ರದಾಯಕ್ಕೆ ಅನುಗುಣವಾದದ್ದಲ್ಲ. ಆದರೆ

ಅದು ಚೂಪಾದ ತುದಿಯುಳ್ಳ ಕೋಲಾಗಿರಬಹುದು. ಕೆಲ ತಾಮ್ರದ ತಟ್ಟೆಗಳ ಮುದ್ರೆಯು ಅದರ ಕಿರೀಟದಂತಿದ್ದು ಅದು ಕೆಲವು ಶಾಸನಗಳಲ್ಲಿ ಕಾಣುತ್ತದೆ. ಈ ಶಾಸನವನ್ನು ನೋಡಿ:

5. ಶ್ರೀ ದಯಿತಂ ಯದುಕುಲದಲ

6. ಗದಂ ಸಳನೆಂಬ ನೋರ್ವ ನೃಪನನೃಪ ನಿಂದದುದು ಸಸಕಪುರ ಮದರಕ್ಕದದಿ

7. ದೈವಂ ವಸಂತವಲ್ಲಭೆಯೆಂಬೊಲ್

ಹೊಯ್ಸಳನ ಜನ್ಮಸ್ಥಳವಾದ ಸೊಸೆವೂರಿಗೆ ಎರೆಯಂಗನ ಹಿರಿಯ ಮಗನಾದ ಬಲ್ಲಾಳನು ಭೇಟಿ ಕೊಟ್ಟಿದ್ದನೆಂದು ಕ್ರಿ.ಶ.1109 ಬಿ.ಎಲ್.199 ಹೇಳುತ್ತದೆ. ಕ್ರಿ.ಶ.1173ರ ಟಿ.ಎನ್.191 ಎಫ್.ಸಿ.ನಂತೆ ಅದು ಎರಡನೆಯ ಬಲ್ಲಾಳನವರೆಗೆ ಹೊಯ್ಸಳರ ವಂಶಾವಳಿಯನ್ನು ಸ್ಪಷ್ಟಪಡಿಸಿದೆ. ಸಳನು ಹುಲಿಯನ್ನು ಕೊಂದ ಬಗ್ಗೆ ಈ ಶಾಸನದಲ್ಲಿ ಹೇಳಿದೆ:

8. ಖ್ಯಾತೇಷು ತೇಷುಃ ನೃಪತಿಃ ಕಥಿತಾಃ ಕದಾಚಿತ್

9. ಕಶ್ಚಿದ್ ವನೇ ಮುನಿವರೇಣ ಸಲಾಃ ಕರಾಲಮ್

10. ಸಾರ್ದೂಲಕಂ ಪ್ರತಿಃ ಪೊಯ್ಸಳ ಇತ್ಯತೋಭೂತ್

11. ತಸ್ಯಾಪಿಧ ಮುನಿವಾಚೋ ವ ಚಮೂರಲಕ್ಷ್ಮಃ

ಹೊಯ್ಸಳರ ಮೂಲದ ಬಗ್ಗೆ ಸಾಂಪ್ರದಾಯಿಕವಾದ ಸಳನು ಹುಲಿಯನ್ನು ಕೊಂದ ಎಂಬ ಕಾಕಕ್ಕ ಗುಬ್ಬಕ್ಕನ ಕಥೆ ಎಂದು ಅಷ್ಟು ಸುಲಭವಾಗಿ ತೆಗೆದು ಹಾಕುವುದಕ್ಕಾಗುವುದಿಲ್ಲ. ಎಲ್ಲ ಶಾಸನಗಳು ಸಹ ಹೊಯ್ಸಳರ ವಂಶದ ಬಗ್ಗೆ ಇದನ್ನು ಹೇಳುವುದರಿಂದ ಅಂತಹ ಚಾರಿತ್ರಿಕ ಘಟನೆಯೊಂದು ನಡೆದಿರಲೇಬೇಕು. ಸಳ ಮತ್ತು ಅವನ ಆಳ್ವಿಕೆಯ ನೇರವಾದ ಚಾರಿತ್ರಿಕ ದಾಖಲೆಗಳು ಇಲ್ಲದಿದ್ದರೂ ನಂತರದ ದೊರೆಗಳು ಈ ಕಥೆಯನ್ನು ಪ್ರಚುರಪಡಿಸುವುದರಲ್ಲಿ ಹೆಮ್ಮೆಯನ್ನು ತಾಳಿದ್ದರು. ಈ ವಂಶದವರು ಮೈಸೂರಿನ ತೀರ ಪಶ್ಚಿಮದ ಘಾಟಿಯ ಭಾಗದಲ್ಲಿರುವ ಮೂಡಿಗೆರೆ ತಾಲ್ಲೂಕಿನ ಅಂಗಡಿಯ ಅರಣ್ಯದ ನಾಯಕರೆಂಬುದು ವಿದಿತವಾಗಿದೆ. ಪ್ರೊ.ವಿಲ್ಲಿಯಮ್ ಲಿಯೆಲೋ ಅವರ ಅಭಿಪ್ರಾಯದಂತೆ ಪೌರಾಣಿಕ ವಂಶಾವಳಿ ಎಂದರೆ ರಾಜತ್ವದ ದಾಖಲೆಯೇ ವಿನಹ ಇನ್ನೇನಲ್ಲ. "ಹೊಯ್ಸಳರು ಉತ್ತರದಿಂದ ಬಂದಿದ್ದವರಾಗಿದ್ದರೆ ಅವರ ಭಾಷೆಯು ಹಳೇಬೀಡಿನ ಕೈಫಿಯತ್ ಹೇಳುವಂತೆ ದ್ರಾವಿಡ ಭಾಷೆಯಾದ ಶುದ್ಧವಾದ ಹಳೆಗನ್ನಡವಾಗುತ್ತಿರಲಿಲ್ಲ. 1ನೆಯ ಶತಮಾನದ ಶಾಸನಗಳು ಸ್ಪಷ್ಟವಾಗಿ ಹೇಳುವಂತೆ ಹೊಯ್ಸಳರ ಹಳೆಗನ್ನಡವು ಶುದ್ಧವಾಗಿದ್ದು ಉತ್ತರದ ಯಾವುದೇ ಪ್ರಭಾವವಿರಲಿಲ್ಲ. (ಪು 10-11-The Hoysala-Vamsha-William Coelho)

ಸಳನು ಹುಲಿಯನ್ನು ಮುನಿಯ ಆಶೀರ್ವಾದದಿಂದ ಕೊಂದ ಎಂಬ ಕಥೆಯಲ್ಲಿ ಯಾವುದೇ ಅಸಹಜತೆ ಇಲ್ಲ. ಯಾವ ರೀತಿ ರೊಮುಲಸ್‌ನು ರೋಮ್ ಸಾಮ್ರಾಜ್ಯವನ್ನು, ಹರಿಹರ ಮತ್ತು ಬುಕ್ಕರು ಶೃಂಗೇರಿ ಗುರುಗಳ ಸಹಾಯದಿಂದ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿದರೋ ಅದೇ ರೀತಿಯಲ್ಲಿ ಸಳನು ತನ್ನ ನಾಯಕತ್ವದ ಕೃತ್ಯದ ಸಹಾಯದಿಂದ ತನ್ನ ವಂಶವನ್ನು ಕಟ್ಟಿದನು. ಬಹುಷಃ ಎಲ್ಲ ವಂಶಾವಳಿಗಳೂ ಸಹ ಒಂದಲ್ಲಾ ಒಂದು ಗಮನೀಯ ಘಟನೆಗಳಿಂದಲೇ ಗುರುತಿಸಲ್ಪಟ್ಟಿದೆ.

ಈ ಕಥೆಯನ್ನು ಅಷ್ಟು ಸುಲಭವಾಗಿ ತಳ್ಳಿಹಾಕುವುದಕ್ಕೆ ಆಗುವುದಿಲ್ಲ. ಅದು ಅವನ ವಂಶದ ಘಟನೆಯಾಗಿ ದೇವಾಲಗಳಲ್ಲಿ ಸಳನು ಹುಲಿಯನ್ನು ಇರಿಯುತ್ತಿರುವ ಚಿತ್ರಗಳಿದ್ದು, ತಾಮ್ರದ ತಟ್ಟೆಯಲ್ಲಿ ಮೃತ ಹುಲಿ ಮತ್ತು ಸರಳನ ಚಿತ್ರವು ಇದೆ. ಡಾ|| ಡೆರ್ರೆಟ್ಟ್ ಮತ್ತು ಪ್ರೊ.ಕೊಯೆಲೋ ಅವರು ಈ ಕಥೆಗೆ ಹೆಚ್ಚಿನ ಮಹತ್ವವನ್ನು ಕೊಡುವುದಿಲ್ಲ. ಡಾ|| ಡೆರ್ರೆಟ್ ರವರಂತೆ ಈ ಕಥೆಯನ್ನು ಸುಮ್ಮನೆ ಕೇಳಿ ಬಿಡಬೇಕಷ್ಟೆ. ಇಲ್ಲದಿದ್ದರೆ ಸಳನು ಹುಲಿಯನ್ನು ಕೊಲ್ಲುತ್ತಿರುವ ಚಿತ್ರಕ್ಕೆ ಸಮರ್ಥವಾದ ವಿವರಣೆಯು ಸರಿಯಾಗಿ ಸಿಗಬೇಕಿತ್ತು.

ಇಲ್ಲಿ ಬಹುಮುಖ್ಯವೆಂದರೆ ಹಳೇಬೀಡು ಅಥವ ದ್ವಾರಸಮುದ್ರದ ಸುತ್ತಮುತ್ತಲಿನಲ್ಲಿ ಇದರ ಪುರಾವೆಗಳ ಕಂಡುಬಂದಿದೆ. ಹಳೇಬೀಡಿನ ಸಮೀಪದ ಹಳ್ಳಿಯಾದ ಹುಲ್ಲೇಕೆರೆಯ ಬಳಿ ವಸಂತಿಕಾದೇವಿಗೆ ಅರ್ಪಿತವಾದ ಒಂದು ದೇವಾಲಯವು ಇದೆ. ಈ ದೇವತೆಯು ಸಾಮಾನ್ಯ-ವಾಗಿ ಚೌಡೇಶ್ವರಿ ಎಂದು ಹೆಸರಾಗಿದೆ. ಇವಳು ನಾಲ್ಕು ಕೈಗಳನ್ನು ಹೊಂದಿದ್ದು ಒಂದರಲ್ಲಿ ಬಟ್ಟಲು, ಇನ್ನೊಂದರಲ್ಲಿ ತ್ರಿಶೂಲ, ಕತ್ತಿ ಮತ್ತು ಡಮರುಗಳನ್ನು ಹಿಡಿದುಕೊಂಡಿದ್ದಾಳೆ. ಹಾಗಾಗಿ ಈ ದೇವತೆಯು ಶೈವಳಾಗಿದ್ದು ಜೈನ ದೇವತೆಯಾದ ವಾಸಂತಿಕಾ ದೇವಿಯಾಗಿದ್ದಾಳೆ. ಹತ್ತಿರದಲ್ಲೇ ಇರುವ ಪುಷ್ಪಗಿರಿ ಗುಡ್ಡವು ಹುಲಿಗಳಿಗೆ ಪ್ರಸಿದ್ಧಿಯಾಗಿದ್ದು ಅಲ್ಲಿ ಮಲ್ಲಿಕಾರ್ಜುನ-ಸ್ವಾಮಿ ದೇವಾಲಯವಿದ್ದು ಅದು ಮೊದಲು ಜೈನ ಬಸದಿಯಾಗಿತ್ತು ನಂತರ ಅದನ್ನು ಶೈವ ದೇವಾಲಯವಾಗಿ ಪರಿವರ್ತಿಸಲಾಗಿದೆ. ಸಳನು ಹುಲ್ಲೆಕೆರೆ ಅಥವ ಹುಲಿಕೇರಿಯ ನಿವಾಸಿ-ಯಾಗಿದ್ದ ಸಾಧ್ಯತೆಯೂ ಇದೆ. ಸಳನು ಅಲ್ಲಿನ ರಾಷ್ರಕೂಟ ಮುಖ್ಯಸ್ಥ ದೋರನ ಸೇವೆಯಲ್ಲಿದ್ದ, ಅವನ ಹೆಸರಿನಿಂದ ಅಲ್ಲಿನ ಕೆರೆಗೂ ಆ ಹೆಸರೇ ಬಂದಿದೆ. ಸಳನು ಹುಲಿಯನ್ನು ಕೊಂದಿರುವ ಕಥೆಯು ಹುಲಿಪೀಡಿತವಾಗಿರುವ ಈ ಸ್ಥಳಕ್ಕೆ ಸೂಕ್ತವಾಗಿ ಹೊಂದಿಕೊಳ್ಳುತ್ತದೆ. ಮೈಸೂರು, ಹಳೆಬೀಡು, ಮೂಡಿಗೆರೆಗಳ ಸುತ್ತ ಮತ್ತು ರಾಷ್ಟ್ರಕೂಟರ ಸಣ್ಣ ಪಾಳೆಯಗಾರರು ಮೈಸೂರು ರಾಜ್ಯದ ಹಲವು ಕಡೆ ಹರಡಿಕೊಂಡಿದ್ದರು ಎಂಬುದು ಮೈಸೂರಿನ ವರುಣದಲ್ಲಿರುವ ಕೆಲವು

ದೇವಾಲಯಗಳಿಂದ ತಿಳಿದುಬರುತ್ತದೆ. ಮೂಡಿಗೆರೆ ತಾಲ್ಲೂಕಿನ ಅಂಗಡಿಯು ಹೊಯ್ಸಳರ ಮೂಲಸ್ಥಾನವಾಗಿದ್ದರೆ ಅದು ಕೆಲಕಾಲವಾದರೂ ರಾಜ್ಯದ ರಾಜಧಾನಿಯಾಗಿರಬೇಕಿತ್ತು. ಆದರೆ ಹಿಂದಿನ ಹೊಯ್ಸಳರ ಶಾಸನಗಳು ಹಳೇಬೀಡು ಮತ್ತು ಹಾಸನ ಜಿಲ್ಲೆಯಲ್ಲಿ ಇತರೆಡೆಗಳಲ್ಲಿ ದೊರಕಿವೆ.[1] ಹೊಯ್ಸಳರ ಜನ್ಮಸ್ಥಾನವೆಂದೆನಿಸಿಕೊಂಡಿರುವ ಸೊಸವೂರನ್ನು ಸಸಕಪುರ ಎಂದು ತಿಳಿಯುವ ಅವಶ್ಯಕತೆ ಇಲ್ಲ.

ಸಂಗಮರ ಕಾಲದಲ್ಲಿ ತಮಿಳುನಾಡಿನ ದಕ್ಷಿಣದ ತುದಿಯಲ್ಲಿನ ಒಂದೇ ಪ್ರದೇಶವನ್ನು ವೆಂಕಟಂ ಎಂದು ಹೆಸರಿಸಲಾಗಿದೆ. ಅಂದರೆ ಇದು ತಮಿಳು ಮಾತನಾಡುವ ಪ್ರದೇಶದ ಈಶಾನ್ಯಕ್ಕಿರುವ ತಿರುಪತಿ. ಇದು ಭಾಷಾವಾರು ಪ್ರಾಂತ್ಯವಾಗಿದ್ದು ಅನೇಕ ಕಾಲಗಳು ಸ್ಥಿರವಾಗಿತ್ತು. ಬಹುಷಃ ಈ ಅಸ್ಪಷ್ಟತೆಯೇ ವೆಂಕಟಮ್‌ನ ಹೊರತಾಗಿ ಯಾವುದೇ ಗಡಿಪ್ರದೇಶವನ್ನು ಹೇಳಲು ತಡೆಯಾಗಿತ್ತು. ಉತ್ತರದ ಗಡಿಪ್ರದೇಶದ ಮಧ್ಯಭಾಗದಲ್ಲಿ ಸ್ಥಳೀಯ ಪ್ರದೇಶಗಳಿಗೆ ತಮಿಳು ಹೆಸರು ಇರುವುದು ತಮಿಳುನಾಡು ಮತ್ತು ಮೈಸೂರು ಭಾಷಾ ಸರಹದ್ದಿನಿಂದ ಬೇರೆಯಾಗಿಯೇ ಇತ್ತು ಎಂದು ಗೊತ್ತಾಗುತ್ತದೆ.

ಅಂತಹ ಒಂದು ಸ್ಥಳವು ತುರುವೈ (ತೊರೈ) ಎಂದರೆ ಬೇಳೆಕಾಳು ಎಂದು ಅರ್ಥವಾಗುತ್ತದೆ. ತುವರೈಯೂರು ಕ್ರಮೇಣವಾಗಿ ತುವುರಪತಿಯಾಗಿ ಕೃಷ್ಣದೊಂದಿಗೆ ಇರುವ ದ್ವಾರಕದೊಂದಿಗೆ ತಪ್ಪಾಗಿ ಗುರುತಿಸಲ್ಪಡತೊಡಗಿತು. ಕೊನೆಯಲ್ಲಿ ಅದು ದ್ವಾರಸಮುದ್ರಂ (ದೋರಸಮುದ್ರ)ವಾಗಿ ಪರಿಣಮಿಸಿತು. ಏನೇ ಆದರೂ ಮಧ್ಯಕಾಲೀನ ಹೊಯ್ಸಳರ ಹಿಂದೂ ವಂಶಸ್ಥರು ಪೌರಾಣಿಕ ಕಾಲದ ಯಾದವ ವಂಶದ ಅನುವಂಶಿಕತೆಯನ್ನು ಬಿಡಲು ಒಪ್ಪಲಿಲ್ಲ. ಆದರೆ ದ್ವಾರಸಮುದ್ರಂ ಎಂಬ ಮೂಲವು ನಮಗೆ ನಿಸ್ಸಂದೇಹವಾಗಿ ಈ ವಾದವನ್ನು ಸುಳ್ಳೆಂದು ತಳ್ಳಿಹಾಕುತ್ತದೆ.

೯ನೆಯ ಶತಮಾನದಲ್ಲಿ ರಾಷ್ಟ್ರಕೂಟದವರಿಂದ ಸ್ಥಾಪಿಸಲ್ಪಟ್ಟಿದ್ದ ದೋರಸಮುದ್ರವೇ ಹಳೇಬೀಡಿಗಿಂತ ಇತ್ತೀಚಿನದು ಎಂದು ಹೇಳಲಾಗುತ್ತಿದೆ. ಈ ಊಹೆಗಳು ಸಂಪೂರ್ಣವಾಗಿ ಆಧಾರಸಹಿತವಾದದ್ದಲ್ಲವಾದರೂ ಅದರ ಮೂಲವನ್ನು ವಿವರಿಸಲು ಸಾದ್ಯವಾಗುತ್ತದೆ. ದ್ವಾರಸಮುದ್ರವು ೯ನೆಯ ಶತಮನದಲ್ಲಿಯೇ ಕಟ್ಟಿದ್ದು ಎಂದಾದರೆ ಅದು ಪುನರ್‌ರಚಿಸಿರಬೇಕು ಮತ್ತು ಅದರ ಹೆಸರಿಗೆ "ಸಮುದ್ರಂ" ಅನ್ನು ಸೇರಿಸಿರಬೇಕು.[2]

ತುವುರಾಯಿ ಇದು ಆದಿವಾಸಿಗಳಾದ ವೇಲಿರ್ ಇದಕ್ಕೆ ಸಂಬಂಧಿಸಿದ್ದು ಅದು ಏಳ್ಗೆ ಹೊಂದಿದ್ದು, ಉದಾರಿಗಳಾದ ತಮಿಳು ಮುಖ್ಯಸ್ಥರ ತಮಿಳಾಹಮ್‌ನ ಮೂರು ರಾಜರಿಗಿಂತ ಉನ್ನತವಾಗಿತ್ತು. ವೇಲಿರ್ ಇದು ಒಂದು ತಮಿಳು ಮೂಲನಿವಾಸಿಗಳಾಗಿದ್ದು ಇದರ ಅರ್ಥವು ಪ್ರೀತಿಪಾತ್ರ ಎಂದಾಗುತ್ತದೆ: ಇದು ತಮಿಳನ ಪ್ರಿಯದರ್ಶಿನ್‌ಗೆ ಸಮನಾಗಿದೆ. ಪರಂಬಿಯ ಪರಿ, ತಗಡುರಿನ ಅದಿಹೈಮನ್ ಮತ್ತು ಅಯ್‌ನ ಪೆಹನ್ ಮತ್ತು ವೆನ್ಮನ್‌ನ ನನ್ನನ್ ಇವರುಗಳು ಈ ಪಂಥಕ್ಕೆ ಸೇರಿದವರಾಗಿದ್ದರು; ಮತ್ತು ಪದಿರ್ರುಪಟ್ಟುವಿನಲ್ಲಿ ತಿಳಿಸಿದಂತೆ ವೆಲವಿಕ್ಕೊಮನ್ ಪಡುಮನ್ ಅವರುಗಳು ಚೇರರ ಮದುವೆಯಲ್ಲಿ ತಮ್ಮ ಮಗಳನ್ನು ಕೊಡುವಷ್ಟು ಪ್ರಮುಖರಾಗಿದ್ದರೆಂದೂ ಹೇಳಲಾಗಿದೆ. ಈ ವೇಲಿರ್‌ಗಳು ಕೆಳ ದಕ್ಷಿಣ ಮತ್ತು ತಮಿಳು ದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದು ಅವರುಗಳು ರಾಜರ ಸಂಪರ್ಕದಲ್ಲಿದ್ದರೆಂದೂ ಹೇಳಲಾಗುತ್ತಿದೆ.

ಮಧ್ಯಕಾಲೀನದಲ್ಲಿದ್ದ ನಾಚಿನರ್ಕಿನಿಯಾರ್ ಎಂಬ ಪ್ರಸಿದ್ಧ "ತೋಲ್ಕಾಪ್ಪಿಯಮ್"ನ ವಿಮರ್ಶಕನು ವೇಲಿರ್‌ನ ಹದಿನೆಂಟು ವಿಧಗಳ(ಕುಟುಂಬಗಳು)ನ್ನು ಅಗಸ್ತಿಯಾರ್‌ನು ತಮಿಳುನಾಡಿಗೆ ಕರೆದುಕೊಂಡು ಬಂದ, ಮತ್ತು ಅವರ ಹಿರಿಮೆಯ ಬಗ್ಗೆ ಮತ್ತೆ ಮತ್ತೆ ಪ್ರಸ್ತಾಪಿಸಿದ್ದಾನೆ. ಅವರನ್ನು ತುವುರಪಟ್ಟಿಯ (ಅಂದರೆ ತುವರಯಿ, ಅಂದರೆ ದ್ವಾರಸಮುದ್ರ) ನೆಡಮುಡಿಯ ಅನ್ನಾಲ್(ಕೃಷ್ಣ)ದಿಂದ ಕರೆತರಲಾಯಿತು. ಇದು ಸ್ಪಷ್ಟವಾಗಿ ಅಗಸ್ತಿಯಾರ್‌ನ ಕೃತ್ಯಗಳು (ಅವನು ಯಾರೇ ಇರಬಹುದು) ಅವನ ಕೀರ್ತಿಗೆ ಸಂಬಂಧಿಸಿದೆ. ಅಲ್ಲದೇ ಅವನು ತಮಿಳಗೆ ಹೊಸ ರಾಜಕೀಯ, ಸಾಮಾಜಿಕ ಸಂಗತಿಗಳನ್ನು ಆಮದು ಮಾಡಿಕೊಂಡನು.[3] ಅವುಗಳಲ್ಲಿ ವೇಲಿರ್ ಗ್ಪಂಗಡವನ್ನು ಕರೆಸಿದ್ದೂ ಕೂಡ ಒಂದಾಗಿದೆ. ಆದರೆ ಒಂದು ಚಾರಿತ್ರಿಕ ಘಟನೆ ಎಂದರೆ ತುವುರಯ್ ಪ್ರದೇಶಕ್ಕೆ ಸೇರಿದ ವೇಲಿರ್ ಪಂಗಡದವರನ್ನು ಅಲ್ಲಿಗೆ ಕರೆತಂದದ್ದು. (ನಾಚ್ಚಿನರ್ಕ್ಕಿನಿಯಾರ್ ಕೂಡಾ ಇದನ್ನು ದ್ವಾರಕೆ ಅಥವ ಯಾದವರ ಶ್ರೀಕೃಷ್ಣ ರಾಜಧಾನಿ ಎಂಬ ಸಂದೇಹವನ್ನು ನಿವಾರಿಸಲಾಗಲಿಲ್ಲ.) ಅವರು ಅಲ್ಲಿಂದ ಚದುರಿ ತಮಿಳರ ಚರಿತ್ರೆಯ ಭಾಗವಾಗಿ ದಕ್ಷಿಣಕ್ಕೆ ಬಂದು ತಮಿಳಾಹಮ್ ಸುತ್ತ ನೆಲೆಸಿದರು. ತಮಿಳನ ಸಾಮಾನ್ಯ ಮೂಢನಂಬಿಕೆ–ಯಂತೆ ಈ ಘಟನೆಯೂ ಕೂಡ ಅಗಸ್ತಿಯಾರ್ನತ್ತಲೇ ಬೆಟ್ಟು ಮಾಡುತ್ತಿದೆ. ವೇಲಿರ್‌ಗಳು ತಮ್ಮ ಚರಿತ್ರೆಯನ್ನು ಒಂದು ಗೌರವಾನ್ವಿತವಾಗಿ ಕಾಣಿಸಲು ಅವರು ಶ್ರೀಕೃಷ್ಣನ ದ್ವಾರಕಾದತ್ತಲೇ ದೃಷ್ಟಿ ಇಟ್ಟರು.[4] ಒಮ್ಮೆ ಈ ಸ್ಥಳಾಂತರದ ಕಾರ್ಯ ಪ್ರಾರಂಭವಾದನಂತರ ಸಹಜವಾಗಿಯೇ ಈ ಸ್ಥಳಾಂತರಗಳೂ ಮತ್ತು ಪಯಣಗಳೂ ಅಗಸ್ತಿಯಾ ನೊಂದಿಗೆ ಸಂಬಂಧವನ್ನು ಥಳುಕು ಹಾಕಿಕೊಳ್ಳುತ್ತದೆ. ಈ ಗುಂಪುಗಳು ದ್ವಾರಕಾದ ಸಹವಾಸವನ್ನು ಪರಿಗಣಿಸಿದಂತೆ ಹೊಯ್ಸಳರು ಯದುವಂಶದ ಶಾಖೆಯವರೇ ಎಂದು ತೀರ್ಮಾನಿಸಿದರು. ವೇಲಿರರ ದ್ವಾರಸಮುದ್ರದೊಂದಿಗಿನ

ಸಂಬಂಧವನ್ನು ಪ್ರದೇಶದ ಮುಖ್ಯಸ್ಥನಾದ ಇರುಂಕೋ ವೇಲ್ ಪರಿಗಣಿಸಿದರು ಎಂದು ಪುರನಾನೂರುವಿನಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.

ಪುರಾತನ ತಮಿಳರ ತುವರಪಟ್ಟಿಯೊಂದಿಗಿನ ಸಂಬಂಧವನ್ನು ಹಿನ್ನೆಲೆಯಾಗಿಟ್ಟು-ಕೊಂಡರೆ ಮಧ್ಯಕಾಲೀನದಲ್ಲಿ ದ್ವಾರಸಮುದ್ರದೊಂದಿಗಿನ ಹೊಯ್ಸಳರ ಮೂಲವನ್ನು ಪ್ರಶ್ನಿಸಬೇಕಾಗುತ್ತದೆ. ಹೊಯ್ಸಳರ ಸಂತತಿಯ ಮೂಲವನ್ನು ಪರಿಶೀಲಿಸಿದ ಅನೇಕ ವಿದ್ವಾಂಸರು ಅದರ ಅಸ್ಪಷ್ಟತೆಯನ್ನು ಒಕ್ಕೊರಲಿನಲ್ಲಿ ಒಪ್ಪಿಕೊಂಡಿದ್ದಾರೆ., ಆದರೆ ಎಲ್ಲರೂ ಸಹ ಈ ಸಮಸ್ಯೆಯನ್ನು ಪ್ರಕಾಶಗೊಳಿಸುವ ಒಂದು ಕಾರ್ಯವನ್ನು ಮಾಡುತ್ತೇನೆ ಎಂದು ಪುನರುಚ್ಚರಿಸಿದ್ದಾರೆ. ಈ ಕಥೆಗೆ ಅನೇಕ ಆಯಾಮಗಳಿವೆ. ಆದರೆ ಮೂಲತಹ ನಮ್ಮ ಉದ್ದೇಶಕ್ಕೆ ಬರುವಂತಹ ಒಂದು ಮೂಲ ಅಂಶ ಹೀಗಿದೆ: ದಕ್ಷಿಣ ಮೈಸೂರಿನ ಕಡುಗಳಲ್ಲಿ ಒಮ್ಮೆ ಒಬ್ಬ ಸನ್ಯಾಸಿ ತಪಸ್ಸು ಮಾಡಿಕೊಂಡಿದ್ದ. ಆ ಸಮಯದಲ್ಲಿ ಅಲ್ಲಿಗೆ ಒಂದು ಹುಲಿ ಬಂದು ಅವನ ಮೇಲೆ ಹಾರಲು ಸಿದ್ಧವಾಯಿತು. ಅದೇ ಸಮಯಕ್ಕೆ ಸರಿಯಾಗಿ ಸಳನೆಂಬ ಒಬ್ಬ ರಾಜನು ಅಲ್ಲಿಗೆ ಬಂದ ಮತ್ತು ಅವನು ಆ ಋಷಿಯ ಆದೇಶದ ಮೇರೆಗೆ ಹುಲಿಯನ್ನು ಹೊಡೆಯಲು ಸಿದ್ಧನಾದ. ಆಗ ಅವನು “ಹೊಯ್, ಸಳ” ಎಂದು ಉದ್ಗರಿಸಿದನು. ಅದರ ಅರ್ಥವೆಂದರೆ “ಹೊಡೆ, ಓ, ಸಳ” ಎಂದು. ಅದರಂತೆ ಆ ದೊರೆಯು ಆ ಹುಲಿಯನ್ನು ಹೊಡೆದನು. ಹಾಗಾಗಿ ಅವನು ಆ ಸಂತತಿಯ ಸ್ಥಾಪಕನಾದನು.[5] ಸಳ ಎಂಬುದು ಅಸಹಜ ಮತ್ತು ಅರ್ಥಹೀನ ಪದವಿಯಾಗಿದೆ. ಮತ್ತು ಈ ಕಥೆಯು ಯೋಚಿಸಿದರೆ ಅದು ನಂಬಲರನರ್ಹ. ಆದರೆ ಮಧ್ಯಕಾಲೀನ ಶಾಸನಗಳು ಮತ್ತು ಸಾಹಿತ್ಯ ಈ ಕಟ್ಟುಕಥೆಯ ಮೇಲೆ ಅವಲಂಬಿತವಾಗಿದೆ. ಆದರೆ ಶಾಸನದ ಮೇಲೆ ನಂಬಿಕೆಯನ್ನು ಇಟ್ಟ ಕೆಲವು ವಿದ್ವಾಂಸರು ಹೊಯ್ಸಳ ಸಂತತಿಯ ಬಗ್ಗೆ ಸಾಂಪ್ರದಾಯಿಕವಾಗಿ ಇದನ್ನು ನಂಬುವಂತೆ ಮಾಡಿದರು ಮತ್ತು ಬೇರೆಯಾದ ಅಥವಾ ಹುಚ್ಚು ಕಲ್ಪನೆಯ ಸಿದ್ಧಾಂತವನ್ನು ಯಾರೂ ಮಂಡಿಸದ ಕಾರಣ ಈ ಕಥೆಯು ಒಂದು ಕಳಂಕವೆನಿಸಿತು.

ಹೊಯ್ಸಳ ವಂಶದ ಬಗ್ಗೆ ಆಳವಾದ ಅಧ್ಯಯನ ಮಾಡಿದ ಡಾ॥ಡೆರೆಟ್ಟ್‌ರವರು ಶಾಸನಗಳ ಈ ಕಥೆಯನ್ನು ಮನೋಹರವಾಗಿದೆ ಎಂದಿದ್ದಾರೆ. ವಿಷ್ಣುವರ್ಧನನ ಕಾಲದಲ್ಲಿ ಈ ಅಸಾಮಾನ್ಯ ಹೆಸರನ್ನು ಕುರಿತು ಕಟ್ಟಿದ ಈ ಮನೋಹರ ದಂತಕಥೆಯನ್ನು ವಿಷಾದದಿಂದ, ಮುಗುಳುನಗೆಯೊಂದಿಗೆ ಉಪಯೋಗವಿಲ್ಲದ್ದು ಎಂದು ಕೈ ಬಿಡಬೇಕಾಗಿದೆ ಎಂದಿದ್ದಾರೆ. ಒಬ್ಬ ಜೈನ ಉಪಾಧ್ಯಾಯನು ಅದು ಹೇಗೆ ತನ್ನ ರಾಜಮನೆತನದ ಶಿಷ್ಯನಾದ ಸಳನಿಗೆ ತನ್ನಲ್ಲಿದ್ದ

ಕಬ್ಬಿಣದ ಸಲಾಕೆಯನ್ನು (ಇದಕ್ಕೆ ಬೇರೆಬೇರೆ ರೂಪದ ಕಥೆಗಳಿವೆ) ಕೊಟ್ಟು "ಹೊಯ್ ಸಳ" ಎಂದು ಹೇಳಿದ, ಇದು ಹಳೆಗನ್ನಡ ಮೂಲದ ಪೊಯ್ ಎಂದರೆ ಹೊಡಿ ಎಂದಾಗುತ್ತದೆ.[6]

ಶಾಸನಗಳೂ ಒಪ್ಪಿಕೊಂಡರೂ ಸಹ ಆ ಮೂಲ ಘಟನೆಯ ಬಗ್ಗೆ ಮತ್ರ ಭಿನ್ನಾಭಿ-ಪ್ರಾಯಗಳಿವೆ. ಕ್ರಿ.ಶ.1174ರ ಕಡೂರಿನ ನಂ.318ರ ಪ್ರಕಾರ ಯಾದವದೊರೆಯಡ ಸಕಲನು ಹುಲಿಯನ್ನು ಕೊಂದಿದ್ದು, ಸಳನಲ್ಲ. ಮತ್ತೊಂದು ಶಾಸನವಾದ ಕ್ರಿ.ಶ.1208ರ ಸೊರಲೆಯ ನಂ.28ರಂತೆ ಒಬ್ಬ ಸುದತ್ತಾಚಾರಿಯರ್ (ಕೆಲವರು ಅವನನ್ನು ವರ್ಧಮಾನ ಎನ್ನುತ್ತಾರೆ) ಜೈನಸನ್ಯಾಸಿಯು ಒಂದು ಹಳ್ಳಿಯನ್ನು ಯಾದವಕುಲದ ಸಳನ ರಾಜ್ಯಕ್ಕೆ ಸೇರಿಸಲು ಪದ್ಮಾವತಿದೇವಿಯನ್ನು ಕರೆದನು.[7] ಆದರೆ ದೇವಿಯು ಒಂದು ಹುಲಿಯ ರೂಪದಲ್ಲಿ ಅಲ್ಲಿಗೆ ಬಂದಳು. ಆಗ ಆ ಮುನಿಯು ಆ ಹುಲಿಯನ್ನು ಕೊಲ್ಲಲು ಹೇಳಿದನು. ಆಗ ಪದ್ಮಾವತಿಯು ಒಂದು ದೊಡ್ಡ ಘರ್ಜನೆಯನ್ನು ಹಾಕಿ ಮಾಯವಾದಳು. ಈ ಕಥೆಯಲ್ಲಿ ಹೇಳಿದಂತೆ ಹೊಯ್ಸಳ ಶಿಲ್ಪಗಳಲ್ಲಿ, ಹೊಯ್ಸಳರ ಮುದ್ರೆಗಳಲ್ಲಿ ಒಬ್ಬ ಮನುಷ್ಯ ಮತ್ತು ಅವನಿಂದ ಕೊಲ್ಲಲ್ಪಡುತ್ತಿರುವ ಹುಲಿಹ ಚಿತ್ರವಿರುವ ಬಗ್ಗೆ ಡಾ|| ಬಿ.ಆರ್.ಜೋಷಿಯವರು ನಮ್ಮ ಗಮನ ಸೆಳೆಯುತ್ತಾರೆ; ಆದರೂ ಡಾ||ಡೆರ್ರೆಟ್‌ರವರಂತೆ ಶ್ರೀ ಜೋಷಿಯವರೂ ಸಹ ಹುಲಿಯ ಕೊಲೆಯನ್ನು ಮಧ್ಯಕಾಲೀನ ದಂತಕಥೆಯೆನ್ನುತ್ತಾರೆ.[8] ಆದರೆ ಜನಗಳಲ್ಲಿ ಭಯ, ನಂಬಿಕೆಗಳನ್ನು ಹುಟ್ಟಿಸಲು ಈ ಕಥೆಯನ್ನು ಹೇಳಿಸಲಾಯಿತು ಎಂದು ಅಭಿಪ್ರಾಯಪಡುತ್ತಾರೆ. ಇನ್ನೂ ಇದೇ ರೀತಿಯ ಆದರೆ ವಿಭಿನ್ನವಾದ ಕಥೆಗಳಿವೆ.

ಎಲ್ಲಾ ಹೊಯ್ಸಳ ಶಾಸನಗಳಲ್ಲಿಯೂ "ಹೊಯ್ಸಳ" ಎಂಬ ಪದವನ್ನು ಒಂದೇ ಸಮನಾಗಿ ಉಪಯೋಗಿಸಿಲ್ಲ. ಹೊಸನ, ಹೊಯ್ಸನ, ಪೊಯ್ಸಳ, ಪೊಯಿಸಳ ಮತ್ತು ಹೊಸಳ ಎಂಬ ಅನೇಕ ಪದಗಳನ್ನು ಉಪಯೋಗಿಸಿ ಗೊಂದಲ ಮೂಡಿಸಿದೆ.

ಈಗ ಅನೇಕ ವಿದ್ವಾಂಸರು ಹೊಯ್ಸಳದ ವಂಶದ ಮೂಲದ ವಿಚಾರವಾಗಿ ಈ ದಂತಕಥೆಯನ್ನು ತಿರಸ್ಕರಿಸಿ ಇನ್ನೂ ತರ್ಕಬದ್ಧವಾದ ಚಾರಿತ್ರಿಕ ದಾಖಲೆಗಳನ್ನು ಹುಡುಕಲು ಪ್ರಯತ್ನಿಸಿದಾರೆ. ಕಡಿನ ಮುಖ್ಯಸ್ಥರ ಒಂದು ಕುಟುಂಬವು ಪ್ರಾರಂಭದಲ್ಲಿ ಪಶ್ಚಿಮಘಟ್ಟದಲ್ಲಿತ್ತು ಎಂಬುದರ ಬಗ್ಗೆ ರೈಸ್ ಅವರ ಆಕ್ಷೇಪಣೆ ಏನೂ ಇಲ್ಲ. ಶ್ರೀ ಈಜೋಷಿಯವರಂತೆ ಅವರನ್ನು ಉತ್ತರಕನ್ನಡದ ಒಂದು ಸಮುದಾಯ ಎನ್ನುತ್ತಾರೆ: ಹೊಸಲೇರು ಎಂಬುದನ್ನು ಹೊಯಿಸಳರು ಎಂದು ಉಚ್ಚರಿಸಲಾಗಿದೆ. ಡಾ.||ಡೆರ್ರೆಟ್ಟ್‌ರವರಂತೆ ಮೂಲದವರು ಅವರ ಇನ್ನುಳಿದ

ಹಿಂಬಾಲಕರಿಂದ ಭಿನ್ನವಾಗಿದ್ದರು ಎಂಬ ಅಭಿಪ್ರಾಯಪಡುತ್ತಾರೆ. ಅವರು ಕ್ರಿ.ಪೂ. 3ನೆಯ ಶತಮಾನದ ಬೃಹತ್‌ಶಿಲಾಯುಗದ ಕಾಲದಿಂದ ಉತ್ತರ ಮೈಸೂರಿನಿಂದ ಬಂದವರಾಗಿರಬೇಕು. ಅವರು ನೈರುತ್ಯ ದಖ್ಖನ ಪ್ರದೇಶದ ಆರ್ಯರನ್ನು ಗೆದ್ದವರಾಗಿರಬೇಕು.[9] ಆದರೆ ಅವರ ಮೂಲದ ಬಗ್ಗೆ ಊಹಿಸುವುದು ನಿಷ್ಪ್ರಯೋಜಕ. ಮೂಲತಃ ಹೊಯ್ಸಳರು ಪಶ್ಚಿಮ ಘಟ್ಟದ ಮೂಡಿಗೆರೆ ತಾಲ್ಲೂಕಿನ ಅಂಗಡಿಯ ಗುಡ್ಡಗಾಡು ಜನಾಂಗದ ಮುಖ್ಯಸ್ಥರು ಎಂದು ಸಿವೆಲ್‌ರು ಅಭಿಪ್ರಾಯಪಡುತ್ತಾರೆ. ಇದು ಪುನಃ ಕೆಲವು ಮಧ್ಯಕಾಲೀನ ಶಾಸನಗಳ ಆಧಾರಿತ ಊಹೆಗಳಷ್ಟೇ. ಆದರೆ ಹಿಂದೆ ತೋರಿಸಿದ ಈ ಎಲ್ಲ ಕಾರಣಗಳಿಂದ ಮತ್ತು ಇಲ್ಲಿಂದ ಮುಂದೆ ಈ ಲೇಖನದಲ್ಲಿ ಹೊಯ್ಸಳರಿಗೆ ಒಂದು ಅನಾರ್ಯ ಮತ್ತು ಸ್ವಂತ ಮೂಲವನ್ನು ಕೊಡುವುದು ಸೂಕ್ತವಾಗುತ್ತದೆ.

ನಮ್ಮ ಈ ಅದ್ಭುತವಾದ ಗೊಂದಲ ಮೂಡಿಸುವ ವರದಿಗಳಿಗಿಂತ ಪುರಾತನ ತಮಿಳು ಸಾಹಿತ್ಯವು ಹೊಯ್ಸಳರ ಮೂಲದ ಬಗ್ಗೆ ತಿಳಿಸುವ ಒಂದು ಬೆಳಕಿಂಡಿಯನ್ನು ತೋರುತ್ತದೆ. ಹೊಯ್ಸಳ ರಾಜರ ಬೆಲ್ಲಾಳ ಎಂಬ ಬಿರುದು (ವೆಲ್ಲಾಳ=ವೇಲ್ ಅರರ್-ವಲ್ಲಲದಿಂದ ಅಪಭ್ರಂಶವಾಗಿದೆ-ವಲ್ ಅಲರ್) ಸ್ಪಷ್ಟವಾಗಿ ತುವುರಪಟ್ಟಿಯ ಪ್ರಾಚೀನ ವೆಲ್ಸ್‌ನ ದಿಂದ ಮಧ್ಯಕಾಲೀನ ವಂಶವು ಬಂದುದಾಗಿದೆ.[10] ಈ ವಿಚಾರವು ಸಂಗಮ ಸಾಹಿತ್ಯದಲ್ಲಿ ದಕ್ಷಿಣ ಮೈಸೂರು ಪ್ರಾಂತ್ಯದ ಪ್ರಾಚೀನ ತಮಿಳು ಬುಡಕಟ್ಟು ಜನಾಂಗದಿಂದ ಬಂದವರೆಂದು ತಿಳಿದು ಬರುತ್ತದೆ,

ಸಂಗಮ್ ಪುಷ್ಪಮಾಲಿಕೆಯ ಪುರಾತನರು 201, 202ರ ಲೇಖಕನಾದ ಕಪಿಲರ್‌ನು ಪಾಳ್ಯಗಾರ ಇರುಂಕೊವೆಲ್ ಮತ್ತು ಆ ಪದ್ಯಗಳು ವೆಲಿರ್‌ನ ಹಿಂದಿನ ಚಾರಿತ್ರಿಕ ವೈಭವವನ್ನು ಕುರಿತು ಹೇಳುತ್ತಾನೆ. ಮಧುರೈ ಜಿಲ್ಲೆಯ ಪರಂಬು ಗುಡ್ಡದ ವೆಲಿರ್ ಪಾಳೆಯಗಾರನಾದ ಪಾರಿಯ ಆಪ್ತಸ್ನೇಹಿತನಾದ ಬ್ರಾಹ್ಮಣ ಕವಿ ಕಪಿಲರ್ ಪರಿಯ ಮರಣಾನಂತರ ವೆಲಿರ್ ಮುಖ್ಯಸ್ಥರಲ್ಲಿ ತನ್ನ ಹೆಣ್ಣುಮಕ್ಕಳಿಗೆ ಸೂಕ್ತ ವರಗಳನ್ನು ಹುಡುಕುತ್ತಾ ಪರಂಬು ಗುಡ್ಡವನ್ನು ಬಿಟ್ಟು ಹೊರಟನು. ಈ ಪ್ರಯಾಣವು ಅವನನ್ನು ವಲಿರ್‌ನ 49 ತಲೆಮಾರುಗಳ ಕಾಲ ಆಳಿದ ಇರುಂಕೋವಲ್‌ಗೆ ಕರೆತಂದಿತು. ಮುಂದಿನ ಪದ್ಯದಲ್ಲಿ ಕವಿಯು ಇರುಂಕೋವೆಲನನ್ನು ಪರಿಯ ಹೆಣ್ಣುಮಕ್ಕಳನ್ನು ಮದುವೆ ಆಗಲು ನಿರಾಕರಿಸಿದ್ದಕ್ಕಾಗಿ ಶಾಪ ಹಾಕುತ್ತಾನೆ ಮತ್ತು ಅವನು ಎವ್ವಿಯ ಪ್ರಾಚೀನ ಕುಟುಂಬದೊಂದಿಗೆ ಇರುವುದಾಗಿ ತೀರ್ಮಾನಿಸುತ್ತಾನೆ. ಮುಂದಿನ ಪದ್ಯವು ಇರುಂಕೋವೆಲ್‌ನ ತಲೆಮಾರಿನ ಹಿಂದಿನವರೊಬ್ಬರು ಕಲತ್ತಲಯಾರ್ ಎಂಬ

ಬಂದರಿನ ಆಜ್ಞೆಯನ್ನು ಉಲ್ಲಂಘಿಸಿದಕ್ಕಾಗಿ ಅರಯಮ್ ನಗರವನ್ನು ನಾಶಗೊಳಿಸುವ ಶಿಕ್ಷೆಯಾಗಿ ಕಪಿಲಾರ್‌ನ ಇರುಂಕೋವೆಲ್‌ಗೆ ಆದ ಅವಮಾನವನ್ನು ನೆನಪಿಸಿದೆ. ಇರುಂಕೋವಿಲ್‌ನನ್ನು "ಪುಲಿಕಾಡಿಮಲ್"[11] (ಹುಲಿಯನ್ನು ಕೊಂದ ಧೀರ) ಎಂದು ಆ ಪದ್ಯದಲ್ಲಿ ಕರೆಯಲಾಗಿದೆ. ಇರುಂಕೋವಿಲ್‌ನೊಂದಿಗೆ ತುವರಾಯಿನ ಸಂಬಂಧವನ್ನು ಮತ್ತು ಆ ಸನ್ಯಾಸಿಯ ದಂತಕಥೆಯನ್ನು ವೇಲಿರ್ ವಂಶ ಮತ್ತು ಪುಲಿಕಾಡಿಮಲ್ ಎಂಬ ಬಿರುದನ್ನು ಹೊಯ್ಸಳ ರಾಜಧಾನಿಯಾದ ದ್ವಾರಸಮುದ್ರ, ಮತ್ತು ಒಬ್ಬ ಮುನಿ 'ಹೊಯ್ಸಳ'[12] ಎಂಬ ಬಿರುದನ್ನು ಪಡೆಯುವ ಮತ್ತು ವಂಶದ ಸಂಸ್ಥಾಪಕನು ಹುಲಿಯನ್ನು ಕೊಂದ ಕಥೆಯನ್ನು ಹೋಲಿಸಬಹುದು. ಈಗ ಹೊಯ್ಸಳ ವಂಶಾವಳಿಯ ಬೇರುಗಳನ್ನು ತುವರಾಯಿಯ ವೇಲಿರ್‌ನೊಂದಿಗೆ ಅರ್ಥಮಾಡಿಕೊಳ್ಳುವುದರಲ್ಲಿ ಕಷ್ಟವೇನಿಲ್ಲ. ಇಲ್ಲಿ ಇಡೀ ಪ್ರಕರಣವನ್ನು ಪುನರ್ವಿವರಿಸಬೇಕಾಗಿದೆ.

ಈ ಋಷಿಯ ವಂಶದ ಮೂಲವನ್ನು ಕಾವೇರಿ ನದಿಯು ಅಗಸ್ತಿಯಾರ್ (ಅಗಸ್ತ್ಯ ಋಷಿಗಳು) ರವರ ಪವಿತ್ರ ಕಮಂಡಲುವಿನಿಂದ ಜನ್ಮಿಸಿದ ಕಥೆಗೆ ಹೋಲಿಸಬಹುದು. ಇದು ಕಪಿಲಾರ್‌ರ ಕಾಲದಿಂದಲೂ ವೇಲಿರ್‌ನ ಉಗಮದ ಬಗೆಗಿನ ಸತ್ಯವು ಪ್ರಾಚೀನವಾಗಿದ್ದು ಅಸ್ಪಷ್ಟವಾಗಿತ್ತು. ಆದರೆ ನಾಚ್ಚಿನರ್ಕ್ಕುನಿಯಾರ್‌ರ ಹೇಳಿಕೆಯಂತೆ ಅಗಸ್ತಿಯಾರ್‌ರವರು ವೇಲಿರ್‌ರು ತಮಿಳ್ನಾಡಿನಲ್ಲಿ ನೆಲೆ ನಿಂತರು, ಇದು ವೇಲಿರ್‌ರು ಉತ್ತರದ ಋಷಿ (ಅಗಸ್ತಿಯಾರ್) ರ ಪವಿತ್ರ ಅಗ್ನಿಯಲ್ಲಿ ಕಾಣಿಸಿಕೊಂಡರು.[13] ಪುರಮ್ 201ರಂತೆ ಇದು ವೇಲಿರ್‌ನ 49ನೆಯ ವಂಶದ ಬೇರೆಯಾಗಿದ್ದವನು ಇರುಂಕೋವೆಲ್ ಎನ್ನುತ್ತದೆ. ಈ ಹೇಳಿಕೆಯು ನಿಜವಾದರೆ ವೇಲಿರ್‌ನು ಕ್ರಿ.ಪೂ.8ನೆಯ ಶತಮಾನದ ಯಾವುದೋ ಒಂದು ಕಾಲದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿರ-ಬೇಕು.

ಒಂದು ವೇಳೆ ಆ ಕಾಲವು ಅಸಂಭಾವ್ಯ ಎಂದು ಪರಿಗಣಿಸುವುದಾದರೆ ಶಾಖೆ ಅಥವ ವಿಭಾಗದ (ವೇಲಿರ್ ಜನಾಂಗ) ಅರ್ಥವನ್ನು ತಲೆಮಾರು ಎನ್ನುವುದರ ಬದಲಾಗಿ ಸರಿಯಾಗಿ ತಿಳಿದುಕೊಳ್ಳಬೇಕು. ಇದನ್ನು ಕಪಿಲಾರ್‌ನು ಪುರಮ್ 201ನಲ್ಲಿ ಹೇಳಿದ್ದಾನೆ. ಅಂದರೆ ಎಲ್ಲ ಸೇರಿ ಅಲ್ಲಿ ವೇಲಿರ್ ಜನಾಂಗದ 49 ಕುಟುಂಬ ಅಥವ ವಿಭಾಗಗಳು ಒಂದೇ ಕಾಲದಲ್ಲಿ ಇದ್ದು ಪ್ರಾರಂಭದಲ್ಲಿ ಏಕಕಾಲದಲ್ಲಿ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಅಗಸ್ತಿಯಾರ್‌ರು ತಮಿಳು ದೇಶಕ್ಕೆ 18 ಜನರನ್ನು ಕಳುಹಿಸಿದರು ಎಂದರೆ ಅವರು 49ರಲ್ಲಿ 18 ಕುಟುಂಬವನ್ನು ಮಾತ್ರ ಆರಿಸಿದ್ದರು ಮತ್ತು ಅವರನ್ನು ದಕ್ಷಿಣ ತಮಿಳಾಹಂನ ವಿವಿಧ ಭಾಗಗಳಲ್ಲಿ ನೆಲೆಗೊಳಿಸಿದ್ದರು

ಎಂದಾಗುತ್ತದೆ. 'ಪುಲಿಕಾಡಿಮಲ್' ಎಂಬುದು ನಿಜವಾಗಿಯೂ ಮುನಿಯನ್ನು ಉಳಿಸಲು ಹುಲಿಯನ್ನು ಕೊಂದ ಕಥೆಗೂ ಏನೂ ಸಂಬಂಧವಿಲ್ಲ; ಆದರೆ ವೀರರಾದ (ಚೋಳ)ರಾಜರ ಲಾಂಛನವು ಹುಲಿಯಾಗಿದ್ದು ಅದರಿಂದ ಅವರ ಪ್ರಾಮುಖ್ಯತೆಯನ್ನು ಉಳಿಸಿಕೊಳ್ಳ ಬಲ್ಲವರಾಗಿದ್ದರು. ಅಲ್ಲದೆ 13ನೆಯ ಶತಮಾನದಲ್ಲಿ ಕಂಡುಬಂದ ಹೊಯ್ಸಳರ ಮತ್ತು ಚೋಳರ ನಡುವಿನ ಬಾಂಧವ್ಯವು ಸಂಗಮರ ಕಾಲದಷ್ಟೇ ಪ್ರಾಚೀನವಾಗಿತ್ತು. "ಟೋಳ್ಕುಡಿ" ( ಪ್ರಾಚೀನ ವಂಶ ಅಥವ ಪಂಗಡ)ಎಂಬ ಉಚ್ಚಾರಣೆಯನ್ನು ಮತ್ತೆ ಮತ್ತೆ ತಮಿಳು ಸಾಹಿತ್ಯದಲ್ಲಿ ಬಳಸಿರುವುದು 'ವೇಲಿರ್'ನ ಮಹತ್ವವನ್ನು ತಿಳಿಸುತ್ತದೆ. ಅಲ್ಲದೆ ಈ ಪದವು "ಪಳೈಯ ವೀಡು" (ಅಂದರೆ ಪ್ರಾಚೀನ ಕುಟುಂಬ) ಎಂದು ಕೂಡಾ ಅರ್ಥ ಮಾಡಿಕೊಳ್ಳಬಹುದು ಅಂದರೆ 'ಪಳೆವೀಡು' ಅಥವ ಕನ್ನಡದ ಹೊಯ್ಸಳರೊಂದಿಗೆ ಸಂಬಂಧಪಟ್ಟ ಹಳೆಬೀಡು ಅಥವ ಹಳೇಬೀಡ್. ಇದಲ್ಲದೆ ಹಳೇಬೀಡಿನ ಇತರ ಅರ್ಥಗಳನ್ನು ಇತ್ತೀಚಿನ ಸಂಶೋಧನೆಯೆಂದೂ ಇದು ನಂಬಲನರ್ಹವೆನಿಸಿದೆ.[14]

ಈಗ ನಾವು 'ಹೊಯ್ಸಳ' ಎಂಬ ಪದದ ಅರ್ಥವನ್ನು ತಿಳಿಯೋಣ. ಹಳೆಗನ್ನಡ ರೂಪವಾದ ಪದ "ಪೊಯ್ಸಳ" ಇದು ತಮಿಳಿನ ಪದಕ್ಕೆ ಸಮಾನವಾದ ಪದವಾಗಿದೆ. ಕನ್ನಡದ ಪದವಾದ "ಪೊಯ್" ಅಂದರೆ ಕೊಲ್ಲಿ, ಹೊಡಿ ಎಂಂದು ಅರ್ಥ;[15] ಯಾವುದೇ ಶಬ್ಧಕೋಶವೂ ಇದರ ಶಬ್ಧ ವ್ಯುತ್ಪತ್ತಿಯಲ್ಲಿ ಇದಕ್ಕಿಂತ ಹೆಚ್ಚಿನ ಆಳಕ್ಕೆ ಹೋಗುವುದಿಲ್ಲ; ಸಹಜವಾಗಿಯೇ ಈ ಪದದ ಅರ್ಥವು ಅಶುದ್ಧತೆ, ಬೇರೆಯಾಗು ಅಥವ ಹಕ್ಕಿಗಾಗಿ ನಾಶ ಎಂದಾಗುತ್ತದೆ. ಈ ಪದವನ್ನು 'ಪೊಯ್ಸಳರ್' ಎಂದು ಭಾವಿಸಿದರೆ (ಅದು ಸುಳ್ಳಿನಿಂದ ದೂರವಿಡುತ್ತದೆ) ಅದು ನಿಜವಾಗಿ ಹೇಳುವುದಾದರೆ 'ಹೊಯ್ಸಳ'. 'ಹೊಯ್ಸಳರ್' ಎಂಬುದನ್ನು ಕೆಲವು ಶಾಸನಗಳು ತಮಿಳಿನ 'ಪ್ಯೊಸೊಳೇರು' ಅಥವ 'ಪೊಯ್ಸಳರ್' ಅಥವ 'ಪೊಯ್ಸೊಳರ್'[16] ಇವು ತಮಿಳಿನ ಬೇರೆ ರೂಪವೆಂದು ಹೇಳುತ್ತವೆ. ಕಣ್ಣಾನೂರಿ (ಈಗಿನ ಸಮಯಪುರಂ)ನಲ್ಲಿ ಹೊಯ್ಸಳ ಸೋಮೇಶ್ವರ (ಕ್ರಿ.ಶ.1235–1254) ಕಟ್ಟಿಸಿದ ದೇವಾಲಯವು ಪೊಯ್ಸಳೇಶ್ವರರಿಗೆ ಅರ್ಪಿತ–ವಾಗಿದೆ. ಸೋಮೇಶ್ವರನಿಂದ ಕಟ್ಟಿಸಲ್ಪಟ್ಟ 'ತಿರುವನ್ನೈಕ್ಕ' ದೇವಾಲಯದಲ್ಲ 'ಪೊಯ್ಸಳೇಶ್ವರ' ರ ಬಗ್ಗೆ ಶಿಲಾಶಾಸನಗಳ ಉಲ್ಲೇಖವಿದೆ. ಅಲ್ಲದೆ ಒಂದು ವಿಚಿತ್ರವಾದ ಘಟನೆಯಿಂದಾಗಿ ತಿರುವನ್ನೈಕ್ಕದಲ್ಲಿರುವ ಶಿವನ ದೇವಾಲಯವನ್ನು ತಿರುವನಕ್ಕರಸರ್‌ರು ಅನೃತದಿಂದ ದೂರವಾದ ಸತ್ಯದ ದೇವರು 'ಪೊಯೆದುಮಿಲ್ಲದ ಮೆಯ್ಯನ್' ಎಂದು ಪ್ರಶಂಸಿಸಿದ್ದಾರೆ. ಈ ಅಂಶವನ್ನು ಇನ್ನೂ ಬೆಳೆಸಿ ಈ ವಂಶಾವಳಿಯ ಚರಿತ್ರೆಯ ಪ್ರಾರಂಭಿಕ ಹಂತಗಳನ್ನು "ಮಯ್ಮಮಲಿ" ಅಥವ "ಸತ್ಯಪುತ್ರ" ರ ವಂಶಾವಳಿಗಳು ಒಂದೇ ರೀತಿ ಇದೆ. ಇವರು ಕೊಂಗನಾಡು ಅಥವ

ತುಳುನಾಡಿನವರಾಗಿದ್ದು[17] ಅಥೈಮನ್ಸ್ ಮತ್ತು ಕೊಂಗಿಲಂಕೋಸರ್ ಇವರನ್ನೂ ಒಳಗೊಂಡಿದ್ದರು. ಹಾಗಾಗಿ ಹೊಯ್ಸಳರು ಬೇರೆ ಹೆಸರಿನಿಂದ ಅದೇ ಪ್ರದೇಶದಲ್ಲಿ ಅಶೋಕನ ಕಾಲದಲ್ಲಿದ್ದು ವಿಜೃಂಭಿದ್ದರು.[18]

ದೋರಸಮುದ್ರದ ಹೊಯ್ಸಳರು ಸುಮಾರು ಮೂರುನೂರ ಐವತ್ತು ವರ್ಷಗಳ ಕಾಲ ಆಳಿದರು. ಆ ಕಾಲದ ಅನೇಕ ಸಾಹಿತ್ಯಿಕ ಕೃತಿಗಳು ಈ ಬಗ್ಗೆ ಬಹಳ ಮಾಹಿತಿಯನ್ನು ಒದಗಿಸುತ್ತವೆ. ನಾಗಚಂದ್ರನು ವಿಷ್ಣುವರ್ಧನನ ಆಳ್ವಕೆಯ ಕಾಲದಲ್ಲಿದ್ದನು. ವೀರಬಲ್ಲಾಳನ ಕಾಲದಲ್ಲಿ ಅನೇಕ ವಿದ್ವಾಂಸರಿದ್ದರು. ಜನ್ನನ 'ಯಶೋಧರಚರಿತ'ವು ಹೊಯ್ಸಳರ ಮೂಲದ ಬಗ್ಗೆ ತಿಳಿಸುತ್ತದೆ. ಆದು ಎರಡನೆಯ ವೀರಬಲ್ಲಾಳನ ಬಗೆಗೆಯೂ ತಿಳಿಸುತ್ತದೆ. ಎರಡನೆಯ ವೀರಬಲ್ಲಾಳನ ಬಗ್ಗೆ ರುದ್ರಭಟನ 'ಜಗನ್ನಾಥ ವಿಜಯ' ವೂ ತಿಳಿಸುತ್ತದೆ. ಸಂಸ್ಕೃತ ಕೃತಿಗಳಾದ ವಿದ್ಯಾಚಕ್ರವರ್ತಿಯ 'ಗದ್ಯಕರ್ಣಾಮೃತ'ವು ಎರಡನೆಯ ನರಸಿಂಹ ಮತ್ತು ವೀರ ಸೋಮೇಶ್ವರನ ಬಗ್ಗೆ ಬೆಳಕು ಚೆಲ್ಲುತ್ತದೆ. ನಂಜುಂಡ ಕವಿಯ ಕುಮಾರರಾಮಚರಿತ, ಮತ್ತಿತರ ಕೃತಿಗಳು ಕೂಡಾ ಸ್ವಲ್ಪ ಮಾಹಿತಿಯನ್ನು ನೀಡುತ್ತದೆ. ಮುಸ್ಲಿಮ್ ಚರಿತ್ರಕಾರರಿಂದ ಮೂರನೆಯ ವೀರಬಲ್ಲಾಳ ಮತ್ತು ಹೊಯ್ಸಳರ ಅವನತಿಯ ಬಗ್ಗೆ ತಿಳಿದುಬರುತ್ತದೆ. ಅಮೀರ್ ಖುಸ್ರುವಿನ ಖಜ಼ಾಇನ್-ಉಲ್-ಫುತುಃ, ಜ಼ಿಯಾವುದ್ದೀನ್‌ನ ಬರನಿ, ತಾರಿಕ್-ಐ-ಫ಼ೆರೋಜ಼್‌ನ ಶಾಹಿ ಮತ್ತು ಇಬ್ನುಬತೂತುವಿನ ರೆಹ್ಲ ಇವುಗಳಿಂದ ಹೊಯ್ಸಳರ ಅಂತಿಮ ವರ್ಷಗಳ ಚರಿತ್ರೆಯನ್ನು ಮತ್ತು ಆಳ್ವಕೆಯ ಬಗ್ಗೆ ಪುನರ್‍ರಚಿಸುವ ಕಾರ್ಯಕ್ಕೆ ನೆರವಾಗಿದೆ.

## ಅಡಿಟಿಪ್ಪಣಿಗಳು

1) Like Nellore, Chittoor, Gudur, Belgaum (Vel Gram); the Abiri a ributary of the Tungabhadra which was only perhaps Ayiri Aru; Mysore, a corruption of mahishasur, mythologically explained with reference to Mahishasura Mardini was after all a partial Sanskritization of Erumaiyur (Erumai: Buffalo) – 'Erumai' was the name of the place as well as of the chieftain thereof (Aham: 36:17). For the Tamil habit of naming places after the dominant botanical or Zoological species prevalent there, vide my paper 'Nomenclature among the Ancient Tamils'. R.P.Sethu Pillai Commemoration Volume, p.307.
2) Which was also rendered into Tamil as 'Tuvarai'; hence the confusion. But in the Tamil Sangam references to Tuvarai, Sri Krishna is no where mentioned as being associated with it.
3) Place names with the suffix 'Samudram' are many in the Tamil country, e.g., Ambasamudram, Chinnababu Samudram, Namana Samudram, Malla Samudram etc., vide also Sivasamudram in Mysore.
4) In fact in medieval South India, it was almost a fashion for many dynasties to trace their ancestry to the Yadavas thereby hoping to trace their origin to Sri Krishna. The Rashtrakutas for instance did so. This may be compared to the earlier practice of South Indian dynasties like the Pallavas and the Kadambas claiming a Brahminical origin by assuming Gotras. That such assumptions are found in lithic inscriptions or copper plates makes them no more credible.
5) "Ton Mudir Velir: Aham: 258; Puram; 24; 'Evvi Tol Kudi: Puram: 202.
6) Aham: 258; Puram; 24, 201, 102; Tol. Pura: 24; they were tribal chieftains of the Dravidian speaking stock and as old as the indigenous Tamil yeomanry.
7) Vel: The loveable one; Vel-Velir, like Kel-Kelir.

8) The Chola Ilam Chet Senni married the daughter of the Alundur Vel; and Karikalan married the daughter of the Nangur Vel; so the Velir enjoyed just connubium with the royal families; they wore short crowns called 'Kurumudi'.
9) Maduraikkanchi: 55; Padirruppattu: 30:30; 88:13.
10) Eg.Belgaum: Vel Gramam; Kivalur: Kil Velur; Perambalur: Perum Velur, etc.
11) Tol. Eluttu; Payiram.
12) Tol. Ahattinai Iyal, 32, Nach. Comm.
13) J.F.Fleet: The dynasties of the Kanarese Districts of the Bombay Presidency – Bombay Gazetteer, I, II, 1896.
14) J.D.M.Derrett: The Hoysalas, Oxford, 1956, p.15
15) A study of the Dynastic name, Hoysala: I.H.Q. XXII, pp.172-9.
16) J.D.M.Derrett: The Hoysalas, p.15.
17) Historical Inscriptions of South India; p.57
18) Puram, 201.

# ಅಧ್ಯಾಯ–3
# ಹೊಯ್ಸಳ ಸಾಮ್ರಾಜ್ಯದ ಸಾಧನೆಗಳು ಮತ್ತು ಕ್ರೋಢೀಕರಣ

3.1 ಸಳ

3.2 ಮೊದಲನೆಯ ವಿನಯಾದಿತ್ಯ

3.3 ಎರಡನೆಯ ವಿನಯಾದಿತ್ಯ

3.3.1 ಸಾಮಂತರಾಗಿ ಚಾಲುಕ್ಯರೊಡನೆ ಸಂಬಂಧಗಳು

3.3.2 ವಿನಯಾದಿತ್ಯನ ಯುದ್ಧಗಳು

3.3.3 ಸೊಸೆವೂರಿನಿಂದ ದೋರಸಮುದ್ರಕ್ಕೆ ರಾಜಧಾನಿಯ ವರ್ಗಾವಣೆ

3.4 ಎರೆಯಂಗ

3.5 ಮೊದಲನೆಯ ಬಲ್ಲಾಳ

3.5.1 ಬಲ್ಲಾಳನ ಆಕಾಂಕ್ಷೆಗಳು

3.5.2 ಜಗದೇವನ ವಿರುದ್ಧದ ಬಲ್ಲಾಳನ ಕದನ

3.5.3 ಕಲ್ಯಾಣದ ಚಾಳುಕ್ಯರ ಸಾಮಂತರ ಮೇಲೆ ಬಲ್ಲಾಳನ ದಾಳಿಗಳು

3.5.4 ಬಲ್ಲಾಳನ ಸೋಲು

3.5.5 ಕಲ್ಯಾಣಿ ಚಾಲುಕ್ಯರ ಜಹಾಗೀರುಗಳ ಮೇಲೆ ಒಂದನೇ ಬಲ್ಲಾಳನ ದಾಳಿ

3.5.6 ಬಲ್ಲಾಳನ ವಿಫಲತೆ

3.5.7 ಸಾಧನೆಗಳು

# ಅಧ್ಯಾಯ-3
# ಹೊಯ್ಸಳ ಸಾಮ್ರಾಜ್ಯದ ಸಾಧನೆಗಳು ಮತ್ತು ಕ್ರೋಢೀಕರಣ

## 3.1 ಸಳ

ನಮಗೆ ಗೊತ್ತಿರುವ ಹಾಗೆ ಸಳನು ಹೊಯ್ಸಳ ಸಾಮ್ರಾಜ್ಯದ ಮೊದಲ ಸಂಸ್ಥಾಪಕ-ನಾಗಿದ್ದಾನೆ. ಹೊಯ್ಸಳ ವಂಶದ ಎಲ್ಲ ಶಾಸನಗಳೂ ಬಹುಷಃ ಸಳನು ಹೊಯ್ಸಳ ವಂಶದ ಸಂಸ್ಥಾಪಕನೆಂದು ಉಲ್ಲೇಖಿಸುತ್ತವೆ. ದುರದೃಷ್ಟವಾಗಿ ಯಾವ ಅಧಿಕೃತ ದಾಖಲೆಗಳೂ ಸಳನ ಕಾಲದ ಬಗ್ಗೆ ನಿರ್ದಿಷ್ಟವಾಗಿ ಉಲ್ಲೇಖಿಸಿಲ್ಲ. ಹಾಗಾಗಿ ಕೆಲವು ವಿದ್ವಾಂಸರು ಸಳನ ಚಾರಿತ್ರಿಕತೆಯ ಬಗ್ಗೆ ಪ್ರಶ್ನೆಯನ್ನು ಮಾಡಿದ್ದಾರೆ.

ಜಾನ್ ಫ್ಲೈತ್‌ಫುಲ್ ಫ್ಲೀಟ್‌ನು ಹೇಳುವಂತೆ ಸಳನು ಸ್ಥಳದ ನಾಯಕನಷ್ಟೆ, ಅವನ ಇರುವಿಕೆಯು ಕೇವಲ ಒಂದು ಹೆಸರನ್ನು ಸೃಷ್ಟಿ ಮಾಡುವುದಕ್ಕೆ ಮಾತ್ರ ಮಾಡಲಾಯಿತು ಎಂದಾಗಿದೆ. ಇನ್ನೊಬ್ಬ ವಿದ್ವಾಂಸನಾದ ಸಿ ಹಯವದನರಾವ್‌ರವರು ಈ ಅಭಿಪ್ರಾಯವನ್ನು ಒಪ್ಪಿ ಅವನನ್ನು ಹೊಯ್ಸಳ ವಂಶಕ್ಕೆ ಕೇವಲ ಪುರಾಣದ ಸಂಬಂಧಿ ಎನ್ನುತ್ತಾರೆ. ಈ ಎರಡೂ ಅಭಿಪ್ರಾಯಗಳು ಅಲ್ಲಿ ಸಳನೆಂಬ ಒಬ್ಬ ಆಡಳಿತಗಾರನು ಇರಲೇ ಇಲ್ಲ ಎಂಬುದನ್ನು ಧೃಡಪಡಿಸುತ್ತದೆ. ಆದರೆ ಸಳನೆಂಬುದು ವಿಚಿತ್ರವಾದ ಹೆಸರಾಗಿರಲಿಲ್ಲ ಎಂಬುದನ್ನು ಸ್ಪಷ್ಟಪಡಿಸಬೇಕಾಗಿದೆ. ಆದರೆ ಬಹುಪಾಲು ಶಾಸನಗಳು ಸಳನು ಹೊಯ್ಸಳ ವಂಶದ ಸಂಸ್ಥಾಪಕನೆಂದು ಹೇಳುತ್ತವೆ ಎಂಬುದರ ಬಗ್ಗೆ ಒತ್ತು ಕೊಡಬೇಕಾಗುತ್ತದೆ. ಅದ್ದರಿಂದ ಸಳನೆಂಬ ಹೆಸರು ಪುರಾಣಸಂಬಂಧಿಯೂ ಅಲ್ಲ, ಅಜ್ಞಾತ ನಾಯಕನೂ ಅಲ್ಲ ಎಂದು ಹೇಳಬೇಕಾಗುತ್ತದೆ. ಆ ಕಾಲದ ಶಾಸನಗಳಿಂದ ಹೆಸರುಗಳಾದ ಸಳ, ಪೊಯ್ಸಳ, ಪೊಸಲ-ಮುರುಗ, ಪೊಯ್ಸಳ ಗೌಂಡ ಇವುಗಳ ಬಗ್ಗೆ ತಿಳಿದುಬರುತ್ತದೆ. ಅಲ್ಲದೆ ಹುಲ್ಲೂರು ಶ್ರೀನಿವಾಸ ಜೋಯಿಸರು ಕೆಲವು ದಿನಾಂಕವಿಲ್ಲದ ಶಾಸನಗಳ ಆಧಾರದಿಂದ ಸಳನು ಚಾರಿತ್ರಿಕ ವ್ಯಕ್ತಿ ಎಂದು ತೀರ್ಮಾನವನ್ನು ಕೊಡುತ್ತಾರೆ. ಇದಕ್ಕೆ ಪೂರಕವಾಗಿ ಮೊದಲನೆಯ ವಿನಯಾದಿತ್ಯನು ಸಳನ ಮಗನೆಂದು ಕೆಲವು ಶಾಸನಗಳು ಸ್ಪಷ್ಟವಾಗಿ ಹೇಳಿವೆ. ಈ ಎಲ್ಲ ಆಧಾರಗಳಿಂದ ಸಳನು ನಿಜವಾಗಿಯೂ ಚಾರಿತ್ರಿಕ ವ್ಯಕ್ತಿ ಎಂದೂ ಅವನು ಆ ವಂಶದ ಸಂಸ್ಥಾಪಕನೆಂದೂ ತೀರ್ಮಾನಕ್ಕೆ ಬರುವುದು ಸರಿಯಾಗುತ್ತದೆ.[1]

## 3.2 ಮೊದಲನೆಯ ವಿನಯಾದಿತ್ಯ (ಕ್ರಿ.ಶ.1006-1022)

ಸಳನ ಮಗನಾದ ವಿನಯಾದಿತ್ಯನು ಅವನ ನಂತರ ಸುಮಾರು ಕ್ರಿ.ಶ.1006ರಲ್ಲಿ ಪಟ್ಟಕ್ಕೆ ಬಂದನು. ಅವನು ಕಲ್ಯಾಣದ ಚಾಲುಕ್ಯರ ರಾಜಾಧಿರಾಜಾಧಿಪತ್ಯವನ್ನು ಒಪ್ಪಿಕೊಂಡನು. ಆಗ

ಚಾಲುಕ್ಯ ರಾಜನು ವಿಕ್ರಮಾದಿತ್ಯನಾಗಿದ್ದನು. ಮೊದಲನೆಯ ವಿನಯಾದಿತ್ಯನು 'ತ್ರಿಭುವನಮಲ್ಲ' ಎಂಬ ಬಿರುದನ್ನು ಹೊಂದಿ ಅವನು ತನ್ನ ರಾಜಾಧಿರಾಜನಿಗೆ ಚೋಳ ಮತ್ತು ಅವರ ಸಾಮಂತರ ವಿರುದ್ಧದ ಯುದ್ಧಗಳಲ್ಲಿ ಸಹಾಯವನ್ನು ಮಾಡಿದನು. ಟಿ.ನರಸೀಪುರ ತಾಲ್ಲೂಕಿನ ಕಳವೂರಿನಲ್ಲಿ ಅವನು ಕ್ರಿ.ಶ.1006[2] ರಲ್ಲಿ ಇಂತಹ ಒಂದು ಯುದ್ಧದಲ್ಲಿ ಚೋಳ ಸೈನ್ಯದ ಮೇಲೆ ಧಾಳಿ ಮಾಡಿದನು. ಈ ಕದನದಲ್ಲಿ ಹೊಯ್ಸಳರನ್ನು ಚೋಳ ಸೈನ್ಯಾಧಿಪತಿಯಾದ ಅಪ್ರಮೇಯನು ನುಚ್ಚುನೂರು ಮಾಡಿದನು ಮತ್ತು ಹೊಯ್ಸಳರ ಅನೇಕ ಸೈನ್ಯಾದಿಕಾರಿಗಳು ಮಡಿದರು. ಕೊನೆಯಲ್ಲಿ ಅಪ್ರಮೇಯನು ಗೆಲುವು ಸಾಧಿಸಿದನು. ಈ ಯುದ್ಧವು ಚೋಳರು ಕ್ರಿ.ಶ.1004[3]ರಲ್ಲಿ ತಲಕಾಡನ್ನು ವಶಪಡಿಸಿಕೊಂಡ ಎರಡು ವರ್ಷಗಳ ಒಳಗೆ ಎಂಬುದನ್ನು ಇಲ್ಲಿ ಪ್ರಸ್ಥಾಪಿಸಲೇಬೇಕು. ಬಹುಶಃ ಮೊದಲನೆಯ ವಿನಯಾದಿತ್ಯನು ತಲಕಾಡನ್ನು ಚೋಳರಿಂದ ವಶಪಡಿಸಿಕೊಳ್ಳಲು ಮೊದಲ ಪ್ರಯತ್ನವನ್ನು ಮಾಡಿರಬೇಕು. ಈ ವೈರತ್ವವು ಕ್ರಿ.ಶ.1114[4]ರಲ್ಲಿ ವಿಷ್ಣುವರ್ಧನನು ಜಯಿಸುವವರೆಗೂ ಮುಂದುವರೆಯಿತು. ಅವನು ತನ್ನ ರಾಜ್ಯವನ್ನು ವಿಸ್ತರಿಸಲು ಚಂಗಾಳ್ವ, ಕೊಂಗಾಳ್ವ ಮತ್ತು ಚೋಳ ಸಾಮಂತರ ವಿರುದ್ಧ ಯುದ್ಧವನ್ನು ಮಾಡಿದನು.[5]

## ನೃಪಕಾಮ

ನೃಪಕಾಮನಿಗೆ ಕಾಮಹೊಯ್ಸಳ ಎಂದೂ ಹೆಸರಿದೆ. ಅವನು ಮೊದಲನೆಯ ವಿನಯಾದಿತ್ಯನ ಮಗ. ಅವನು ಕ್ರಿ.ಶ.1022ರಲ್ಲಿ ಸಿಂಹಾಸನವನ್ನೇರಿದನು. ಮಹಾಮಂಡಲೇಶ್ವರ ಎಂಬ ಬಿರುದನ್ನು ಪಡೆದ ಹೊಯ್ಸಳ ರಾಜರಲ್ಲಿ ಇವನು ಮೊದಲಿಗನಾಗಿದ್ದನು. ಅವನಿಗೆ "ರಾಜಮಲ್ಲ ಪೆರುಮಾಡಿ" ಎಂಬ ಗಂಗರ ವಿಶಿಷ್ಟವಾದ ಬಿರುದಿತ್ತು. ಅವನ ಆಳ್ವಿಕೆಯ ಏಳನೆಯ ವರ್ಷದ ಒಂದು ಶಾಸನದಲ್ಲಿ ಅವನ ಹೆಸರನ್ನು ರಾಜಮಲ್ಲ ಪೆರುಮಾಡಿ ಯಾನಿಪಕಾಮ ಹೊಯ್ಸಳ ಎಂದು ಹೇಳಿದೆ. ಈ ಬಿರುದು ಈ ಎರಡು ಮನೆತನದವರೊಡನೆ ಇದ್ದ ಆಪ್ತ ಸಂಬಂಧವನ್ನು ಸೂಚಿಸುತ್ತದೆ. ಇವನ ಆಳ್ವಿಕೆಯ ಕಾಲದಲ್ಲಿ ಕೊಂಗಾಳ್ವರು ಹೊಯ್ಸಳ ರಾಜ್ಯದ ಪ್ರದೇಶದ ಮೇಲೆ ಧಾಳಿಯನ್ನು ಮಾಡಿದರು ಮತ್ತು ನೃಪಕಾಮನು ಅವರನ್ನು ಯಶಸ್ವಿಯಾಗಿ ಹೊರಗಟ್ಟಿದನು. ಈ ಯುದ್ಧದಲ್ಲಿ ಅವನ ಸೈನ್ಯದ ದಂಡಾಧಿಕಾರಿಯು ಕೊಂಗಾಳ್ವರನ್ನು ಹಿಂದಕ್ಕಟ್ಟುವ ಕೆಲಸದಲ್ಲಿ ಬಹುಮುಖ್ಯ ಪಾತ್ರವನು ವಹಿಸಿದ್ದನು. ನೃಪಕಾಮನು ವಿಷ್ಣುವರ್ಧನನ ಮಂತ್ರಿಯೂ, ಸೈನ್ಯದ ದಂಡಾಧಿಕಾರಿಯೂ ಆದ ಗಂಗರಾಜನ ಮಗನಾದ ಎಚಿಮ ಅಥವ ಎಚಿಕಾಮನಿಗೆ ಆಶ್ರಯವನ್ನು ನೀಡಿದ್ದನೆಂದು ಹೇಳಲಾಗಿದೆ. ಎರಡನೆಯ ವಿನಯಾದಿತ್ಯನು ನೃಪಕಾಮನ ನಂತರ ರಾಜ್ಯಾಧಿಕಾರವನ್ನು ವಹಿಸಿಕೊಂಡನು.

## ೩.೩ ಎರಡನೆಯ ವಿನಯಾದಿತ್ಯ

ವಿನಯಾದಿತ್ಯನು ಹೊಯ್ಸಳ ವಂಶದ ಮುಖ್ಯವಾದ ರಾಜನಾಗಿದ್ದನು. ಅವನ ಬಹುಮಟ್ಟಿಗೆ ಎಲ್ಲ ಹೊಯ್ಸಳ ವಂಶದ ಶಾಸನಗಳಲ್ಲಿಯೂ ಪ್ರಸ್ತಾಪಿಸಿದೆ. ಅವನ ಐವತ್ತು ವರ್ಷಕ್ಕೂ ಹೆಚ್ಚಿನ ಆಳ್ವಿಕೆಯ ಕಾಲದಲ್ಲಿ ಅವನ ಸಾಮ್ರಾಜ್ಯವು ವಿಸ್ತಾರಗೊಂಡಿತು ಅಲ್ಲದೇ ಅಂದಿನ ಶಕ್ತಿ ರಾಜಕಾರಣದಲ್ಲಿ ಹೊಯ್ಸಳ ಅಧಿಕಾರವು ಸಾಕಷ್ಟು ಪ್ರಭಾವವನ್ನು ಹೆಚ್ಚಿಸಿ–ಕೊಂಡಿತು. ಎರಡನೆಯ ವಿನಯಾದಿತ್ಯನು ಸಿಂಹಾಸನಕ್ಕೆ ಏರುವ ಸಮಯದಲ್ಲಿ ಕಲ್ಯಾಣದ ಚಾಲುಕ್ಯರು ಮತ್ತು ಚೋಳರ ನಡುವಿನ ವೈರತ್ವವು ಅವರವರ ಮೇಲುಗೈಯನ್ನು ಸಾಧಿಸಲು ನಡೆಯುತ್ತಲೇ ಇತ್ತು. ವಿನಯಾದಿತ್ಯನು ಈ ಸಂದರ್ಭವನ್ನು ತನ್ನ ರಾಜ್ಯದ ವಿಸ್ತರಣೆಗೆ ಬಳಸಿಕೊಂಡನು.

### ೩.೩.1 ಸಾಮಂತರಾಗಿ ಚಾಲುಕ್ಯರೊಡನೆ ಸಂಬಂಧಗಳು

ಎರಡನೆಯ ವಿನಯಾದಿತ್ಯನು ಅವರ ಹಿಂದಿನವರಂತೆ ಕಲ್ಯಾಣದ ಚಾಳುಕ್ಯರ ಸಾಮಂತತನವನ್ನು ಮುಂದುವರಿಸಿದನು. ಮೊದಲನೆಯ ಸೋಮೇಶ್ವರ, ಎರಡನೆಯ ಸೋಮೇಶ್ವರ ಮತ್ತು ನಾಲ್ಕನೆಯ ವಿಕ್ರಮಾದಿತ್ಯ ಇವರು ಎರಡನೆಯ ವಿನಯಾದಿತ್ಯನ ಸಮಕಾಲೀನರಾಗಿದ್ದರು. ಅವನು ಚಾಲುಕ್ಯರೊಡನೆ ವಿವಾಹ ಸಂಬಂಧವನ್ನು ಮಾಡಿ ತನ್ನ ಗೌರವವನ್ನು ಹೆಚ್ಚಿಸಿಕೊಂಡನು. ನಾಲ್ಕನೆಯ ವಿನಯಾದಿತ್ಯನ ತಾಯಿಯಾದ ತನ್ನ ಸಹೋದರಿ ಮಹಾದೇವಿಯು ಎರಡನೆಯ ಚಾಳುಕ್ಯ ಸೋಮೇಶ್ವರನ ರಾಣಿಯಾಗಿದ್ದಳು. ಈ ಆಪ್ತ ಸಂಬಂಧವು ಅವನ ಸ್ಥಾನವನ್ನು ಬಲಪಡಿಸಿತಲ್ಲದೆ ಅದು ಅವನ ಗಡಿಯ ವಿಸ್ತರಣದಲ್ಲಿ ಪರಿಣಮಿಸಿತು. ಅವನು ಕೂಡಾ ತ್ರಿಭುವನಮಲ್ಲ ಎಂಬ ಬಿರುದನ್ನು ಪಡೆದನು.[6]

### ೩.೩.2 ವಿನಯಾದಿತ್ಯನ ಯುದ್ಧಗಳು

ವಿನಯಾದಿತ್ಯನು ಕೊಂಗಾಳ್ವರು ಮತ್ತು ಚೆಂಗಾಳ್ವರೊಡನೆ ಹೋರಾಟವನ್ನು ಮುಂದುವರೆಸಿದನು ಮತ್ತು ಅವರ ರಾಜ್ಯದ ಬಹುಭಾಗವನ್ನು ವಶಪಡಿಸಿಕೊಂಡನು. ಹೀಗಾಗಿ ಕಾವೇರಿ ಮತ್ತು ಕಪಿಲಾ ನದಿಗಳ ನಡುವಿನ ಬಹುಪಾಲು ಪ್ರದೇಶಗಳು ಇವನ ಆಳ್ವಿಕೆಗೆ ಒಳಪಟ್ಟವು. ಕಾವೇರಿ ತೀರದಲ್ಲಿ ಇವನು ಚೋಳ ಸೈನ್ಯಾಧಿಕಾರಿಗಳನ್ನು ಸೋಲಿಸಿ ಅವನ ಆಧಿಪತ್ಯವನ್ನು ಶ್ರೀರಂಗಪಟ್ಟಣದವರೆಗೆ ವಿಸ್ತರಿಸಿಕೊಂಡನು. ಚೋಳರು ಮತ್ತು ಅವರ ಸಾಮಂತರಾಜರುಗಳೊಡನೆ ವಿನಯಾದಿತ್ಯನು ಮಾಡಿದ ಯುದ್ಧಗಳ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳಿಲ್ಲದಿದ್ದರೂ ಕೂಡ ಅವನು ತನ್ನ ಸಾಮ್ರಾಜ್ಯವನ್ನು ಗಂಗವಾಡಿಯ ಬಹುಭಾಗ–

ದೊಂದಿಗೆ ಬೆಳೆಸಿಕೊಂಡನು ಎಂಬುದು ತಿಳಿದುಬರುತ್ತದೆ. ಸುಮಾರು ಕ್ರಿ.ಶ.1068[7]ರ ಸುಮಾರಿಗೆ ವಿನಯಾದಿತ್ಯನು ಸಂತರ ದೊರೆ ವೀರಸಂತರದೇವನ ಮೇಲೆ ಧಾಳಿಯನ್ನು ಮಾಡಿದನು ಮತ್ತು ಸಂತರ ದೊರೆಯ ದಕ್ಷಿಣ ಪ್ರದೇಶಗಳನ್ನು ವಶಪಡಿಸಿಕೊಂಡನು. ಈ ಎಲ್ಲ ಜಯಮಾಲೆಗಳ ಪರಿಣಾಮವಾಗಿ ಹೊಯ್ಸಳ ರಾಜ್ಯವು ವಿಸ್ತರಿಸುತ್ತಾ ಹೋಯಿತು. ಹೊಯ್ಸಳರ ಸೈನ್ಯದ ಶಕ್ತಿಯೂ ಕೂಡ ಬೆಳೆಯಿತು. ಅವನಿಗೆ ಮಹಾಸಂಧಿವಿಗ್ರಹಿ ಮತ್ತು ದಂಡನಾಯಕ ಪೋಚಿಮಯ್ಯರು ಒಳ್ಳೆಯ ಸೇವೆಯನ್ನು ಮಾಡಿದರು.

### 3.3.3 ಸೊಸೆವೂರಿನಿಂದ ದೋರಸಮುದ್ರಕ್ಕೆ ರಾಜಧಾನಿಯ ವರ್ಗಾವಣೆ

ಎರಡನೆಯ ವಿನಯಾದಿತ್ಯನು ತನ್ನ ರಾಜಧಾನಿಯನ್ನು ಸೊಸೆವೂರಿನಿಂದ ದೋರ ಸಮುದ್ರಕ್ಕೆ ಅವನ ಆಳ್ವಿಕೆಯ ಅಂತಿಮ ಘಟ್ಟದಲ್ಲಿ ವರ್ಗಾಯಿಸಿದನು. ಅವನು ದೋರ- ಸಮುದ್ರವೇ ರಾಜ್ಯದ ಎಲ್ಲ ವ್ಯವಹಾರಗಳನ್ನು ನಿಭಾಯಿಸಲು ಸೂಕ್ತವೆಂದು ತೀರ್ಮಾನಿಸಿದನು. ಅದು ಅತ್ಯುತ್ತಮ ಪ್ರದೇಶದಲ್ಲಿತ್ತು. ದೋರಸಮುದ್ರವು ರಾಜಧಾನಿಯಾಗುತ್ತಿದ್ದಂತೆ ಹತ್ತಿರದ ಪಟ್ಟಣವಾದ ಬೇಲೂರು ಬೃಹತ್ತಾಗಿ ಬೆಳೆಯತೊಡಗಿತು. ದೋರಸಮುದ್ರವು ಈ ವಂಶದ ಆಳ್ವಿಕೆಯ ಕೊನೆಯವರೆಗೆ ರಾಜಧಾನಿಯಾಗಿ ಉಳಿಯಿತು. ಬೇಲೂರು ಮತ್ತು ದೋರಸಮುದ್ರ- ವೆರಡೂ ವಿನಯಾದಿತ್ಯನ ಆಳ್ವಿಕೆಯ ಕಾಲದಲ್ಲಿ ಯಗಚಿಯ ಕಾಲುವೆಯ ಮೂಲಕ ಸಂಬಂಧವನ್ನು ಹೊಂದಿದ್ದು ಇದು ಹೊಸ ರಾಜಧಾನಿಗೆ ನೀರನ್ನು ಪೂರೈಸುತ್ತಿತ್ತು. ಎರಡನೆಯ ವಿನಯಾದಿತ್ಯನೂ ಕೂಡಾ ರಾಜಧಾನಿ ದೋರಸಮುದ್ರವನ್ನು ಬಲಪಡಿಸುವ ಕಾರ್ಯವನ್ನು ಕೈಗೆತ್ತಿಕೊಳ್ಳಬೇಕಿತ್ತು. ಅವನು ಸಾರ್ವಜನಿಕ ಕಾರ್ಯಗಳನ್ನು ಮಾಡಿಸುವ ಮತ್ತು ಅದನ್ನು ನೋಡಿಕೊಳ್ಳುವ ಬಗೆಗೆ ಹೆಚ್ಚಿನ ಆಸಕ್ತಿಯನ್ನು ತೋರಿಸಿದನು. ಕೃಷಿಗಾಗಿ ಅನೇಕ ಕೆರೆಗಳು ಕಟ್ಟಲ್ಪಟ್ಟವು ಮತ್ತು ಕಾಲುವೆಗಳು ತೋಡಲ್ಪಟ್ಟವು.

ಎರಡನೆಯ ವಿನಯಾದಿತ್ಯನ ರಾಣಿಯು ಕೆಳೆಯಬ್ಬರಸಿಯಾಗಿದ್ದಳು. ಒಬ್ಬ ಪೆರಿಯಲಾದೇವಿ ಎಂಬುವವಳು ಇನ್ನೊಬ್ಬ ರಾಣಿಯಾಗಿದ್ದಳು. ಯುವರಾಜ ಎರೆಯಂಗನು ಕೆಳೆಯಬ್ಬೆಯ ಮತ್ತು ವಿನಯಾದಿತ್ಯನ ಮಗನಾಗಿದ್ದನು. ಅವನು ರಾಜನಾಗಿ ಮಹತ್ವದ ಪಾತ್ರವನ್ನು ವಹಿಸಿದನು. ಅವನು ಚಾಳುಕ್ಯರ ಆಸ್ಥಾನದಲ್ಲಿ "ವಿಕ್ರಮಾದಿತ್ಯ-ತನ್ನ ತಂದೆಯ ಸಹಾಯಕನಾಗಿ" ಕಾರ್ಯವನ್ನು ನಿರ್ವಹಿಸಿದನು. ಅವನು ಚಾಳುಕ್ಯರು ಮಾಡಿದ ಅನೇಕ ಯುದ್ಧಗಳಲ್ಲಿ ಭಾಗವಹಿಸಿದನು. ಕೇಂದ್ರ ಭಾರತದ ಮಾಳ್ವ ಮತ್ತು ಇತರ ರಾಜರುಗಳ ವಿರುದ್ಧ

ಅವನು ಒಂದು ದಂಡಯಾತ್ರೆಯನ್ನು ಕೈಗೊಂಡನು. ಅವನು ಅವರನ್ನೆಲ್ಲಾ ಸೋಲಿಸಿ ಧನ್ಯತೆಯನ್ನು ಗಳಿಸಿಕೊಂಡನು.

ಹೀಗೆ ಎರಡನೆಯ ವಿಕ್ರಮಾದಿತ್ಯನು ಹೊಯ್ಸಳ ರಾಜ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಲು ಕಾರಣನಾದನು. ಅವನ ಆಳ್ವಿಕೆಯ ಕಾಲದಲ್ಲಿ ಅವನ ರಾಜ್ಯದ ಎಲ್ಲೆಗಳು ವಿಸ್ತರಿಸಿದವು. ಅವನು ತನ್ನ ರಾಜಧಾನಿಯನ್ನು ಸೊಸೆವೂರಿನಿಂದ ದೋರಸಮುದ್ರಕ್ಕೆ ವರ್ಗಾಯಿಸಿದನು. ಅನೇಕ ಸಾಮಂತರಿಗೆ ಹೊಯ್ಸಳರ ಪ್ರಭಾವವು ಅರಿವಾಗತೊಡಗಿತು. ಅವನ ಆಳ್ವಿಕೆಯಲ್ಲಿ ಅನೇಕ ದೇವಾಲಯಗಳು, ಬಸದಿಗಳೂ ಮತ್ತು ಕಾಲುವೆಗಳು ಕಟ್ಟಲ್ಪಟ್ಟವು. ಯಗಚಿ ನದಿಗೆ ಕಟ್ಟಿದ ಕಾಲುವೆಗಳಿಂದ ಬೇಲೂರು ಮತ್ತು ದೋರಸಮುದ್ರಗಳೆರಡಕ್ಕೂ ನೀರಿನ ಸರಬರಾಜು ಆಗುತ್ತಿತ್ತು. ಡಾ||ಡೇರ್‍ರೆಟ್‌ರವರು "ವಿನಯಾದಿತ್ಯನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯದ ಶಕ್ತಿ ಮತ್ತು ಸಂಪನ್ಮೂಲಗಳು ಹೆಚ್ಚಿದವು ಅಲ್ಲದೆ ಸ್ಥಿರವಾದವು" ಎಂಬುದಾಗಿ ಸರಿಯಾಗಿಯೇ ಅಭಿಪ್ರಾಯಪಟ್ಟಿದ್ದಾರೆ. ಅವನ ದೀರ್ಘವಾದ ಆಳ್ವಿಕೆಯು ಕ್ರಿ.ಶ.1098ರಲ್ಲಿ ಕೊನೆಗೊಂಡಿತು ಮತ್ತು ಅವನ ಉತ್ತರಾಧಿಕಾರಿಯಾಗಿ ಅವನ ಮೊಮ್ಮಗನಾದ ಮೊದಲನೆಯ ಬಲ್ಲಾಳನು ಪಟ್ಟಕ್ಕೇರಿದನು.

### 3.4 ಎರೆಯಂಗ ಕ್ರಿ.ಶ.1098-1100)

ಎರೆಯಂಗನು ಸಿಂಹಾಸನಕ್ಕೆ ಏರುವ ಹೊತ್ತಿಗೆ ಅವನಿಗೆ ಸಾಕಷ್ಟು ವಯಸ್ಸಾಗಿತ್ತು. ಈ ಮುಂಚೆಯೇ ವಿವರಿಸಿದಂತೆ ಅವನು ರಾಜನಾಗಿ ಅತ್ಯಂತ ಬುದ್ಧಿವಂತನಾಗಿದ್ದನು. ಅವನು ಕೇವಲ ಎರಡು ವರ್ಷ ಕಾಲ ಮಾತ್ರ ರಾಜ್ಯಭಾರ ಮಾಡಿದನು. ಅವನಿಗೆ ಇಬ್ಬರು ರಾಣಿಯರಿದ್ದರು; ಈಚಲಾದೇವಿ ಮತ್ತು ಮಹಾದೇವಿ. ಅವನಿಗೆ ಈಚಲಾದೇವಿಯಿಂದ ಬಲ್ಲಾಳ, ಬಿಟ್ಟಿದೇವ ಮತ್ತು ಉದಯಾದಿತ್ಯ ಎಂಬ ಮೂವರು ಮಕ್ಕಳಿದ್ದರು. ಎರೆಯಂಗನು ಅನೇಕ ಕೆರೆಗಳನ್ನು ಮತ್ತು ಜೈನ ಬಸದಿಗಳನ್ನೂ ಕಟ್ಟಿಸಿದನೆಂದು ತಿಳಿಯುತ್ತದೆ.

### 3.5 ಮೊದಲನೆಯ ಬಲ್ಲಾಳ (ಕ್ರಿ.ಶ.1100-1108)

ಮೊದಲನೆಯ ಬಲ್ಲಾಳನು ಎರಡನೆಯ ವಿನಯಾದಿತ್ಯನ ಮೊಮ್ಮಗನಾಗಿದ್ದನು. ಅವನೂ ಸಿಂಹಾಸನವನ್ನು ಏರುವ ವೇಳೆಗೆ ಸಾಕಷ್ಟು ವಯಸ್ಸಾಗಿತ್ತು. ಅವನು ಕೇವಲ ಎಂಟು ವರ್ಷಗಳ ಕಾಲ ಮಾತ್ರ ಆಳಿದನು. ಆಳ್ವಿಕೆಯ ಕಾಲವು ಕಡಿಮೆಯಾಗಿದ್ದರೂ ಅದರಲ್ಲಿ ಸೈನ್ಯದ ಚಟುವಟಿಕೆಗಳು ಜಾಸ್ತಿಯಾಗಿದ್ದವು. ಮೊದಲನೆಯ ಬಲ್ಲಾಳನಿಗೆ ಅನುವಂಶಿಕವಾದ ಕೊಂಕಣ, ಬಯಲನಾಡು ಸವಿಮಲೆಗಳು ಸೇರಿದ ರಾಜ್ಯವಿತ್ತು. ಅವನು ಪಟ್ಟಕ್ಕೆ ಏರಿದ ಕೂಡಲೇ ತನ್ನ

ಹಿಂದಿನವರ ರಾಜಧಾನಿಯಾದ ಸೊಸೆವೂರಿಗೆ ಭೇಟಿ ಕೊಟ್ಟನು. ಅವನು ಬರೆಸಿದ ಒಂದು ಶಾಸನವು ಅವನು ತನ್ನ ರಾಜ್ಯಭಾರವನ್ನು ಬೇಲೂರಿನಿಂದ ಮಾಡುತ್ತಿದ್ದನು ಎಂದು ಹೇಳುತ್ತಿದೆ. ಇದರಿಂದ ಆ ವೇಳೆಗಾಗಲೇ ಬೇಲೂರು ಅಭಿವೃದ್ಧಿಯಾಗಿತ್ತು ಮತ್ತು ಅದು ಹೊಯ್ಸಳರ ಇನ್ನೊಂದು ಅಥವ ಬದಲು ರಾಜಧಾನಿಯಾಗಿ ಕಾರ್ಯ ನಿರ್ವಹಿಸುತ್ತಿತ್ತು ಎನ್ನಲಾಗಿದೆ.

### 3.5.1 ಬಲ್ಲಾಳನ ಆಕಾಂಕ್ಷೆಗಳು

ಮೊದಲನೆಯ ಬಲ್ಲಾಳನ ಆಳ್ವಿಕೆಯು ಹೊಯ್ಸಳ ರಾಜ್ಯದ ಗಡಿಗಳನ್ನು ವಿಸ್ತರಿಸುವುದಕ್ಕೆ ಪ್ರಸಿದ್ಧವಾಗಿಲ್ಲ. ಅದರ ಗಡಿಗಳು ಎರಡನೆಯ ವಿನಯಾದಿತ್ಯನ ಕಾಲದಲ್ಲಿದ್ದಷ್ಟೇ ಇತ್ತು. ಅವನು ತನ್ನ ಸ್ವಾತಂತ್ರದ ಬಗ್ಗೆ ಗಮನ ಕೊಟ್ಟಿದ್ದ ಎನಿಸುತ್ತಿದೆ. ಮೊದಲನೆಯ ಬಲ್ಲಾಳನ ಹಿಂದಿನವರು ಕಲ್ಯಾಣದ ಚೋಳರಿಗೆ ಸಾಮಂತರಾಗಿ ಸೇವೆ ಸಲ್ಲಿಸಿದರು. ಅವನು ಕೂಡಾ ಸಾಮಂತ–ನಾಗಿಯೇ ತನ್ನ ವೃತ್ತಿ (ರಾಜನಾಗಿ) ಯನ್ನು ಪ್ರಾರಂಭಿಸಿದನು. ಆದರೆ ಅನಂತರ ಅವನು ಸ್ವಾತಂತ್ರದ ಬಗ್ಗೆ ಆಲೋಚಿಸಿದನು. ವಿಕ್ರಮಾದಿತ್ಯನ ಆಳ್ವಿಕೆಯು ಶಾಂತಿಯುತವಾಗಿತ್ತು. ಬಹುಶಃ ಇದು ಬಲ್ಲಾಳನನ್ನು ಅವನ ಪುಕ್ಕಲತನಕ್ಕೆ ಹೆಚ್ಚಾಯಿತು ಎನ್ನಿಸಿರಬೇಕು. ಇನ್ನೊಂದೆಡೆ–ಯಿಂದ ವಿಕ್ರಮಾದಿತ್ಯನು ಕೂಡ ಹೊಯ್ಸಳರ ರಾಜ್ಯದ ಬೆಳವಣಿಗೆಗಳನ್ನು ಗಮನಿಸುತ್ತಿದ್ದನು. ಅವನು ಹೊಯ್ಸಳರು ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ ಎಂದು ಅರ್ಥಮಾಡಿ ಕೊಂಡನು. ಅವನು ಅವರ ವಿಧೇಯತೆಯನ್ನು ಅನುಮಾನಿಸತೊಡಗಿದನು. ಅವನು ಅವರ ಚಟುವಟಿಕೆಗಳಿಗೆ ತಡೆಹಾಕುವ ಒಂದು ಸಂದರ್ಭಕ್ಕಾಗಿ ಕಾಯತೊಡಗಿದನು. ಅನೇಕ ಹೊಯ್ಸಳ ದಾಖಲೆಗಳು ಮೊದಲನೆಯ ಬಲ್ಲಾಳ ಮತ್ತು ಅವನ ಸೋದರ ವಿಷ್ಣುವರ್ಧನನ ಸಾಧನೆಗಳನ್ನು ವೈಭವೀಕರಿಸಿವೆ. ಅವರು ಗೋವ ಮತ್ತು ಹಾನಗಲ್ಲಿನ ಕದಂಬರು ಮತ್ತು ಉಚ್ಚಂಗಿಯ ಪಾಂಡ್ಯರ ಮತ್ತು ಚಾಳುಕ್ಯರ ಪರವಾಗಿ ಸ್ವಾಮಿನಿಷ್ಠೆ ಹೊಂದಿರುವವರ ವಿರುದ್ಧ ಯುದ್ಧ ಮಾಡಿದರೆಂದು ಹೇಳಕೊಂಡಿದ್ದಾರೆ.

### 3.5.2 ಜಗದೇವನ ವಿರುದ್ಧದ ಬಲ್ಲಾಳನ ಕದನ

ಹೊಯ್ಸಳರ ಮತ್ತು ವಿಕ್ರಮಾದಿತ್ಯರ ನಡುವೆ ಯಾವ ಸಂದರ್ಭದಲ್ಲಿ ಯುದ್ಧವು ನಡೆಯಿತೆಂಬುದನ್ನು ಹೇಳಲು ಸಾಧ್ಯವಿಲ್ಲ. ಹೇಗೇ ಇದ್ದರೂ ಮೊದಲನೆಯ ಬಲ್ಲಾಳನು ತನ್ನ ಆಳ್ವಿಕೆ ಆರಂಭ ಕಾಲದಲ್ಲಿಯೇ ಜಗದ್ದೇವನ ಧಾಳಿಯನ್ನು ಎದುರಿಸಬೇಕಾಯಿತು. ರಾಜಕುಮಾರನಾದ ಪರಮಾರನು ಅವನ ದೇಶವನ್ನು ಬಿಟ್ಟು ಚಾಲುಕ್ಯರಲ್ಲಿ ಆಶ್ರಯವನ್ನು ಪಡೆದನು. ಅವನಿಗೆ ಆಂಧ್ರದಲ್ಲಿರುವ ಕಳುನುಪಕ (ಕೊಲ್ಲಿಪಾಕೆ) ಪ್ರದೇಶವನ್ನು ಸಾಮಂತನಾಗಿ

ಆಳುವ ಜವಾಬ್ದಾರಿಯನ್ನು ಕೊಟ್ಟನು. ಆರನೆಯ ವಿಕ್ರಮಾದಿತ್ಯನ ಸೂಚನೆಯ ಮೇರೆಗೆ ಜಗದ್ದೇವನು ಹೊಯ್ಸಳ ಮೇಲೆ ಅವನ ಸಹೋದರರಾದ ವಿಷ್ಣುವರ್ಧನ ಮತ್ತು ವಿನಯಾದಿತ್ಯರ ಸಹಾಯದಿಂದ ಧಾಳಿಯನ್ನು ಮಾಡಿದನು. ಆದರ ಇದು ನಿರೀಕ್ಷಿತ ಪಲಿತಾಂಶವನ್ನು ಕೊಡಲಿಲ್ಲ. ಹೊಯ್ಸಳರ ಶಾಸನವೊಂದು ಇಬ್ಬರ ನಡುವಿನ ಈ ಭೀಕರ ಯುದ್ಧವನ್ನು ವಿವರಿಸುತ್ತದೆ. ಈ ಯುದ್ಧದಲ್ಲಿ ಮೊದಲನೆಯ ಬಲ್ಲಾಳನು ಮೇಲುಗೈಯನ್ನು ಪಡೆದನು. ಅವನು ಚಾಳುಕ್ಯರನ್ನು ಸೋಲಿಸಿ ಹಿಂದಕ್ಕಟ್ಟಿದನು. ಹೊಯ್ಸಳ ಸಹೋದರರು ಈ ಯುದ್ಧದಲ್ಲಿ ಹೆಚ್ಚು ಯುದ್ಧನೈಪುಣ್ಯವನ್ನು ಪ್ರದರ್ಶಿಸಿದರು. ಈ ಕಾಳಗದ ಪರಿಣಾಮವಾಗಿ ಹೊಯ್ಸಳರ ಮತ್ತು ಚಾಳುಕ್ಯರ ನಡುವಿನ ಸಂಬಂಧವು ಕೆಟ್ಟುಹೋಯಿತು. ಜಗದ್ದೇವನನ್ನು ಗುರುತಿಸುವುದರಲ್ಲಿ ಬಹಳಷ್ಟು ವಿರೋದಾಭಾಸಗಳಿವೆ. ಹೊಯ್ಸಳರ ಈಚೆಗಿನ ಶಾಸನಗಳೂ ಅವನನ್ನು ಮಾಳವ ರಾಜಕುಮಾರನೆಂದು ಉಲ್ಲೇಖಿಸಿವೆ. ಆದರೆ ಈ ವಿಚಾರವನ್ನು ಬಹಳಷ್ಟು ವಿದ್ವಾಂಸರು ಒಪ್ಪಿಲ್ಲ. ಜಗದ್ದೇವನು ಕಲ್ಯಾಣದ ಚಾಲುಕ್ಯರ ಸಾಮಂತರಾದ ಶಿವಮೊಗ್ಗ ಜಿಲ್ಲೆಯ ಪೊಟ್ಟಿಪೊಂಬುರ್ಚದ ಸಂತಾರರ ದೊರೆಯಾಗಿರಬೇಕೆಂದು ಡಾ॥ ರೈಸ್ ಮತ್ತು ಫ್ಲೀಟ್‌ರವರು ಅಭಿಪ್ರಾಯಪಟ್ಟಿದ್ದಾರೆ. ವಿಕ್ರಮಾದಿತ್ಯನು ಆಶ್ರಯದಾತನಾಗಿ ಮತ್ತು ಸಾಮಂತತೆಯನ್ನು ಕೊಟ್ಟಿದ್ದ ಪರಮಾರ ರಾಜಕುಮಾರನೆಂದು ಸರಿಯಾಗಿ ಗುರುತಿಸಿದ್ದಾರೆ. ಶಾಸನಗಳು ಜಗದ್ದೇವನ ವಿರುದ್ಧ ಹೋರಾಡಿದ ಹೊಯ್ಸಳರ ಸಾಧನೆಗಳನ್ನು ಶ್ಲಾಘಿಸಿವೆ.[8] ಅವನು ಕುಳಿತಿದ್ದ ಆನೆಯು ಕಿರಿಚುವಂತೆ ಮಾಡಿದ ಕುದುರೆ ಸವಾರನ ಕೀರ್ತಿಯನ್ನು ಕೊಂಡಾಡಿದ್ದಾನೆ. ಈ ಕುದುರೆಸವಾರನು ಸ್ವತಹ ವೀರಬಲ್ಲಾಳನೇ ಆಗಿದ್ದನು. ವಿಷ್ಣುವರ್ಧನನ್ನು ಶತ್ರುವರ್ಗದ ಸೈನ್ಯವನ್ನು ಸದೆಬಡಿಯುವ ಭೈರವ ಎಂದು ವರ್ಣಿಸಲಾಗಿದೆ.

ನಮಗೆ ಈ ಯುದ್ಧಗಳು ನಡೆದ ದಿನಾಂಕವನ್ನು ಗುರುತಿಸಲು ಸಾಧ್ಯವಾಗಿಲ್ಲ. ಎರೆಯಂಗನು ಕ್ರಿ.ಶ.1100ರ ವರೆಗೆ ಆಳ್ವಿಕೆಯನ್ನು ಮಾಡಿದನು. ಇವನ ನಂತರ ಮೊದಲನೆಯ ಬಲ್ಲಾಳನು ಅಧಿಕಾರಕ್ಕೆ ಬಂದನು. ಅವನು ಪಟ್ಟಕ್ಕೆ ಬಂದ ನಂತರವೇ ಪರಮಾರ ಮುಖ್ಯಸ್ಥರೊಡನೆ ಯುದ್ಧ ಮಾಡಲು ಸಾಧ್ಯವಾಯಿತು. ಇದು ಕ್ರಿ.ಶ.1100 ಮತ್ತು 1108ರ ನಡುವೆ ನಡೆದಿರಬೇಕು ಎಂದು ಮೊದಲು ಅಭಿಪ್ರಾಯಪಡಲಾಗಿತ್ತು.

### 3.5.3 ಕಲ್ಯಾಣದ ಚಾಳುಕ್ಯರ ಸಾಮಂತರ ಮೇಲೆ ಬಲ್ಲಾಳನ ಧಾಳಿಗಳು

ಮೊದಲನೆಯ ಬಲ್ಲಾಳನು ಜಗದ್ದೇವನ ಮೇಲಿನ ಜಯದ ನಂತರ ಅವನು ಇತರ ಸಾಮಂತ ರಾಜರ ಮೇಲೆ ಆಕ್ರಮಣವನ್ನು ಮಾಡಲು ಯೋಜಿಸಿದನು. ಈಗಿನ ಕೊಡಗು

ಮತ್ತು ಮೈಸೂರು ಜಿಲ್ಲೆಯ ಕೆಲವು ಪ್ರದೇಶದಲ್ಲಿದ್ದ ಸಣ್ಣ ಸೇನಾಧಿಕಾರಿಗಳಾದ ಚೆಂಗಾಳ್ವರ ಮೇಲೆ ಕದನ ಮಾಡಿದನು. ಕ್ರಿ.ಶ.1103[9] ರ ಸುಮಾರಿಗೆ ಈ ಸೇನಾನಾಯಕರು ಸದಾ ಕಿರುಕುಳ ಕೊಡುವವರಾಗಿದ್ದು ಅವನ ಧಾಳಿಗೆ ಸೋತು ಶರಣಾಗತರಾಗುವುದು ಅನಿವಾರ್ಯವಾಯಿತು. ಅನಂತರ ಅವನು ಆಳ್ವಖೇಡದ ಮೇಲೆ ಧಾಳಿಯನ್ನು ಮಾಡಿ ಅದನ್ನು ವಶಪಡಿಸಿಕೊಂಡನು. ಈ ಧಾಳಿಗಳಿಂದ ಉತ್ತೇಜಿತನಾದ ಇವನು ಉಚ್ಚಂಗಿಯ ಪಾಂಡ್ಯರ ಮೇಲೆ ಯುದ್ಧವನ್ನು ಮಾಡಿ ಬೆಳವೊಲ ದೇಶವನ್ನು ಆಕ್ರಮಿಸುವ ಹಂತವಾಗಿ ಅವನು ತುಂಗಭದ್ರೆಯನ್ನು ದಾಟಿದನು.

### 3.5.4 ಬಲ್ಲಾಳ ಸೋಲು

ಮೊದಲನೆಯ ಬಲ್ಲಾಳನ ಚಲನವಲನಗಳನ್ನು ಗಮನಿಸುತ್ತಿದ್ದ ನಾಲ್ಕನೆಯ ವಿಕ್ರಮಾದಿತ್ಯನು ಅವನಿಗೆ ಪಾಠವನ್ನು ಕಲಿಸಲು ತೀರ್ಮಾನಿಸಿದನು. ಬಲ್ಲಾಳನ ಈ ಅಧಿಕಾರವನ್ನು ಮೀರುವ ಪ್ರವೃತ್ತಿಯನ್ನು ಕಂಡು ಇವನು ಕೆರಳಿದನು. ಬಲ್ಲಾಳನನ್ನು ಶಿಕ್ಷಿಸಲು ಅವನ ಸಾಮಂತನಾದ ಎರಂಬರಗೆ ಕುಟುಂಬದ ಎರಡನೆಯ ಸಿಂದನನ್ನು ಕಳುಹಿಸಿದನೆಂದು ದಾಖಲೆಗಳು ಹೇಳುತ್ತವೆ. ಅವನು ಈ ಧಾಳಿಕೋರರ ವಿರುದ್ಧ ಘೋರ ಯುದ್ಧವನ್ನು ಮಾಡಿ ಚಾಳುಕ್ಯರನ್ನು ಸೋಲಿಸಿ ಅವರ ರಾಜಧಾನಿಯವರೆಗೆ ಅಟ್ಟಿದನು

ಈ ಸೋಲು ಉತ್ಸಾಹೀ ಬಲ್ಲಾಳನಿಗೆ ತೀವ್ರವಾದ ಹಿನ್ನಡೆಯಾಯಿತು. ಇದರ ಪರಿಣಾಮವಾಗಿ ಅವನು ಪುನಃ ತನ್ನ ಮಂಡಲೇಶ್ವರರ ಬಳಿ ಹಿಂತಿರುಗಬೇಕಾಯಿತು. ಹೀಗಾಗಿ ಅವನು ತನ್ನ ಮೂಲ ರಾಜ್ಯವನ್ನು ಉಳಿಸಿಕೊಂಡನು. ಈ ಎಲ್ಲ ಯುದ್ಧಗಳಲ್ಲೂ ಅವನ ಸಹೋದರ ವಿಷ್ಣುವರ್ಧನನು ಅವನಿಗೆ ಸಹಕಾರವನ್ನು ನೀಡಿ ಮುಖ್ಯಪಾತ್ರವನ್ನು ವಹಿಸಿದನು.

ಈ ಸಂದರ್ಭದಲ್ಲಿ ಮೊದಲನೆಯ ಬಲ್ಲಾಳನ ವೈಯುಕ್ತಿಕ ಜೀವನದಲ್ಲಿ ನಡೆದ ಒಂದು ಘಟನೆಯನ್ನು ವಿವರಿಸುವುದು ಅವಶ್ಯಕವಾಗುತ್ತದೆ. ಒಬ್ಬ ಸೇನಾನಾಯಕ ಮರಿಯಾನೆ ದಂಡನಾಯಕ ಮತ್ತು ಅವನ ಹೆಂಡತಿ ಚಾಮವ್ವೆಗೆ ಪದ್ಮಲಾದೇವಿ, ಚಾಮಲದೇವಿ ಮತ್ತು ಬೊಪ್ಪಾದೇವಿ ಎಂಬ ಮೂವರು ಹೆಣ್ಣುಮಕ್ಕಳಿದ್ದರು. ಅವರು ಸಂಗೀತ ಮತ್ತು ನೃತ್ಯವಲ್ಲಿ ಪರಿಣಿತರಾಗಿದ್ದರು. ಮೊದಲನೆಯ ಬಲ್ಲಾಳನು ಈ ಮೂವರನ್ನೂ ಒಂದೇ ದಿನ ಒಂದೇ ಛತ್ರದಲ್ಲಿ ವಿವಾಹವಾದನು. ಅವನು ಈ ಹೆಣ್ಣುಮಕ್ಕಳ ತಂದೆತಾಯಿಯರಿಗೆ ಸಿಂದಗೆರೆಯನ್ನು ಬಳುವಳಿಯಾಗಿ ಕೊಟ್ಟನು.

ಬಲ್ಲಾಳ ಮತ್ತು ಅವನಿಗೆ ಹೆಣ್ಣುಕೊಟ್ಟ ಮರಿಯಾನೆ ದಂಡನಾಯಕ ಇಬ್ಬರೂ ಜೈನಧರ್ಮದ ಕಟ್ಟಾ ಅನುಯಾಯಿಯಾಗಿದ್ದರು. ಜೈನ ವಿದ್ವಾಂಸರಾದ ಚಾರುಕೀರ್ತಿ ಪಂಡಿತ, ಸುಭಚಂದ್ರ ಮತ್ತಿತರರು ಇದೇ ಕಾಲದಲ್ಲಿದ್ದರು. ಅನೇಕ ಜೈನ ಮಂದಿರಗಳನ್ನೂ ಮತ್ತು ವಿಗ್ರಹಗಳನ್ನೂ ಈ ಕಾಲದಲ್ಲಿ ಕಟ್ಟಿಸಲಾಯಿತು. ಅವನ ಹಿಂದಿನವರಂತೆ ಬಲ್ಲಾಳನು ಸಹನೆಯುಳ್ಳ ರಾಜನಾಗಿದ್ದನು. ಶಾಸನಗಳು ಇವನು ಶಿವದೇವಸ್ಥಾನಕ್ಕೆ ದಾನದತ್ತಿಗಳನ್ನು ಕೊಟ್ಟನೆಂದು ಉಲ್ಲೇಖಿಸುತ್ತವೆ.

ಕ್ರಿ.ಶ.1108ರಲ್ಲಿ ಮೊದಲನೆಯ ಬಲ್ಲಾಳನು ಮರಣವನ್ನು ಹೊಂದಿದನು. ಅವನು ಪತ್ತೆ ಮಾಡಲಾಗದ ಖಾಯಿಲೆಯ ಕಾರಣದಿಂದ ಮರಣಿಸಿದ ಎಂದು ಕೆಲವು ದಾಖಲೆಗಳು ತಿಳಿಸುತ್ತವೆ. ಕವಿ ದೊಡ್ಡಯ್ಯನು ಬರೆದ ಒಂದು ಜೈನ ಕೃತಿಯಾದ ಭುಜಬಲಿ ಶತಕವು ಇವನ ಮರಣವು ಇವನ ಹಿಂದಿನ ಜನ್ಮದ ಶತೃವಿನ ಭೂತವು ಹೆದರಿಸಿತು. ಆಗ ಇವನು ರಾಜನ ಜೀವವನ್ನು ರಕ್ಷಿಸಿ "ಬಲ್ಲಾಳ ಜೀವರಕ್ಷಕ" ಎಂಬ ಬಿರುದನ್ನು ಪಡೆದಿದ್ದನೆಂದೂ ತಿಳಿಸುತ್ತದೆ. ಇದು ಪರೋಕ್ಷವಾಗಿ ಬಲ್ಲಾಳನು ಗುಣಪಡಿಸಲಾಗದ ಒಂದು ಖಾಯಿಲೆಯಿಂದ ನರಳುತ್ತಿದ್ದ-ನೆಂಬುದಕ್ಕೆ ಆಧಾರವಾಗಿದೆ. ಅದು ತಾತ್ಕಾಲಿಕವಾಗಿ ಗುಣವಾದರೂ ಕೊನೆಗೆ ಅದಕ್ಕೇ ಬಲಿಯಾದ. ಅವನಿಗೆ ಮುಂದಕ್ಕೆ ಸಿಂಹಾಸನದಲ್ಲಿ ಕೂರಲು ಮಕ್ಕಳೇ ಇರಲಿಲ್ಲ. ಹಾಗಾಗಿ ಅವನ ತಮ್ಮ ವಿಷ್ಣುವರ್ಧನನೇ ಇವನ ನಂತರ ಪಟ್ಟಕ್ಕೆ ಬಂದನು.

### 3.5.5 ಕಲ್ಯಾಣಿ ಚಾಲುಕ್ಯರ ಜಹಗೀರುಗಳ ಮೇಲೆ ಒಂದನೇ ಬಲ್ಲಾಳನ ದಾಳಿ

ಒಂದನೇ ಬಲ್ಲಾಳ ಜಗದೇವ ಮತ್ತು ಆ ನಂತರದ ಅವನ ಯಶಸ್ಸು ಜಹಾಗೀರುಗಳ ಮೇಲೆ ದಾಳಿ ಮಾಡಲು ಕಾರಣವಾಯಿತು. ಕ್ರಿ.ಶ.1103 ಮೈಸೂರು ಜಿಲ್ಲೆ ಮತ್ತು ಆಧುನಿಕ ಕೊಡುಗು ಪ್ರಾಂತ್ಯದ ಸೇನಾ ನಾಯಕರಾದ ಚೆಂಗಾಳ್ವರ ಮೇಲೆ ದಾಳಿಮಾಡಿ ತನ್ನ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ನಂತರ ಮುಂದುವರಿದು ಅಲ್ವಾಖೇದವನ್ನು ವಶಪಡಿಸಿಕೊಂಡನು. ಈ ಎಲ್ಲಾ ಯಶಸ್ಸುಗಳಿಂದ ಪ್ರೋತ್ಸಾಹಗೊಂಡು ಉಚ್ಚಂಗಿಯ ಪಾಂಡ್ಯರ ವಿರುದ್ಧ ಯುದ್ದ ಕೈಗೊಂಡು ನಂತರ ತುಂಗಭದ್ರ ನದಿಯನ್ನು ದಾಟಿ ಬೆಳವಲ ರಾಜ್ಯವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು.

### 3.5.6 ಬಲ್ಲಾಳನ ವಿಫಲತೆ

ಕೊನೆಯದಾಗಿ ಆರನೇ ವಿಕ್ರಮಾದಿತ್ಯನು ಒಂದನೇ ಬಲ್ಲಾಳನ ಬೆಳವಣಿಗೆ ಕಂಡು ಉಪದೇಶಿಸಲು ನಿಶ್ಚಿಯಿಸಿದನು. ಬಲ್ಲಾಳನಿಗೆ ಶಿಕ್ಷೆ ಕೊಡುವ ಸಲುವಾಗಿ ಸಾಮಂತನಾಗಿ

ಗಳಸಿದನು. ಸಿಂಧ್‌ಗಿ ಮನೆತನದ ಎರಡನೇ ಅಚ್ಚುಗಿ ಮುಖ್ಯ ದಂಗೆಯೂ ಮುಂದುವರಿದು ಒಂದನೇ ಬಲ್ಲಾಳನು ಸೋತು ರಾಜಧಾನಿಗೆ ಹಿಂತಿರುಗಿದನು.

ಈ ಸೋಲಿನಿಂದ ಒಂದನೇ ಬಲ್ಲಾಳನು ಚೇತರಿಸಿಕೊಳ್ಳಲು ಪ್ರಯತ್ನಿಸಿದನು. ಈ ಫಲಿತಾಂಶ ವನ್ನು ಚಾಲುಕ್ಯ ಮಾಂಡಲೇಶ್ವರರ ವಿರುದ್ಧ ನೀಡಲು ಪ್ರಯತ್ನಿಸಿದನು. ಇವನ ಎಲ್ಲ ಯುದ್ಧಗಳಲ್ಲಿ ಸಹೋದರ ವಿಷ್ಣುವರ್ಧನನು ಸಹಕರಿಸುತ್ತಾ ಮುಖ್ಯಪಾತ್ರ ವಹಿಸಿದ್ದನು. ಒಂದನೇ ಬಲ್ಲಾಳನ ಖಾಸಗಿ ಜೀವನದ ಬಗ್ಗೆ ಹೇಳುವ ಅನಿವಾರ್ಯತೆ ಇದೆ. ಈ ವಿಷಯವನ್ನು ಅವನ ಕೆಲವು ಶಾಸನಗಳಲ್ಲಿ ಉಲ್ಲೇಖಿಸಿವೆ. ಮರಿಯಾನೆ ದಂಡನಾಯಕ ಮತ್ತು ಅವನ ಪತ್ನಿ ಚಾಮವಿಯವರಿಗೆ ಪದ್ಮಲದೇವಿ, ಚಾಮಲದೇವಿ ಮತ್ತು ಬೊಪ್ಪದೇವಿ ಎಂಬ ಮೂವರು ಹೆಣ್ಣು ಮಕ್ಕಳಿದ್ದರು. ಇವರು ನೃತ್ಯ ಮತ್ತು ಸಂಗೀತದಲ್ಲಿ ಪಾಂಡಿತ್ಯ ಪಡೆದಿದ್ದರು.[10] ಒಂದನೇ ಬಲ್ಲಾಳನು ಈ ಮೂವರು ಸುಂದರ ಯುವತಿಯರನ್ನು ಒಂದೇ ದಿನ ಒಂದೇ ಮಂಟಪದಡಿಯಲ್ಲಿ ವಿವಾಹವಾದನು. ಈ ಹೆಣ್ಣು ಮಕ್ಕಳ ತಂದೆ ತಾಯಿಗೆ ಸಿಂಧಗೆರೆಯನ್ನು ಬಳುವಳಿಯಾಗಿ ನೀಡಿದನು. ಒಂದನೇ ಬಲ್ಲಾಳನು ಜೈನ ಧರ್ಮದ ಅನುಯಾಯಿಯಾಗಿದ್ದನು. ವ್ಮರಿಯಾನೆ ದಂಡನಾಯಕನು ಕೂಡ ಜೈನ ಧರ್ಮದ ಅನುಯಾಯಿಚಿೂಗಿದ್ದನು. ಜೈನ ವಿದ್ವಾಂಸರುಗಳಾದ ಚಾರುಕೀರ್ತಿ ಪಂಡಿತ, ಶುಭಚಂದ್ರ ಮತ್ತು ಇನ್ನಿತರರು ಈತನ ಕಾಲದಲ್ಲಿದ್ದರು. ಇವನ ಆಡಳಿತ ಕಾಲದಲ್ಲಿ ಕೆಲವು ಜೈನ ಬಸದಿಗಳನ್ನು ಮತ್ತು ಪ್ರತಿಮೆಗಳನ್ನು ಕಟ್ಟಿಸಿದನು. ಒಂದನೇ ಬಲ್ಲಾಳನು ತಂದೆಯ ರೀತಿಯೇ ಸಹನೆಯುಳ್ಳವನಾಗಿದ್ದನು. ಶಾಸನ ಹೇಳುವಚಿತೆ ಶಿವದೇವಾಲಯವನ್ನು ಒಂದನೇ ಬಲ್ಲಾಳ ನಿರ್ಮಿಸಿದನು. ಒಂದನೇ ಬಲ್ಲಾಳನು 1108ರಲ್ಲಿ ಮರಣ ಹೊಂದಿದನು.

ಕೆಲವು ಆಧಾರಗಳು ಆತನ ಮರಣಕ್ಕೆ ಕಾರಣಗಳನ್ನು ತಿಳಿಸುತ್ತವೆ. ದಾಖಲೆಗಳ ಪ್ರಕಾರ ತಿಳಿಯದ ಒಂದು ಮಾರಣಾಂತಿಕ ರೋಗದಿಂದ ನರಳುತ್ತಿದ್ದನು. 16ನೇ ಶತಮಾನದ ಜೈನನಾದ ಭುಜಬಲಿಶತಕೆ ಬರೆದ ಪದ್ಯ ದೊಡ್ಡಯ್ಯ ಸ್ಟೇಟ್ಸ್‌ನಲ್ಲಿ ಹೇಳಿರುವಂತೆ ಬಲ್ಲಾಳ, ಜೈನಗುರು, ಚಾರುಕೀರ್ತಿ ಒಂದನೇ ಬಲ್ಲಾಳನನ್ನು ಉಳಿಸಿದ ಕಾರಣ 'ಬಲ್ಲಾಳ ಜೀವರಕ್ಷಕ' ಎಂಬ ಬಿರುದು ಪಡೆದನು. ಈ ಹೇಳಿಕೆಯ ಪರೋಕ್ಷ ಆಧಾರದ ಮೇಲೆ ಒಂದನೇ ಬಲ್ಲಾಳನು ಗುಣಪಡಿಸಲಾಗ ದಂತಹ ರೋಗದಿಂದ ನರಳುತ್ತಿದ್ದನೆಂದು ತಿಳಿಯುತ್ತದೆ. ಈ ರೋಗವು ಗುಣವಾದರೂ ಕೊನೆಗೆ ಅದೇ ರೋಗಕ್ಕೆ ತುತ್ತಾದನು. ಒಂದನೇ ಬಲ್ಲಾಳನಿಗೆ ಮಕ್ಕಳಿಲ್ಲದ ಕಾರಣ ಅವನ ಕಿರಿಯ ಸಹೋದರ ವಿಷ್ಣುವರ್ಧನನು ಸಿಂಹಾಸನಕ್ಕೆ ಬಂದನು. ವಿಷ್ಣುವರ್ಧನನಿಗೆ

ಅನೇಕ ಪತ್ನಿಯರು ಇದ್ದು. ಅವರಲ್ಲಿ ಶಾಂತಲದೇವಿ, ಲಕ್ಷ್ಮೀದೇವಿ ಮತ್ತು ಬೊಮ್ಮಲ–ದೇವಿಯರು ಪ್ರಮುಖರು. ಇವರಲ್ಲಿ ವಿಷ್ಣುವರ್ಧನ ನಂತರ ಆಳ್ವಿಕೆಗೆ ಬಂದ ನರಸಿಂಹನು ಲಕ್ಷ್ಮಿದೇವಿಯ ಮಗನಾಗಿದ್ದನು. ವಿಷ್ಣುವರ್ಧನನ ಹಿರಿಯ ಮಗ ಬಲ್ಲಾಳದೇವನ ತಾಯಿ ಹಿರಿಯ ರಾಣಿ ಶಾಂತಲದೇವಿಯಾಗಿದ್ದಳು. ಆದರೆ ಬಲ್ಲಾಳದೇವನೂ ವಯಸ್ಸಿಗೆ ಬರುವ ಮುನ್ನವೇ 1129ರಲ್ಲಿ ಮರಣ ಹೊಂದಿದನು. ನಂತರ ವಿಷ್ಣುವರ್ಧನನು ಕ್ರಿ.ಶ.1142ರಲ್ಲಿ ಮರಣ ಹೊಂದಿದನು.

### 3.5.8 ಸಾಧನೆಗಳು

ವಿಷ್ಣುವರ್ಧನನು ಸಿಂಹಾಸನಕ್ಕೆ ಬಂದಾಗ ಹೊಯ್ಸಳ ರಾಜ್ಯವು ತುಂಬ ಕಿರಿದಾಗಿತ್ತು. ಇದು ಹಾಸನ ಜಿಲ್ಲೆ, ಮೈಸೂರಿನ ಕೆಲವು ತಾಲ್ಲೂಕುಗಳು ಹಾಗೂ ಶಿವಮೊಗ್ಗ ಜಿಲ್ಲೆಯನ್ನು ಹೊಂದಿತ್ತು. ಇವನ ಯುದ್ಧ ವಿಜಯಗಳಿಂದ ರಾಜ್ಯವನ್ನು ಎಲ್ಲಾ ದಿಕ್ಕುಗಳಲ್ಲೂ ರಾಜ್ಯ ವಿಸ್ತರಿಸಿದನು. ಡಾ॥ಎಸ್.ಕೃಷ್ಣಸ್ವಾಮಿ ಅಯ್ಯಂಗಾರ್‌ರವರು ವಿಷ್ಣುವರ್ಧನನು "ಪೂರ್ವ ಮೈಸೂರಿನ ಸಂಸ್ಥಾಪಕ" ಎಂದಿದ್ದಾರೆ. ವಿಷ್ಣುವರ್ಧನನ ಶಾಸನಗಳ ಪ್ರಕಾರ ಪೂರ್ವಕ್ಕೆ ನಂಗಲಿಯವರೆಗೂ ಪಶ್ಚಿಮಕ್ಕೆ ಭಾರಕೂರುವರೆಗೂ ಸೊವಿಮಲೆ, ಉತ್ತರಕ್ಕೆ ಕೊಂಗು ದಕ್ಷಿಣದವರೆಗೆ ಹೊಯ್ಸಳ ಸಾಮ್ರಾಜ್ಯ ವ್ಯಾಪಿಸಿತ್ತು. ಚೋಳರನ್ನು ಚಂಗಮದಿಯಿಂದ ಹೊರಹಾಕಿ ನಂತರ ತನ್ನ ರಾಜ್ಯಕ್ಕೆ ಸೇರ್ಪಡಿಸಿಕೊಂಡನು. ಇವನು ಅನೇಕ ಚಾಲುಕ್ಯರನ್ನು ಸೋಲಿಸಿ ತನ್ನ ರಾಜ್ಯವನ್ನು ವಿಸ್ತರಿಸಿದನು. ಕೊನೆಗೆ ಕಲ್ಯಾಣದ ಚಾಲುಕ್ಯರ ನಡುವಿನ ಸಂಬಂಧ ಗೊಂದಲವಾಯಿತು. ಇವನು ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದನು. ವಿಶ್ವಪ್ರಸಿದ್ಧ ದೇವಾಲಯಗಳನ್ನು ಕಟ್ಟಿಸಿದನು. ಹೊಯ್ಸಳ ಸ್ಕೂಲ್ ಆಫ್ ಆರ್ಟ್‌ನ್ನು ಸ್ಥಾಪಿಸಿದನು. ಇವನ ಪ್ರಯತ್ನದಿಂದ ಹೊಯ್ಸಳ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲಿ ಪ್ರಬಲವಾಯಿತು. ವಿಷ್ಣುವರ್ಧನನು ಹೊಯ್ಸಳ ಸಾಮ್ರಾಜ್ಯದ ಉತ್ತಮ ಆಡಳಿತಗಾರ ಎಂಬುದರಲ್ಲಿ ಸಂಶಯವಿಲ್ಲ.

## ಅಡಿಟಿಪ್ಪಣಿಗಳು

1) ಎಫಿಗ್ರಾಫಿಯಾ ಕರ್ನಾಟಕ, ಸಂ.6, ಎಂ.ಜಿ.9

2) ಅದೇ

3) ಎಫಿಗ್ರಾಫಿಯಾ ಕರ್ನಾಟಕ, ಸಂ.7, ಸಿ.ಕೆ.20

4) ಅದೇ

5) ಎಫಿಗ್ರಾಫಿಯಾ ಕರ್ನಾಟಕ, ಸಂ.5, ಎಸ್.ಕೆ.40

6) ಎಫಿಗ್ರಾಫಿಯಾ ಕರ್ನಾಟಕ, ಸಂ.4, ಸಿ.ಎನ್.8

7) ಅದೇ ಬಿ128

8) ಅದೇ ಬಿ130

9) ಎಫಿಗ್ರಾಫಿಯಾ ಕರ್ನಾಟಕ, ಸಂ.9, ಹೆಚ್.ಎನ್.47

10) ಅದೇ

# ಅಧ್ಯಾಯ–4
# ಸಾರ್ವಭೌಮಾಧಿಕಾರ

4.1 ಒಂದನೆಯ ಬಲ್ಲಾಳ

4.1.1 ಬಲ್ಲಾಳನ ಸಾಧನೆಗಳು

4.1.2 ಜಗದೇವನ ಮೇಲೆ ಬಲ್ಲಾಳನ ದಾಳಿ

4.2 ವಿಷ್ಣುವರ್ಧನ

4.2.1 ವಿಷ್ಣುವರ್ಧನನ ಪಟ್ಟಾಭಿಷೇಕ

4.2.2 ತಲಕಾಡು ಯುದ್ಧ

4.2.3 ಚಾಲುಕ್ಯರೊಡನೆ ಯುದ್ಧಗಳು

4.3 ಎರಡನೇ ಬಲ್ಲಾಳ

4.3.1 ಸೈನಿಕ ಸಾಧನೆಗಳು

4.4 ಒಂದನೇ ನರಸಿಂಹ

# ಅಧ್ಯಾಯ–4
# ಸಾರ್ವಭೌಮಾಧಿಕಾರ

## 4.1. ಒಂದನೆಯ ಬಲ್ಲಾಳ (ಕ್ರಿ.ಶ.1100–1108)

ಎರಡನೇ ವಿನಯಾದಿತ್ಯನ ಮೊಮ್ಮಗನಾಗಿದ್ದ ಒಂದನೆಯ ಬಲ್ಲಾಳನು ಎರೆಯಂಗನ ಎರಡು ವರ್ಷಗಳ ಅಧಿಕಾರ ಅವಧಿಯಲ್ಲಿ ಆಡಳಿತದ ಅನುಭವ ಪಡೆದಿದ್ದು, ಅವನ ನಂತರ ಕ್ರಿ.ಶ.1100[1]ರಲ್ಲಿ ಹೊಯ್ಸಳ ಸಾಮ್ರಾಜ್ಯದ ಅಧಿಪತಿಯಾದನು. ಈತ ಕೇವಲ 8 ವರ್ಷಗಳ ಕಾಲ ಆಳ್ವಿಕೆ ನಡೆಸಿದರೂ, ಈತನ ಸಾಮ್ರಾಜ್ಯ ಹೇಗಿತ್ತು? ಎಂಬುದನ್ನು ತಿಳಿಯಲು ಸೈನಿಕ ವ್ಯವಸ್ಥೆ ಕಾರಣಭೂತ ವಾಗಿದೆ. ಕೊಂಕಣ, ಬಯಲುನಾಡು, ಸವಿಮಲೆ ಪ್ರದೇಶಗಳನ್ನು ಈತನೂ ವಂಶಪಾರಂಪರ್ಯವಾಗಿ ಪಡೆದಿದ್ದನು. ಈತ ಅಧಿಕಾರ ರೂಢನಾದ ತಕ್ಷಣ ತನ್ನ ಪೂರ್ವಿಕರ ರಾಜಧಾನಿಯಾದ ಸೊಸೆವೂರಿಗೆ ಭೇಟಿಕೊಟ್ಟನು. ಒಂದು ಶಾಸನದ ಪ್ರಕಾರ ಬಲ್ಲಾಳನು ಬೇಲೂರಿನಿಂದ ಆಡಳಿತ ನಡೆಸುತ್ತಿದ್ದನು ಎನ್ನಲಾಗಿದೆ. ಇವರಿಂದ ನಮಗೆ ಬೇಲೂರು ಮುಂದುವರೆದ ಪಟ್ಟಣವಾಗಿದ್ದು, ಬೇಲೂರು ಉಪರಾಜಧಾನಿ ಅಥವಾ ಪರ್ಯಾಯ ರಾಜಧಾನಿಯಾಗಿತ್ತೆಂದು ಹೇಳಲಾಗಿದೆ.

### 4.1.1 ಬಲ್ಲಾಳನ ಸಾಧನೆಗಳು

ಎರಡನೇ ವಿನಯಾದಿತ್ಯನ ಕಾಲದಲ್ಲಿ ಇದ್ದಂತಹ ಭೂಪ್ರದೇಶಗಳೇ ಒಂದನೇ ಬಲ್ಲಾಳನ ಕಾಲದಲ್ಲಿ ಮುಂದುವರೆದವು. ಇದರಿಂದ ಈತ ಆ ಪ್ರದೇಶಗಳ ಮೇಲೆ ತನ್ನ ಹಿಡಿತ ಹೊಂದಿದ್ದ ಎಂದು ನಮಗೆ ತಿಳಿದುಬರುತ್ತದೆ. ಬಲ್ಲಾಳನಿಗಿಂತ ಹಿಂದಿನ ರಾಜರು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿದ್ದರು. ಒಂದನೇ ಬಲ್ಲಾಳನೂ ಕೂಡ ಪ್ರಾರಂಭದಲ್ಲಿ ಸಾಮಂತನಾಗಿದ್ದು ನಂತರ ಸ್ವತಂತ್ರ ರಾಜನಾದನು. ವಿಕ್ರಮಾದಿತ್ಯನು ಒಂದನೇ ಬಲ್ಲಾಳನಿಗೆ ಹೋಲಿಸಿದರೆ ಶಾಂತಿಪ್ರಿಯ ಅರಸನಾಗಿದ್ದನು. ಇದನ್ನು ನೋಡಿ ಒಂದನೇ ಬಲ್ಲಾಳನಿಗೆ ವಿಕ್ರಮಾದಿತ್ಯನು ಹೇಡಿ ಅಥವಾ ಅಂಜುಬುರುಕ ಎಂದು ಅನ್ನಿಸಿತ್ತು. ವಿಕ್ರಮಾದಿತ್ಯನು ಒಂದು ಕಡೆ ಹೊಯ್ಸಳರ ಅಭಿವೃದ್ಧಿ ನೋಡುತ್ತಿದ್ದನು. ಇದರಿಂದ ವಿಕ್ರಮಾದಿತ್ಯನಿಗೆ ಹೊಯ್ಸಳರ ಪ್ರಾಬಲ್ಯ ರಾಜನಿಷ್ಟೆಯನ್ನು ಅನುಮಾನದಿಂದ ನೋಡ ತೊಡಗಿದನು. ಇವನನ್ನು ಪರೀಕ್ಷೆ ಮಾಡಲು ಸಮಯಕ್ಕಾಗಿ ಕಾಯುತ್ತಿದ್ದನು. ಹೊಯ್ಸಳರ ಕಾಲದ ದಾಖಲೆಗಳ ಪ್ರಕಾರ ಒಂದನೇ ಬಲ್ಲಾಳ ಮತ್ತು ವಿಷ್ಣುವರ್ಧನನ ದಿಗ್ವಿಜಯಗಳು ಮುಖ್ಯವಾಗಿ ಹಾನಗಲ್ ಕದಂಬರು, ಉಚ್ಛಂಗಿಯ ಪಾಂಡ್ಯರು, ಯಾರು ಚಾಲುಕ್ಯರಿಗೆ ರಾಜನಿಷ್ಟೆ ಯುಳ್ಳವರ ವಿರುದ್ಧ ಯುದ್ಧ ಕೈಗೊಂಡರು ಎಂದು ದಾಖಲೆಗಳು ನಮಗೆ ಉತ್ಕೃಷ್ಟವಾಗಿ ಬಣ್ಣಿಸಿವೆ.

### 4.1.2 ಜಗದೇವನ ಮೇಲೆ ಬಲ್ಲಾಳನ ದಾಳಿ

ಈ ಸಮಯಕ್ಕಾಗಲಿ ಹೊಯ್ಸಳರಿಗೂ ಮತ್ತು ವಿಕ್ರಮಾದಿತ್ಯನ ನಡುವೆ ಸಂದಿಗ್ಧ ವಾತಾವರಣ ಉಂಟಾಗಿತ್ತು. ಆದರೆ ಒಂದನೇ ಬಲ್ಲಾಳನು ಚಾಲುಕ್ಯರ ಸಾಮಂತ ಅರಸನಾದ ಪಾರಮಾರ ದೊರೆ ಜಗದೇವನ ಪ್ರಾಂತ್ಯದ ಮೇಲೆ ದಾಳಿ ಮಾಡಿದನು. ಜಗದೇವನು ಆಂಧ್ರದ ಕಲಾನೂಪಕ ಪ್ರಾಂತ್ಯದ ದೊರೆಯಾಗಿದ್ದು ಕಲ್ಯಾಣಿ ಚಾಲುಕ್ಯರ ಸಾಮಂತನಾಗಿದ್ದನು. ಇದೇ ಸಮಯದಲ್ಲಿ ಪಾರಮಾರ ದೊರೆ ಕಲ್ಯಾಣಿ ಚಾಲುಕ್ಯರ ಆಶ್ರಯ ಬೇಡಿದನು. ಈ ಯುದ್ಧವು ಕಲ್ಯಾಣಿ ಚಾಲುಕ್ಯರ ಅರಸ ಆರನೇ ವಿಕ್ರಮಾದಿತ್ಯನ ಮಾರ್ಗದರ್ಶನದಂತೆ ನಡೆಯಿತು. ಆದರೆ ಅವನು ನಿರೀಕ್ಷಿಸಿದ ಫಲಿತಾಂಶ ದೊರೆಯಲಿಲ್ಲ. ಒಂದನೇ ಬಲ್ಲಾಳನಿಗೆ ಈ ಯುದ್ಧದಲ್ಲಿ ತನ್ನ ಸಹೋದರರಾದ ವಿಷ್ಣುವರ್ಧನ ಮತ್ತು ವಿನಯಾದಿತ್ಯನ ಸಹಾಯ ಪಡೆದನು. ಹೊಯ್ಸಳರ ಶಾಸನವೂ ಇವರಿಬ್ಬರ ನಡುವೆ ಉತ್ಸಾಹಯುತ ಯುದ್ಧ ನಡೆಯಿತು, ಈ ಯುದ್ಧದಲ್ಲಿ ಒಂದನೇ ಬಲ್ಲಾಳ ಮೇಲುಗೈ ಸಾಧಿಸಿದನು ಎಂದು ಹೇಳುತ್ತದೆ. ಈ ಯುದ್ಧದಲ್ಲಿ ಚಾಲುಕ್ಯರನ್ನು ಸೋಲಿಸಿ ಹಿಂದಕ್ಕೆ ಹಟ್ಟಿದನು. ಈ ಯುದ್ಧದಲ್ಲಿ ಹೊಯ್ಸಳ ಸಹೋದರರು ತಮ್ಮ ಮಹಾ ಮಿಲಿಟರಿ ಶಕ್ತಿಯನ್ನು ಪ್ರದರ್ಶಿಸಿದರು. ಹಾಗೆ ಇದರ ಪರಿಣಾಮವನ್ನು ಗಮನಿಸಿದಾಗ ಹೊಯ್ಸಳ ಮತ್ತು ಚಾಲುಕ್ಯರ ನಡುವೆ ಸಂದಿಗ್ಧ ಪರಿಸ್ಥಿತಿ ಉಂಟಾಯಿತು. ಅನಂತರದ ಹೊಯ್ಸಳರ ಶಾಸನಗಳನ್ನು ಅಧ್ಯಯನ ಮಾಡಿದಾಗ ಜಗದೇವನು ಮಾಳ್ವದ ರಾಜನಾಗಿದ್ದನು ಎಂದು ತಿಳಿದುಬರುತ್ತದೆ. ಆದರೆ ಅನೇಕ ಇತಿಹಾಸಕಾರರು ಈ ಆಧಾರವನ್ನು ಒಪ್ಪಿಕೊಂಡಿಲ್ಲ. ಸಂಶೋಧಕರಾದ ರೈಸ್ ಮತ್ತು ಫ್ಲೀಟ್‌ರವರ ಪ್ರಕಾರ ಜಗದೇವ ಕಲ್ಯಾಣಿ ಚಾಲುಕ್ಯರ ಊಳಿಗಮಾನ್ಯ ವ್ಯವಸ್ಥೆಯಿಂದಾಗಿ ಶಿವಮೊಗ್ಗ, ಜಿಲ್ಲೆಯ ಪೊಟ್ಟಿ ಪೊರಂಬುರ್ಚಾದ ನಾಯಕನಾಗಿದ್ದನು ಎಂದು ತಿಳಿಸಿದ್ದಾರೆ. ಇತ್ತೀಚಿನ ಸಂಶೋಧನೆಯಿಂದ ಮಾಳ್ವದ ರಾಜ ವಿಕ್ರಮಾದಿತ್ಯನ ನೆಲೆ ಮತ್ತು ಆರ್ಥಿಕ ಸಹಾಯವನ್ನು ಪಡೆಯುತ್ತಿದ್ದನು ಎಂದು ತಿಳಿದುಬರುತ್ತದೆ.

ಈ ಶಾಸನ ಜಗದೇವನ ವಿರುದ್ಧ ಹೊಯ್ಸಳ ಸಹೋದರರ ಸಾಧನೆಯನ್ನು ಹೊಗಳುತ್ತದೆ. ನಂತರ ಆನೆಯ ಮೇಲೆ ಕುಳಿತ ರಾವುತನ ಪರಾಕ್ರಮವನ್ನು ಹೊಗಳಿತ್ತು ಎಂದು ಈ ಶಾಸನದ ಕೊನೆಯದಾಗಿ ತಿಳಿಸುತ್ತಿದೆ. ಈ ರಾವುತ ವೀರಬಲ್ಲಾಳ ಆಗಿದ್ದನೆಂದೂ ಹೇಳಲಾಗಿದೆ. ವಿಷ್ಣುವರ್ಧನ ವರ್ಣಿಸುವಂತೆ ಭೈರವ ಯುದ್ಧದಲ್ಲಿ ಜಗದೇವನ ಸೈನ್ಯವನ್ನು ನಾಶ ಮಾಡಿದನು. ಆದರೆ ಈ ಯುದ್ಧದ ಕಾಲವು ನಮಗೆ ತಿಳಿದುಬಂದಿಲ್ಲ. ಎರೆಯಂಗ ಕ್ರಿ.ಶ.1100 ರವರೆಗೆ ಆಳ್ವಿಕೆ ನಡೆಸಿದನು. ನಂತರ ಒಂದನೇ ಬಲ್ಲಾಳ ಅಧಿಕಾರಕ್ಕೆ ಬಂದನು. ಈ ಅಧಿಕಾರ

ಇವರ ನಂತರ ಈತನ ವಿರುದ್ಧ ಯುದ್ಧ ಮಾಡಿದ ಪಾರಮಾರ ಮುಖ್ಯಸ್ಥನಿಗೆ ಹೋಯಿತು. ಇವರ ಮೂಲವನ್ನು ಅಧ್ಯಯನ ಮಾಡಿದಾಗ ಇವರ ಸಮಯ ಕ್ರಿ.ಶ.1100–1108ರ ನಡುವೆ ನಡೆದಿರ ಬಹುದು.

## 4.2. ವಿಷ್ಣುವರ್ಧನ

### ಪ್ರಾರಂಭಿಕ ಜೀವನ ಮತ್ತು ಅವನ ದಿಗ್ವಿಜಯಗಳು

ಎರೆಯಂಗ ಮತ್ತು ಏಚಲಾದೇವಿ ಅವರಿಗೆ ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯ ಎಂಬ ಮೂವರು ಗಂಡು ಮಕ್ಕಳಿದ್ದರು. ವಿಷ್ಣುವರ್ಧನನು ತನ್ನ ತಾತ ಇಮ್ಮಡಿ ವಿನಯಾದಿತ್ಯನ (ಕ್ರಿ.ಶ.1048–1100) ಕಾಲದಿಂದಲೂ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು. ಈ ಯುದ್ಧಗಳಲ್ಲಿ ಭಾಗವಹಿಸಿ ಅವನೊಬ್ಬ ಅಪ್ರತಿಮ ವೀರನೆಂಬುದನ್ನು ತನ್ನ ಸಾಹಸಮಯ ಜೀವನದಿಂದ ಮನವರಿಕೆ ಮಾಡಿಕೊಟ್ಟನು. ಅವನು ಮೊಟ್ಟಮೊದಲನೆ ಬಾರಿಗೆ ವಿನಯಾದಿತ್ಯನ ಕಾಲದಲ್ಲಿ ಕಲ್ಯಾಣಿ ಚಾಲುಕ್ಯರ ಪರವಾಗಿ ಒಂದು ಯುದ್ಧದಲ್ಲಿ ಭಾಗವಹಿಸಿದ್ದನು.[2] ಆರನೆಯ ವಿಕ್ರಮಾದಿತ್ಯನು ಕಲ್ಯಾಣಿಯಲ್ಲಿ ಪಟ್ಟಾಭಿಷಕ್ತನಾದ ಮೇಲೆ ಚಕ್ರಕೂಟವನ್ನು ತನ್ನ ವಶಕ್ಕೆ ಪಡೆದುಕೊಳ್ಳುವ ದೃಷ್ಟಿಯಿಂದ ಒಂದು ದಂಡಯಾತ್ರೆಯನ್ನು ಕಳುಹಿಸಿದನೆಂದು ತಿಳಿದು–ಬರುತ್ತದೆ. ಆದರೆ ಈ ಧಾಳಿಯ ಉದ್ದೇಶ ಚಕ್ರಕೂಟವನ್ನು ಗೆದ್ದುಕೊಳ್ಳುವುದಕ್ಕಿಂತಲೂ ಮಿಗಿಲಾಗಿ ಚೋಳರನ್ನು ಸದೆಬಡಿಯುವ ಉದ್ದೇಶದಿಂದ ಕೂಡಿತ್ತೆಂದು ಕಾಣಿಸುತ್ತದೆ.

ಆರನೆಯ ವಿಕ್ರಮಾದಿತ್ಯನ ಆದೇಶದ ಮೇರೆಗೆ ಅವನ ಮಹಾಮಾಂಡಳಿಕ ಹೊಯ್ಸಳ ಇಮ್ಮಡಿ ವಿನಯಾದಿತ್ಯನು ಚಕ್ರಕೂಟದ ಮೇಲೆ ದಂಡೆತ್ತಿ ಹೋಗಲು ತನ್ನ ಮಗ ಎರೆಯಂಗ ಮತ್ತು ಮೊಮ್ಮಗ ವಿಷ್ಣುವರ್ಧನನನ್ನು ಕಳುಹಿಸಿಕೊಟ್ಟನು. ಕಾಕತೀಯ ಮನೆತನಕ್ಕೆ ಸೇರಿದ ಬೇಟನ ಮಗ ಪ್ರೋಲನು ಚಕ್ರಕೂಟ ಪ್ರಾಂತ್ಯದ ಮೇಲೆ ಆಳ್ವಿಕೆ ನಡೆಸುತ್ತಿದ್ದನು. ಚಕ್ರಕೂಟವು ವಾರಂಗಲ್‌ನ ಹತ್ತಿರವಿದ್ದಂತಹ ಒಂದು ಸಣ್ಣ ಪ್ರಾಂತ್ಯವಾಗಿತ್ತು. ಬಹುಶಃ ಮೇಲೆ ವಿವರಿಸಿದಂತೆ ಈ ದಾಳಿಯು ವೆಂಗಿ ಮತ್ತು ಕಳಿಂಗವನ್ನು ಗೆದ್ದುಕೊಳ್ಳುವ ಉದ್ದೇಶದಿಂದ ಕೂಡಿತ್ತು.[3] ಆದುದರಿಂದಲೇ ಎರೆಯಂಗ ಮತ್ತು ವಿಷ್ಣುವರ್ಧನ ತೀರ ಪ್ರದೇಶದಲ್ಲಿದ್ದ ಜನನಾಥಪುರವನ್ನು ನಾಶಪಡಿಸಿದರೆಂದು ವರ್ಣಿಸಲಾಗಿದೆ.[4] ಈ ಜನನಾಥಪುರ ಆಧುನಿಕ ವಿಜಯವಾಡ ಅಥವಾ ರಾಜಮಹೇಂದ್ರಿಯಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಜನನಾಥ ಎಂಬುದು ಚೋಳ ಅರಸ ಒಂದನೇ ರಾಜರಾಜನ ಬಿರುದಾಗಿತ್ತು.

ಪ್ರಬಂಧ ಚಿಂತಾಮಣಿಯ ಪ್ರಕಾರ ಆರನೆಯ ವಿಕ್ರಮಾದಿತ್ಯನು ಜಗದ್ದೇವನನ್ನು ಕೋಲಾನುಪಾಕದ ಸುತ್ತಣ ಪ್ರದೇಶದ ಪ್ರಾಂತ್ಯಾಧಿಕಾರಿಯಾಗಿ ನೇಮಕ ಮಾಡಿದ್ದನು. ಶಾಸನಗಳು ಕೂಡ ಎರೆಯಂಗ ಮತ್ತು ಅವನ ಮಗ ವಿಷ್ಣುವರ್ಧನನು ಕಳಿಂಗ ಮತ್ತು ವೆಂಗಿ ರಾಜ್ಯಗಳೆರಡರ ಮೇಲೂ ಧಾಳಿ ಮಾಡಿದರು ಎಂದು ವಿವರಿಸುತ್ತವೆ. ಮೊದಲು ಚಕ್ರಕೂಟವನ್ನು ನಂತರ ಜನನಾಥಪುರ ಮತ್ತು ಬಳಿಯ ಪಟ್ಟಣಗಳ ಮೇಲೆ ಧಾಳಿ ಮಾಡಿ ನಂತರ ಕಳಿಂಗದ ಮೇಲೆ ಧಾಳಿ ಮಾಡಿರಬಹುದು. ಕಳಿಂಗದ ರಾಜ ಬಹುಶಃ ಕುಲ್ಲೋತ್ತುಂಗ ಚೋಳನ ಮಹಾಮಂಡಳಿಕನಾಗಿದ್ದಿರಬಹುದೆಂದು ಅಭಿಪ್ರಾಯಪಡಲಾಗಿದೆ. ಈತನು ವಿಕ್ರಮಾದಿತ್ಯನ ಶತ್ರುವಾಗಿದ್ದನು. ಒಟ್ಟಿನಲ್ಲಿ ಕುಂತಳ ಸೈನ್ಯ ಆಂಧ್ರದ ತೀರ ಪ್ರದೇಶದವರೆಗೂ ಧಾಳಿ ಮಾಡಿತು. ವಿಷ್ಣುವರ್ಧನನು ತನ್ನ ತಂದೆಯ ಜೊತೆ ಈ ಧಾಳಿಯಲ್ಲಿ ಭಾಗವಹಿಸಿದ್ದನು. ಈ ದಂಡಯಾತ್ರೆಯು ಕ್ರಿ.ಶ.1090ರ ದಶಕದಲ್ಲಿ ಅಂದರೆ ಕ್ರಿ.ಶ.1098[5]ಕ್ಕೆ ಮೊದಲು ನಡೆದಿರ–ಬಹುದೆಂದು ಅಭಿಪ್ರಾಯಪಡಲಾಗಿದೆ. ಈ ಧಾಳಿಯ ನಂತರ ಚಕ್ರಕೂಟ ಆರನೆ ವಿಕ್ರಮಾದಿತ್ಯನ ಆಳ್ವಿಕೆಗೆ ಒಳಪಟ್ಟಿತ್ತೆಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಈ ದಂಡಯಾತ್ರೆಯ ಬಗ್ಗೆ ಹೆಚ್ಚಿನ ಮಾಹಿತಿಯ ಕೊರತೆ ಇರುವುದರಿಂದ ಹೆಚ್ಚು ಬೆಳಕನ್ನು ಚೆಲ್ಲಲು ಸಾಧ್ಯವಿಲ್ಲ.

ಒಂದನೆಯ ಬಲ್ಲಾಳನ ಕಾಲದಲ್ಲಿ ಹೊಯ್ಸಳರು ಪಾರಮಾರರ ಧಾಳಿಯನ್ನು ಎದುರಿಸಬೇಕಾಯಿತು. ಕ್ರಿ.ಶ.1100[6]ರಲ್ಲಿ ಹೊಯ್ಸಳ ರಾಜ್ಯದ ಮೇಲೆ ಪಾರಮಾರ ರಾಜಕುಮಾರ ಜಗದ್ದೇವನು ಆಕ್ರಮಣ ಮಾಡಿದನು. ಈ ಧಾಳಿಯು ಪಾರಮಾರರು ನೇರವಾಗಿ ಆಕ್ರಮಣ ಮಾಡಿದಂತಹ ಧಾಳಿಯಾಗಿರಲಿಲ್ಲ. ಪಾರಮಾರ ರಾಜಕುಮಾರ ಜಗದ್ದೇವನಿಗೆ ಆರನೇಯ ವಿಕ್ರಮಾದಿತ್ಯನು ಆಶ್ರಯ ನೀಡಿದ್ದನೆಂದು ಇತಿಹಾಸಕಾರ ಯಜ್ದಾನಿಯವರು ತಿಳಿಸಿದ್ದಾರೆ. ಈ ಸಮಯದಲ್ಲಿ ವಿಷ್ಣುವರ್ಧನನು ತನ್ನ ಅಣ್ಣ ಒಂದನೆಯ ಬಲ್ಲಾಳನ ಜೊತೆಗೂಡಿ ಜಗದೇವನ ಧಾಳಿಯನ್ನು ಎದುರಿಸಿದನು. ವಿಷ್ಣುವರ್ಧನನು ತನ್ನ ತಾತನಾದ ಎರಡನೆಯ ವಿನಯಾದಿತ್ಯನ ಆಳ್ವಿಕೆಯ ಕೊನೆಯ ಭಾಗದಲ್ಲಿ ಶ್ರೀರಂಗಪಟ್ಟಣದ ತಾಲೂಕಿನ ಬೆಳಗೊಳದ ಸುತ್ತಮುತ್ತಲ ಪ್ರದೇಶಕ್ಕೆ ಪ್ರಾಂತ್ಯಾಧಿಕಾರಿಯಾಗಿದ್ದನು. ಬೆಳಗೊಳದ ಸೀತಾರಾಮ ದೇವಾಲಯಕ್ಕೆ ದಾನ ನೀಡಿ ಆ ಗ್ರಾಮವನ್ನು ಒಂದು ಅಗ್ರಹಾರವನ್ನಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ಕೊಟ್ಟನು. ಆ ಪ್ರದೇಶವನ್ನು ಕ್ರಿ.ಶ.1096[7]ರ ಶಾಸನವು 'ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲ' ಎಂಬ ಹೆಸರಿನಿಂದಲೇ ಉಲ್ಲೇಖಿಸುತ್ತದೆ.

ವಿನಯಾದಿತ್ಯನ ಮರಣಾ ನಂತರ ಎರೆಯಂಗ ರಾಜನಾಗಿ ರಾಜ್ಯವಾಳಿದನೋ ಇಲ್ಲವೋ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಪ್ರಾಯಶಃ ರಾಜನಾಗುವ ಹೊತ್ತಿಗೆ ಎರೆಯಂಗ ವೃದ್ಧನಾಗಿದ್ದ. ಇವನು ಯುವರಾಜನಾಗಿದ್ದಾಗಲೇ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು. ಮೇಲೆ ವಿವರಿಸಿರುವಂತೆ ಈ ಎಲ್ಲಾ ಯುದ್ಧಗಳಲ್ಲೂ ವಿಷ್ಣುವರ್ಧನನು ಭಾಗವಹಿಸಿದ್ದನು. ಪರಾಕ್ರಮಿಯೂ, ಗುಣಸಂಪನ್ನನೂ ಆದ ಎರೆಯಂಗನು ಯುವರಾಜನಾಗಿ–ದ್ದಾಗಲೇ ತನ್ನ ತಂದೆಯ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1099ರಲ್ಲಿ ಮರಣ ಹೊಂದಿದನು. ಎರೆಯಂಗನ ನಂತರ ಒಂದನೆಯ ಬಲ್ಲಾಳನು ಸುಮಾರು ಕ್ರಿ.ಶ.1100ರಲ್ಲಿ ಪಟ್ಟಕ್ಕೆ ಬಂದನು. ಎರೆಯಂಗನ ಮಕ್ಕಳಾದ ಒಂದನೆಯ ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯ ರಾಜ್ಯವನ್ನು ವಿಸ್ತರಿಸಬೇಕೆಂಬ ಉತ್ಸಾಹವನ್ನು ಹೊಂದಿದ್ದರು. ಆದರೆ ಉದಯಾದಿತ್ಯನ ಬಗ್ಗೆ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಆದರೆ ವೀರಬಲ್ಲಾಳ ಮತ್ತು ವಿಷ್ಣುವರ್ಧನನು ಹೊಯ್ಸಳ ರಾಜ್ಯವನ್ನು ಪ್ರಬಲ ರಾಜ್ಯವನ್ನಾಗಿ ಮಾಡಲು ಪ್ರಯತ್ನಪಟ್ಟರು. ಇವರೀರ್ವರು ಹೊಯ್ಸಳ ರಾಜ್ಯವನ್ನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಹಿಡಿತದಿಂದ ಬಿಡಿಸಿಕೊಳ್ಳಲು ನಿರ್ಧರಿಸಿದರು.

ಒಂದನೆಯ ಬಲ್ಲಾಳನ ಕಾಲದಲ್ಲಿಯೂ ಕೂಡ ವಿಷ್ಣುವರ್ಧನನು ಯುದ್ಧಗಳಲ್ಲಿ ಮತ್ತು ಆಡಳಿತದಲ್ಲಿ ಸಕ್ರಿಯ ಪಾತ್ರವಹಿಸಿದ್ದನು. ಸಾಮಾನ್ಯವಾಗಿ ವಿಷ್ಣುವರ್ಧನನನ್ನು ಶಾಸನಗಳಲ್ಲಿ ಬಿಟ್ಟಿದೇವನೆಂದೇ ಉಲ್ಲೇಖಿಸಲಾಗಿದೆ. ಇವರೀರ್ವರು ಹೊಯ್ಸಳ ರಾಜ್ಯದ ಸಂಪತ್ತನ್ನು ವೃದ್ಧಿಸಿ ಹೊಯ್ಸಳ ರಾಜ್ಯವನ್ನು ಒಂದು ಪ್ರಬಲ ಶಕ್ತಿಯನ್ನಾಗಿ ಮಾರ್ಪಡಿಸಲು ಪ್ರಾಮಾಣಿಕ ಪ್ರಯತ್ನ ನಡೆಸಿದರು. ಇದೇ ಸಮಯದಲ್ಲಿ ಜಗದ್ದೇವನ ಧಾಳಿಯನ್ನು ಯಶಸ್ವಿಯಾಗಿ ಎದುರಿಸಿದರು. ಈ ಘಟನೆಯ ಬಗ್ಗೆ ಸ್ಪಷ್ಟ ಚಿತ್ರ ನೀಡಲು ಸಾಧ್ಯವಿಲ್ಲ. ಆದರೆ ಅನೇಕ ಹೊಯ್ಸಳ ಮತ್ತು ಇತರ ಶಾಸನಗಳಿಂದ ಜಗದ್ದೇವ ಪಾರಮಾರ ವಂಶದ ಮಾಳವ ರಾಜನೆಂದೂ ಅವನು ಆರನೆಯ ವಿಕ್ರಮಾದಿತ್ಯನ ಪರಮಾಪ್ತನಾಗಿದ್ದು, ಆಂಧ್ರಪ್ರದೇಶದ ಕೊಲ್ಲಿ ಶಾಖೆಯಲ್ಲಿ ನೆಲೆಸಿದ್ದನೆಂದು ತಿಳಿದು ಬರುತ್ತದೆ. ಅವನು ಈ ಮುಂಚೆ ಹೊಯ್ಸಳ ಎರೆಯಂಗ ಪಾರಮಾರ ರಾಜಧಾನಿ ಧಾರಾನಗರವನ್ನು ಧೂಳೀಪಟ ಮಾಡಿದ್ದಕ್ಕೆ ಸೇಡನ್ನು ತೀರಿಸಲೋ ಅಥವಾ ವರ್ಧಿಸುತ್ತಿದ್ದ ಹೊಯ್ಸಳ ಬಲವನ್ನು ಹಿಡಿತದಲ್ಲಿಡಲು ಸಾಮ್ರಾಟ ವಿಕ್ರಮಾದಿತ್ಯನಿಂದ ನಿಯೋಜಿತನಾಗಿರ–ಬಹುದಾದ್ದರಿಂದಲೋ ಹೊಯ್ಸಳ ರಾಜಧಾನಿಯ ಮೇಲೆ ಧಾಳಿಮಾಡಿರಬೇಕು. ಈ ಯುದ್ಧದಲ್ಲಿ ಜಗದ್ದೇವನು ಹೀನಾಯ ಸೋಲನ್ನು ಅನುಭವಿಸಿದನೆಂದು ಶಾಸನಗಳು ವರ್ಣಿಸುತ್ತವೆ. ಒಂದನೆಯ ಬಲ್ಲಾಳ ಮತ್ತು ವಿಷ್ಣುವರ್ಧನನು ವೀರಾವೇಶದಿಂದ ಹೋರಾಡಿದ ಈ ಯುದ್ಧದ ಬಗ್ಗೆ ಜೈನಾಡ್ ಶಾಸನ ಹೆಚ್ಚಿನ ಮಾಹಿತಿಯನ್ನೊದಗಿಸುತ್ತದೆ.

ಹೊಯ್ಸಳ ಸಹೋದರರು ಜಗದ್ದೇವನ ಮೇಲೆ ವಿಜಯಿಗಳಾಗಿ ಹೊಡೆದೋಡಿಸಿದು-ದರಿಂದ ಅವರಿಗೆ ಅಪರಿಮಿತ ಆನಂದ ಉಂಟಾಯಿತು. ಅನೇಕ ಶಾಸನಗಳಲ್ಲಿ ವಿಷ್ಣುವರ್ಧನನು ತನ್ನ ಅಣ್ಣನ ಜೊತೆಗೂಡಿ ಹೋರಾಟ ನಡೆಸಿ ವಿಜಯಲಕ್ಷ್ಮಿ ಕರೀಟವನ್ನು ತನ್ನ ಅಣ್ಣನಿಗೆ ತೊಡಿಸಿದನು ಮತ್ತು ಜಗದ್ದೇವನ ಆನೆಗಳ ಹಣೆಗಳ ಮೇಲೆ ಹರಿಯುತ್ತಿದ್ದ ರಕ್ತವನ್ನು ತಂದು ಒಂದನೆಯ ಬಲ್ಲಾಳನ ಹಣೆಗೆ ತಿಲಕವನ್ನಿಟ್ಟನೆಂದು ವರ್ಣಿಸಲಾಗಿದೆ. ಜಗದ್ದೇವನ ಸಂಪತ್ತನ್ನು ದೋಚಿದುದರ ಜೊತೆಗೆ ಅವನ ಎದೆಯ ಕವಚವನ್ನು ಕಸಿದುಕೊಂಡನೆಂದು ವರ್ಣಿಸಲಾಗಿದೆ. ಒಂದನೆಯ ಬಲ್ಲಾಳನು ತನ್ನ ಕುದುರೆಯನ್ನೇರಿ ಮಾಳವ ರಾಜನ ಆನೆಯನ್ನು ಕೊಂದನೆಂದೂ, ವಿಷ್ಣುವರ್ಧನನು ಯಮನ ರೀತಿ ಮಾಳವ ಅರಸನ ಇಡೀ ಸೈನ್ಯವನ್ನು ನಾಶಪಡಿಸಿದನೆಂದು ವರ್ಣಿಸಿಲಾಗಿದೆ. ಈ ಯುದ್ಧದಲ್ಲಿ ವಿಷ್ಣುವರ್ಧನನು ವೀರಾವೇಶದಿಂದ ಹೋರಾಡಿ ಹೊಯ್ಸಳರ ವಿಜಯಕ್ಕೆ ಕಾರಣನಾದನೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ವಿಷ್ಣುವರ್ಧನನು ಜಗದ್ದೇವನ ಸೈನ್ಯ ನಾಶಪಡಿಸಿದುದಕ್ಕೆ ಅವನನ್ನು ಭೈರವ ಎಂದು ವರ್ಣಿಸಲಾಗಿದೆ.[9] ಜಗದ್ದೇವನೇ ಯುದ್ಧದಲ್ಲಿ ಹೊಯ್ಸಳ ಸಹೋದರರು ಹೋರಾಟ ಮಾಡಿದುದರ ರೀತಿಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾನೆ. ಅವರು ಹೇಗೆ ಜಗದ್ದೇವನು ಕುಳಿತಿದ್ದ ಆನೆಯ ಮೇಲೆ ದಾಳ ಮಡಿದರು ಎಂಬುವುದನ್ನು ವಿವರಿಸಿದ್ದಾನೆ. ಅದೇ ರೀತಿ ಇವರ ಶೌರ್ಯ ಮತ್ತು ಯುಕ್ತಿಯ ಬಗ್ಗೆಯೂ ಜಗದ್ದೇವನು ಹೊಗಳಿದ್ದಾನೆ.

ಜಗದ್ದೇವನ ನೇತೃತ್ವದಲ್ಲಿ ಬಂದಿದ್ದ ಬೃಹತ್ ಚಾಲುಕ್ಯ ಬಲವನ್ನು ಬಗ್ಗು ಬಡಿದ ಬಲ್ಲಾಳ ತನ್ನ ತಮ್ಮ ವಿಷ್ಣುವರ್ಧನನೊಳಗೂಡಿ ಮತ್ತಷ್ಟು ರಾಜ್ಯ ವಿಸ್ತರಣೆಯಲ್ಲಿ ತೊಡಗಿದ. ಅವರು ಚಾಲುಕ್ಯ ಸಾಮ್ರಾಜ್ಯಕ್ಕೆ ಸೇರಿದ ಅನೇಕ ಪ್ರದೇಶಗಳ ಮೇಲೆ ಧಾಳಿಯಿಟ್ಟರು. ಅವರು ಉಚ್ಚಂಗಿಯ ಪಾಂಡ್ಯರ ರಾಜ್ಯದ ಮೇಲೆ ಧಾಳಿ ಮಾಡಿದರು. ಪಾಂಡ್ಯರ ಅರಸನನ್ನು ಸೋಲಿಸುವುದರಲ್ಲಿ ಯಶಸ್ವಿಯಾದರು. ಉಚ್ಚಂಗಿಯ ಪಾಂಡ್ಯರು ಚಾಲುಕ್ಯ ಸಾಮ್ರಾಟನಿಂದ ತಮ್ಮ ಮಹಾಮಾಂಡಳಿಕತ್ವವನ್ನು ಹೊಯ್ಸಳರಿಗೆ ಬದಲಾಯಿಸಿದರು.[10] ಅನಂತರ ಹೊಯ್ಸಳ ಸಹೋದರರು ತುಂಗಭದ್ರಾ ನದಿಯನ್ನು ದಾಟಿ ಅನೇಕ ಪ್ರದೇಶದ ಮೇಲೆ ಧಾಳಿ ಮಾಡಿದರು. ಇದರಿಂದ ಕುಪಿತಗೊಂಡ ವಿಕ್ರಮಾದಿತ್ಯ ತನ್ನ ದಂಡನಾಯಕ ಎರಂಬರಗೆಯ ಸಿಂದ ಅಚುಗಿಯನ್ನು ಯುದ್ಧಕ್ಕೆ ಕಳುಹಿಸಿದಾಗ ಬಲ್ಲಾಳ ಸೋತು ಚಾಲುಕ್ಯ ಸಾಮಂತತ್ವವನ್ನು ಒಪ್ಪಬೇಕಾಯಿತು. ಎರಡನೆಯ ಅಚುಗಿಯ ಜೊತೆ ಅವನ ಮಗ ಪೆರ್ಮಾಡಿ ದೇವನು ಈ ಯುದ್ಧದಲ್ಲಿ ಭಾಗವಹಿಸಿದ್ದನು. ಅಚುಗಿಯು ಚಾಲುಕ್ಯ ಸಾಮ್ರಾಟನ ಪರಮ ನಿಷ್ಠಾವಂತ ಮಹಾಮಂಡಳಿಕನಾಗಿದ್ದನು. ಅಚುಗಿ ಮತ್ತು ಅವನ ಮಗ ಇಬ್ಬರು ಹೊಯ್ಸಳ ಸಹೋದರರನ್ನು

ಹೊಡೆದೋಡಿಸುವದರಲ್ಲಿ ಯಶಸ್ವಿಯಾದರು. ಈ ದಿಗ್ವಿಜಯವನ್ನು ಯಲ್ಬುರ್ಗಿಯಲ್ಲಿ ಸುಮಾರು ಎಪ್ಪತ್ತು ವರ್ಷಗಳವರೆಗೆ ಆಚರಿಸಿದರೆಂದು ತಿಳಿದು ಬರುತ್ತದೆ. ನರೆಗಲ್‌ನ ಒಂದು ಶಾಸನ ಹೊಯ್ಸಳರ ಮೇಲಿನ ವಿಜಯವನ್ನು ಅನಂತರ ಗೋವಾದ ಮೇಲೆ ಮಾಡಿದ ಧಾಳಿಯನ್ನು, ಉಚ್ಚಂಗಿಯ ಪಾಂಡ್ಯರನ್ನು ಸದೆಬಡಿದುದನ್ನು, ಬೆಟ್ಟಗಳಲ್ಲಿ ವಾಸಿಸುತ್ತಿದ್ದ ಮಳಪರನ್ನು ಸದೆಬಡಿದುದನ್ನು ವಿವರಿಸುತ್ತದೆ. ಅದೇ ಶಾಸನ ವಿಕ್ರಮಾದಿತ್ಯನ ಆಜ್ಞಾನುಸಾರ ಕೊಂಕಣ ಪ್ರದೇಶವನ್ನು ವಶಪಡಿಸಿಕೊಂಡಿದುದನ್ನು ವಿವರಿಸುತ್ತದೆ. ಪೆರ್ಮಾಡಿಯು ಕದಂಬ ಜಯಕೇಸಿಯನ್ನು ಅಟ್ಟಿಸಿಕೊಂಡು ಹೋದನು ಎಂಬುದನ್ನು ವಿವರಿಸುತ್ತದೆ. ಮೇಲಿನ ಶಾಸನದಿಂದ ಎಷ್ಟರಮಟ್ಟಿಗೆ ಬಲ್ಲಾಳ ಮತ್ತು ಅವನ ಸಹೋದರ ವಿಷ್ಣುವರ್ಧನ ಒಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಲು ಪ್ರಯತ್ನ ಪಟ್ಟರು ಎಂಬುದು ಅರ್ಥವಾಗುತ್ತದೆ.[11]

ಸಿಂದ ನಾಯಕರುಗಳಿಂದ ಸೋಲನ್ನನುಭವಿಸಿದುದರಿಂದ ಒಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಬೇಕೆಂಬ ಹೊಯ್ಸಳ ಸಹೋದರರ ಆಸೆ ನುಚ್ಚುನೂರಾಯಿತು. ಈ ಸೋಲಿನಿಂದ ಹೊಯ್ಸಳ ರಾಜ್ಯದ ಮೇಲೆ ಹೆಚ್ಚಿನ ಮಟ್ಟಿಗೆ ದುಷ್ಪರಿಣಾಮ ಉಂಟಾಯಿತು. ಒಂದನೇ ಬಲ್ಲಾಳನು ತನ್ನ ರಾಜ್ಯದ ಉತ್ತರದ ಗಡಿಯಲ್ಲಿದ್ದ ಕೆಲವು ಭಾಗಗಳನ್ನು ಕಳೆದು ಕೊಂಡಿದುದರಿಂದ ಬರುತ್ತಿದ್ದ ಆದಾಯದಲ್ಲಿ ಕುಂಟಿತವಾಯಿತು. ಇದರ ಜೊತೆಗೆ ಪುನಃ ಉಚ್ಚಂಗಿಯ ಪಾಂಡ್ಯ ಅರಸನು ವಿಕ್ರಮಾದಿತ್ಯನ ಸಾರ್ವಭೌಮತ್ವವನ್ನು ಒಪ್ಪಿಕೊಂಡನು. ಈ ರೀತಿಯಾಗಿ ಒಂದನೆಯ ಬಲ್ಲಾಳನ ಆಳ್ವಿಕೆಯ ಕೊನೆಯ ದಿನಗಳು ನಿರಾಸೆಯಿಂದ ಕೂಡಿದ್ದವು. ಅವನು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಬೇಕೆಂಬ ಆಸೆ ಈಡೇರಲಿಲ್ಲ. ವಿಷ್ಣುವರ್ಧನನು ಬಹಳ ವಿದೇಯನಾಗಿ ತನ್ನ ಅಣ್ಣನಿಗೆ ಸೇವೆ ಸಲ್ಲಿಸಿದನು. ಹೇಗೆ ಲಕ್ಷ್ಮಣನು ರಾಮನಿಗೆ ಅತ್ಯಂತ ವಿಧೇಯತೆಯಿಂದ ನಡೆದುಕೊಂಡಿದ್ದನೋ ಅದೇ ರೀತಿ ವಿಷ್ಣುವರ್ಧನನು ಕೂಡ ತನ್ನ ಹಿರಿಯ ಸಹೋದರ ಬಲ್ಲಾಳನಿಗೆ ಅತ್ಯಂತ ನಮ್ರತೆಯಿಂದ ನಡೆದುಕೊಂಡನೆಂದು ವಿವರಿಸಲಾಗಿದೆ. ಒಟ್ಟಿನಲ್ಲಿ ಮೇಲಿನ ವಿವರಣೆಯಿಂದ ವಿಷ್ಣುವರ್ಧನನು ತನ್ನ ತಾತನ ಕಾಲದಿಂದಲೂ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಸಾಕಷ್ಟು ಅನುಭವವನ್ನು ಹೊಂದಿದ್ದನು.

### 4.2.1 ವಿಷ್ಣುವರ್ಧನನ ಪಟ್ಟಾಭಿಷೇಕ

ಒಂದನೆಯ ಬಲ್ಲಾಳನಿಗೆ ಗಂಡು ಮಕ್ಕಳಿಲ್ಲದೆ ಇದ್ದುದರಿಂದ ಕ್ರಿ.ಶ.1108ರಲ್ಲಿ ಅವನ ಮರಣಾನಂತರ ಯುವರಾಜ ವಿಷ್ಣುವರ್ಧನನು ಹೊಯ್ಸಳ ಸಿಂಹಾಸನವನ್ನಲಂಕರಿಸಿದನು. ಒಂದನೇ ಬಲ್ಲಾಳನು ತನ್ನ ಮಹಾಮಾಂಡಳಿಕನಾಗಿದ್ದ ಮರಿಯಾನೆ ದಂಡನಾಯಕನ

ಮೂವರು ಪುತ್ರಿಯರನ್ನು ವಿವಾಹವಾದರೂ ಕೂಡ ಪುತ್ರ ಸಂತಾನದ ಭಾಗ್ಯವಿರಲಿಲ್ಲ. ಆದ್ದರಿಂದ ಸುಮಾರು ಕ್ರಿ.ಶ.1108ರಲ್ಲಿ ವಿಷ್ಣುವರ್ಧನನು ರಾಜನಾಗಿ ಕ್ರಿ.ಶ.1142ರವರೆಗೆ ಅಂದರೆ 34 ವರ್ಷಗಳ ಕಾಲ ಆಳ್ವಿಕೆ ನಡೆಸಿದನು.

ಹೊಯ್ಸಳ ವಿಷ್ಣುವರ್ಧನನ ಕಾಲ ಹೊಯ್ಸಳರ ಇತಿಹಾಸದಲ್ಲಿ ಅತ್ಯಂತ ಪ್ರಮುಖ ಘಟ್ಟವೆಂದು ಹೇಳಬಹುದು. ತಂದೆ ಮತ್ತು ಅಣ್ಣನ ಜೊತೆಯಲ್ಲಿ ಆಡಳಿತದಲ್ಲಿ ಮತ್ತು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದು, ರಾಜನಾದ ನಂತರ ಆ ಅನುಭವವನ್ನು ಪೂರ್ಣವಾಗಿ ಉಪಯೋಗಿಸಿಕೊಂಡು, ಹೊಯ್ಸಳ ಬಲವನ್ನು ಸರ್ವತೋಮುಖವಾಗಿ ವರ್ಧಿಸಿ, ಕೇವಲ ಕೆಲವೇ ಪ್ರಾಂತ್ಯಗಳಿಂದ ಕೂಡಿದ್ದ ರಾಜ್ಯವನ್ನು ಬಹುಮಟ್ಟಿಗೆ ವಿಸ್ತರಿಸಿ ಸ್ವತಂತ್ರ ಹೊಯ್ಸಳ ರಾಜ್ಯವನ್ನು ಕಟ್ಟಿದ.[12] ಈತ ಸಮಕಾಲೀನ ದಕ್ಷಿಣ ಭಾರತದ ರಾಜಕೀಯದಲ್ಲಿ ವಿಶೇಷ ಶಕ್ತಿಗಳಾಗಿದ್ದ ಚೋಳ ಚಾಲುಕ್ಯರಿಬ್ಬರನ್ನು ಎದುರಿಸಿ ಈ ಪ್ರದೇಶದ ಮೂರನೆಯ ಶಕ್ತಿಯಾಗಿ ನೆಲೆಗೊಂಡು, ಮುಂದೆ ಸುಮಾರು 200 ವರ್ಷಗಳ ಕಾಲ ಕರ್ನಾಟಕದಲ್ಲೇ ಅಲ್ಲದೆ, ಇಡೀ ದಕ್ಷಿಣ ಭಾರತದ ಇತಿಹಾಸದಲ್ಲಿ ಅಪ್ರತಿಮವಾಗಿ ಮೆರೆದ ಹೊಯ್ಸಳ ಬಲದ ಸ್ಥಾಪಕನಾದನು. ವಿಷ್ಣುವರ್ಧನನ ಕಾಲ ಹೊಯ್ಸಳರ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದ ಘಟ್ಟವೆಂದು ಹೇಳಬಹುದು. ಅವನು ಅಧಿಕಾರಕ್ಕೆ ಬಂದ ಮೇಲೆ ಹೊಯ್ಸಳ ರಾಜ್ಯ ವಿಸ್ತಾರಗೊಂಡಿದುದಲ್ಲದೆ ಒಂದು ಪ್ರಬಲ ರಾಜ್ಯವಾಗಿ ಪರಿವರ್ತನೆಗೊಂಡಿತು.

ವಿಷ್ಣುವರ್ಧನನ ಕಾಲದ ದಿಗ್ವಿಜಯಗಳನ್ನು ಎರಡು ಭಾಗಗಳಲ್ಲಿ ಅಧ್ಯಯನ ಮಾಡಬಹುದು. ಮೊದಲನೆಯ ಘಟ್ಟ ಕ್ರಿ.ಶ.1108ರಿಂದ 1128ರವರೆಗೆ,[13] ಎರಡನೆಯ ಘಟ್ಟವನ್ನು 1129ರಿಂದ 1142ರವರೆಗೆ ಎಂದು ವಿಭಾಗ ಮಾಡಬಹುದು. ಮೊದಲನೆಯ ಘಟ್ಟ ಅತ್ಯಂತ ಹೆಚ್ಚಿನ ಆಕರ್ಷಣೆಯಿಂದ ಕೂಡಿದೆ. ಈ ಕಾಲದಲ್ಲಿ ವಿಷ್ಣುವರ್ಧನನು ರಾಜ್ಯದ ಸಂಪನ್ಮೂಲ-ಗಳನ್ನು ಕ್ರೋಢಿಕರಿಸಿ ರಾಜ್ಯವನ್ನು ಬಲಪಡಿಸುವುದರಲ್ಲಿ ಯಶಸ್ವಿಯಾದನು ಹಾಗೂ ಅದನ್ನು ವಿಸ್ತರಿಸುವುದರಲ್ಲಿ ಯಶಸ್ವಿಯಾದನು. ಆದರೆ ಎರಡನೆಯ ಘಟ್ಟದಲ್ಲಿ ಅವನು ತನ್ನ ಪ್ರಜೆಗಳ ಮೇಲೆ ಹೆಚ್ಚಿನ ತೆರಿಗೆಯನ್ನು ವಿಧಿಸಿ ತನ್ನ ಸೈನ್ಯದ ಬಲವನ್ನು ಹೆಚ್ಚಿಸಿಕೊಂಡು ತನ್ನ ರಾಜ್ಯವನ್ನು ರಕ್ಷಿಸಲು ಅನೇಕ ರೀತಿಯಾದ ಸಿದ್ಧತೆಗಳನ್ನು ಮಾಡಿಕೊಂಡನು. ಏಕೆಂದರೆ ಕಲ್ಯಾಣಿ ಚಾಲುಕ್ಯರಿಂದ ಹೊಯ್ಸಳ ರಾಜ್ಯಕ್ಕೆ ಅಪಾಯ ಇತ್ತು.

ಶಾಸನಗಳು ವಿಷ್ಣುವರ್ಧನನ ದಿಗ್ವಿಜಯಗಳ ಬಗ್ಗೆ ಒಂದು ಸುದೀರ್ಘ ವಿವರಣೆ ನೀಡಲು ಹೆಚ್ಚಿನ ಸಹಾಯ ನೀಡುವುದಿಲ್ಲ. ಆದರೂ ಕೂಡ ದೊರಕತಕ್ಕ ಶಾಸನಾಧಾರಗಳ ಸಹಾಯದಿಂದ

ಅವನ ಕಾಲದ ಯುದ್ಧಗಳ ಬಗ್ಗೆ ಚರ್ಚಿಸಲು ಅಷ್ಟೇನು ತೊಂದರೆಯಾಗುವುದಿಲ್ಲ. ಒಂದನೆಯ ಬಲ್ಲಾಳನ ಕಾಲದಲ್ಲಿ 1103ರಲ್ಲಿ ಚಾಲುಕ್ಯ ಸಾಮಂತನಿಂದ ಹೊಯ್ಸಳರು ಸೋಲನ್ನನುಭವಿಸಿದ ಮೇಲೆ ಅವರು ಹಲವು ವರ್ಷಗಳವರೆಗೆ ತಮಗುಂಟಾಗಿದ್ದ ಆರ್ಥಿಕ ನಷ್ಟವನ್ನು ತುಂಬಿಕೊಳ್ಳಲು ಹೆಚ್ಚು ಸಮಯವನ್ನು ವ್ಯಯ ಮಾಡಬೇಕಾಯಿತು. ವಿಷ್ಣುವರ್ಧನನು ಹೊಯ್ಸಳ ರಾಜ್ಯದ ಸಿಂಹಾಸನವನ್ನು ಅಲಂಕರಿಸಿದ ಮೇಲೆ ಎರಡು ಆಶಯಗಳನ್ನು ಹೊಂದಿದ್ದನು. ಮೊದಲನೆ-ಯದಾಗಿ ಗಂಗವಾಡಿ ಮತ್ತು ನೊಳಂಬವಾಡಿ ಪ್ರದೇಶಗಳನ್ನು ಚೋಳರ ಆಳ್ವಿಕೆಯಿಂದ ಪಾರುಮಾಡುವುದು, ಎರಡನೆಯದಾಗಿ ಚಾಲುಕ್ಯರ ಅಧೀನತೆಯನ್ನು ಕೊನೆಗೊಳಿಸಿ ತನ್ನ ಮನೆತನದ ಸ್ವತಂತ್ರ ಆಳ್ವಿಕೆಯನ್ನು ಸ್ಥಾಪಿಸುವುದು. ಈ ಧ್ಯೇಯಗಳ ಸಾಧನೆಗಳಿಗಾಗಿ ಕಾರ್ಯೋನ್ಮುಖನಾದನು. ಸಿಂಹಾಸನಕ್ಕೆ ಬಂದ ಕೂಡಲೇ ಆಡಳಿತವನ್ನು ಬಿಗಿಗೊಳಿಸಿ, ಸೈನ್ಯವನ್ನು ಹೆಚ್ಚಿಸಿಕೊಂಡನು. ಆಡಳಿತದಲ್ಲಿ ಹೆಚ್ಚು ನುರಿತವರನ್ನು ಮತ್ತು ಪರಾಕ್ರಮಿಗಳನ್ನು ಸಚಿವ ಮತ್ತು ದಂಡನಾಯಕರುಗಳನ್ನಾಗಿ ನೇಮಿಸಿಕೊಂಡನು. ಶೂರನೂ, ಅನುಭವಿಯೂ, ದಕ್ಷನೂ ಆದ ಗಂಗರಾಜನನ್ನು ತನ್ನ ಪ್ರಧಾನ ದಂಡನಾಯಕನನ್ನಾಗಿ ನೇಮಿಸಿದನು.[14]

ಅನಂತರವೇ ವಿಷ್ಣುವರ್ಧನನು ತನ್ನ ರಾಜ್ಯದ ನಾನಾ ದಿಕ್ಕುಗಳಲ್ಲಿ ಯುದ್ಧವನ್ನು ಕೈಗೊಳ್ಳಲು ಒಂದು ದೊಡ್ಡ ಯೋಜನೆಯನ್ನು ರೂಪಿಸಿಕೊಂಡನು. ಆದರೆ ಈ ಯುದ್ಧಗಳನ್ನು ಕೈಗೊಳ್ಳುವುದಕ್ಕೆ ಮೊದಲು ಒಂದು ಪ್ರಮುಖ ರಾಜತಾಂತ್ರಿಕ ನಿರ್ಧಾರವನ್ನೂ ಕೈಗೊಂಡನು ಯಾವುದೇ ರೀತಿಯಿಂದಲೂ ತನ್ನ ರಾಜ್ಯ ವಿಸ್ತರಣಾ ನೀತಿಯ ಸಮಯದಲ್ಲಿ ತನ್ನ ಸಾರ್ವಭೌಮನಾದ ಆರನೆಯ ವಿಕ್ರಮಾದಿತ್ಯನ ಮನಸ್ಸಿನ ಮೇಲೆ ಯಾವುದೇ ರೀತಿಯಾದ ದುಷ್ಪರಿಣಾಮ ಬೀರದಂತೆ ಎಚ್ಚರಿಕೆ ವಹಿಸಲು ನಿರ್ಧರಿಸಿದನು. ಆದ್ದರಿಂದ ಮೊದಲು ತನ್ನ ರಾಜ್ಯದ ಉತ್ತರದಲ್ಲಿದ್ದ ಚಾಲುಕ್ಯರ ಮಹಾಮಾಂಡಳಿಕರೆನಿಸಿಕೊಂಡಿದ್ದ ಸಣ್ಣ ಪುಟ್ಟ ರಾಜ್ಯಗಳ ಮೇಲೆ ಧಾಳಿ ಮಾಡಲು ಇಚ್ಛಿಸಲಿಲ್ಲ. ವಿಷ್ಣುವರ್ಧನನು ಪ್ರಮುಖವಾಗಿ ತನ್ನ ರಾಜ್ಯದ ದಕ್ಷಿಣದ ಕಡೆಗೆ ಇದ್ದ ರಾಜ್ಯಗಳ ಕಡೆ ತಿರುಗಿದನು. ಆದ್ದರಿಂದ ಮೊದಲು ತನ್ನ ರಾಜ್ಯದ ದಕ್ಷಿಣಕ್ಕಿದ್ದ ಚೋಳರ ಪ್ರದೇಶಗಳ ಮೇಲೆ ಧಾಳಿ ಮಾಡಲು ನಿರ್ಧರಿಸಿದನು.

### 4.2.2 ತಲಕಾಡು ಯುದ್ಧ

ಸುಮಾರು ಹತ್ತನೆಯ ಶತಮಾನದ ಮಧ್ಯಭಾಗದ ವೇಳೆಗೆ ಚೋಳರು ಗಂಗವಾಡಿ ಪ್ರದೇಶಗಳ ಮೇಲೆ ಧಾಳಿ ಮಾಡಲು ಪ್ರಾರಂಭಿಸಿದರು. ಅಂತಿಮವಾಗಿ ಕ್ರಿ.ಶ.1004[15]ರಲ್ಲಿ ಚೋಳರು ತಲಕಾಡನ್ನು ಗೆದ್ದುಕೊಂಡಿದುದರಿಂದ ಸುಮಾರು ಏಳುನೂರು ವರ್ಷಗಳಿಗಿಂತ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದ ಗಂಗರ ಅಧಿಕಾರ ಕೊನೆಗೊಂಡಿತು. ಗಂಗವಾಡಿಯ

ತಲಕಾಡನ್ನೊಳಗೊಂಡಂತೆ ಇನ್ನಿತರ ಅನೇಕ ಪ್ರಾಂತ್ಯಗಳು ಚೋಳರ ವಶವಾದವು. ಚೋಳರು ತಮ್ಮ ಪ್ರಾಂತ್ಯಾಧಿಕಾರಿಗಳನ್ನು ನೇಮಕ ಮಾಡಿ ತಲಕಾಡು ಮತ್ತು ಇನ್ನಿತರ ಸ್ಥಳಗಳಲ್ಲಿ ತಮ್ಮದೇ ಆದ ಸೈನಿಕ ತುಕಡಿಗಳನ್ನು ಕಾವಲಿಗಾಗಿ ನಿಯೋಜಿಸಿದರು.

ಆದರೆ ಕನ್ನಡಿಗರು ಚೋಳರ ಅಧಿಕಾರ ತಲಕಾಡಿನಲ್ಲಿ ಸ್ಥಾಪಿತವಾದಂದಿನಿಂದಲೂ ಅವರ ಆಳ್ವಿಕೆಯನ್ನು ವಿರೋಧಿಸಿರು. 'ಕಲ್ಯಾಣಿ ಚಾಲುಕ್ಯರ ಸಾಮಂತರು ಹಾಗೂ ತಲಕಾಡಿನ ಗಂಗರ ದೂರದ ಸಂಬಂಧಿಗಳು ಆಗಿರಬಹುದಾದ ಹೊಯ್ಸಳರು, ತಲಕಾಡನ್ನು ಚೋಳರು ಆಕ್ರಮಿಸಿಕೊಂಡಿದುದನ್ನು ಸಹಿಸಲಾರದೆ ಹೋದರು. ಆದುದರಿಂದ ಹೊಯ್ಸಳರು ಒಂದು ಅವಕಾಶಕ್ಕಾಗಿ ಕಾಯುತ್ತಿದ್ದರು. ಚೋಳರನ್ನು ಹೇಗಾದರೂ ಮಾಡಿ ಮೈಸೂರಿನಿಂದ ಹೊಡೆದೋಡಿಸಬೇಕೆಂಬ ಗುರಿಯನ್ನು ಹೊಂದಿದ್ದರು ಎಂಬುದಾಗಿ ಹೆಚ್. ಕೃಷ್ಣಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ. ಕ್ರಿ.ಶ.1006[16]ಲ್ಲಿ ಒಬ್ಬ ಹೊಯ್ಸಳ ದೊರೆಯನ್ನು ಚೋಳ ದಂಡನಾಯಕ ಅಪ್ರಮೇಯನು ಹಿಮ್ಮೆಟ್ಟಿಸಿದನೆಂದು ಒಂದು ಶಾಸನ ವಿವರಿಸುತ್ತದೆ. ಬಹುಶಃ ಈ ರೀತಿ ಹಿಮ್ಮೆಟ್ಟಿಸಲ್ಪಟ್ಟವನು ಒಂದನೇ ವಿನಯಾದಿತ್ಯನಿರಬಹುದೆಂದು ಊಹಿಸಲಾಗಿದೆ. ಒಂದನೇ ವಿನಯಾದಿತ್ಯನು ಕ್ರಿ.ಶ.1022[17]ರವರೆಗೆ ಆಳ್ವಿಕೆ ನಡೆಸಿದನು. ಆದರೆ ಕ್ರಿ.ಶ.1102ರ ಒಂದು ಶಾಸನ ಒಂದನೇ ಬಲ್ಲಾಳನು, ಆಳ್ವಖೇಡ, ಬಯಲುನಾಡು ಮತ್ತು ತಲಕಾಡು ಪ್ರದೇಶಗಳ ಮೇಲೆ ಆಳ್ವಿಕೆ ನಡೆಸುತ್ತಿದ್ದನೆಂದು ವಿವರಿಸುತ್ತದೆ. ಒಂದನೆಯ ಬಲ್ಲಾಳನು ತಲಕಾಡನ್ನು ಗೆದ್ದುಕೊಂಡಿರಲಿಲ್ಲ. ಬಹುಶಃ ಇದು ಪರೋಕ್ಷವಾಗಿ ಹೇಗಾದರೂ ಮಾಡಿ ತಲಕಾಡನ್ನು ಹೊಯ್ಸಳ ರಾಜ್ಯಕ್ಕೆ ಸೇರಿಸಕೊಳ್ಳಬೇಕೆಂಬ ಆಸೆಯನ್ನು ಹೊಯ್ಸಳರು ಹೊಂದಿದ್ದನ್ನು ಸೂಚಿಸುತ್ತದೆ. ಚೋಳರಿಂದ ಕನ್ನಡ ನಾಡನ್ನು ಬಿಡುಗಡೆ ಮಾಡಲು ಅವರು ನಿರ್ಧರಿಸಿದ್ದರು.

ವಿಷ್ಣುವರ್ಧನನು ತನ್ನ ಪೂರ್ವಜರು ಮಾಡಿದ್ದ ಪ್ರಯತ್ನಗಳ ವಿಫಲತೆಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದನು. ಆದುದರಿಂದ ವಿಷ್ಣುವರ್ಧನನು ಹಚ್ಚಿನ ಜಾಗರೂಕತೆಯಿಂದ ತಲಕಾಡನ್ನು ಮುತ್ತಲು ಸಿದ್ಧತೆಗಳನ್ನು ಮಾಡಿಕೊಂಡನು. ಈ ಯುದ್ಧದ ಸಿದ್ಧತೆಗೆ ಹಲವು ಸಾಮಾಂತರ ಸಹಾಯವನ್ನು ಪಡೆದುಕೊಂಡನು. ಅನಂತರ ಈ ಕಾರ್ಯವನ್ನು ಹೆಚ್ಚಿನ ಸಾಮರ್ಥ್ಯವನ್ನು ಹೊಂದಿದ್ದ ಮತ್ತು ಅಪಾರ ವಿಶ್ವಾಸವನ್ನಿಟ್ಟಿದ್ದ ದಂಡನಾಯಕ ಗಂಗರಾಜನಿಗೆ ವಹಿಸಿದನು. ಅವನಿಗೆ ಬಿಂಡಿಗನವೋಲೆ ಗ್ರಾಮವನ್ನು ದತ್ತಿಯನ್ನಾಗಿ ನೀಡಿ ಪ್ರೋತ್ಸಾಹಿಸಿದನು.

ರಾಜಕೀಯ ಪರಿಸ್ಥಿತಿಯು ಕೂಡ ವಿಷ್ಣುವರ್ಧನನಿಗೆ ಹೆಚ್ಚು ಅನುಕೂಲವಾಗಿತ್ತು. ಅಂತಹ ಸಮಯವನ್ನೇ ವಿಷ್ಣುವರ್ಧನನು ತಲಕಾಡಿನ ಮೇಲೆ ಧಾಳಿ ಮಾಡಲು ಆರಿಸಿ–

ಕೊಂಡನು. ಚೋಳರು ಮತ್ತು ಕಲ್ಯಾಣಿ ಚಾಲುಕ್ಯರು ಶತ್ರುಗಳಾಗಿದ್ದು, ಎರಡು ಮನೆತನಗಳು ವೆಂಗಿಯ ಮೇಲೆ ಹಿಡಿತ ಸಾಧಿಸಲು ನಿರಂತರವಾಗಿ ಹೋರಾಟ ನಡೆಸುತ್ತಲೇ ಇದ್ದವು. ಚೋಳ ರಾಜನು ಈ ವೇಳೆಯಲ್ಲಿ ವೆಂಗಿಯ ಘಟನಾವಳಿಗಳಲ್ಲಿ ತಲ್ಲೀನನಾಗಿದ್ದನು. ಆದುದರಿಂದ ಗಂಗವಾಡಿಯ ವಾಯುವ್ಯದ ಮೂಲಕ ಹೊಯ್ಸಳ ಸೈನ್ಯ ತಲಕಾಡಿನ ಕಡೆಗೆ ಧಾವಿಸಿತು. ಅದು ಕನ್ನಂಬಾಡಿಯ ಮೂಲಕ ಹಾದು ಹೋಯಿತು.

ಗಂಗರಾಜನ ಧಾಳಿಯ ಸುದ್ದಿಯು ತಲಕಾಡಿನಲ್ಲಿದ್ದ ಚೋಳ ಪ್ರಾಂತಾಧಿಕಾರಿಗೆ ತಲುಪಿತು. ಅವನು ಪ್ರಸಿದ್ಧ ತಗಡೂರಿನ ಆದಿಗಾಯಿಮನ್ ಕುಟುಂಬಕ್ಕೆ ಸೇರಿದವನಾಗಿದ್ದನು. ಅಂದರೆ ಘಟ್ಟ ಪ್ರದೇಶದ ಕೆಳಭಾಗವಾಗಿದ್ದ ಧರ್ಮಪುರಿಗೆ ಸೇರಿದವನಾಗಿದ್ದನು. ಆದರೆ ಕನ್ನಡಿಗರು ಅವನನ್ನು ಆದಿಗ ಅಥವಾ ಆದಿಯಮ ಎಂದು ಕರೆಯುತ್ತಿದ್ದರು. ಆದರೆ ಆದಿಯಮನು ಕಾವೇರಿ ನದಿಯ ಪೂರ್ವಭಾಗದಲ್ಲಿ ಸೈನ್ಯವನ್ನು ಜಮಾಯಿಸುವುದರ ಬದಲು ಅದನ್ನು ದಾಟಿ ಗಂಗ ರಾಜನ ಸೈನ್ಯವನ್ನು ಎದುರಿಸಲು ಪ್ರಯತ್ನಿಸಿದನು. ಇಂತಹ ನಿರ್ಧಾರಕ್ಕೆ ಕಾರಣವೇನು ಎಂಬುದು ಸರಿಯಾಗಿ ತಿಳಿಯದು. ಅವನು ಹೊಯ್ಸಳ ಸೈನ್ಯ ಅಂತಹ ಪ್ರಬಲ ಸೈನ್ಯವಾಗಿದಲ್ಲದೆ ಇರಬಹುದೆಂದು ಊಹಿಸಿ ಇಂತಹ ನಿರ್ಧಾರಕ್ಕೆ ಬಂದಿರಬಹುದು.

ಗಂಗರಾಜನು ಚೋಳ ಪ್ರಾಂತ್ಯಾಧಿಕಾರಿಯಾಗಿದ್ದ ಆದಿಯಮನನ್ನು ಬರಮಾಡಿ–ಕೊಂಡು ಗಂಗವಾಡಿ ಪ್ರದೇಶವನ್ನೂ ಬಿಟ್ಟುಕೊಡುವಂತೆ ಕೇಳಿಕೊಂಡನು. ಆದರೆ ಚೋಳ ಪ್ರಾಂತ್ಯಾಧಿಕಾರಿ ಸಾಮರ್ಥ್ಯವಿದ್ದರೆ ಯುದ್ಧ ಮಾಡಿ ಗೆದ್ದುಕೊ[18] ಎಂದು ಉತ್ತರಿಸಿದನು. ಆದ್ದರಿಂದ ಗಂಗರಾಜನು ಆದಿಯಮನೊಡನೆ ಯುದ್ಧವನ್ನು ಘೋಷಿಸಿದನು.

ಈ ಯುದ್ಧದಲ್ಲಿ ವಿಷ್ಣುವರ್ಧನನ ದಂಡನಾಯಕರುಗಳಾಗಿದ್ದ ಗಂಗರಾಜನ ಜೊತೆಗೆ, ಇಮ್ಮಡಿ ದಂಡನಾಯಕ, ಬಿಟ್ಟಿಯಣ್ಣ ಹಾಗೂ ದಂಡನಾಯಕ ಚೋಕಿಮಯ್ಯ ಭಾಗವಹಿಸಿದ್ದರು. ಚೋಳರ ಕಡೆ ಆದಿಯಮ, ದಾಮೋದರ ಮತ್ತು ನರಸಿಂಗವರ್ಮ ಮೊದಲಾದ ದಂಡನಾಯಕರುಗಳು ಭಾಗವಹಿಸಿದ್ದರು. ಭೀಕರ ಹೋರಾಟ ನಡೆಯಿತು. ಅನೇಕ ಚೋಳ ಸೈನಿಕರು ಕಾವೇರಿ ನದಿಯಲ್ಲಿ ಮುಳುಗಿ ಕೊಚ್ಚಿಕೊಂಡು ಹೋದರು. "ರಾಜೇಂದ್ರ ಚೋಳನು ಕಾವೇರಿ ನದಿಯು ಕಲುಷಿತಗೊಂಡಿದುದನ್ನು ನೋಡಿ ಜಿಗುಪ್ಸೆಗೊಂಡು, ರಾಜಧಾನಿಯ ಸುತ್ತಮುತ್ತ ಇದ್ದ ಬಾವಿಯ ನೀರನ್ನು ಉಪಯೋಗಿಸಬೇಕಾದ ಪರಿಸ್ಥಿತಿ ಉಂಟಾಯಿತು.

ವಿಷ್ಣುವರ್ಧನನು ಶತ್ರು ಸೈನಿಕರ ಹೆಣಗಳನ್ನು ಕಾವೇರಿ ನದಿಗೆ ಬಿಸಾಡಿದನು. ಈ ರೀತಿ ಅವನ ಶಕ್ತಿ ವಿಜೃಂಭಿಸಿತು"[19] ಎಂಬುದಾಗಿ ಒಂದು ಶಾಸನವು ವರ್ಣಿಸುತ್ತದೆ.

ಹೊಯ್ಸಳ ಸೈನ್ಯ ತಲಕಾಡನ್ನು ಮುತ್ತಿತು. ಚೋಳರ ಸೈನ್ಯ ಎಷ್ಟೇ ವೀರಾವೇಶದಿಂದ ಹೋರಾಡಿದರೂ ಅಂತಿಮವಾಗಿ ಹೊಯ್ಸಳ ಸೈನ್ಯ ನೆಲಸಮ ಮಾಡಿ ತಲಕಾಡನ್ನು ಪ್ರವೇಶಿಸಿತು. ಪಟ್ಟಣದೊಳಗೆ ನಡೆದ ಹೋರಾಟದಲ್ಲೂ ಚೋಳರ ಸೈನ್ಯ ಪುನಃ ಹೊಯ್ಸಳರ ಸೈನ್ಯದಿಂದ ಪರಾಭವಗೊಂಡಿತು. ಅನಂತರ ಚೋಳರ ಸೈನ್ಯ ದಿಕ್ಕಾಪಾಲಾಗಿ ಪಲಾಯನ ಮಾಡಿತು. ಬಹುತೇಕ ಚೋಳರ ಸೈನ್ಯ ನಾಶವಾಯಿತು. "ರಾಯರ ಪುರಕ್ಕೆ(ತಲಕಾಡು) ಬೆಂಕಿ ಹಚ್ಚಲಾಯಿತು. ಬೆಂಕಿಯಿಂದ ಬರುತ್ತಿದ್ದ ಹೊಗೆಯು ಕಂಚಿಯ ಕಡೆ ಗಾಳಿಯಲ್ಲಿ ಹರಡಿ ಹೋಯಿತು. ಇದನ್ನು ನೋಡಿದ ಪಾಂಡ್ಯ ಮತ್ತು ಚೋಳ ಅರಸರು ಭಯಭೀತರಾದರು" ಎಂದು ಶಾಸನವು ವರ್ಣಿಸುತ್ತದೆ. ಚೋಳರು ಗಂಗವಾಡಿಯಲ್ಲಿ ಆಕ್ರಮಿಸಿಕೊಂಡಿದ್ದ ಎಲ್ಲಾ ಪ್ರದೇಶಗಳಿಂದ ಅವರ ಸೈನ್ಯವನ್ನು ಹೊಡೆದೋಡಿಸಲಾಯಿತು. ಹೊಯ್ಸಳರ ಕಾಲದ ಅತ್ಯಂತ ಪ್ರಮುಖವಾದ ಹಾಗೂ ನಿರ್ಣಾಯಕ ಯುದ್ಧವಿದಾಗಿತ್ತು. ವಿಷ್ಣುವರ್ಧನನ ಅತ್ಯಂತ ಪ್ರಮುಖವಾದ ಹಾಗೂ ಪ್ರಚಂಡ ವಿಜಯ ಇದಾಗಿತ್ತು. ಈ ಯುದ್ಧದಿಂದ ಸುಮಾರು 110 ವರ್ಷಗಳ ಚೋಳರ ಆಳ್ವಿಕೆಯು ಗಂಗವಾಡಿಯಲ್ಲಿ ಕೊನೆಗೊಂಡಿತು.

ಈ ಯುದ್ಧದ ಕಾಲದ ಬಗ್ಗೆ ವಿವಿಧ ಅಭಿಪ್ರಾಯಗಳು ವ್ಯಕ್ತವಾಗಿವೆ. ಇದುವರೆಗೂ ಕೂಡ ಕ್ರಿ.ಶ.1116 ಅಥವಾ ಕ್ರಿ.ಶ.1117[20] ತಲಕಾಡು ಯುದ್ಧ ನಡೆದ ವರ್ಷವೆಂದು ಅಭಿಪ್ರಾಯ ಪಡಲಾಗಿತ್ತು. ಇತ್ತೀಚೆಗೆ ಪತ್ತೆ ಮಾಡಲ್ಪಟ್ಟ ಹಲವು ಶಾಸನಗಳು ಈ ವರ್ಷಕ್ಕಿಂತಲೂ ಮೊದಲೇ ಈ ಯುದ್ಧವು ನಡೆದಿದೆ ಎಂಬುವುದನ್ನು ಸ್ಪಷ್ಟಪಡಿಸುತ್ತವೆ. ಕ್ರಿ.ಶ.1113[21]ರ ನಾಲ್ಕು ಶಾಸನಗಳು ತಲಕಾಡಿನಲ್ಲಿ ಚೋಳರು ಆಳ್ವಿಕೆ ನಡೆಸುತ್ತಿದ್ದುದನ್ನು ತಿಳಿಸುತ್ತವೆ. ಆದರೆ ಕ್ರಿ.ಶ.1114[22]ರ ನಂತರ ಚೋಳರ ಒಂದು ಶಾಸನವು ತಲಕಾಡಿನಲ್ಲಿ ದೊರಕುವುದಿಲ್ಲ. ಆದರೆ ಅದೇ ವರ್ಷ ದೊರಕಿದ ಒಂದು ಶಾಸನ ವಿಷ್ಣುವರ್ಧನನು ಗಂಗವಾಡಿಯ ಮೇಲೆ ಆಳ್ವಿಕೆ ನಡೆಸುತ್ತಿದ್ದನೆಂದು ವಿವರಿಸುತ್ತದೆ. ಕ್ರಿ.ಶ.1115[23]ರಲ್ಲಿ ವಿಷ್ಣುವರ್ಧನನು ಹೊರಡಿಸಿದ ಎರಡು ಶಾಸನಗಳು ದೊರಕಿವೆ. ಅವುಗಳಲ್ಲಿ ಒಂದು ತಮಿಳು ಭಾಷೆಯಲ್ಲಿದೆ. ಅದು ವಿಷ್ಣುವರ್ಧನನನ್ನು "ತಲಕಾಡುಗೊಂಡ, ಭುಜಬಲ ವೀರರಂಗ ಹೊಯ್ಸಳ ದೇವ" ಆಳುತ್ತಿದ್ದನೆಂದು ವಿವರಿಸುತ್ತದೆ. ಕ್ರಿ.ಶ.1114[24]ರ ಶಾಸನಗಳು ಕೂಡ ವಿಷ್ಣುವರ್ಧನನು 'ತಲಕಾಡುಗೊಂಡ' ಎಂಬ ಬಿರುದನ್ನು ಧರಿಸಿದನೆಂದು ತಿಳಿಸುತ್ತದೆ. ಕ್ರಿ.ಶ.1114 ರಿಂದ ಚೋಳರ ಶಾಸನಗಳು ತಲಕಾಡಿನಲ್ಲಿ ದೊರಕದೆ ಇರುವುದರಿಂದ

ಕ್ರಿ.ಶ.1114 ವೇಳೆಗೆ ಅವರ ಆಳ್ವಿಕೆ ಅಂತ್ಯಗೊಂಡು ಹೊಯ್ಸಳರು ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದುದು ಮನದಟ್ಟಾಗುತ್ತದೆ. ಆದುದರಿಂದ ಕ್ರಿ.ಶ.1114ರಲ್ಲಿ ತಲಕಾಡು ಯುದ್ಧವು ನಡೆದಿದೆ ಎಂದು ನಿರ್ಣಯಿಸಬಹುದಾಗಿದೆ. ಇದರ ಜೊತೆಗೆ ಅವನು 'ವೀರರಂಗ' ಎಂಬ ಬಿರುದನ್ನು ಧರಿಸಿದನೆಂದು ವಿಷ್ಣುವರ್ಧನನು ಹೊರಡಿಸಿದ ಶಾಸನಗಳಿಂದ ಮೊಟ್ಟ ಮೊದಲನೆಯದಾಗಿ ತಿಳಿದುಬರುತ್ತದೆ. ಗಂಗವಾಡಿಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದುದರ ಜ್ಞಾಪಕಾರ್ಥವಾಗಿ ಈ ಬಿರುದನ್ನು ಹೊಂದಿದನು. ಅನಂತರ ಕ್ರಿ.ಶ.1117ರಲ್ಲಿ ಬೇಲೂರಿನಲ್ಲಿ ವಿಜಯನಾರಾಯಣ ಎಂಬ ದೇವಸ್ಥಾನವನ್ನು ನಿರ್ಮಿಸಿದನು.

ವಿಷ್ಣುವರ್ಧನನ ಶಾಸನಗಳು ಮತ್ತು ಅವನ ಉತ್ತರಾಧಿಕಾರಿಗಳ ಶಾಸನಗಳು ತಲಕಾಡನ್ನು ಗೆದ್ದುಕೊಂಡಿದುದರ ಬಗ್ಗೆ ಸಾಕಷ್ಟು ಮಾಹಿತಿಯನ್ನು ನೀಡುತ್ತವೆ. ಇದುವರೆಗೆ ತಲಕಾಡನ್ನು ಬಹಳ ವಿಜೃಂಭಣೆಯಿಂದ ಹಾಗೂ ಧೈರ್ಯದಿಂದ ಆಳ್ವಿಕೆ ನಡೆಸಿದ ಚೋಳರ ಸಾಮಂತರು ರಣರಂಗದಲ್ಲಿ ಬೆನ್ನು ತೋರಿಸಿ ಗಂಗರಾಜನ ಖಡ್ಗದ ಹೊಡೆತವನ್ನು ಸಹಿಸಲಾಗದೆ ಪಲಾಯನ ಮಾಡಿದರು. "ಚೋಳರ ಸಾಮಂತ ಆದಿಯಮನು ಸೈನ್ಯದ ಬಿಡಾರದ ಬಾಗಿಲಿನಂತೆ ತಲಕಾಡಿನಲ್ಲಿದ್ದನು. ಯಾವಾಗ ಎರಡು ಸೈನ್ಯಗಳು ಸಂಧಿಸಿದವೋ ಆಗ ಅವನು ಸೋಲಿಸಲ್ಪಟ್ಟು ಪಂದ್ಯದಲ್ಲಿ ಓಡುವಂತೆ ಪಲಾಯನ ಮಾಡಿದನು". ಮತ್ತೊಬ್ಬ ಸಾಮಂತ ತಿಗುಳದಾಮ (ದಾಮೋದರ) ಗಂಗರಾಜನ ಖಡ್ಗಕ್ಕೆ ಹೆದರಿ ಬೆನ್ನು ತೋರಿಸಿ ಓಡಿ ಹೋಗಿ, ಕಾಡಿನಲ್ಲಿ ಆಶ್ರಯ ಪಡೆದನು. ಅನಂತರ ಕಂಚಿಯ ಕಡೆ ಪಲಾಯನ ಮಾಡಿದನು ಎಂಬುದಾಗಿ ಮತ್ತೊಂದು ಶಾಸನ ವರ್ಣಿಸುತ್ತದೆ. ಮತ್ತೊಂದು ಶಾಸನ ವಿಷ್ಣುವರ್ಧನನು ಮತ್ತೊಬ್ಬ ಚೋಳದಂಡನಾಯಕ ನರಸಿಂಗವರ್ಮನನ್ನು ಸೋಲಿಸಿದುದನ್ನು ವಿವರಿಸುತ್ತದೆ. ನರಸಿಂಗವರ್ಮನು ಮಿಲಾಡು ಎಂಬ ಸಣ್ಣ ಪ್ರಾಂತ್ಯದಲ್ಲಿ ಚೋಳರ ಪ್ರಾಂತ್ಯಾಧಿಕಾರಿ-ಯಾಗಿದ್ದನು. ಅಂತಿಮವಾಗಿ ಅವನನ್ನು ಚೆಂಗೆರಿ ಎಂಬಲ್ಲಿ ಸೆರೆಹಿಡಿದು ಕೊಲೆ ಮಾಡಲಾಯಿತು.

ಶ್ರವಣಬೆಳಗೊಳದ ಒಂದು ಜೈನ ಶಾಸನ ಗಂಗರಾಜನನ್ನು ಅವನೊಬ್ಬನೆ ದಂಡೆತ್ತಿ ಹೋಗಿ ಶತ್ರುವಿನ ಸೈನ್ಯದ ಧೈರ್ಯವನ್ನು ಕುಂದಿಸಿ, ಘಟ್ಟದ ಪ್ರದೇಶದ ಮೇಲಿದ್ದ ಎಲ್ಲ ಸಾಮಂತರುಗಳನ್ನು ಹೊಡೆದೋಡಿಸಿ ಇಡೀ ನಾಡನ್ನು ವಿಷ್ಣುವರ್ಧನನ ಅಧಿಕಾರಕ್ಕೊಳ-ಪಡಿಸಿದನೆಂದು ವರ್ಣಿಸುತ್ತದೆ. ಈ ರೀತಿಯಾಗಿ ಗಂಗವಾಡಿಯಿಂದ ಚೋಳರ ನಿರ್ಗಮನ-ವಾಯಿತು. ಈ ಹಂತದಲ್ಲಿ ವಿಷ್ಣುವರ್ಧನ ಮತ್ತು ಅವನ ದಂಡನಾಯಕರು ತಮ್ಮ ಹೋರಾಟವನ್ನು ನಿಲ್ಲಿಸದೆ ಚೋಳರ ಸೈನ್ಯವನ್ನು ಅಟ್ಟಿಸಿಕೊಂಡು ಹೋದರು. ಚೋಳರ

ಪ್ರದೇಶಗಳ ಮೇಲೆ ತಮ್ಮ ಧಾಳಿಗಳನ್ನು ಮುಂದುವರಿಸಿದರು. ಚೋಳರ ಸಾಮಂತ ದಾಮೋದರ ಕಂಚಿಯ ಕಡೆಗೆ ಪಲಾಯನ ಮಾಡಿದನು. ವಿಷ್ಣುವರ್ಧನನು ಅವನನ್ನು ಕಂಚಿಯವರೆಗೆ ಅಟ್ಟಿಸಿಕೊಂಡು ಹೋದನು. ಈ ಘಟನೆಯನ್ನು ಅನೇಕ ಶಾಸನಗಳಲ್ಲಿ ವರ್ಣಿಸಲಾಗಿದೆ. ವಿಷ್ಣುವರ್ಧನನು ಕೊಲಾಲಪುರ (ಆಧುನಿಕ ಕೋಲಾರ), ವೆಲ್ಲೂರು ಮತ್ತು ನಂಗಲಿಯನ್ನು ಗೆದ್ದುಕೊಂಡನು. ಕೋಲಾರ, ವಿಷ್ಣುವರ್ಧನನ ಉಪರಾಜಧಾನಿಗಳ–ಲ್ಲೊಂದಾಯಿತು. ಕಂಚಿಯ ಮೇಲೆ ಧಾಳಿ ಮಾಡಿ ಅಲ್ಲಿಯ ಜನರಲ್ಲಿ ಭಯಭೀತಿಯನ್ನುಂಟು ಮಾಡಿದನು.

ಸಮಕಾಲೀನ ಆಕರಗಳ ಪ್ರಕಾರ ವಿಷ್ಣುವರ್ಧನನ ಸೈನ್ಯ ಕಂಚಿಯಿಂದ ದಕ್ಷಿಣ ದಿಕ್ಕಿನಲ್ಲಿ ರಾಮೇಶ್ವರದವರೆಗೂ ದಂಡೆತ್ತಿ ಹೋಯಿತೆಂದು ತಿಳಿದುಬರುತ್ತದೆ. ಮಧುರೈನ ಪಾಂಡ್ಯರಿಗೆ ಸೇರಿದ ಸೈನ್ಯದ ಜೊತೆ ಯುದ್ಧ ಮಾಡಿದನೆಂದು ಶಾಸನ ವರ್ಣಿಸುತ್ತದೆ. ಬಹುಶಃ ಈ ಸೈನ್ಯವನ್ನು ಚೋಳರಾಜನು ಕಳುಹಿಸಿ ಕೊಟ್ಟಿರಬಹುದು. ಆಗ ಪಾಂಡ್ಯರು ಚೋಳರ ಸಾಮಂತರಾಗಿದ್ದರು. ಬಹುಶಃ ಪಾಂಡ್ಯರು ವಿಷ್ಣುವರ್ಧನನ ದಂಡಯಾತ್ರೆಯನ್ನು ತಡೆಗಟ್ಟುವುದರಲ್ಲಿ ಯಶಸ್ವಿಯಾಗಲಿಲ್ಲವೆಂದು ಕಾಣುತ್ತದೆ.

ತಲಕಾಡಿನ ದಿಗ್ವಿಜಯದ ನಂತರ ಚೋಳರ ಹಿಡಿತದಲ್ಲಿದ್ದ ಹೆಂಜೇರು ಮತು ನಿಡುಗಲ್‌ನ ಮೇಲೆ ಧಾಳಿ ಮಾಡಲು ವಿಷ್ಣುವರ್ಧನನು ನಿರ್ಧರಿಸಿದನು. ಕೋಲಾರದ ವಾಯುವ್ಯಕ್ಕೆ ಸುಮಾರು ೧೮೩ ಕಿ.ಮೀ. ದೂರದಲ್ಲಿ ಹೆಂಜೇರು ಇತ್ತು. ಹೊಯ್ಸಳರು ತಾವು ಇತ್ತೀಚೆಗಷ್ಟೇ ಗೆದ್ದುಕೊಂಡಿದ್ದ ಪ್ರದೇಶಗಳ ಮೂಲಕವೇ ಹಾದು ಹೋಗಬೇಕಾಗಿತ್ತು. ಇರುಂಗೋಲ ಚೋಳನು ಹೊಯ್ಸಳ ರಾಜನ ಯೋಜನೆಗಳನ್ನು ತಡೆಗಟ್ಟುವುದಕ್ಕೆ ಪ್ರಯತ್ನ ನಡಸಿದನು. ವೇದಾವತಿ ಮತ್ತು ಪಿನಾಕಿನಿ ನದಿಗಳ ನಡುವೆ ಇದ್ದಂತಹ ಪ್ರದೇಶಗಳು ಹೆಚ್ಚು ಫಲವತ್ತಾಗಿದ್ದು ಚೋಳರಾಜನು ಹೆಚ್ಚಿನ ಭೂಕಂದಾಯವನ್ನು ಈ ಪ್ರದೇಶಗಳಿಂದ ಪಡೆಯುತ್ತಿದ್ದನು. ಈ ಪ್ರದೇಶಗಳಿಂದಲೇ ಅವನ ಅಧೀನದಲ್ಲಿದ್ದ ಸಿರೆನಾಡ ನಾಯಕನು ಮೂರು ವರ್ಷಗಳ ಹಿಂದೆ ಹೊಯ್ಸಳರ ಪ್ರದೇಶಗಳ ಮೇಲೆ ಧಾಳಿ ಮಾಡಿದ್ದನು. ಕೋಲಾರದಿಂದ ಹೆಂಜೇರುವಿನ ಕಡೆಗೆ ದಂಡೆತ್ತಿ ಹೋದ ಸಮಯದಲ್ಲಿ ಮಾರ್ಗದಲ್ಲಿದ್ದ ಸಾದಲಿ ಎಂಬ ಪ್ರದೇಶವನ್ನು ಗೆದ್ದುಕೊಂಡನು. ಅನಂತರ ಇರುಂಗೋಳನ ಸೈನ್ಯದೊಡನೆ ಹೋರಾಟ ನಡೆಸಿ ಭೂದಲಿ, ರೊಡ್ಡಮ್ ಮತ್ತು ವೆಲ್ಲೂರ್ ಸ್ಥಳಗಳನ್ನು ವಶಪಡಿಸಿಕೊಂಡನು. ಬೂದಲಿ ಮತ್ತು ರೊಡ್ಡಮ್‌ನನ್ನು ವಶಪಡಿಸಿಕೊಂಡಿದುದು ಚೋಳರಿಗೆ ಬಲವಾದ ಪೆಟ್ಟು ಬಿದ್ದಂತಾಯಿತು.

ರೊಡ್ಡಮ್ ಇರುಂಗೋಳ ಚೋಳನ ಕಿರೀಟದ ವಜ್ರದಂತಿತ್ತು. ಇರುಂಗೋಲ ಚೋಳನು ಧಾಳಿಯನ್ನು ಮುಂದುವರಿಸದೆ ವಿಷ್ಣುವರ್ಧನನಿಗೆ ಶರಣಾದನು. ಆದ್ದರಿಂದ ಪಿನಾಕಿನಿ ನದಿಯಿಂದ ಪಶ್ಚಿಮಕ್ಕಿದ್ದ ಪ್ರದೇಶದ ಮೇಲೆ ಧಾಳಿಯಾಗುವುದನ್ನು ತಡೆಗಟ್ಟಿದನು. ಅವನು ಯುದ್ಧದ ನಷ್ಟವನ್ನು ತುಂಬಿಕೊಡಲು ಒಪ್ಪಿಕೊಂಡಿದುದರಿಂದ ಅವನ ಪ್ರದೇಶವನ್ನು ಹಿಂದಕ್ಕೆ ನೀಡಿದನು. ಆದರೆ ಇರುಂಗೋಲ ಚೋಳನ ವಂಶಸ್ಥರು ಹೊಯ್ಸಳ ವಿರೋಧಿ ನೀತಿಯನ್ನು ಮುಂದುವರಿಸಿದರು.

ಇದೇ ವೇಳೆಯಲ್ಲಿ ತಲಕಾಡಿನ ಉತ್ತರಕ್ಕಿದ್ದ ಪ್ರದೇಶಗಳಲ್ಲಿ ಚೋಳರ ಪ್ರೋತ್ಸಾಹ–ದಿಂದಾಗಿ ಹಲವು ದಂಗೆಗಳು ಕಾಣಿಸಿಕೊಂಡವು. ಆದ್ದರಿಂದ ವಿಷ್ಣುವರ್ಧನನು ಇವರೆಲ್ಲರನ್ನು ಸದೆಬಡಿದು ತನ್ನ ಕಿರಿಯ ಸಹೋದರ ಉದಯಾದಿತ್ಯನನ್ನು ತಲಕಾಡಿನ ಪ್ರಾಂತ್ಯಾಧಿಕಾರಿ–ಯಾಗಿ ನೇಮಿಸಿದನು. ಹೀಗೆ ತಲಕಾಡಿನ ಸುತ್ತಮುತ್ತಣ ಪ್ರದೇಶಗಳಲ್ಲಿ ಶಾಂತಿ ಸ್ಥಾಪಿಸಲು ಕ್ರಮ ಕೈಗೊಳ್ಳುತ್ತಿರುವ ಸಮಯದಲ್ಲೇ ಆರನೆಯ ವಿಕ್ರಮಾದಿತ್ಯನು ವಿಷ್ಣುವರ್ಧನನನ್ನು ಆಸ್ಥಾನಕ್ಕೆ ಬರಬೇಕೆಂದು ಸುದ್ದಿ ಕಳುಹಿಸಿದನು.

ವಿಷ್ಣುವರ್ಧನನು ಕಂಚಿಯ ಮೇಲಿನ ಧಾಳಿಯ ಜ್ಞಾಪಕಾರ್ಥವಾಗಿ 'ಕಂಚಿಗೊಂಡ' ಎಂಬ ಬಿರುದನ್ನು ಧರಿಸಿದನು. ವಿಷ್ಣುವರ್ಧನನು ಕಂಚಿಯ ಮೇಲೆ ದಂಡೆತ್ತಿ ಹೋದ ಸಮಯದಲ್ಲಿ ಅವನ ಪ್ರಮುಖ ದಂಡನಾಯಕರುಗಳಲ್ಲೊಬ್ಬನಾದ ಚೋಕಿಮಯ್ಯನು ಪ್ರಮುಖ ಪಾತ್ರ ವಹಿಸಿದ್ದನು. ದಂಡನಾಯಕ ಚೋಕಿಮಯ್ಯ ಕಂಚಿಯ ಮತ್ತು ಕೋಂಗುವಿನ ರಾಜರನ್ನು ಸೋಲಿಸುವುದರಲ್ಲಿ ತನ್ನ ಧೈರ್ಯ ಮತ್ತು ಸಾಹಸವನ್ನು ಮೆರೆದನು. ಶತ್ರು ಸೈನ್ಯದ ಆನೆಗಳನ್ನು ವಶಪಡಿಸಿಕೊಂಡನು. ಈ ರೀತಿಯಾಗಿ ವಿಷ್ಣುವರ್ಧನನು ಚೋಳರ ಅಧಿಕಾರವನ್ನು ಗಂಗವಾಡಿಯಲ್ಲಿ ಕೊನೆಗೊಳಿಸಿ ಚೋಳರ ಅನೇಕ ಪ್ರದೇಶಗಳ ಮೇಲೆ ಧಾಳಿ ಮಾಡಿ ಅವರ ಪ್ರಾಬಲ್ಯವನ್ನು ಕುಗ್ಗಿಸುವುದರಲ್ಲಿ ಯಶಸ್ವಿಯಾದನು. ವಿಷ್ಣುವರ್ಧನನು ಈ ದಿಗ್ವಿಜಯದ ನಂತರ ಧರಿಸಿದ 'ತಲಕಾಡುಗೊಂಡ', 'ನೊಳಂಬವಾಡಿಗೊಂಡ' ಮತ್ತು 'ಕಂಚಿಗೊಂಡ' ಎಂಬ ಬಿರುದುಗಳನ್ನು ಅವನ ಉತ್ತರಾಧಿಕಾರಿಗಳು ಕೊನೆಯವರೆಗೂ ಧರಿಸಿದು. ಇದೊಂದು ದೊಡ್ಡ ಸಾಧನೆ. ಈ ದಿಗ್ವಿಜಯದ ಜ್ಞಾಪಾಕಾರ್ಥವಾಗಿ ಚಿನ್ನದ ನಾಣ್ಯಗಳನ್ನು ಹೊರಡಿಸಿ ಅವುಗಳ ಮೇಲೆ 'ತಲಕಾಡುಗೊಂಡ', 'ನೊಳಂಬವಾಡಿಗೊಂಡ' ಎಂಬ ಬಿರುದುಗಳನ್ನು ಅಚ್ಚು ಹಾಕಿಸಿದನು.[25]

ವಿಷ್ಣುವರ್ಧನನು ತಲಕಾಡನ್ನು ಗೆದ್ದುಕೊಂಡ ಮೇಲೆ ನೀಲಗಿರಿಯನ್ನು ಗೆದ್ದುಕೊಳ್ಳಲು ತನ್ನ ಮಂತ್ರಿ ಹಾಗೂ ದಂಡನಾಯಕ ಎರಡನೆಯ ಪುನಿಸಾಮಯ್ಯನನ್ನು ಕಳುಹಿಸಿಕೊಟ್ಟನು. ಚಾಮರಾಜ ನಗರದಲ್ಲಿ ದೊರಕಿರುವ ಕ್ರಿ.ಶ.1115[26]ರ ಒಂದು ಶಾಸನ ಎರಡನೆಯ ಪುನಿಸಾಮಯ್ಯನು ತೊಡವರು, ಕೊಂಗರು ಮತ್ತು ಮಲೆಯಾಳಿಗಳ ವಿರುದ್ಧ ಹೋರಾಟ ನಡೆಸಿದನೆಂದು ವಿವರಿಸುತ್ತದೆ. ಪುನಿಸಾಮಯ್ಯನು ಘಟ್ಟ ಪ್ರದೇಶಗಳ ಮೂಲಕ ಹಾದು ಹೋಗಿ ಅಂತಿಮವಾಗಿ ಶತ್ರು ಸೈನ್ಯವನ್ನು ಸೋಲಿಸಿ ನೀಲಗಿರಿಯನ್ನು ತನ್ನ ವಶಕ್ಕೆ ಕ್ರಿ.ಶ.1117[27]ರಲ್ಲಿ ತೆಗೆದುಕೊಂಡನು.

ನಂಗಲಿಯ ಈಶಾನ್ಯ ದಿಕ್ಕಿನಲ್ಲಿ ಹದಿನೈದು ಮೈಲಿಗಳು ದೂರದಲ್ಲಿದ್ದ ಕೊಯತೂರನ್ನು ಗೆದ್ದುಕೊಂಡನು. ಇದು ಚಿತ್ತೂರಿನ ಜಿಲ್ಲೆಯಲ್ಲಿರುವ ಲಡ್ಡಿ ಗ್ರಾಮವೆಂದು ಗುರ್ತಿಸಲ್ಪಟ್ಟಿದೆ. ನಂಗಲಿ ಮತ್ತು ಕೊಯತೂರು ನಡುವೆ ಲಾಡ ಮನೆತನದವರನ್ನು ವಿಷ್ಣುವರ್ಧನನು ಸೋಲಿಸಿರಬಹುದು. ಈ ಪ್ರದೇಶದಲ್ಲಿ ಸುಮಾರು 50 ವರ್ಷಗಳವರೆಗೆ ಈ ಮನೆತನ ನಡೆಸಿರಬಹುದು. ನಂತರದ ಶಾಸನಗಳಲ್ಲಿಯೂ ಕೂಡ ಈ ಮನೆತನವನ್ನು ಲಾಡ ಎಂದು ಕರೆಯಲಾಗಿದೆ.

ವಿಷ್ಣುವರ್ಧನನು ತೆರೆಯೂರನ್ನು ಗೆದ್ದುಕೊಂಡನೆಂದು ವಿವರಿಸಲಾಗಿದೆ. ತೆರೆಯೂರು ಹಿಂದೂಪುರದಿಂದ ಸುಮಾರು 71 ಕಿಲೋ ಮೀಟರ್ ದೂರದಲ್ಲಿತ್ತೆಂದು ವಿವರಿಸಲಾಗಿದೆ. ಬಹುಶಃ ಕಂಚಿಯ ಮೇಲೆ ದಂಡೆತ್ತಿ ಹೋಗುವ ಸಮಯದಲ್ಲಿ ಗೆದ್ದುಕೊಂಡಿರಬಹುದು. ಮೇಲೆ ವಿವರಿಸಿರುವಂತೆ ಇದೇ ಸಮಯದಲ್ಲಿ ವಿಷ್ಣುವರ್ಧನನು ಚೆಂಗಿರಿಯನ್ನು ವಶಪಡಿಸಿಕೊಂಡನು. ಚೆಂಗಿರಿಯು ಸೇಲಂ ಬೆಟ್ಟಗಳಲ್ಲಿ ಅಥವಾ ಉತ್ತರ ಆರ್ಕಾಟ್ ಜಿಲ್ಲೆಯ ಬೆಟ್ಟಗಳಲ್ಲಿತ್ತೆಂದು ವಿವರಿಸಲಾಗಿದೆ. ಚೆಂಗಿರಿಯ ರಾಜನು ಒಂದು ಪ್ರಬಲ ಸೈನ್ಯವನ್ನು ಹೊಂದಿದ್ದನೆಂದು ಶಾಸನಗಳು ತಿಳಿಸುತ್ತವೆ. ವಿಷ್ಣುವರ್ಧನನ ಒಂದು ಶಾಸನದಲ್ಲಿ ವೈನ್ಯ (Vainya) ಅವನ ಬಿಲ್ಲಿನಿಂದ ಪರ್ವತದಂತಿದ್ದಂತಹ ಚೆಂಗಿರಿಯ ಪೆರುಮಾಳ್‌ನನ್ನು ನಡುಗಿಸಿದನು. ಅವನ ಖಡ್ಗ ಚೆಂಗಿರಿಯ ಸರ್ಪವನ್ನು ನಾಶಪಡಿಸಲು ರಣಹದ್ದಾಗಿತ್ತು ಎಂದು ವರ್ಣಿಸಲಾಗಿದೆ. ಚೆಂಗಿರಿಯ ರಾಜನನ್ನು ಪೆರುಮಾಳ್ ಎಂದು ಕರೆಯುತ್ತಿದ್ದರು. ಈ ಸ್ಥಳದಲ್ಲೇ ನರಸಿಂಗವರ್ಮನ ರಾಣಿ ವಾಸದವರನ್ನೆಲ್ಲಾ ವಿಷ್ಣುವರ್ಧನನು ತನ್ನ ವಶಕ್ಕೆ ತೆಗೆದುಕೊಂಡನು. ಅನಂತರ ಹತ್ತಿರದ ಘಟ್ಟ ಪ್ರದೇಶಗಳಲ್ಲಿ ಅಂಗರ ಮತ್ತು ಸಿರಿಗಲಿ ಎಂಬುವವರು ಆಳ್ವಿಕೆ ನಡೆಸುತ್ತಿದ್ದರು ಎಂದು ಶಾಸನಗಳು ತಿಳಿಸುತ್ತವೆ. ಚೆಂಗಿರಿ ಪ್ರದೇಶವನ್ನು ನೋಡಿಕೊಳ್ಳಲು ಚೋಳ ರಾಜನಿಗೆ

ಅವಿಧೇಯನಾಗಿದ್ದ ಪಟ್ಟಿಪೆರುಮಾಳ್ ಎಂಬ ದಂಡನಾಯಕನನ್ನು ನೇಮಕ ಮಾಡಿದನು. ಚೆಂಗಿರಿಯ ದಿಗ್ವಿಜಯದಿಂದ ವಿಷ್ಣುವರ್ಧನನು ಅತ್ಯಂತ ಹೆಚ್ಚು ಸುಪ್ರೀತನಾದನು. ಅನೇಕ ವರ್ಷಗಳವರೆಗೆ ಈ ದಿಗ್ವಿಜಯ ಸ್ಥಳೀಯರ ಮನಸ್ಸಿನಲ್ಲಿ ಬೇರೂರಿತ್ತು. ಈ ಯುದ್ಧದ ಎಂಟು ವರ್ಷಗಳ ನಂತರ ಹೊರಡಿಸಿದ ಶಾಸನವು ಆದಿಯಮನು ಪಂದ್ಯದಲ್ಲಿ ಓಡುವಂತೆ ಓಡಿದ. ಅದೇ ರೀತಿ ನರಸಿಂಗವರ್ಮ ದಾಪುಕಾಲಾಕಿ ಓಡಿದ ಎಂದು ವರ್ಣಿಸುತ್ತದೆ.

ವಿಷ್ಣುವರ್ಧನನು ಚೋಳ ರಾಜನನ್ನು ಸೋಲಿಸಿದುದಕ್ಕೆ ತನ್ನ ತೃಪ್ತಿಯನ್ನು ಆರನೆಯ ವಿಕ್ರಮಾದಿತ್ಯನು ವ್ಯಕ್ತಪಡಿಸಿದನು. ಆದರೆ ಇದೇ ಸಮಯದಲ್ಲಿ ವಿಕ್ರಮಾದಿತ್ಯನಿಗೆ ವಿಷ್ಣುವರ್ಧನನ ಬಗ್ಗೆ ಅನುಮಾನವು ಕಾಡಲು ಪ್ರಾರಂಭಿಸಿತು. ಅವನು ಅನೇಕ ಬಿರುದುಗಳನ್ನು ಪ್ರಾರಂಭಿಸಿದುದು, ಹಾಗೂ ತನ್ನ ರಾಜ್ಯದ ದಕ್ಷಿಣದಲ್ಲಿ ಹಲವು ಪ್ರದೇಶಗಳನ್ನು ಗೆದ್ದುಕೊಂಡು ರಾಜ್ಯವನ್ನು ವಿಸ್ತರಿಸಲು ನಡೆಸಿದುದು ವಿಕ್ರಮಾದಿತ್ಯನಿಗೆ ವಿಷ್ಣುವರ್ಧನನ ಬಗ್ಗೆ ಸಂದೇಹ ಮೂಡಲು ಕಾರಣವಾಯಿತು. ಆದುದರಿಂದ ವಿಷ್ಣುವರ್ಧನನನ್ನು ಆಸ್ಥಾನಕ್ಕೆ ಬರುವಂತೆ ಆಜ್ಞಾಪಿಸಿದನು. ಈ ಆಜ್ಞೆಯನುಸಾರ ವಿಷ್ಣುವರ್ಧನ ತನ್ನ ಸಾಮ್ರಾಟನನ್ನು ಕಲ್ಯಾಣಿಯಲ್ಲಿ ಭೇಟಿ ಮಾಡಿದನು. ಆದರೆ ಇವರ ಮಾತುಕತೆಗಳ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಒಂದು ಶಾಸನ ವಿಷ್ಣುವರ್ಧನನು ಉತ್ತರಕ್ಕೆ ವಿಕ್ರಮಾದಿತ್ಯನನ್ನು ಭೇಟಿ ಮಾಡಲು ಹೋಗಿದ್ದನೆಂದು ತಿಳಿಸುತ್ತದೆ.

ವಿಷ್ಣುವರ್ಧನನು ಪುನಃ ತಲಕಾಡಿಗೆ ಭೇಟಿಕೊಟ್ಟು ಹಲವು ಸಮಸ್ಯೆಗಳನ್ನು ಬಗೆ ಹರಿಸಿದನೆಂದು ಶಾಸನಗಳು ತಿಳಿಸುತ್ತವೆ. ಬಹುಶಃ ಚೋಳರು ಪುನಃ ತಮ್ಮ ಅಧಿಕಾರವನ್ನು ಸ್ಥಾಪಿಸುವುದಕ್ಕೆ ಪ್ರಯತ್ನ ನಡೆಸುತ್ತಿದ್ದರೆಂಬುದು ತಿಳಿದು ಬರುತ್ತದೆ. ತಲಕಾಡಿನಿಂದ ಚೋಳರನ್ನು ಹೊಡೆದೋಡಿಸಿದರೂ ಕೂಡ, ಹಲವು ಶಾಸನಗಳು ಚೋಳರು ತಲಕಾಡನ್ನು ಆಳುತ್ತಿದ್ದರೆಂದು ವರ್ಣಿಸಲು ಪ್ರಯತ್ನ ನಡೆಸಿರುವುದನ್ನು ನಾವು ಕಾಣಬಹುದಾಗಿದೆ. ಕುಲೋತ್ತುಂಗನು 49ನೇ ವರ್ಷದಲ್ಲಿ ಹೊರಡಿಸಿದ ಶಾಸನ ತಲಕಾಡಿನ ಚೋಳರ ಪ್ರಭಾವ ಅಥವಾ ಅಧಿಕಾರ ಕೊನೆಗೊಂಡಿರಲಿಲ್ಲವೆಂದು ತಿಳಿಸುತ್ತದೆ. ಆದ್ದರಿಂದ ತಲಕಾಡಿನ ಪ್ರಾಂತ್ಯಾಧಿಕಾರಿಯಾಗಿದ್ದ ಉದಯಾದಿತ್ಯನನ್ನು ಚೋಳರ ಬೆದರಿಕೆಗಳಿಂದ ಬಿಡುಗಡೆ ಮಾಡುವುದು ಅವಶ್ಯಕವಾಗಿತ್ತು. ಆದ್ದರಿಂದ ವಿಷ್ಣುವರ್ಧನನು ಪುನಃ ತಲಕಾಡಿಗೆ ತೆರಳಿ ಅಲ್ಲಿ ತನ್ನ ಅಧಿಕಾರವನ್ನು ಸುಭದ್ರವಾಗಿ ಸ್ಥಾಪಿಸುವುದು ಮುಖ್ಯವಾದ ಕೆಲಸವಾಗಿತ್ತು. ಅನೇಕ ಶಾಸನಗಳು ತಲಕಾಡಿಗೆ ವಿಷ್ಣುವರ್ಧನನು ಭೇಟಿಕೊಟ್ಟಿದ್ದುದನ್ನು ತಿಳಿಸುತ್ತವೆ. ಅವನು

ಭೇಟಿಕೊಟ್ಟಂತಹ ಸಮಯದಲ್ಲಿ ನಾಲ್ಕು ಹಳ್ಳಿಗಳನ್ನು ಹಾಗೂ ಒಂದು ಕೆರೆಯನ್ನು ಕೀರ್ತಿ ನಾರಾಯಣನಿಗೆ ಬಿಟ್ಟುಕೊಟ್ಟಿದ್ದುದನ್ನು ತಿಳಿಸುತ್ತವೆ.

ಬಹುಶಃ ಉದಯಾದಿತ್ಯನೇ ಕೋಲಾರ ಮತ್ತು ತಲಕಾಡಿನ ಪ್ರದೇಶಗಳ ಪ್ರಾಂತ್ಯಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದನೆಂದು ತಿಳಿದು ಬರುತ್ತದೆ. ತಲಕಾಡಿನಲ್ಲಿ ದೊರಕಿರುವ ಒಂದು ಶಾಸನ ವಿಷ್ಣುವರ್ಧನನು ತಲಕಾಡಿನಿಂದ ಗಂಗವಾಡಿ ೯೬೦೦೦ (ಕೊಂಗುದೇಶ ಮತ್ತು ಕುವಲಾಲಪುರಗಳನ್ನೊಳಗೊಂಡಂತೆ) ಆಳ್ವಿಕೆ ನಡೆಸುತ್ತಿದ್ದನೆಂದು ತಿಳಿಸುತ್ತದೆ. ಇದೇ ವೇಳೆಯಲ್ಲಿ ಉದಯಾದಿತ್ಯನ ಮಗಳಾದ ಏಚಲಾದೇವಿಯು ವಿಜಯಾದಿತ್ಯ ಮಂಗಳದಲ್ಲಿ ಮರಣವನ್ನಪ್ಪಿದಳು. ವಿಜಯಾದಿತ್ಯ ಮಂಗಳವು ಕೋಲಾರ ಜಿಲ್ಲೆಯಲ್ಲಿರುವ ಇಂದಿನ ಬೇತಮಂಗಲವಾಗಿದೆ.

ಇತ್ತೀಚೆಗೆ ಗೆದ್ದುಕೊಂಡ ಪ್ರದೇಶಗಳಲ್ಲಿ ಹೊಯ್ಸಳ ಆಡಳಿತವನ್ನು ಭದ್ರವಾಗಿ ಸ್ಥಾಪಿಸಲು ಉದಯಾದಿತ್ಯನು ಪ್ರಯತ್ನ ನಡೆಸಿದನು. ಅವನು ಹೊಯ್ಸಳರು ಗೆದ್ದುಕೊಂಡ ಪ್ರದೇಶಗಳಲ್ಲಿ ಸಂಪೂರ್ಣವಾಗಿ ಆಡಳಿತ ಯಂತ್ರವನ್ನು ಬದಲಾಯಿಸಲು ಇಷ್ಟಪಡಲಿಲ್ಲ. ಚೋಳರ ಪ್ರಾಂತ್ಯಾಧಿಕಾರಿಗಳು ಪಲಾಯನ ಮಾಡಿದ ಮೇಲೆ ಆಡಳಿತ ಯಂತ್ರದಿಂದ ಎಚ್ಚರಿಕೆಯಿಂದ ಕಂದಾಯ ವಸೂಲಿ ಕೆಲಸವನ್ನು ಉದಯಾದಿತ್ಯನು ನಿರ್ವಹಿಸಬೇಕಾಗಿತ್ತು. ಚೋಳರ ಪ್ರಾಂತ್ಯಾಧಿಕಾರಿಗಳ ಕೈಕೆಳಗೆ ಕೆಲಸವನ್ನು ನಿರ್ವಹಿಸುತ್ತಿದ್ದ ಅಧಿಕಾರ ವರ್ಗ ಹೊಯ್ಸಳರ ಆಜ್ಞಾನುಸಾರ ಕೆಲಸ ಮುಂದುವರಿಸಿತು. ವಿಷ್ಣುವರ್ಧನನು ಇದುವೆರಗೂ ಚೋಳರ ಆಡಳಿತಕ್ಕೊಳಪಟ್ಟಿದ್ದ ಪ್ರದೇಶಗಳಲ್ಲಿ ಮಹತ್ತರವಾದ ಬದಲಾವಣೆಗಳಿಗೆ ಅವಕಾಶ ನೀಡಲಿಲ್ಲ. ಕೆಲವು ಶಾಸನಗಳ ಪ್ರಕಾರ ಮಂಡಲಗಳ ಪದನಾಮವನ್ನು ಕೂಡ ಬದಲಾಯಿಸಲಿಲ್ಲ. ಗೆದ್ದುಕೊಂಡಿದ್ದ ಒಂದು ಭಾಗಕ್ಕೆ ನಿಗರಿಲ್ಲಿ ಚೋಳಮಂಡಳಂ ಎಂದು ತಮಿಳು ಮಾದರಿಯಲ್ಲೇ ಕರೆಯಲಾಯಿತು. 'ನಾಡು'ವಿನ ಆಡಳಿತವನ್ನು ನಿರ್ವಹಿಸುತ್ತಿದ್ದ ಸಾಮಂತನು ತ್ರಿಭುವನಮಲ್ಲ ಹೊಯ್ಸಳ ಸಾಮಂತ ಮಣ್ಣೈನಾಡ ಆಳ್ವನ್ ಎಂದು ಕರೆದುಕೊಂಡನು.

ವಿಷ್ಣುವರ್ಧನನು ಕೊಂಗಾಳ್ವರ ಮೇಲೂ ದಂಡಯಾತ್ರೆ ಕೈಗೊಂಡನು. ಕೊಂಗಾಳ್ವರು ಈಗಿನ ಅರಕಲಗೂಡು ತಾಲ್ಲೂಕು ಮತ್ತು ಕೊಡಗಿನ ಉತ್ತರ ಭಾಗಗಳ ಮೇಲೆ ಆಳ್ವಿಕೆ ನಡೆಸುತ್ತಿದ್ದರು. ಈ ಪ್ರದೇಶಗಳನ್ನು ಕೊಂಗಲನಾಡ ಎಂದು ಕರೆಯುತ್ತಿದ್ದರು. ಅವರು ಚೋಳರ ಸಾಮಂತರಾಗಿದ್ದರು. ಆದ್ದರಿಂದ ಹೊಯ್ಸಳ ರಾಜ್ಯಕ್ಕೆ ಆಗಿಂದ್ದಾಗ್ಗೆ ತೊಂದರೆಯನ್ನುಂಟು

ಮಾಡುತ್ತಿದ್ದರು ಇವರು ವಿಷ್ಣುವರ್ಧನನ ಕಾಲದಲ್ಲಿ ಅನೇಕ ಬಾರಿ ಹೊಯ್ಸಳ ಪ್ರದೇಶಗಳ ಮೇಲೆ ದಾಳ ಮಾಡಿದರು. ಆದ್ದರಿಂದ ವಿಷ್ಣುವರ್ಧನನು ತನ್ನ ದಂಡನಾಯಕ ಪುನಿಸ (ಪುನಿಸಾಮಯ) ನನ್ನು ಕೊಂಗಾಳ್ವರನ್ನು ದಂಡಿಸುವಂತೆ ಕಳುಹಿಸಿಕೊಟ್ಟನು. ಪುನಿಸ ಸುಲಭವಾಗಿ ಕೊಂಗಾಳ್ವರನ್ನು ಸದೆ ಬಡಿದನು. ಈ ದಿಗ್ವಿಜಯದ ನಂತರ ವಿಷ್ಣುವರ್ಧನನು ಕಾಡ್ಗಿಚ್ಚಿನಂತೆ ಕೊಂಗಾಳ್ವ ರಾಜನನ್ನು ಸುಟ್ಟು ಹಾಕಿದ ಎಂದು ಶಾಸನಗಳು ವರ್ಣಿಸುತ್ತವೆ. ಕೊಂಗಾಳ್ವರನ್ನು ಸದೆಬಡಿದ ನಂತರ ವಿಷ್ಣುವರ್ಧನನು ಕೊಂಗಾಳ್ವರೊಡನೆ ವೈವಾಹಿಕ ಸಂಬಂಧವನ್ನೂ ಬೆಳೆಸಿದನೆಂಬುದಾಗಿ ಡೆರೆಟ್‌ರವರು ಅಭಿಪ್ರಾಯ ಪಟ್ಟಿದ್ದಾರೆ. ಕೊಂಗಾಳ್ವ ರಾಜನ ಮಗಳು ಚನ್ನಲಾದೇವಿಯನ್ನು ವಿಷ್ಣುವರ್ಧನನು ವಿವಾಹವಾದನೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಶಾಸನಗಳು ಚನ್ನಲಾದೇವಿಯು ಕೊಂಗಾಳ್ವ ರಾಜನ ಮಗಳೆ ಎಂಬುವುದಕ್ಕೆ ಸರಿಯಾದ ಮಾಹಿತಿಯನ್ನು ಒದಗಿಸುವುದಿಲ್ಲ.

ವಿಷ್ಣುವರ್ಧನನ ಮಗ ಒಂದನೆಯ ಬಲ್ಲಾಳನು ತನ್ನ ತಂದೆಯ ದಿಗ್ವಿಜಯಗಳ ಸಮಯದಲ್ಲಿ ದೋರಸಮುದ್ರದಲ್ಲಿ ರಾಜ್ಯದ ಆಡಳತವನ್ನು ನಿರ್ವಹಿಸುತ್ತಿದ್ದನು. ಬಲ್ಲಾಳನು ಕೂಡ ತನ್ನ ತಂದೆಯ ಬಿರುದುಗಳನ್ನೇ ಧರಿಸಿದ್ದನು. ಕ್ರಿ.ಶ.1117[28]ರಲ್ಲೇ ತ್ರಿಭುವನಮಲ್ಲ ತಲಕಾಡುಗೊಂಡ ಭುಜಬಲ ವೀರರಂಗ ಹೊಯ್ಸಳ ಎಂಬ ಬಿರುದನ್ನು ಅವನು ಧರಿಸಿದ್ದನು. ಆದರೆ ಬಲ್ಲಾಳನ ಅಕಾಲ ಮರಣದಿಂದಾಗಿ ಒಬ್ಬ ನಿಷ್ಠಾವಂತ ಹಾಗೂ ಅಪ್ರತಿಮವೀರ ಮಗನನ್ನು ವಿಷ್ಣುವರ್ಧನನು ಕಳೆದುಕೊಂಡನು.

ಹಲವು ಶಾಸನಗಳು ವಿಷ್ಣುವರ್ಧನನು ತಮಿಳುನಾಡಿನ ಅಳುಪರ (ದಕ್ಷಿಣ ಕನ್ನಡ ಜಿಲ್ಲೆ) ಮೇಲೆ ಯುದ್ಧ ಕೈಗೊಂಡಿದ್ದುದನ್ನು ವಿವರಿಸುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯನ್ನು “ಆಳ್ವಖೇಡ” ಎಂದು ಶಾಸನಗಳಲ್ಲಿ ವಿವರಿಸಲಾಗಿದೆ. ವಿಷ್ಣುವರ್ಧನನು ಅಳುಪರನ್ನು ಸದೆಬಡಿದನೆಂದು ಕೆಲವು ಶಾಸನಗಳು ವಿವರಿಸುತ್ತವೆ. ಬಾಂಗಡಿಯ ಬಂಗ (Banga Family) ಸಂತತಿಗೆ ಸೇರಿದ ದಾಖಲೆಗಳು ವಿಷ್ಣುವರ್ಧನನು ಅವರ ರಾಜ್ಯವನ್ನು ಕಸಿದುಕೊಂಡು ಅವರನ್ನು ಗಂಗವಾಡಿ-ಯಿಂದ ಹೊಡೆದೋಡಿಸಿದನು ಎಂದು ವಿವರಿಸುತ್ತವೆ. ಅನಂತರ ಬಾಂಗಡಿಯಲ್ಲಿ ಬಂದು ನೆಲೆಸಿದರು ಎಂದು ತಿಳಸುತ್ತವೆ. ಬಾಂಗಡಿಯು (ಇಂದಿನ ಬೆಳ್ತಂಗಡಿ ಹತ್ತಿರವಿರುವ ಒಂದು ಸ್ಥಳ) ವಿಷ್ಣುವರ್ಧನನ ಮಗ ಒಂದನೆಯ ನರಸಿಂಹನು ಬಂಗ ಸಂತತಿಗೆ ಅನುಕಂಪ ತೋರಿ ಬಾಂಗಡಿಯ ಹತ್ತಿರ ಆ ಸಂತತಿ ನೆಲೆಯೂರಲು ಅವಕಾಶ ನೀಡಿದನೆಂದು ತಿಳದುಬರುತ್ತದೆ.

ಸುಮಾರು ಹದಿಮೂರು ಮನೆತನಗಳ (Maganes) ಭೂಮಿಯನ್ನು ಆ ವಂಶದ ರಾಜಕುಮಾರನಿಗೆ ನೀಡಿದನು. ಆ ರಾಜಕುಮಾರನಿಗೆ 'ವೀರ ನರಸಿಂಹ" ಎಂಬ ಹೆಸರನ್ನು ಕೂಡ ನೀಡಿದನೆಂದು ತಿಳಿದುಬರುತ್ತದೆ. ಮೇಲಿನ ವಿವರಣೆಯಿಂದ ವಿಷ್ಣುವರ್ಧನನು ಅಳುಪರ ಮೇಲೆ ಯುದ್ಧ ಮಾಡಿದುದು ತಿಳಿದುಬರುತ್ತದೆ.

### 4.2.3 ಚಾಲುಕ್ಯರೊಡನೆ ಯುದ್ಧಗಳು

ವಿಷ್ಣುವರ್ಧನನು ತಲಕಾಡಿನ ದಿಗ್ವಿಜಯದ ನಂತರ ಚಾಳುಕ್ಯ ಸಾಮ್ರಾಜ್ಯದತ್ತ ತನ್ನ ಗಮನ ಹರಿಸಿದನು. ಅವನ ಮುಖ್ಯವಾದ ಮತ್ತೊಂದು ಧ್ಯೇಯ ಚಾಲುಕ್ಯರ ಹಿಡಿತದಿಂದ ಹೊಯ್ಸಳ ರಾಜ್ಯವನ್ನು ಬಿಡುಗಡೆ ಮಾಡಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸುವುದಾಗಿತ್ತು. ಚೋಳರ ಮೇಲಿನ ವಿಜಯದಿಂದ ಸ್ಫೂರ್ತಿಗೊಂಡ ವಿಷ್ಣುವರ್ಧನನು ಚಾಲುಕ್ಯ ಪ್ರದೇಶಗಳ ಮೇಲೆ ಧಾಳಿ ಮಾಡಲು ಒಂದು ದೊಡ್ಡ ಸೈನ್ಯ ಸಮೇತ ಹೊರಟನು. ಅವನು ಚಾಳುಕ್ಯರ ಸಾಮಂತರಾಗಿದ್ದ ಉಚ್ಚಂಗಿಯ ಪಾಂಡ್ಯರ ಮೇಲೆ ಯುದ್ಧ ಸಾರಿದನು. ಕ್ರಿ.ಶ.1116[29]ರಲ್ಲಿ ದುಮ್ಮೆ ಎಂಬಲ್ಲಿ ವಿಷ್ಣುವರ್ಧನನ ಸೈನ್ಯಕ್ಕೂ ಪಾಂಡ್ಯ ಅರಸ ತ್ರಿಭುವನಮಲ್ಲ ಪಾಂಡ್ಯ ಇರುವೇಲನ ಸೈನ್ಯದ ನಡುವೆ ಒಂದು ನಿರ್ಣಾಯಕ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಪಾಂಡ್ಯ ಅರಸ ಕೊಲ್ಲಲ್ಪಟ್ಟನು. ಈ ದಿಗ್ವಿಜಯದ ನಂತರ ನೊಳಂಬವಾಡಿಯನ್ನು ಗೆದ್ದುಕೊಂಡನು. ಅನಂತರ ಹಾನಗಲ್ ಕದಂಬರ ರಾಜ್ಯದ ಮೇಲೆ ಧಾಳಿ ಮಾಡಿದನು. ವಿಷ್ಣುವರ್ಧನನ ದಿಗ್ವಿಜಯಗಳು ಆರನೆಯ ವಿಕ್ರಮಾದಿತ್ಯನಿಗೆ ಹೆಚ್ಚಿನ ಅತೃಪ್ತಿ ಮತ್ತು ಬೇಸರವನ್ನುಂಟುಮಾಡಿದವು. ವಿಷ್ಣುವರ್ಧನನು ತನ್ನ ಸಾಮ್ರಾಟ ಆರನೆಯ ವಿಕ್ರಮಾದಿತ್ಯನ ಪರಮಾಧಿಕಾರವನ್ನು ಅಲಕ್ಷಿಸಲು ಪ್ರಾರಂಭಿಸಿದನು. ಇದರಿಂದ ಕುಪಿತನಾದ ಚಾಲುಕ್ಯ ಸಾಮ್ರಾಟ ಆರನೆಯ ವಿಕ್ರಮಾದಿತ್ಯ ವಿಷ್ಣುವರ್ಧನನನ್ನು ಶಿಕ್ಷಿಸಲು ನಿರ್ಧರಿಸಿದನು. ಕ್ರಿ.ಶ.1117[30]ರಲ್ಲಿ ವಿಕ್ರಮಾದಿತ್ಯನು ಅನೇಕ ಮಹಾಮಾಂಡಳಿಕರನ್ನು ಹಾಗೂ ಸಾಮಾಂತರನ್ನು ತಮ್ಮ ಸೈನ್ಯದೊಡನೆ ವಿಷ್ಣುವರ್ಧನನ್ನು ಸದೆಬಡಿಯಲು ಕಳುಹಿಸಿಕೊಟ್ಟನು. ಶಾಸನಗಳು ಹ್ನನೆರಡು ಸಾಮಂತರುಗಳ ಸೈನ್ಯಗಳು ಈ ಯುದ್ಧದಲ್ಲಿ ಭಾಗವಹಿಸಿದವು ಎಂದು ವರ್ಣಿಸುತ್ತವೆ. ಗೋವ ಕದಂಬರ, ಹಾನಗಲ್ ಕದಂಬರ, ಉಚ್ಚಂಗಿಯ ಪಾಂಡ್ಯರ, ಸೌದತ್ತಿಯ ರಟ್ಟರ, ಹೆಂಜೇರು ಚೋಳರ, ಎರಂಬರೆಗೆಯ ಸಿಂದರ ಸೈನ್ಯ ಮೊದಲಾದ ಪ್ರಮುಖ ಮುಖಂಡರ ಸೈನ್ಯಗಳು ಭಾಗವಹಿಸಿದ್ದವು. ಈ ಹನ್ನೆರಡು ಮಹಾಮಾಂಡಳಿಕರ ಸೈನ್ಯದ ಮುಖಂಡನನ್ನಾಗಿ ಸಿಂಧ ಮಹಾಸಾಮಂತ ಅಚ್ಚುಗಿಯನ್ನು ನೇಮಿಸಿದನು. ದೋರಸಮುದ್ರದ ಮೇಲೆ ಮುತ್ತಿಗೆ ಹಾಕುವಂತೆ ಆಜ್ಞಾಪಿಸಿ ಕಳುಹಿಸಿದನು. ಅಚ್ಚುಗಿ ಮತ್ತು ಅವನ ಮಗ ಪೆರ್ಮಾಡಿಯ ಮುಂದಾಳತ್ವದಲ್ಲಿ ಶತ್ರು ಸೈನ್ಯವು ವಿಷ್ಣುವರ್ಧನನ

ಸೈನ್ಯದ ಮೇಲೆ ಎರಗಿತು. ಇದಕ್ಕಿಂತ ಮುಂಚೆ ಇಮ್ಮಡಿ ವಿನಯಾದಿತ್ಯನ ಕಾಲದಲ್ಲಿ ಅಚುಗಿ ಮತ್ತು ಪೆರ್ಮಾಡಿ ಹೊಯ್ಸಳ ಸೈನ್ಯವನ್ನು ಸೋಲಿಸಿದ್ದರು. ಈಗಲೂ ಅದೇ ಹುಮ್ಮಸ್ಸಿನಿಂದ ವಿಷ್ಣುವರ್ಧನನ ಸೈನ್ಯದ ಮೇಲೆರಗಿದರು. ಬಹುಶಃ ಪ್ರಾರಂಭದಲ್ಲಿ ಸಿಂಧ ಸಾಮಂತ ಮೇಲುಗೈ ಪಡೆದನೆಂದು ತಿಳಿದು ಬರುತ್ತದೆ. ವಿಷ್ಣುವರ್ಧನನ ಸೈನ್ಯ ಅನೇಕ ಸ್ಥಳಗಳಲ್ಲಿ ಸೋತು ಹಿಮ್ಮೆಟ್ಟಬೇಕಾಯಿತು. ಹಲಸೂರು ಮತ್ತು ಹೊಸವೀಡು ಎಂಬಲ್ಲಿ ಯುದ್ಧಗಳು ನಡೆದವು. ಅಂತಿಮವಾಗಿ ಅಚುಗಿಯ ಸೈನ್ಯ ದೋರಸಮುದ್ರದ ಮೇಲೆ ಧಾಳಿ ಮಾಡುವ ಗುರಿಯೊಂದಿಗೆ ಹಾಸನ ಜಿಲ್ಲೆಯ ಕಣ್ಣೇಗಾಲದ ಹತ್ತಿರ ಬೀಡು ಬಿಟ್ಟಿತು. ರಾತ್ರಿಯ ವೇಳೆಯಲ್ಲಿ ಹೊಯ್ಸಳ ಸೇನಾನಿ ಗಂಗರಾಜನು ವಿಕ್ರಮಾದಿತ್ಯನ ಸಾಮಂತರ ಒಕ್ಕೂಟದ ಸೈನ್ಯವನ್ನು ಮುತ್ತಿ ಆ ಸೈನ್ಯವನ್ನು ಸದೆಬಡಿಯುವುದರಲ್ಲಿ ಯಶಸ್ವಿಯಾದನು. ಅಪಾರ ಸಂಪತ್ತು ಗಂಗರಾಜನ ವಶವಾಯಿತು. ಅನಂತರ ಶತ್ರು ಸೈನ್ಯವನ್ನು ಅಟ್ಟಿಸಿಕೊಂಡು ಚಾಲುಕ್ಯ ರಾಜ್ಯದಂಚಿನವರೆಗೂ ಹೋದನು. ಪ್ರಾಯಶಃ ಚಾಲುಕ್ಯ ರಾಜ್ಯದ ಒಳಗೂ ನುಗ್ಗಿ ಬೆಳ್ವೊಲ ಪ್ರಾಂತ್ಯವನ್ನು ಅಣ್ಣಿಗೆರೆ, ಗದಗ ಮುಂತಾದ ಪಟ್ಟಣಗಳನ್ನೂ ಗೆದ್ದು ಮಲಪ್ರಭಾ ನದಿಯವರೆಗೂ ನುಗ್ಗಿದನು. ಈ ವಿಜಯದಿಂದ ಹೊಯ್ಸಳರ ಇನ್ನೊಂದು ಧ್ಯೇಯವಾದ ಸ್ವತಂತ್ರ ರಾಜ್ಯ ಸ್ಥಾಪನೆ ಹೆಚ್ಚು ಕಡಿಮೆ ಸಾಧ್ಯವಾದಂತಾಯಿತು. ಆರನೇ ವಿಕ್ರಮಾದಿತ್ಯನು ಕಳುಹಿಸಿದ ಸೈನ್ಯವನ್ನು ಗಂಗರಾಜನು ಜಯಿಸಿದ ರೀತಿಯನ್ನು ಶಾಸನಗಳು ರೋಚಕವಾಗಿ ಈ ರೀತಿ ವರ್ಣಿಸಿವೆ. ಹನ್ನೆರಡು ಜನ ಸಾಮಂತರೊಡನೆ ತ್ರಿಭುವನಮಲ್ಲ ಪೆರ್ಮಾಡಿ ದೇವನ ಸೇನೆಗಳು ಕಣ್ಣೇಗಾಲದಲ್ಲಿ ತಂಗಿದ್ದ ಸಂದರ್ಭದಲ್ಲಿ ಗಂಗರಾಜನು "ಅಶ್ವಾರೋಹಣದ ಆಸೆಯನ್ನು ತೊರೆಯಿರಿ ಇದು ನನಗೆ ಕಾಳ ರಾತ್ರಿಯ ಯುದ್ಧವಾಗಲಿ" ಎಂದು ಸಾರಿ ಆ ಹನ್ನೆರಡು ಜನ ಸಾಮಂತರನ್ನು ಲೀಲಾಜಾಲವಾಗಿ ಸೋಲಿಸಿದನು.

ವಿಷ್ಣುವರ್ಧನನು ಉಚ್ಚಂಗಿ ಪಾಂಡ್ಯರ ಪ್ರದೇಶದ ಮೂಲಕ ಬಳ್ಳಾರಿಗೆ ಹೊಂದಿಕೊಂಡಿದ್ದಂತಹ ಕೆಲವು ಚೋಳರ ಪ್ರದೇಶಗಳ ಮೇಲೆ ಧಾಳಿ ಮಾಡಿದನು. ಅವನು ಗೊಂಡವಾಡಿ ಸ್ಥಳ ಅಥವಾ ಗೋವಿಂದವಾಡಿಯನ್ನು ಗೆದ್ದುಕೊಂಡನು. ಇದು ಚೋಳನಾಡಿನ ಉತ್ತರದ ತುತ್ತ ತುದಿಯಾಗಿತ್ತು. ಬಳ್ಳಾರಿಯಿಂದ ಇದು ಕೇವಲ 27 ಕಿ.ಮೀ. ದೂರದಲ್ಲಿ ಆಗ್ನೇಯ ದಿಕ್ಕಿನಲ್ಲಿತ್ತು. ಎರಡನೆಯ ವೀರಬಲ್ಲಾಳನ ಗದಗ್ ಶಾಸನ ವಿಷ್ಣುವರ್ಧನನು ಉಚ್ಚಂಗಿಯ ಪ್ರದೇಶದ ಮೇಲೆ ಧಾಳಿ ಮಾಡಿದನು, ಆದ್ದರಿಂದ ಅವನ ರಾಜ್ಯ ಬೆಳವಲದವರೆಗೂ ವಿಸ್ತರಿಸುತ್ತದೆ.

ಕ್ರಿ.ಶ.1118ರ ಜನವರಿ ತಿಂಗಳಲ್ಲಿ ಹೊರಡಿಸಿದ ಒಂದು ಶ್ರವಣಬೆಳಗೊಳದ ಶಾಸನ ಆರನೆಯ ವಿಕ್ರಮಾದಿತ್ಯನ ಸೈನ್ಯದ ವಿರುದ್ಧ ಕಣ್ಣೇಗಾಲ ಯುದ್ಧದಲ್ಲಿ ಜಯಗಳಿಸಿದ ನಂತರ, ವಿಷ್ಣುವರ್ಧನನು ತನ್ನ ದಂಡ ನಾಯಕ ಗಂಗರಾಜನಿಗೆ ಏನನ್ನಾದರೂ ಕೇಳುವಂತೆ ತಿಳಿಸಿದನು. ಆಗ ಗಂಗರಾಜನು ಪರಮ ಎಂಬ ಗ್ರಾಮವನ್ನು ಪಡೆದು ಅದನ್ನು ಜಿನಾಲಯಕ್ಕೆ ನೀಡಿದನೆಂದು ತಿಳಿಸುತ್ತದೆ.

ಮೇಲಿನ ಘಟನೆಗಳ ವಿವರಣೆಯಿಂದ ಸಂಕ್ಷಿಪ್ತವಾಗಿ ತಿಳಿದು ಬರುವುದೇನೆಂದರೆ ಬಹುಶಃ ಗೋವಿಂದವಾಡಿಯನ್ನು ಗೆದ್ದುಕೊಂಡ ನಂತರ ಉತ್ತರ ದಿಕ್ಕಿನಲ್ಲಿ ತನ್ನ ದಂಡಯಾತ್ರೆಯನ್ನು ಮುಂದುವರಿಸಿದನು. ತುಂಗಭದ್ರಾ ನದಿಯನ್ನು ದಾಟಿ ಕುಮ್ಮಟವನ್ನು ವಶಪಡಿಸಿಕೊಂಡನು. ಅನಂತರ ಬಲ್ಲಾರೆಯನ್ನು ಗೆದ್ದುಕೊಂಡನು. ಅನಂತರ ಬೆಳವಲಕ್ಕೆ ತೆರಳಿದನು. ಎರಂಬರಗೆಯ ಉತ್ತರದಲ್ಲಿದ್ದ ರಾಜಪೂರ್‌ನ್ನು ಗೆದ್ದುಕೊಂಡನು. ಅನಂತರ ಗದಗ್‌ನ ಪಶ್ಚಿಮಕ್ಕಿದ್ದ ಅಣ್ಣಿಗೆರೆ ಮತ್ತು ಬೆಲವಟ್ಟಿಗೆಗಳ ಮೇಲೆ ಧಾಳಿ ಮಾಡಿದನು. ಈ ಧಾಳಿಯಿಂದಾಗಿ ಮಲಪ್ರಭಾ ನದಿಯ ನೀರು ಮಣ್ಣಿನ ಬಣ್ಣಕ್ಕೆ ತಿರುಗಿತು ಎಂದು ಶಾಸನಗಳು ವರ್ಣಿಸುತ್ತವೆ. ಗದಗ್‌ನ ಹತ್ತು ಮೈಲಿ ದೂರದಲ್ಲಿರುವ ಸಿರೂರ್‌ನಲ್ಲಿ ದೊರಕಿರುವ ಶಾಸನದ ಪ್ರಕಾರ ಹೊಸದಾಗಿ ಗೆದ್ದುಕೊಂಡಿದ್ದ ಸ್ಥಳಗಳಲ್ಲಿ ವಿಷ್ಣುವರ್ಧನನು ಆಡಳಿತವನ್ನು ಸ್ಥಾಪಿಸಲು ಪ್ರಯತ್ನಿಸಿದನೆಂದು ತಿಳಿದು ಬರುತ್ತದೆ.

ಆದರೆ ವಿಷ್ಣುವರ್ಧನನು ಬಹಳ ವರ್ಷಗಳವರೆಗೆ ಈ ಪ್ರದೇಶಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಪುನಃ ಸಿಂಧ ನಾಯಕನು ಹೊಯ್ಸಳರನ್ನು ಚಾಲುಕ್ಯ ಪ್ರದೇಶಗಳಿಂದ ಹೊಡೆದೋಡಿಸುವುದರಲ್ಲಿ ಯಶಸ್ವಿಯಾದನು.

ವಿಷ್ಣುವರ್ಧನನು ತನ್ನ ಉತ್ತರದ ಧಾಳಿಗಳಲ್ಲಿ ನಿರತನಾಗಿದ್ದಾಗ ತನ್ನ ರಾಜ್ಯದಲ್ಲಿ ಉಂಟಾದ ಘಟನೆಗಳು ವಿಷ್ಣವರ್ಧನನಿಗೆ ಆತಂಕವನ್ನುಂಟು ಮಾಡಿದವು. ತಲಕಾಡಿನ ಸುತ್ತಮುತ್ತಣ ಪ್ರದೇಶಗಳಲ್ಲಿ ಇನ್ನೂ ಅಶಾಂತಿ ಮುಂದುವರಿಯಿತು. ವಿಷ್ಣುವರ್ಧನನು ತಲಕಾಡಿಗೆ ಒಂದು ಸೈನ್ಯವನ್ನು ಕಳುಹಿಸಿ ದಂಗೆಯನ್ನು ಹತ್ತಿಕ್ಕಿದನು.

ವಿಷ್ಣುವರ್ಧನನು ತನ್ನ ಉತ್ತರದ ಧಾಳಿಗಳಲ್ಲಿ ಹಿಮ್ಮೆಟ್ಟಲು ಪ್ರಮುಖ ಕಾರಣ ಹೊಯ್ಸಳರ ಕಡು ವೈರಿ ಸಿಂಧ ಅರಸನಾಗಿದ್ದನು. ಕ್ರಿ.ಶ.1120–21[31]ರಲ್ಲಿ ಹೊಯ್ಸಳರನ್ನು ಸೋಲಿಸಿದನು.

ಹಾನಗಲ್ ಕದಂಬರ ಮಾಂಡಳಿಕನಾಗಿದ್ದುಕೊಂಡು ಹೊಯ್ಸಳರನ್ನು ಹಿಮ್ಮೆಟ್ಟಿಸುವುದರಲ್ಲಿ ಯಶಸ್ವಿಯಾದನು. ಸಿಂಧ ದಂಡನಾಯಕ ವಿಷ್ಣುವರ್ಧನನ ಸೈನ್ಯವನ್ನು ಸೋಲಿಸಿ ಅದನ್ನು ಹಿಮ್ಮೆಟ್ಟಿಸುವುದರಲ್ಲಿ ಯಶಸ್ವಿಯಾದನು. ಆದ್ದರಿಂದ ವಿಷ್ಣುವರ್ಧನನು ಸಾಂತಾರರ ಸಹಾಯವಿಲ್ಲದೆ ಸಿಂಧ ಅರಸರನ್ನು ಸದೆಬಡಿಯುವುದು ಕಷ್ಟದ ಕೆಲಸವೆಂದು ಮನಗಂಡನು. ಇದುವರೆಗೂ ಕೂಡ ಸಾಂತಾರರು ಹೊಯ್ಸಳರ ಪರವಾಗಿದ್ದರು. ವಿನಯಾದಿತ್ಯನ ಕಾಲದಿಂದಲೂ ಸಾಂತಾರರು ಹೊಯ್ಸಳರ ರಾಜ್ಯದ ನೆರೆಯ ರಾಜ್ಯವಾಗಿದ್ದುಕೊಂಡು ಸೌಹಾರ್ದತೆಯಿಂದ ಇದ್ದರು. ಈ ಯುದ್ಧದ ಸಮಯದಲ್ಲಿ ಅವರು ತಟಸ್ತ್ಯ ನೀತಿಯನ್ನು ಅನುಸರಿಸಿದುದರಿಂದ ಹೊಯ್ಸಳರು ಸೋಲನನ್ನುಭವಿಸಿದರು. ಆದುದರಿಂದ ವಿಷ್ಣುವರ್ಧನನು ಸಾಂತಾರರಿಗೆ ಬುದ್ಧಿ ಕಲಿಸಲು ನಿರ್ಧರಿಸಿದನು. ವಿಷ್ಣುವರ್ಧನನು ಹುಮ್ಚವನ್ನು ವಶಪಡಿಸಿ-ಕೊಂಡು ತಲೆಯೂರನ್ನು ಗೆದ್ದುಕೊಂಡನು. ತಗರತೆಯ ಮೇಲೆ ಎರಡನೆ ಬಾರಿಗೆ ಧಾಳಿ ಮಾಡಿದನು. ಕ್ರಿ.ಶ.1121ರ ಶಾಸನ ಹೊಯ್ಸಳ ರಾಜ್ಯದ ಗಡಿಯನ್ನು ನಂಗಲಿ, ಚೇರ ಮತ್ತು ಆನೆಮಲೈ ಮತ್ತು ಬರಕೂರು ಘಟ್ಟ ಪ್ರದೇಶವೆಂದು ಗುರುತಿಸಲಾಗಿದೆ. ಎರಡು ವರ್ಷಗಳ ನಂತರ ಹೆದ್ದೊರೆ ಅಥವಾ ಕೃಷ್ಣಾನದಿಯನ್ನು ಉತ್ತರದ ಗಡಿ ಎಂದು ಹೇಳಲಾಗಿದೆ.

ಆದರೆ ವಿಷ್ಣುವರ್ಧನನು ತನ್ನ ದಂಡಯಾತ್ರೆಯನ್ನು ಮುಂದುವರಿಸಲು ಸಾಧ್ಯ-ವಾಗಲಿಲ್ಲ. ಬಹುಶಃ ಚೋಳರ ಆಕ್ರಮಣದ ಭಯದಿಂದಾಗಿ ತನ್ನ ರಾಜಧಾನಿಗೆ ಹಿಂದಿರುಗ-ಬೇಕಾಯಿತು. ಆರನೆಯ ವಿಕ್ರಮಾದಿತ್ಯನು ಕ್ರಿ.ಶ.1122[32]ರಲ್ಲಿ ಬನವಾಸಿಗೆ ಭೇಟಿಕೊಟ್ಟನು. ಆದುದರಿಂದ ವಿಷ್ಣುವರ್ಧನನಿಗೆ ವಿಸ್ತರಣಾ ನೀತಿಯಲ್ಲಿ ಹಿನ್ನಡೆ ಉಂಟಾಯಿತು. ಆ ವರ್ಷದಲ್ಲಿ ಪುನಃ ಹೊಯ್ಸಳರ ಶಾಸನಗಳು ಆರನೆಯ ವಿಕ್ರಮಾದಿತ್ಯನ ಬಿರುದುಗಳೊಂದಿಗೆ ಪ್ರಾರಂಭವಾಗುತ್ತವೆ.

ವಿಷ್ಣುವರ್ಧನನು ಉತ್ತರದ ದಂಡಯಾತ್ರೆಯಲ್ಲಿ ನಿರತನಾಗಿದ್ದಾಗ ಚೋಳರು ಹೊಯ್ಸಳರ ಹಿಡಿತದಲ್ಲಿದ್ದ ಅನೇಕ ಪ್ರದೇಶಗಳನ್ನು ಗೆದ್ದುಕೊಳ್ಳಲು ಪ್ರಯತ್ನ ನಡೆಸಿದರು. ಕೋಲಾರಕ್ಕೆ ಸೇರಿದ್ದ ಅನೇಕ ಪ್ರದೇಶಗಳ ಮೇಲೆ ಚೋಳರು ಧಾಳಿ ಮಾಡಿದರು. ಈ ಗಡಿಯ ಪ್ರದೇಶಗಳಿಂದ ಚೋಳರನ್ನು ಹೊಡೆದೋಡಿಸಲು ಅನೇಕ ವರ್ಷಗಳೇ ಬೇಕಾಯಿತು. ಕೋಲಾರ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಚೋಳರ ಶಾಸನಗಳು ಕ್ರಿ.ಶ.1120 ಮತ್ತು ಕ್ರಿ.ಶ.1130ರ ನಡುವೆ ದೊರಕುತ್ತವೆ. ಕೈವಾರ, ಪುರ ಮತ್ತು ಕುನಿ ನಾಡುಗಳು ಚೋಳರ ವಶದಲ್ಲಿದ್ದವು. ಚೋಳರ ಈ ಯಶಸ್ವಿಗೆ ಕಾರಣವೇನೆಂದರೆ, ವಿಷ್ಣುವರ್ಧನನು ಉತ್ತರದ

ಧಾಳಿಗಳಲ್ಲಿ ನಿರತನಾಗಿದ್ದುದು ಹಾಗೂ ಕೋಲಾರದಲ್ಲಿ ಪ್ರಾಂತ್ಯಾಧಿಕಾರಿಯಾಗಿದ್ದ ಉದಯಾದಿತ್ಯನು ಅನಾರೋಗ್ಯದಿಂದ ನರಳುತ್ತಿದ್ದು ಅವನು ಕೋಲಾರವನ್ನು ತ್ಯಜಿಸಿದನು. ಅನಂತರ ಕೆಲವಟ್ಟಿಯಲ್ಲಿ ಸಾವನ್ನಪ್ಪಿದನು. ಹಲವು ಪ್ರದೇಶಗಳಲ್ಲಿ ಚೋಳರು ತಮ್ಮ ಅಧಿಕಾರವನ್ನು ಸ್ಥಾಪಿಸಲು ಈ ಅಂಶಗಳೇ ಕಾರಣವಾಗಿರಬಹುದು.

ಕ್ರಿ.ಶ.1122ರ ನಂತರ ವಿಷ್ಣುವರ್ಧನನು ತನ್ನ ರಾಜ್ಯದ ಇತರ ಭಾಗಗಳ ಕಡೆಗೆ ಗಮನಹರಿಸಬೇಕಾಯಿತು. ತನ್ನ ರಾಜ್ಯದ ಈಶಾನ್ಯ ಭಾಗವಾಗಿದ್ದ ನೀಲಗಿರಿಯಲ್ಲಿ ಒಂದು ಭಾಗದಲ್ಲಿ ತೊಂದರೆ ಉಂಟಾದುದರಿಂದ ಅದನ್ನು ಗೆದ್ದುಕೊಳ್ಳಬೇಕಾಯಿತು. ಈ ಭಾಗವನ್ನು ಕುಲಕುಲ ಅಥವಾ ಆಧುನಿಕ ಕುಕಲ್ ಎಂದು ಗುರುತಿಸಲಾಗಿದೆ. ಇದೇ ಸಮಯದಲ್ಲಿ ಪೂರ್ವದಲ್ಲಿ ವಿಕ್ರಮಚೋಳನ ಸೈನ್ಯ ಹೊಯ್ಸಳ ರಾಜ್ಯದ ಮೇಲೆ ಧಾಳಿ ಮಾಡಲು ಪ್ರಾರಂಭಿಸಿತು. ಅದರ ವಿರುದ್ಧ ಹೊಯ್ಸಳರು ಹೋರಾಟ ನಡೆಸಬೇಕಾಯಿತು. ಕ್ರಿ.ಶ.1125ರಲ್ಲಿ ಪುನಃ ವಿಷ್ಣವರ್ಧನನು ತಲಕಾಡಿನಲ್ಲಿ ಬೀಡುಬಿಟ್ಟಿದ್ದನು. ತನ್ನ ರಾಜ್ಯದ ದಕ್ಷಿಣ ಭಾಗ ಹಾಗೂ ಆಗ್ನೇಯ ಭಾಗದಲ್ಲಿ ರಕ್ಷಣೆಯನ್ನು ಕುರಿತು ಕ್ರಮಕೈಗೊಂಡನು.

ಇದಾದ ನಂತರ ಸುಮಾರು ವರ್ಷಗಳವರೆಗೆ ಅಂತಹ ಪ್ರಮುಖ ಘಟನಾವಳಿಗಳು ನಡೆಯಲಿಲ್ಲ. ಬಹುಶಃ ಚೋಳರ ವಿರುದ್ಧ ತಮಿಳುನಾಡಿನ ಗಡಿಗಳಲ್ಲಿ ಹೊಯ್ಸಳರು ತಮ್ಮ ಹೋರಾಟವನ್ನು ಮುಂದುವರಿಸಿರಬಹುದು.

ವಿಷ್ಣುವರ್ಧನನು ಪುನಃ ಕ್ರಿ.ಶ.1128 ವೇಳೆಗೆ ತನ್ನ ರಾಜ್ಯದ ಉತ್ತರದ ಗಡಿಯ ಕಡೆ ಗಮನ ಹರಿಸಿದನು. ಅವನು ಹಾನಗಲ್ ಕದಂಬರ ವಿರುದ್ಧ ಹೋರಾಟ ಮುಂದುವರಿಸಿದನು. ಹಾನಗಲ್‌ನ ಮೇಲೆ ಧಾಳಿ ಮಾಡಲು ಅನೇಕ ಕಾರಣಗಳಿದ್ದವು. ಕ್ರಿ.ಶ.1127ರಲ್ಲಿ ಆರನೆಯ ವಿಕ್ರಮಾದಿತ್ಯನು ಮರಣ ಹೊಂದಿದನು. ಅವನ ಕೊನೆಯ ವರ್ಷಗಳು ನಿರಾಶೆಯಿಂದ ಕೂಡಿದ್ದವು. ಕೃಷ್ಣ ನದಿಯ ದಕ್ಷಿಣಕ್ಕಿದ್ದ ಸಾಮಂತರು ಚಾಲುಕ್ಯರ ಸಾಮರ್ಥ್ಯ ದುರ್ಬಲ–ಗೊಂಡಿದುದನ್ನು ಗಮನಿಸಿ ಸ್ವತಂತ್ರರಾಗಲು ಪ್ರಯತ್ನಿಸಿದರು. ಕ್ರಿ.ಶ.1128ರಲ್ಲಿ ಗೋವಾದ ಕದಂಬ ಅರಸ ಜಯಕೇಶಿ ಪೂರ್ವ ಮತ್ತು ದಕ್ಷಿಣದ ದಿಕ್ಕುಗಳಲ್ಲಿ ಹುಲಿಗೆರೆಯವರೆಗೆ ಧಾಳಿ ಮಾಡಿದನು. ಕ್ರಿ.ಶ.1128 ಮತ್ತು 1129[33]ರಲ್ಲಿ ಬನವಾಸಿ, ಹಾನಗಲ್, ಸಾಂತಲಿಗೆ ಮತ್ತು ಸುತ್ತಮುತ್ತಣ ಪ್ರದೇಶಗಳಲ್ಲಿ ಶಾಸನಗಳು ದೊರಕದೆ ಇರುವುದು ಪ್ರಬಲ ಮನೆತನಗಳ ಧಾಳಿಗೆ ತುತ್ತಾಗಿ ಅರಾಜಕತೆ ಉಂಟಾಗಿರುವುದನ್ನು ಸೂಚಿಸುತ್ತವೆ.

ಚಾಲುಕ್ಯ ಭೂಲೋಕಮಲ್ಲ (ಸೋಮೇಶ್ವರ)ನ ಶಾಂತಿಯುತವಾದ ಜೀವನವು ಕೂಡ ವಿಷ್ಣುವರ್ಧನನು ಚಾಲುಕ್ಯರ ಸಾಮಂತರ ಪ್ರದೇಶಗಳ ಮೇಲೆ ಧಾಳಿ ಮಾಡಲು ಪ್ರೇರಣೆ ನೀಡಿರಬಹುದು. ತುಂಗಭದ್ರ ನದಿಯಿಂದ ಅಚೆಗಿದ್ದ ಪ್ರದೇಶಗಳ ಮೇಲೆ ವಿಷ್ಣುವರ್ಧನನು ತನ್ನ ಧಾಳಿಗಳನ್ನು ಪ್ರಾರಂಭಿಸಿದನು. ಅವನು ಹಾನಗಲ್‌ನ್ನು ವಶಪಡಿಸಿಕೊಳ್ಳುವ ಧ್ಯೇಯವನ್ನು ಹೊಂದಿದ್ದನು. ಕ್ರಿ.ಶ.1120ರ ವೇಳೆಗೆ ವಿಷ್ಣುವರ್ಧನನು ಹಾನಗಲ್ ಮೇಲೆ ಧಾಳಿ ಮಾಡಲು ಪ್ರಾರಂಭಿಸಿದರೂ ಕೂಡ ಆರನೇ ವಿಕ್ರಮಾದಿತ್ಯನು ಜೀವಿಸಿರುವವರೆಗೂ ಹಾನಗಲ್‌ನ್ನು ಗೆದ್ದುಕೊಳ್ಳುವುದರಲ್ಲಿ ಯಶಸ್ವಿಯಾಗಲಿಲ್ಲ. ವಿಷ್ಣುವರ್ಧನನ ಸಮಕಾಲೀನ ಕದಂಬ ಅರಸ ಎರಡನೆಯ ತೈಲನು ತನ್ನ ದಂಡನಾಯಕ ತೈಲ ನಾಗನ ನೇತೃತ್ವದಲ್ಲಿ ವಿಷ್ಣುವರ್ಧನನನ್ನು ಎದುರಿಸಲು ಒಂದು ಸೈನ್ಯವನ್ನು ಕಳುಹಿಸಿಕೊಟ್ಟನು. ಆದರೆ ಅವನು ಪ್ರಬಲ ಹೊಯ್ಸಳ ಸೈನ್ಯದ ವಿರುದ್ಧ ಕಾದಾಡಲು ಸಾಧ್ಯವಾಗದೇ ಸೋಲನ್ನನುಭವಿಸಿದನು. ಅನಂತರ ಸ್ವತಃ ಎರಡನೆ ತೈಲನೇ ಸೇನೆಯ ನಾಯಕತ್ವವನ್ನು ವಹಿಸಿದನು. ಆದರೆ ಅವನು ಕೂಡ ಹೋರಾಟ ಮಾಡುತ್ತಿದ್ದಾಗ ಸಾವನ್ನಪ್ಪಿದನು. ಅನಂತರ ಮೂರನೆಯ ಮಯೂರವರ್ಮನು ಕದಂಬರ ರಾಜನಾದನು. ಹಾನಗಲ್ ಮಯೂರವರ್ಮನು ಕದಂಬರ ರಾಜನಾದನು. ಹಾನಗಲ್‌ನನ್ನು ರಕ್ಷಿಸಲು ಅವನು ತನ್ನ ಹೋರಾಟವನ್ನು ಮುಂದುವರಿಸಿದನು. ಅನಂತರ ಮಲ್ಲಿಕಾರ್ಜುನನು ಕದಂಬರ ರಾಜನಾದನು. ಅವನು ಎಷ್ಟೇ ಪ್ರಯತ್ನಪಟ್ಟರೂ ಹಾನಗಲ್‌ನ್ನು ರಕ್ಷಿಸಲು ಸಾಧ್ಯವಾಗಲಿಲ್ಲ. ಅಂತಿಮವಾಗಿ ಹೊಯ್ಸಳ ಸೈನ್ಯ ಹಾನಗಲ್‌ನ್ನು ಗೆದ್ದುಕೊಳ್ಳುವುದರಲ್ಲಿ ಯಶಸ್ವಿಯಾಯಿತು. ಒಂದು ಶಾಸನ ವಿಷ್ಣುವರ್ಧನನು ಹಾನಗಲ್‌ನಿಂದ ತನ್ನ ರಾಜ್ಯವನ್ನು ಆಳುತ್ತಿದ್ದನೆಂದು ವಿವರಿಸುತ್ತದೆ. ಈ ರೀತಿಯಾಗಿ ಕ್ರಿ.ಶ.1129[34]ರ ವೇಳೆಗೆ ವಿಷ್ಣುವರ್ಧನನು ಹಾನಗಲ್‌ನ್ನು ಗೆದ್ದುಕೊಂಡು ಅದನ್ನು ತನ್ನ ಉಪರಾಜಧಾನಿಯನ್ನಾಗಿ ಮಾಡಿಕೊಂಡನು. ಕ್ರಿ.ಶ.1130ರ ಶಾಸನವು ಬಂಕಾಪುರವನ್ನು ಕೂಡ ವಶಪಡಿಸಿಕೊಂಡಿದುದರ ಬಗ್ಗೆ ವಿವರಿಸುತ್ತದೆ. ಕ್ರಿ.ಶ.1129ರಲ್ಲಿ ವಿಕ್ರಮಾದಿತ್ಯನ ಉತ್ತರಾಧಿಕಾರಿ ಸೋಮೇಶ್ವರನು ದಕ್ಷಿಣದ ಕಡೆ ಧಾಳಿಗೆ ಬಂದುದನ್ನು ನಾವು ಕಾಣುತ್ತೇವೆ. ಚಾಲುಕ್ಯ ಸಾಮ್ರಾಜ್ಯದ ಅಧಿಕಾರ ದಕ್ಷಿಣದಲ್ಲಿ ಹೆಚ್ಚಿನ ಮಟ್ಟಿಗೆ ತಮ್ಮ ನಿಷ್ಠಾವಂತ ಮಹಾಮಾಂಡಳಿಕರನ್ನು ಅವಲಂಬಿಸಿತ್ತು. ಅವರೆ ಉಚ್ಚಂಗಿಯ ಪಾಂಡ್ಯರು ಮತ್ತು ಹಾನಗಲ್ ಮತ್ತು ಗೋವಾದ ಕದಂಬರು. ತಿಲಿವಲ್ಲಿ ಶಾಸನ ಕದಂಬ ತೈಲಪನು ಬನವಾಸಿ ದೇಶದ ಮೇಲೆ ಸಂಪೂರ್ಣವಾಗಿ ಆಳ್ವಿಕೆ ನಡೆಸುತ್ತಿದ್ದನು ಎಂದು ವರ್ಣಿಸುತ್ತದೆ. ಈ ಶಾಸನವನ್ನು ಕ್ರಿ.ಶ.1129ರ ಅಕ್ಟೋಬರ್ 15ರಂದು ಹೊರಡಿಸಲಾಗಿದೆ. ಇದೇ ವರ್ಷದ ಪ್ರಾರಂಭದಲ್ಲಿ ಚಾಳುಕ್ಯ ರಾಜನು ತನ್ನ ರಾಜ್ಯದ ದಕ್ಷಿಣಕ್ಕೆ ಆಗಮಿಸಿದನು. ವಿಷ್ಣುವರ್ಧನನ ವಿರುದ್ಧದ ಹೋರಾಟದಲ್ಲಿ ತನ್ನ ಸಾಮಂತರಾದ ಕದಂಬರಿಗೆ ಸಹಾಯ ಮಾಡುವ

ಉದ್ದೇಶದಿಂದ ದಕ್ಷಿಣಕ್ಕೆ ಧಾವಿಸಿ ಬಂದನು. ವಿಷ್ಣುವರ್ಧನನು ಈ ವೇಳೆಗಾಗಲೇ ಅನೇಕ ಬಾರಿ ಕದಂಬರ ಪ್ರದೇಶಗಳ ಮೇಲೆ ಧಾಳಿ ನಡೆಸಿದ್ದನು. ವಿಷ್ಣುವರ್ಧನನು ಬಂಕಾಪುರದಲ್ಲಿ ಬೀಡುಬಿಟ್ಟಿದ್ದ ಅಂಶವು ಅವನು ಕದಂಬರಿಗೆ ಸೇರಿದ್ದ ಧಾರವಾಡ ಜಿಲ್ಲೆಯ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡಿದ್ದನೆಂಬುದನ್ನು ಪುಷ್ಟೀಕರಿಸುತ್ತವೆ.

ಸೋಮೇಶ್ವರನು ತನ್ನ ರಾಜ್ಯದ ದಕ್ಷಿಣ ಭಾಗದಲ್ಲಿದ್ದ ಆಯಕಟ್ಟಿನ ಸ್ಥಳ ಹುಲ್ಲುನಿಯನ್ನು ತನ್ನ ಕೇಂದ್ರ ಕಾರ್ಯಸ್ಥಾನವನ್ನಾಗಿ ಮಾಡಿಕೊಂಡು ಸುತ್ತಮುತ್ತಲಿನ ಪ್ರದೇಶಗಳ ಮೇಲೆ ಧಾಳಿ ಮಾಡಿ ಅವುಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಪ್ರಯತ್ನ ನಡೆಸಿದನು. ತೈಲಪ ಕದಂಬನು ಸೋಮೇಶ್ವರನಿಗೆ ಸಹಾಯ ಮಾಡಿದನು. ಹೊಯ್ಸಳು, ಪೆರ್ಮಾಡಿ ಸಾಂತಾರನು ತೈಲಪನ ಪ್ರದೇಶಗಳ ಮೇಲೆ ಧಾಳಿ ಮಾಡಿ ಹಕ್ಕನ್ನು ಚಲಾಯಿಸುವಂತೆ ಪ್ರೋತ್ಸಾಹಿಸಿದನು. ವರದನದಿ ಮತ್ತು ಉದ್ದರೆ ಮತ್ತು ಬಳ್ಳಿಗಾವೆಯ ದಕ್ಷಿಣದ ಬೆಟ್ಟಗಳ ನಡುವೆ ಇದ್ದ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸುವಂತೆ ವಿಷ್ಣುವರ್ಧನನು ಸಾಂತರರ ಮೇಲೆ ಒತ್ತಡ ತಂದನು. ಉದ್ದರೆಯ ಹತ್ತಿರವಿದ್ದ ಇಸುರದ ಹಳ್ಳಿಯ ಹತ್ತಿರ ಯುದ್ಧ ನಡೆಯಿತು. ಇದೇ ಸಮಯದಲ್ಲಿ ಚಾಲುಕ್ಯ ಸೈನ್ಯದ ಆಗಮನವಾದುದರಿಂದ ಹೊಯ್ಸಳ ಮತ್ತು ಸಾಂತರರ ಸೈನ್ಯಗಳು ಒಟ್ಟಿಗೆ ಸೇರಿ ಚಾಲುಕ್ಯರ ವಿರುದ್ಧ ಹೋರಾಟ ನಡೆಸಿದವು. ಈ ಸ್ಥಳದಲ್ಲಿ ದೊರಕಿರತಕ್ಕ ಒಂದು ಶಾಸನವು ಹಂಚಿಯನ್ನು ಮುತ್ತಿದುದರ ಬಗ್ಗೆ ವಿವರಿಸುತ್ತದೆ. ಇದು ಉದ್ದರೆಯಿಂದ ಏಳು ಮೈಲಿಗಳ ದೂರದಲ್ಲಿ ಆಗ್ನೇಯದಲ್ಲಿದೆ. ಆದರೆ ಈ ಘಟನೆಯ ನಂತರ ಕ್ರಿ.ಶ.1129ರ ವೇಳೆಗೆ ವಿಷ್ಣುವರ್ಧನನು ತನ್ನ ರಾಜಧಾನಿಗೆ ಹಿಂದಿರುಗಿದನು. ಕ್ರಿ.ಶ.1129ರಲ್ಲಿ ಯುವರಾಜ ಮತ್ತು ಅವನ ಒಬ್ಬನೇ ಮಗ ಕುಮಾರ ಬಲ್ಲಾಳನು ಅಕಾಲ ಮರಣಕ್ಕೆ ತುತ್ತಾದನು. ಈ ಅಘಾತದ ನಂತರ ವಿಷ್ಣುವರ್ಧನನ ಎಲ್ಲ ಯುದ್ಧಗಳಲ್ಲೂ ಬಲಗೈ ಭಂಟನಂತಿದ್ದ ಮಂತ್ರಿ ಹಾಗೂ ದಂಡನಾಯಕ ಗಂಗರಾಜು ಕ್ರಿ.ಶ.1130ರಲ್ಲಿ ಮರಣ ಹೊಂದಿದನು. ಇದು ಎರಡನೆಯ ಆಘಾತ ಆದರೆ ಇದೇ ಸಮಯಕ್ಕೆ ಮತ್ತೊಂದು ಅಘಾತ ಉಂಟಾಯಿತು. ಮಗನ ಅಕಾಲ ಮರಣವನ್ನು ಸಹಿಸಲಾರದೆ ರಾಣಿ ಶಾಂತಲಾದೇವಿಯು ಕೂಡ ಸಲ್ಲೇಖನ ವ್ರತವನ್ನು ಆಚರಿಸಿ ಶಿವಗಂಗೆ-ಯಲ್ಲಿ ಪ್ರಾಣ ತ್ಯಜಿಸಿದಳು. ಕ್ರಿ.ಶ.1131ರ ಮಾರ್ಚ್ ಐದನೆಯ ತಾರೀಖು ಶಿವಗಂಗೆಯಲ್ಲಿ ತೀರಿಕೊಂಡಿದುದರ ಬಗ್ಗೆ ಶ್ರವಣ ಬೆಳಗೊಳದ ಶಾಸನ ವಿವರಣೆ ನೀಡುತ್ತದೆ. ವಿಷ್ಣುವರ್ಧನನು ಎಲ್ಲಾ ಆಘಾತಗಳಿಂದ ಚೇತರಿಸಿಕೊಳ್ಳಲು ಹಲವು ವರ್ಷಗಳು ಬೇಕಾದವು.

ಚಳಿಗಾಲದ ನಂತರ ಪುನಃ ತನ್ನ ರಾಜ್ಯದ ಉತ್ತರದ ಕಡೆಗೆ ಪುನಃ ದಂಡೆತ್ತಿ ಹೋಗಲು ನಿರ್ಧರಿಸಿದನು. ಈ ಧಾಳಿಯ ಸಮಯದಲ್ಲಿ ಆಸಂದಿ ಅರಸನ ನಿಲುವಿನ ಬಗ್ಗೆ ಸರಿಯಾದ

ಮಾಹಿತಿ ದೊರಕುವುದಿಲ್ಲ. ಪಾಂಡ್ಯರ ಉಚ್ಚಂಗಿಯ ಧಾಳಿಯನ್ನು ಎದುರಿಸುವುದು ಬಹಳ ಮುಖ್ಯವಾಗಿತ್ತು. ಆದುದರಿಂದ ವಿಷ್ಣುವರ್ಧನನು ಬಹಳ ಎಚ್ಚರಿಕೆಯಿಂದ ಕಾದಾಟ ನಡೆಸಬೇಕಾಗಿತ್ತು. ವಿಷ್ಣುವರ್ಧನನ ಸೈನ್ಯ ಪಾಂಡ್ಯರ ಗಡಿಯಾದ ಎಮ್ಮೆಗನೂರಿನಲ್ಲಿ ಬೀಡು ಬಿಟ್ಟಿತು. ಪಾಂಡ್ಯರ ಸೈನ್ಯ ಧಾಳಿ ಮಾಡುವುದನ್ನು ಎದುರಿಸಲು ಹುಲಿಯೂರು ನಾಯಕನ ಮುಂದಾಳತ್ವದಲ್ಲಿ ಒಂದು ಸೈನ್ಯವನ್ನು ಕಳುಹಿಸಿದನು. ಪಾಂಡ್ಯರಿಗೂ ಮತ್ತು ಹುಲಿಯೂರು ನಾಯಕನಿಗೂ ನಡೆದ ಯುದ್ಧದಲ್ಲಿ ಹುಲಿಯೂರು ನಾಯಕನು ಯಶಸ್ವಿಯಾದನು. ಅವರ ಕುದುರೆಗಳನ್ನು ಮತ್ತು ಆನೆಗಳನ್ನು ವಶಪಡಿಸಿಕೊಂಡು ಅವುಗಳನ್ನು ವಿಷ್ಣುವರ್ಧನನಿಗೆ ಒಪ್ಪಿಸಿದನು. ಅನಂತರ ವಿಷ್ಣುವರ್ಧನನು ತುಂಗಭದ್ರ ನದಿಯನ್ನು ಧಾಟಿ ತನ್ನ ಧಾಳಿಯನ್ನು ಪ್ರಾರಂಭಿಸಿದನು. ಈ ಯುದ್ಧದಲ್ಲಿಯು ಕೂಡ ಹುಲಿಯೂರು ನಾಯಕನು ಪ್ರಮುಖ ಪಾತ್ರವಹಿಸಿದನು. ಕದಂಬರಿಗೆ ಸೇರಿದ್ದ ಅನೇಕ ಕುದುರೆ ಮತ್ತು ಆನೆಗಳನ್ನು ವಶಪಡಿಸಿಕೊಂಡು ಅವುಗಳನ್ನು ವಿಷ್ಣುವರ್ಧನನಿಗೆ ಒಪ್ಪಿಸಿದನು. ಈ ರೀತಿಯಾಗಿ ಕದಂಬರ ಅನೇಕ ಪ್ರದೇಶಗಳು ಹೊಯ್ಸಳ ವಿಷ್ಣುವರ್ಧನನ ವಶವಾದವು. ಉದ್ದರೆಯಲ್ಲಿದ್ದ ಎಕ್ಕಲರಸ ಎಂಬುವನನ್ನು ಮಹಾಮಂಡಳೇಶ್ವರನ ದರ್ಜೆಗೆ ಏರಿಸಿದನು. ಅವನಿಗೋಸ್ಕರ ಒಂದು ಸಣ್ಣ ಪ್ರದೇಶವನ್ನು ರಚಿಸಿದನು. ಅವನ ವಶದಲ್ಲಿದ್ದ ಈ ಪ್ರದೇಶವು ಕದಂಬರ ಮತ್ತು ಸಾಂತಾರರ ನಡುವೆ ಇದ್ದ ಒಂದು ಶಕ್ತಿಯುತವಾದ ಸಣ್ಣ ರಾಜ್ಯದಂತಿತ್ತು.

ಮೇಲೆ ವಿವರಿಸಿದ ಯುದ್ಧಗಳು ಹಾನಗಲ್ ಕದಂಬರ ರಾಜ್ಯದ ಮೇಲೆ ಹೆಚ್ಚು ಪರಿಣಾಮ ಬೀರಿದವು. ಕ್ರಿ.ಶ.1130ರ ನವೆಂಬರ್ ತಿಂಗಳಲ್ಲಿ ತೈಲಪನು ಮರಣ ಹೊಂದಿದನು. ದಂಡನಾಯಕ ಮಸಣಯ್ಯನ ಒಬ್ಬ ಕಿರಿಯ ಸಹೋದರ ಆತ್ಮಹತ್ಯೆ ಮಾಡಿಕೊಂಡನು. ಈ ಆತ್ಮಹತ್ಯೆ ಮತ್ತು ಹಾನಗಲ್ ರಾಜನ ಮರಣಕ್ಕೆ ವಿಷ್ಣುವರ್ಧನನ ಧಾಳಿಗಳೇ ಕಾರಣವೆಂದು ವಿವರಿಸಲಾಗಿದೆ. ತೈಲಪನ ನಂತರ ಮಯೂರವರ್ಮನು ಅಧಿಕಾರಕ್ಕೆ ಬಂದನು. ಆದರೆ ಅವನು ಬಹಳ ಕಾಲ ಆಳ್ವಿಕೆ ನಡೆಸಲಿಲ್ಲ. ಅನಂತರ ಮಲ್ಲಿಕಾರ್ಜುನನು ಕದಂಬರ ರಾಜನಾದನು. ಮಯೂರವರ್ಮನು ಬನವಾಸಿ, ಹಾನಗಲ್, ಹಲಸಿಗೆ ಮತ್ತು ಸಾಂತಲಿಗೆ ಪ್ರದೇಶಗಳ ಮೇಲೆ ತನ್ನ ಅಧಿಕಾರ ಚಲಾಯಿಸುತ್ತಿದ್ದನೆಂದು ಹೇಳಿಕೊಂಡಿದ್ದಾನೆ. ಆದರೆ ಅನೇಕ ಪ್ರದೇಶಗಳ ಮೇಲೆ ಕದಂಬರು ತಮ್ಮ ಹಿಡಿತವನ್ನು ಕಳೆದುಕೊಂಡಿದ್ದರು. ಕದಂಬ ದಂಡನಾಯಕ ಹೊಯ್ಸಳರ ಹಿಡಿತದಲ್ಲಿದ್ದ ಹಲವು ಪ್ರದೇಶಗಳನ್ನು ಪುನಃ ಗೆದ್ದುಕೊಳ್ಳುವ ಉದ್ದೇಶದಿಂದ ಕ್ರಿ.ಶ.1130ರಲ್ಲಿ ಸೈನ್ಯದ ಮೇಲೆ ಧಾಳಿ ಮಾಡಿದನು. ಆದರೆ ಇದರಿಂದ ಅವನು ಏನನ್ನು ಸಾಧಿಸಲು ಸಾಧ್ಯವಾಗಲಿಲ್ಲ. ವಿಷ್ಣುವರ್ಧನನ ಸೈನಿಕರು ಅವನ ಧಾಳಿಯನ್ನು ಯಶಸ್ವಿಯಾಗಿ

ಹಿಮ್ಮೆಟ್ಟಿಸಿದರು. ಮಯೂರವರ್ಮನು ಕೇವಲ ಎರಡು ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಅನಂತರ ಅವನ ಕಿರಿಯ ಸಹೋದರ ಮಲ್ಲಿಕಾರ್ಜುನನು ಕದಂಬರ ರಾಜನಾದನು.

ಕ್ರಿ.ಶ.1131[35]ರಲ್ಲಿ ಶ್ರವಣಬೆಳಗೊಳದ ಒಂದು ಶಾಸನ ವಿಷ್ಣುವರ್ಧನನ ಅನೇಕ ಸಾಧನೆಗಳನ್ನು ವಿವರಿಸುವುದರ ಜೊತೆಗೆ ಅವನ ರಾಜ್ಯ ಗಂಗವಾಡಿಯಿಂದ ಉತ್ತರದ ಲಕ್ಕುಂಡಿ (ಲೊಕ್ಕಿಗುಂಡಿ)ಯವರೆಗೂ ವಿಸ್ತರಿಸಿತ್ತು ಎಂದು ವಿವರಿಸುತ್ತದೆ. ವಿಷ್ಣುವರ್ಧನ ತೊಂಡ–ಮಾಂಡಳಿಕರಿಗೆ (ಚೋಳರಿಗೆ) ಬೆಂಕಿಯಂತೆ ಇದ್ದವನು, ಹಾನಗಲ್‌ನನ್ನು ಗೆದ್ದುಕೊಂಡವನು, ಹುಮ್ಚವನ್ನು ನಾಶಪಡಿಸಿದವನು, ಸಾವಿಮಲೆಯನ್ನು ಹಾಳು ಮಾಡಿದವನು, ಘಟ್ಟಗಳು ಮತ್ತು ರೊಡ್ಡಮ್ಮನನ್ನ ನಾಶಪಡಿಸಿದವನು ಎಂದೆಲ್ಲ ಈ ಶಾಸನ ವಿವರಿಸುತ್ತದೆ.

ಲೊಕ್ಕಿಗುಂಡಿ ಅಥವಾ ಅಧುನಿಕ ಬೆಳವಲದ ಪ್ರಮುಖ ನಗರವಾಗಿತ್ತು. ಉತ್ತರದಲ್ಲಿ ಲಕ್ಕುಂಡಿಯವರೆಗೂ ವಿಷ್ಣುವರ್ಧನನ ರಾಜ್ಯ ವಿಸ್ತರಿಸಿತ್ತೆಂಬುದು ತಿಳಿದು ಬರುತ್ತದೆ. ಈ ಸ್ಥಳದಲ್ಲಿ ಹಾನಗಲ್ ಕದಂಬರ ಶಾಸನವಾಗಲಿ ಅಥವಾ ಕಲ್ಯಾಣಿ ಚಾಳುಕ್ಯರ ಶಾಸನವಾಗಲಿ ಕಂಡುಬರುವುದಿಲ್ಲ. ಬಹುಶಃ ನೊಳಂಬವಾಡಿಯ ಮೇಲೂ ವಿಷ್ಣುವರ್ಧನನು ತನ್ನ ಅಧಿಕಾರವನ್ನು ಚಲಾಯಿಸಿರಬಹುದು. ಬೆಳ್ಳಿಗಾವೆಯಲ್ಲಿ ದೊರಕಿರುವ ಒಂದು ಅಸ್ಪಷ್ಟ ಶಿಲ್ಪ ಕ್ರಿ.ಶ.1131ರ[36] ಅಕ್ಟೋಬರ್ ತಿಂಗಳಲ್ಲಿ ಪತಿ ಪತ್ನಿ ಒಟ್ಟಿಗೆ ಕೊಡುಗೆಗಳನ್ನು ನೀಡಿದ ಮಾಹಿತಿಯನ್ನು ನೀಡುತ್ತದೆ. ಬಹುಶಃ ಈ ಚಿತ್ರ ವಿಷ್ಣುವರ್ಧನ ಮತ್ತು ಅವನ ಪತ್ನಿ ಶಿಲ್ಪ ಆಗಿರಬಹುದು. ಅವರ ಸೇವಕರನ್ನು ಕೂಡ ಚಿತ್ರಿಸಲಾಗಿದೆ. ಒಟ್ಟಿನಲ್ಲಿ ಸಾಂತಾರ ಪ್ರದೇಶ ಮತ್ತು ಹಾನಗಲ್ ಪ್ರದೇಶಗಳಲ್ಲಿ ಹೊಯ್ಸಳರ ಪ್ರಭಾವ ಎಷ್ಟರಮಟ್ಟಿಗೆ ಇತ್ತೆಂಬುದನ್ನು ವಿವರಿಸುತ್ತದೆ. ಮೇಲಿನ ಅಂಶಗಳಿಂದ ವಿಷ್ಣುವರ್ಧನನ ಸಾಧನೆಗಳು ಉಚ್ಛ್ರಾಯ ಸ್ಥಿತಿಯನ್ನು ತಲುಪಿದ್ದವು ಎಂಬುದು ಮನದಟ್ಟಾಗುತ್ತದೆ. ಬನವಾಸಿ, ಹಲಸಿಗೆ ಮತ್ತು ಬೆಳವೊಲ ಪ್ರದೇಶಗಳ ಜನರು ಕಲ್ಯಾಣಿ ಚಾಲುಕ್ಯರ ಅಧಿಕಾರದಿಂದ ಬಿಡುಗಡೆ ಹೊಂದಿ ಹೊಯ್ಸಳರ ಅಧಿಕಾರವನ್ನು ಒಪ್ಪಿಕೊಂಡಿದ್ದರೆಂಬುದು ಮನದಟ್ಟಾಗುತ್ತದೆ.

ಉಚ್ಚಂಗಿಯ ಪಾಂಡ್ಯರನ್ನು ಕೂಡ ನಾಶಪಡಿಸಿದನೆಂಬ ವಿಷಯ ತಿಳಿದು ಬರುತ್ತದೆ. ಕ್ರಿ.ಶ.1142ರವರೆಗೆ ಪಾಂಡ್ಯರ ಒಂದು ಶಾಸನವು ಕೂಡ ದೊರಕುವುದಿಲ್ಲ. ಉಚ್ಚಂಗಿಯಿಂದ ಕೊಂಗು ದೇಶದವರೆಗೂ ತನ್ನ ಅಧಿಕಾರವನ್ನು ಸ್ಥಾಪಿಸಿದ್ದನೆಂದು ಶಾಸನಗಳು ವರ್ಣಿಸುತ್ತವೆ.

ವಿಷ್ಣುವರ್ಧನನಿಗೆ ತನ್ನ ಮಗನ ಅಕಾಲ ಮರಣದಿಂದಾಗಿ ಒಂದು ಬಲವಾದ ಪೆಟ್ಟು ಬಿದ್ದಂತಾಯಿತು. ಈ ಹೊಡೆತದಿಂದ ಚೇತರಿಸಿಕೊಳ್ಳಲು ಎಷ್ಟೋ ದಿನಗಳು ಬೇಕಾದವು. ಈ ಮದ್ಯೆ ಶಾಂತಲದೇವಿಯು ತನ್ನ ಮಗನ ಮರಣದಿಂದ ಚೇತರಿಸಿಕೊಳ್ಳಲಾಗದೆ ಕ್ರಿ.ಶ.1131ರಲ್ಲಿ ಮರಣವನ್ನಪ್ಪಿದಳು. ಅನಂತರ ಲಕ್ಷ್ಮಿದೇವಿಯನ್ನು ವಿಷ್ಣುವರ್ಧನನು ವರಿಸಿ ಪಟ್ಟದರಸಿಯನ್ನಾಗಿ ಮಾಡಿಕೊಂಡನು. ಅವನು ತನ್ನ ರಾಜ್ಯವನ್ನು ಸುಭದ್ರ ಸ್ಥಿತಿಯಲ್ಲಿಟಟುಕೊಳ್ಳಲು ತೊಂದರೆ-ಯಾಯಿತು. ತನ್ನ ರಾಜ್ಯದ ಗಡಿ ಸುಮಾರು 112 ಮೈಲಿಗಳು ದೂರದಲ್ಲಿದ್ದು ಆಗಿಂದಾಗ್ಗೆ ಅಲ್ಲಿಗೆ ಹೋಗಿ ಬರಲು ಸಮಸ್ಯೆ ಉಂಟಾಯಿತು. ವಿಷ್ಣುವರ್ಧನನಿಗೆ ಈ ವೇಳೆಗೆ 60 ರಿಂದ 65 ವರ್ಷ ವಯಸ್ಸಾಗಿತ್ತು. ಅವನು ಎಡಬಿಡದ ದಂಡಯಾತ್ರೆಗಳು ಮತ್ತು ತನ್ನ ರಾಜ್ಯದ ವಿವಿಧ ಭಾಗಗಳಲ್ಲಿ ಉಂಟಾಗುತ್ತಿದ್ದ ಮಹಾಮಾಂಡಳಿಕರ ದಂಗೆಗಳನ್ನು ಹತ್ತಿಕ್ಕುವುದಕೋಸ್ಕರ ನಿರಂತರ ಹೋರಾಟ ನಡೆಸಿದ್ದನು. ಚಾಲುಕ್ಯರು ಮತ್ತು ಹಾನಗಲ್ ಕದಂಬರ ವಿರುದ್ಧ ಸತತವಾಗಿ ಹೋರಾಟ ನಡೆಸಬೇಕಾಗಿತ್ತು. ತನ್ನ ಹಿರಿಯ ಮಗ ಬಲ್ಲಾಳನ ಸಾವನ್ನು ಮರೆಯುವುದ-ಕ್ಕೋಸ್ಕರವೆಂಬಂತೆ ವಿಷ್ಣುವರ್ಧನನ ಪಟ್ಟದರಸಿ ಲಕ್ಷ್ಮಿದೇವಿಯು ಕ್ರಿ.ಶ.1133ರಲ್ಲು ಒಂದು ಗಂಡುಮಗುವಿಗೆ ಜನ್ಮ ನೀಡಿದಳು. ಈ ಸಮಯದಲ್ಲಿ ವಿಷ್ಣುವರ್ಧನನು ತನ್ನ ರಾಜ್ಯದ ಉತ್ತರದ ಗಡಿಯಲ್ಲಿದ್ದನು.

ಈ ವೇಳೆಯಲ್ಲಿ ವಿಜಯವನ್ನು ಸಾಧಿಸಿ ವಿಷ್ಣುವರ್ಧನನು ಬಂಕಾಪುರದಲ್ಲಿ ಬೀಡು ಬಿಟ್ಟಿದ್ದನು. ಇದೇ ಸಮಯದಲ್ಲಿ ಬೊಪ್ಪದೇವನು ತನ್ನ ತಂದೆ ಗಂಗರಾಜನ ಸ್ಮರಣಾರ್ಥವಾಗಿ ರಾಜದಾನಿಯಲ್ಲಿ ಕಟ್ಟಿಸಿದ "ದ್ರೋಹಘರಟ್ಟ" ಜೈನ ಬಸದಿಯು ಪೂರ್ಣಗೊಂಡಿತು. ಈ ಜಿನಾಲಯದಿಂದ ತೀರ್ಥ ಪ್ರಸಾದಗಳನ್ನು ತೆಗೆದುಕೊಂಡು ರಾಜನಿಗೆ ಪುತ್ರೋತ್ಸವದ ಸುದ್ದಿಯನ್ನು ಮುಟ್ಟಿಸಿದನು. ಈ ಸಮಯದಲ್ಲಿ ಶತ್ರು ಸೈನ್ಯದ ವಿರುದ್ಧ ಜಯಗಳಿಸಿದ್ದುದರಿಂದ ತನ್ನ ಮಗನಿಗೆ ವಿಜಯನರಸಿಂಹನೆಂದು ನಾಮಕರಣ ಮಾಡಿದನು. ದ್ರೋಹಘರಟ್ಟ ಜಿನಾಲಯಕ್ಕೆ ವಿಜಯ ಪಾರ್ಶ್ವನಾಥ ಜಿನಾಲಯವೆಂಬ ಹೆಸರನ್ನಿಟ್ಟು, ಆ ಜಿನಾಲಯಕ್ಕೆ ಅಸಂದಿನಾಡಿನಲ್ಲಿ ಜಾವಗಲ್ಲು ಎಂಬ ಹಳ್ಳಿಯನ್ನು ನೀಡಿದನು.

ನರಸಿಂಹನಿಗೆ ಪಟ್ಟ ಕಟ್ಟಿ ತನ್ನ ಉತ್ತರಾಧಿಕಾರಿ ಎಂದು ವಿಷ್ಣುವರ್ಧನನು ಘೋಷಿಸಿದನು. ತನ್ನ ಅನೇಕ ಬಿರುದುಗಳನ್ನು ಅವನಿಗೆ ನೀಡಲಾಯಿತು. ಒಂದು ಮಂತ್ರಿ ಮಂಡಲವನ್ನು ಅವನ ಸಹಾಯಕ್ಕಾಗಿ ನೇಮಕ ಮಾಡಿ ಲಕ್ಷ್ಮಿದೇವಿಯನ್ನು ರಾಜಪ್ರತಿನಿಧಿ-ಯನ್ನಾಗಿ ನೇಮಿಸಲಾಯಿತು.

ಕ್ರಿ.ಶ.1135ರವರೆಗೆ ವಿಷ್ಣುವರ್ಧನನು ದೋರಸಮುದ್ರದಲ್ಲೇ ಇದ್ದನೆಂದು ತಿಳಿದು ಬರುತ್ತದೆ.[37] ಆದರೆ ಅವನು ರಾಜ್ಯದ ಉತ್ತರದ ಗಡಿಗಳಲ್ಲಿ ತೊಂದರೆಗಳು ಸದಾ ಅವನನ್ನು ಕಾಡುತ್ತಿದ್ದವು. ಮಲ್ಲಿಕಾರ್ಜುನನು ಹೊಯ್ಸಳರ ಸೈನ್ಯದ ಮೇಲೆ ತನ್ನ ಆಕ್ರಮಣವನ್ನು ಮುಂದುವರಿಸಿದ್ದನು. ಕ್ರಿ.ಶ.1135ರ ವೇಳೆಗೆ ಅವನು ಪುನಃ ಹಾನಗಲ್‌ನ್ನು ಹೊಯ್ಸಳರಿಂದ ಗೆದ್ದುಕೊಂಡನು. ಆದ್ದರಿಂದ ಅಲ್ಲಿದ್ದ ಹೊಯ್ಸಳ ಸೈನ್ಯ ಹೋರಾಟವನ್ನು ಮುಂದುವರಿಸಿದರೂ ಪುನಃ ಹಾನಗಲ್‌ನನ್ನು ಗೆದ್ದುಕೊಳ್ಳಲು ಸಾಧ್ಯವಾಗಲಿಲ್ಲ. ಹೊಯ್ಸಳ ಸೈನ್ಯ ತನ್ನ ಪ್ರಯತ್ನವನ್ನು ಕೈಬಿಡಬೇಕಾಯಿತು. ಹಾನಗಲ್ ಪಕ್ಕದಲ್ಲೇ ಇದ್ದ ಯಲವಟ್ಟಿಯನ್ನು ಮುತ್ತಿದರು ಕೂಡ ಅದನ್ನು ಗೆದ್ದುಕೊಳ್ಳಲು ಸಾಧ್ಯವಾಗಲಿಲ್ಲ. ಹಾಹನೂರು ಹಳ್ಳಿಯನ್ನು ಮುತ್ತಲಾಯಿತು. ಅದರೂ ಅಂತಿಮವಾಗಿ ಈ ಸ್ಥಳದಲ್ಲಿ ಚಾಳುಕ್ಯರು ಮತ್ತು ಕದಂಬರು ತಮ್ಮ ಅಧಿಕಾರವನ್ನು ಮುಂದುವರಿಸಿದರೆಂದು ತೋರುತ್ತದೆ.

ಕ್ರಿ.ಶ.1136[38]ರ ವೇಳೆಗೆ ವಿಷ್ಣುವರ್ಧನನು ಬಂಕಾಪುರ ಮತ್ತು ತಲಕಾಡು ನಗರಗಳನ್ನೊಳಗೊಂಡಂತೆ ಆಳ್ವಿಕೆ ನಡೆಸುತ್ತಿದ್ದನು. ಆದರೆ 1136ರ ನವೆಂಬರ್ ವೇಳೆಗೆ ಬಂಕಾಪುರದಲ್ಲಿದ್ದ ಪ್ರಾಂತ್ಯಾಧಿಕಾರಿಯನ್ನು ಅಲ್ಲಿಂದ ಹೊಡೆದೋಡಿಸಲಾಗಿತ್ತು. ಪುನಃ ಸೋಮೇಶ್ವರನ ಅಧಿಕಾರವನ್ನು ಅಲ್ಲಿ ಸ್ಥಾಪಿಸಲಾಯಿತು. ಮಲ್ಲಿಕಾರ್ಜುನನು ಬಂಕಾಪುರದ ಸರಹದ್ದಿನಲ್ಲಿದ್ದ ಹೊಯ್ಸಳ ಪ್ರದೇಶಗಳ ಮೇಲೆ ಆಕ್ರಮಣ ಮುಂದುವರಿಸಿದನು. ಆದ್ದರಿಂದ ಭಯಭೀತರಾದ ಹೊಯ್ಸಳ ದಂಡನಾಯಕರು ವಿಷ್ಣುವರ್ಧನನು ಆಗಮಿಸಬೇಕೆಂದು ಮನವಿ ಮಾಡಿಕೊಂಡರು. ಆದ್ದರಿಂದ ವಿಷ್ಣವರ್ಧನನು ಗಡಿಯ ಕಡೆ ಹೊರಟನು. ಅವನು ಗಡಿಯ ಕಡೆಗೆ ಹೋಗುವಾಗ ಉಚ್ಚಂಗಿಯಲ್ಲಿ 1137–38ರಲ್ಲಿ ಬೀಡುಬಿಟ್ಟಿದ್ದನೆಂದು ತಿಳಿದುಬರುತ್ತದೆ. ಮಲ್ಲಿಕಾರ್ಜುನನ ಆಳ್ವಕೆಯ ಕಾಲದಲ್ಲಿ ಹೊಯ್ಸಳ ವಿಷ್ಣುವರ್ಧನನು ಕದಂಬರ ಪ್ರದೇಶಗಳ ಮೇಲೆ ಧಾಳಿ ಮಾಡಿದನು. ಚಾಲುಕ್ಯ ಚಕ್ರವರ್ತಿ ಭೂಲೋಕಮಲ್ಲ ಸೋಮೇಶ್ವರನ ಆಳ್ವಿಕೆಯ ಹತ್ತನೆಯ ವರ್ಷದಲ್ಲಿ (1137–38) ಹೊರಡಿಸಿದ ಶಾಸನವು ಹೊಯ್ಸಳರ ವಿರುದ್ಧ ಕದಂಬರು ನಡೆಸಿದ ಹೋರಾಟದ ಬಗ್ಗೆ ವಿವರಣೆ ನೀಡುತ್ತದೆ. ಯಲವಟ್ಟಿ ಶಾಸನ ಹೊಯ್ಸಳ ದೇವನು ಮಲ್ಲಿಕಾರ್ಜುನನು ಆಳ್ವಕೆ ನಡೆಸುತ್ತಿದ್ದ ಸಮಯಕ್ಕೆ ಹಾನಗಲ್‌ನ್ನು ವಶಪಡಿಸಿಕೊಳ್ಳಲು ನಡೆಸಿದ ಯುದ್ಧದ ಬಗ್ಗೆ ವಿವರಣೆ ನೀಡುತ್ತದೆ. ಹಾಸನದ ಕುದುರೆಗುಂಡಿಯಲ್ಲಿ ದೊರಕಿರುವ ಒಂದು ವೀರಗಲ್ಲು ಹಾನಗಲ್ ವಿರುದ್ಧ ನಡೆದ ಹೋರಾಟದಲ್ಲಿ ಬಾಳುಗಿಯ ಚೆಟ್ಟಿಯು ಮರಣ ಹೊಂದಿದನ್ನು ವಿವರಿಸುತ್ತದೆ. ಯಲವಟ್ಟಿ ನಾಯಕನೆಂಬುವವನು ಸಹಾನಿಕೇಶಿ ಎಂಬುವವನ ವಿರುದ್ಧ ಹೋರಾಟ ನಡೆಸಿ ವೀರ ಮನರಣವನ್ನಪ್ಪಿದನು ಎಂದು ವರ್ಣಿಸುತ್ತದೆ. ಸೋಮೇಶ್ವರನು

ಕ್ರಿ.ಶ.1137–38ರಲ್ಲಿ ಹೊರಡಿಸಿದ ಮತ್ತೊಂದು ಶಾಸನ ಮಲ್ಲಿಕಾರ್ಜುನನು ಲೊಕ್ಕಿಗುಂಡಿ ಕೋಟೆಯನ್ನು ಮುತ್ತಿದ್ದನ್ನು ವಿವರಿಸುತ್ತದೆ. ಬಹುಶಃ ಕದಂಬರು ಹೊಯ್ಸಳರನ್ನು ಲೊಕ್ಕಿಗುಂಡಿಯಿಂದ ಹೊಡೆದೋಡಿಸುವುದಕ್ಕೆ ಮಾಡಿದ ಪ್ರಯತ್ನವೆಂದು ಕಾಣಿಸುತ್ತದೆ. ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಲೊಕ್ಕಿಗುಂಡಿ (ಲಕ್ಕುಂಡಿ)ಯನ್ನು ಹೊಯ್ಸಳ ವಿಷ್ಣುವರ್ಧನನು ವಶಪಡಿಸಿಕೊಂಡನೆಂದು ತೋರುತ್ತದೆ. ಏಕೆಂದರೆ ಈ ವರ್ಷದ ನಂತರ ವಿಷ್ಣುವರ್ಧನನು ಹಾನಗಲ್‌ನ್ನು ಕೂಡ ವಶಪಡಿಸಿಕೊಂಡಿರಬಹುದೆಂದು ತೋರುತ್ತದೆ. ಕ್ರಿ.ಶ.1138[39]ರ ಡಿಸೆಂಬರ್ ತಿಂಗಳಲ್ಲಿ ಹೊರಡಿಸಿದ ಶಾಸನ ವಿಷ್ಣುವರ್ಧನನು ಹಾನಗಲ್ ಕೋಟೆಯನ್ನು ಮುತ್ತಿದಾಗ ಮಾಚಗೌಡನ ಮಗನಾದ ಲೆಂಕರಾಯ (ಕಲಿರಾಯ) ಎಷ್ಟರಮಟ್ಟಿಗೆ ಹೋರಾಟ ನಡೆಸಿ ವೀರ ಮರಣವನ್ನಪ್ಪಿದನೆಂಬ ಘಟನೆಯನ್ನು ವಿವರಿಸುತ್ತದೆ.

ಮಲ್ಲಿಕಾರ್ಜುನನು ಲೊಕ್ಕಿಗುಂಡಿಯ ಕಡೆಗೆ ಹೋಗಿರುವುದನ್ನು ತಿಳಿದುಕೊಂಡ ವಿಷ್ಣುವರ್ಧನನು ಮಲ್ಲಿಕಾರ್ಜುನನ ರಾಜಧಾನಿ ಹಾನಗಲ್‌ನ್ನು ಮುತ್ತಿದನು ಮತ್ತು ಲೂಟಿ ಮಾಡಿದನು. ಈ ಸಮಯದಲ್ಲಿ ಸೋಮೇಶ್ವರನ ಮರಣಾನಂತರ ಮಲ್ಲಿಕಾರ್ಜುನನು ಜಗದೇಕಮಲ್ಲನನ್ನು ಚಾಲುಕ್ಯ ಸಾಮ್ರಾಜ್ಯದ ಸಾಮ್ರಾಟನನ್ನಾಗಿ ಮಾಡುವುದರಲ್ಲಿ ನಿರತ–ನಾಗಿದ್ದನು. ಆದರೆ ಮಲ್ಲಿಕಾರ್ಜುನನು ಹೊಯ್ಸಳರ ಧಾಳಿಯಿಂದ ವಿಚಲಿತನಾಗದೆ ತನ್ನ ಕೆಲಸವನ್ನು ರಾಜಧಾನಿಯಲ್ಲಿ ಸುಸೂತ್ರವಾಗಿ ಮುಗಿಸಿದ ಮೇಲೆ ಹಾನಗಲ್‌ಗೆ ಹಿಂದಿರುಗಿ ಬಂದು ಹೊಯ್ಸಳರ ಸೈನ್ಯವನ್ನು ಹೊಡೆದೋಡಿಸುವುದರಲ್ಲಿ ಯಶಸ್ವಿಯಾದನು. ಹೊಯ್ಸಳರು ಪುನಃ ಹಾನಗಲ್‌ನ್ನು ಗೆದ್ದುಕೊಳ್ಳುವ ತಮ್ಮ ಪ್ರಯತ್ನವನ್ನು ಮುಂದುವರೆಸಿದರು.

ವಿಷ್ಣುವರ್ಧನನ ಶಾಸನಗಳು ಅವನು ಬನವಾಸಿ 12000, ಹಾನಗಲ್ 500, ಪ್ರದೇಶಗಳ ಮೇಲೆ ಆಳ್ವಿಕೆ ನಡೆಸುತ್ತಿದ್ದನೆಂದೂ, ವೀರಗಂಗ ಕದಂಬ ಎಂಬ ಬಿರುದನ್ನು ಧರಿಸಿದ್ದನೆಂದು ತಿಳಿಸುತ್ತೇವೆ. ಪುನಃ ತನ್ನ ರಾಜ್ಯದ ಉತ್ತರದಲ್ಲಿ ಯಶಸ್ಸನ್ನು ಕಂಡಾಗ ಆ ಗಡಿಗಳನ್ನು ತೋರಿಸಲು ತನ್ನ ಜೊತೆ ಯುವರಾಜ ನರಸಿಂಹನನ್ನು ಕರೆದುಕೊಂಡು ಹೋಗಿದ್ದನು. ಕ್ರಿ.ಶ.1139[40]ರ ಜೂನ್ ಅಥವಾ ಜುಲೈ ತಿಂಗಳ ವೇಳೆಗೆ ಬಂಕಾಪುರದಲ್ಲಿ ತನ್ನ ತಂದೆಯ ಜೊತೆ ನರಸಿಂಹನು ಬೀಡು ಬಿಟ್ಟಿದ್ದನೆಂದು ಗೊತ್ತಾಗುತ್ತದೆ. ನರಸಿಂಹನಿಗೆ ಆಗ ಆರು ವರ್ಷಗಳು ತುಂಬಿದ್ದವೆಂದು ಹೇಳಬಹುದು. ಈ ವೇಳೆಗೆ ವಿಷ್ಣುವರ್ಧನನು ಬಂಕಾಪುರವನ್ನು ಪುನಃ ತನ್ನ ವಶಕ್ಕೆ ತೆಗೆದುಕೊಂಡಿದ್ದನು. ನರಸಿಂಹನು ಬೇಟಿ ನೀಡಿದುದನ್ನು ನಂತರ ಅವನ ಆಳ್ವಿಕೆಯ ಕಾಲದಲ್ಲಿ ಕವಿಗಳು ಹೊಗಳಿ ಬರೆದಿದ್ದಾರೆ. ನರಸಿಂಹನು ಈ ಪ್ರಪಂಚಕ್ಕೆ ಅವತಾರ

ಪುರುಷನಾಗಿ ಜನಿಸಿದನೆಂದು ಹಾಗೂ ತನ್ನ ತಂದೆಯು ಬಂಕಾಪುರದ ಹತ್ತಿರ ಕದಂಬರಿಂದ ಅನುಭವಿಸುತ್ತಿದ್ದ ಕಷ್ಟಗಳಿಂದ ಪಾರುಮಾಡಲು ಜನಿಸಿದನೆಂದು ವರ್ಣಿಸಲಾಗಿದೆ. ನರಸಿಂಹನು ಕ್ರಿ.ಶ.1139ರ ಅಂತ್ಯದ ವೇಳೆಗೆ ದೋರಸಮುದ್ರಕ್ಕೆ ಹಿಂದಿರುಗಿದನೆಂದು ತಿಳಿದು ಬರುತ್ತದೆ. ಕ್ರಿ.ಶ.1140[41]ರಲ್ಲಿ ವಿಷ್ಣುವರ್ಧನನು ತನ್ನ ಮತ್ತೊಬ್ಬಳು ರಾಣಿ ಬಮ್ಮಲದೇವಿಯೊಡನೆ ಹಾನಗಲ್‌ನಲ್ಲಿ ಬೀಡುಬಿಟ್ಟಿದ್ದನೆಂದು ತೋರುತ್ತದೆ. ಅವನ ತಂದೆ ಹಾನಗಲ್ (ವಿರಾಟನಗರ) ಮತ್ತು ಬಂಕಾಪುರವನ್ನು ಗೆದ್ದುಕೊಂಡಿದ್ದುದಾಗಿಯೂ ಹಾಗೂ ಸಾಂತಾರ ಜಗದ್ದೇವನೊಡನೆ ಯುದ್ಧ ಮಾಡಿದುದಾಗಿಯೂ ಹೇಳಿಕೊಂಡಿದ್ದಾನೆ. ಈ ಭಾಗದಲ್ಲಿ ಕದಂಬ ಮತ್ತು ಚಾಲುಕ್ಯರ ಶಾಸನಗಳು ಈ ಸಮಯದಲ್ಲಿ ದೊರಕದೆ ಇರುವುದರಿಂದ ವಿಷ್ಣುವರ್ಧನನು ಈ ಪ್ರದೇಶಗಳನ್ನು ಪ್ರಬಲವಾಗಿ ಅನೇಕ ವರ್ಷಗಳವರೆಗೆ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದನೆಂದು ಕಾಣಿಸುತ್ತದೆ. ಅದರೂ ಕೂಡ ಬಂಕಾಪುರವನ್ನು ವಿಷ್ಣವರ್ಧನನು ತನ್ನ ಹಿಡಿತದಲ್ಲಿಟ್ಟುಕೊಳ್ಳಬೇಕಾದರೆ ಸತತವಾಗಿ ಕದಂಬರ ವಿರುದ್ಧ ಹೋರಾಟ ನಡೆಸಬೇಕಾಗಿತ್ತು. ಅದನ್ನು ತನ್ನ ಉಪರಾಜಧಾನಿ–ಯನ್ನಾಗಿ ಕಾಯ್ದಿರಿಸಿಕೊಳ್ಳುವುದರಲ್ಲಿ ವಿಷ್ಣುವರ್ಧನನು ಶ್ರಮಪಟ್ಟನು. ಬಂಕಾಪುರದಲ್ಲಿ ಹೊಯ್ಸಳೇಶ್ವರ ದೇವಸ್ಥಾನವನ್ನು ನಿರ್ಮಿಸಿ ಶಿವನಿಗೆ ಅರ್ಪಿಸಿದನು. ಅವನ ದಂಡನಾಯಕ ಹುಳ್ಳ ಜೈನ ಬಸದಿಯನ್ನು ದುರಸ್ತಿಗೊಳಿಸಿದನು. ಕ್ರಿ.ಶ.1140[42]ರಲ್ಲಿ ವಿಷ್ಣುವರ್ಧನನು ಅನೇಕ ಯುದ್ಧಗಳನ್ನು ಕೈಗೊಂಡನು. ಬಹುಶಃ ಗೋವಾದ ಅರಸ ಜಯಕೇಶಿಯೊಡನೆ ಯುದ್ಧ ಮಾಡಿದನೆಂದು ಶಾಸನಗಳು ವಿವರಿಸುತ್ತವೆ. ಅನಂತರ ಲೊಕ್ಕಿಗೊಂಡಿಯವರೆಗೂ ಒಂದು ದಂಡಯಾತ್ರೆಯನ್ನು ಕಳುಹಿಸಿದನೆಂದು ಗೊತ್ತಾಗುತ್ತದೆ. ಕ್ರಿ.ಶ.1141[43]ರಲ್ಲಿಯು ಕೂಡ ಹಾನಗಲ್ ಅವನ ವಶದಲ್ಲಿತ್ತೆಂದು ತಿಳಿದು ಬರುತ್ತದೆ.

ಕ್ರಿ.ಶ.1141 ಮತ್ತು 1142[44]ರ ಪ್ರಾರಂಭದಲ್ಲಿ ಬಂಕಾಪುರದಿಂದ ಆಳುತ್ತಿದ್ದನೆಂಬ ಮಾಹಿತಿ ಇದೆ. ಇದೇ ಸಮಯದಲ್ಲಿ ದೋರಸಮುದ್ರದಲ್ಲಿ ನರಸಿಂಹನು ಶಾಂತಿಯನ್ನು ಕಾಪಾಡಲು ಸಾಧ್ಯವಾಗದೆ ತೊಂದರೆಗೊಳಗಾಗಿದ್ದನು. ರಾಜ್ಯದ ಇನ್ನಿತರ ಭಾಗಗಳಲ್ಲಿಯೂ ಕೂಡ ಅನೇಕ ಮಹಾಮಂಡಳಿಕರು ದಂಗೆ ಎದ್ದರು. ಈ ದಂಗೆಯನ್ನು ಅಡಗಿಸಲು ನರಸಿಂಹನಿಗೆ ಕಷ್ಟದ ಕೆಲಸವಾಗಿತ್ತು. ನರಸಿಂಹನು ತನಗೆ ಎದುರಾಗಿದ್ದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದರಲ್ಲಿ ಯಶಸ್ವಿಯಾದನು. ಆದರೆ ಇದೇ ಸಮಯದಲ್ಲಿ 1142ರ ಮಾರ್ಚಿ ತಿಂಗಳಲ್ಲಿ ವಿಷ್ಣುವರ್ಧನನು ಬಂಕಾಪುರದಲ್ಲಿ ಮರಣ ಹೊಂದಿದನು. ಅವನ ದಂಡನಾಯಕ ಬೊಪ್ಪ ಬಂಕಾಪುರದಿಂದ ವಿಷ್ಣುವರ್ಧನನ ಪಾರ್ಥಿವ ಶರೀರವನ್ನು ವಿಶೇಷ ಗೌರವದೊಡನೆ ಮುದುಗೆರೆಗೆ ಸಾಗಿಸಿಕೊಂಡು ತಂದು ಅಲ್ಲಿ ಸಕಲ ಗೌರವದೊಂದಿಗೆ ಅಂತ್ಯಕ್ರಿಯೆಯನ್ನು ನೆರವೇರಿಸಿದನು.

ವಿಷ್ಣುವರ್ಧನನಿಗೆ ಶಾಂತಲಾದೇವಿ ಮತ್ತು ಲಕ್ಷ್ಮೀದೇವಿ ಎಂಬ ಇನ್ನಿತರ ರಾಣಿಯರಿದ್ದ–ರೆಂಬುದಕ್ಕೆ ಮಾಹಿತಿಗಳು ದೊರಕುತ್ತವೆ. ವಿಷ್ಣುವರ್ಧನನ ಮೊದಲು ಶಾಸನಗಳಲ್ಲೆಲ್ಲ ಶಾಂತಲಾದೇವಿ ಪಟ್ಟಮಹಿಷಿಯಾಗಿ ಕಾಣಿಸಿಕೊಳ್ಳುತ್ತಾಳೆ. ಈಕೆ ಕ್ರಿ.ಶ.1131ರಲ್ಲಿ ಮೃತಳಾದ ಮೇಲೆ ಲಕ್ಷ್ಮೀದೇವಿ ಪಟ್ಟದ ರಾಣಿಯಾದಳು. ವಿಷ್ಣುವರ್ಧನನ ಮಕ್ಕಳಲ್ಲಿ ಶಾಂತಲಾದೇವಿಯಲ್ಲಿ ಜನಿಸಿದ ಬಲ್ಲಾಳ ಮತ್ತು ಹರಿಯಾಲದೇವಿ ಪ್ರಮುಖರು. ಅದೇ ರೀತಿ ಮತ್ತೊಬ್ಬಳು ಪಟ್ಟದರಸಿ ಲಕ್ಷ್ಮೀದೇವಿಯಲ್ಲಿ ಜನಿಸಿದ ನರಸಿಂಹನು ಪ್ರಮುಖ. ಕುಮಾರ ಬಲ್ಲಾಳ ಕ್ರಿ.ಶ.1129ರಲ್ಲೆ ಮರಣ ಹೊಂದಿದ್ದನು. ವಿಷ್ಣುವರ್ಧನನಿಗೆ ಮೇಲೆ ವಿವರಿಸಿದ ಮಕ್ಕಳಲ್ಲದೆ ಚಿಕ್ಕ ಬಿಟ್ಟಿದೇವ ಮತ್ತು ವಿನಯಾದಿತ್ಯ ಎಂಬ ಇತರ ಮಕ್ಕಳೂ ಇದ್ದರೆಂದು ತಿಳಿದು ಬರುತ್ತದೆ.

ವಿಷ್ಣುವರ್ಧನನು ಹೊಯ್ಸಳ ರಾಜ್ಯವನ್ನು ವಿಸ್ತರಿಸಿ ಒಂದು ಪ್ರಬಲ ರಾಜ್ಯವನ್ನಾಗಿ ಮಾರ್ಪಡಿಸುವುದರಲ್ಲಿ ಯಶಸ್ವಿಯಾದನು. ತನ್ನ ಆಳ್ವಿಕೆಯ ಪ್ರಾರಂಭದಲ್ಲಿ ತನ್ನ ರಾಜ್ಯದ ದಕ್ಷಿಣದಲ್ಲಿದ್ದ ಚೋಳರನ್ನು ತಲಕಾಡಿನಿಂದ ಹೊಡೆದೋಡಿಸಿ ಹೊಯ್ಸಳರ ಅಧಿಕಾರವನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾದನು. ಚೋಳರು ಕ್ರಿ.ಶ.1004ರಲ್ಲಿ ಗಂಗರ ರಾಜಧಾನಿ ತಲಕಾಡನ್ನು ಗೆದ್ದುಕೊಂಡು ಗಂಗರ ಆಳ್ವಿಕೆಯು ಕೊನೆಗೊಳ್ಳಲು ಕಾರಣರಾಗಿದ್ದರು. ವಿಷ್ಣುವರ್ಧನನ ಮಹದಾಶೆ ಪ್ರಮುಖವಾಗಿ ತಲಕಾಡನ್ನು ಚೋಳರಿಂದ ಬಿಡಿಸುವುದಾಗಿತ್ತು. ಅಂತಿಮವಾಗಿ ತಲಕಾಡನ್ನು ಕ್ರಿ.ಶ.1114ರಲ್ಲಿ ಚೋಳರನ್ನು ಸದೆಬಡಿದು ಪುನಃ ಕರ್ನಾಟಕದ ರಾಜಮನೆತನದ ಆಳ್ವಿಕೆಗೆ ಒಳಪಡಿಸುವುದರಲ್ಲಿ ಸಂಪೂರ್ಣವಾಗಿ ವಿಜಯಿಯಾದನು. ಕಲ್ಯಾಣಿ ಚಾಲುಕ್ಯರ ವಿರುದ್ಧ ಸತತವಾಗಿ ಹೋರಾಟ ನಡೆಸಿ ತನ್ನ ರಾಜ್ಯವನ್ನು ವಿಸ್ತರಿಸಿದನು. ತನ್ನ ಪ್ರಯತ್ನಗಳಲ್ಲಿ ಅನೇಕ ಬಾರಿ ಹಿಮ್ಮೆಟ್ಟಿಸಲ್ಪಟ್ಟರೂ ಚಾಲುಕ್ಯರ ಹಿಡಿತದಲ್ಲಿದ್ದ ಅನೇಕ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಅನೇಕ ಮಹಾಮಾಂಡಳಿಕರು ಕೂಡ ಚಾಲುಕ್ಯ ಸಾಮ್ರಾಟನನ್ನು ತ್ಯಜಿಸಿ ವಿಷ್ಣುವರ್ಧನನ ಅಧಿಕಾರವನ್ನು ಒಪ್ಪಿಕೊಂಡರು. ವಿಷ್ಣುವರ್ಧನನ ಆಳ್ವಿಕೆಯ ಅಂತ್ಯದ ವೇಳೆಗೆ ಹೊಯ್ಸಳ ರಾಜ್ಯ ಹೆಚ್ಚು ಕಡಿಮೆ ಒಂದು ಸ್ವತಂತ್ರ ರಾಜ್ಯದ ಅಸ್ತಿತ್ವವನ್ನು ಪಡೆದುಕೊಂಡಿತೆಂದು ಹೇಳಿದರೆ ತಪ್ಪಾಗಲಾರದು. ವಿಷ್ಣುವರ್ಧನನು ಬದುಕಿರುವ–ವರೆಗೂ ಅವನು ವಿಧೇಯ ಸಾಮಂತನಾಗಿರುವುದಕ್ಕಿಂತ ಸ್ವತಂತ್ರ ರಾಜನಂತೆಯೇ ರಾಜ್ಯವನ್ನಾಳಿದನು. ಈ ರೀತಿಯಾಗಿ ವಿಷ್ಣುವರ್ಧನನ ಕಾಲ ಹೊಯ್ಸಳ ರಾಜ್ಯದ ಔನ್ನತ್ಯದಲ್ಲಿ ಒಂದು ಪ್ರಮುಖ ಹಂತ. ಮುಂದೆ ಅದು ಹೊಯ್ಸಳ ಎರಡನೆಯ ವೀರಬಲ್ಲಾಳನ ಕಾಲದಲ್ಲಿ ಒಂದು ಶಕ್ತಿಯುತ ಸಾಮ್ರಾಜ್ಯವಾಗಿ ಮಾರ್ಪಡಲು ಭದ್ರ ತಳಪಾಯ ಹಾಕಿದ ಕೀರ್ತಿಗೆ

ವಿಷ್ಣುವರ್ಧನನು ಪಾತ್ರನಾದನು. "ವಿಷ್ಣುವರ್ಧನ ನಿಜವಾಗಿ ಹೊಯ್ಸಳ ಸಾಮ್ರಾಜ್ಯದ ನಿರ್ಮಾಪಕ" ಎಂದು ಎಸ್.ಕೆ. ಅಯ್ಯಂಗಾರ್ ಅಭಿಪ್ರಾಯಪಟ್ಟಿದ್ದಾರೆ.

## 4.4 ಒಂದನೇ ನರಸಿಂಹ (ಕ್ರಿ.ಶ.1142–1172)

ವಿಷ್ಣುವರ್ಧನನ ನಂತರ ಆತನ ಮಗ ಒಂದನೇ ನರಸಿಂಹ ಕ್ರಿ.ಶ.1142ರಲ್ಲಿ ಅಧಿಕಾರಕ್ಕೆ ಬಂದನು. ಈತನು 1133ರಲ್ಲಿ ವಿಷ್ಣುವರ್ಧನ ಮತ್ತು ಲಕ್ಷ್ಮೀದೇವಿಗೆ ಜನಿಸಿದನು. ಈತನು ಹುಟ್ಟಿದ ಸಂದರ್ಭದಲ್ಲಿ ಉತ್ತರದ ಭಾಗವನ್ನು ಗೆದ್ದು ಬಂದಿದ್ದನು. ರಾಜನು ಈತ ಜನಿಸಿದ ವಿಷಯ ತಿಳಿದು ಆತನ ದಿಗ್ವಿಜಯದ ವಿಜಯ ನರಸಿಂಹ ಎಂಬ ಹೆಸರನ್ನು ಇಟ್ಟನು. ಹಾಗೆ ಆತನಿಗೆ ಅನೇಕ ಬಿರುದುಗಳನ್ನು ನೀಡಿದ್ದನು. ಅಂದಿನಿಂದ ನರಸಿಂಗನಿಗೆ ರಾಜ್ಯವನ್ನು ನೀಡಿದನು. ಕ್ರಿ.ಶ.1142[45]ರಲ್ಲಿ ವಿಷ್ಣುವರ್ಧನ ಮರಣ ಹೊಂದಿದಾಗ ನರಸಿಂಹ 8ನೇ ವರ್ಷದ ಬಾಲಕನಾಗಿದ್ದನು. ಹೊಯ್ಸಳ ಸಿಂಹಾಸನ ಏರಿದನು. ಹೊಯ್ಸಳ ರಾಜ್ಯದಲ್ಲಿದ್ದ ಅಧಿಕಾರಿಗಳು ಮತ್ತು ಮಂತ್ರಿಗಳು ಆಡಳಿತ ಮುಂದುವರಿಸಿದರು.

ಚಿಕ್ಕ ವಯಸ್ಸಿನಲ್ಲಿಯೇ ಸಿಂಹಾಸನ ಏರಿದ ಒಂದನೇ ನರಸಿಂಹನೂ ರಾಜ್ಯದ ಒಳಗಿನ ಹಾಗೂ ಹೊರಗಿನ ಶತ್ರುಗಳನ್ನು ಕಂಡುಕೊಂಡನು. ವಿಷ್ಣುವರ್ಧನನು ಸೋಲಿಸಿದ್ದ ಚಾಲುಕ್ಯರ ದುರ್ಬಲ ಸ್ಥಿತಿಯನ್ನು ಉಪಯೋಗಿಸಿಕೊಂಡು ಸ್ವತಂತ್ರರಾಗಿ ಸಾಮ್ರಾಜ್ಯ ವಿಸ್ತರಿಸಲು ಪ್ರಯತ್ನಿಸಿದರು. ಚಾಲುಕ್ಯರು ಹೊಯ್ಸಳರ ಸಾಮ್ರಾಜ್ಯವನ್ನು ಆಕ್ರಮಿಸಲೂ ನಿಶ್ಚಯಿಸಿದರು. ಜಗದೇಕಮಲ್ಲ ಕ್ರಿ.ಶ.1143[46]ರಲ್ಲಿ ಬಂಕಾಪುರವನ್ನು ಆಕ್ರಮಿಸಿಕೊಂಡನು. ನರಸಿಂಹನೂ ಬಂಕಾಪುರವಲ್ಲದೆ ಅದರ ಜೊತೆಗೆ ಹಾನಗಲ್, ಬೆಳವಲ ಇನ್ನಿತರ ಪ್ರದೇಶಗಳನ್ನು ಕಳೆದುಕೊಂಡನು. ಮಹಾಂಡಲೇಶ್ವರ ಮತ್ತು ಜಗದೇಕಮಲ್ಲ ಪ್ರಾಬಲ್ಯಕ್ಕೆ ಬರುತ್ತಿರುವುದನ್ನು ನರಸಿಂಹನು ಗಮನಿಸಿದನು. ಜಗದೇಕಮಲ್ಲ ಹೊಯ್ಸಳ ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳಲು ಉನ್ನತ ಅಧಿಕಾರಿಗಳನ್ನು ನೇಮಿಸಿದನು. ಇದರ ಪರಿಣಾಮವಾಗಿ ಚಾಲುಕ್ಯರು, ಹೊಯ್ಸಳ ರಾಜ್ಯದ ಮೇಲೆ ವಿಪರೀತ ಒತ್ತಡ ಏರಿದರು. ಹೊಯ್ಸಳರ ಶಾಸನಗಳಲ್ಲಿ ಈತನ ಯಾವುದೇ ಮಾಹಿತಿಯಿಲ್ಲ, ಬಂಕಾಪುರ ಮತ್ತು ಇನ್ನಷ್ಟು ರಾಜ್ಯ ಕಳೆದುಕೊಂಡ ಮೇಲೆ ಹೊಯ್ಸಳ ಸಾಮ್ರಾಜ್ಯವು ಬಲಹೀನವಾಯಿತು.

ಗಡಿಪ್ರದೇಶದ ಅನೇಕ ರಾಜರು ಕೂಡ ಈ ಅವಕಾಶವನ್ನು ಬಳಸಿಕೊಂಡು ಸ್ವತಂತ್ರರಾಗಲು ಪ್ರಯತ್ನಿಸಿದರು. ಕೂರ್ಗಿನ ರಾಜ ಪಂಗಾಳ್ವನೂ ಹೊಯ್ಸಳರ ಸರಹದ್ದಿನ

(ಗಡಿಪ್ರದೇಶಗಳ) ಮೇಲೆ ಕ್ರಿ.ಶ.1145[47]ರಲ್ಲಿ ದಾಳಿ ಮಾಡಿದನು. ಈ ಸಮಯದಲ್ಲಿ ಶಾಸನಗಳ ಪ್ರಕಾರ ನರಸಿಂಹನೂ ಚೆಂಗಾಳ್ವ ರಾಜನನ್ನು ಕೊಂದು ಆನೆಗಳು, ಕುದುರೆಗಳು, ಚಿನ್ನವನ್ನು ವಶಪಡಿಸಿಕೊಂಡನು. ನರಸಿಂಹನಿಗೆ ಕೇವಲ 12 ವರ್ಷ ವಯಸ್ಸಾಗಿತ್ತು. ಈ ಘಟನೆ ನಡೆದ ನಂತರ ಚೆಂಗಾಳ್ವರ ರಾಜ್ಯವು ಹೊಯ್ಸಳರ ಅಧೀನದಲ್ಲಿ ಉಳಿಯಿತು. ಹಾನಗಲ್‌ನ ಕದಂಬರು, ಸಿಂಧ್ ಮತ್ತು ಉಚ್ಚಂಗಿ ಪಾಂಡ್ಯರು ಹೊಯ್ಸಳರಿಂದ ಸ್ವತಂತ್ರರಾಗಲು ಪ್ರಯತ್ನಿಸಿದರು. ಕದಂಬರನ್ನು ಈ ಹಿಂದೆ ವಿಷ್ಣುವರ್ಧನ ಸೋಲಿಸಿದ್ದನು. ನಂತರದ ದಿನಗಳಲ್ಲಿ ಹೊಯ್ಸಳರ ಅನೇಕ ಪ್ರದೇಶಗಳನ್ನು ಕದಂಬರು ವಶಪಡಿಸಿಕೊಂಡಿದ್ದರು. ಇದರ ಪರಿಣಾಮವಾಗಿ ಹೊಯ್ಸಳರು ಕದಂಬರ ವಿರುದ್ಧ ಯುದ್ಧ ಸಾರಿದರು, ಈ ಯುದ್ಧದಲ್ಲಿ ಕದಂಬರ ಅಧಿಕಾರಿ ಕೊಲ್ಲಲ್ಪಟ್ಟನು. ಹೊಯ್ಸಳರು ಕದಂಬರ ಮೇಲೆ ಯುದ್ಧ ಮಾಡುತ್ತಿರುವಾಗ ಇನ್ನೊಂದು ಕಡೆಯಿಂದ ಸಿಂಧ್‌ಗಿ ಸೈನ್ಯವು ಹೊಯ್ಸಳರ ಸೈನ್ಯ ವನ್ನು ಮುತ್ತಿತ್ತು ಹೊಯ್ಸಳರ ಅಧಿಕಾರಿಗಳು ಸಿಂಧ್‌ನ ಚಾವುಂಡ ಅರಸನ ಮೇಲೆ ಯುದ್ಧ ಸಾರಿದರು.

ಈ ಸಮಯದಲ್ಲಿ ಉಚ್ಚಂಗಿ ಪಾಂಡ್ಯ ತನ್ನ ಅಧಿಕಾರವನ್ನು ಮರಳಿ ಪಡೆದನು. ಈ ಹಿಂದೆಯೂ ವಿಷ್ಣುವರ್ಧನನು ದೊಮ್ಮೆ ಕಾಳಗದಲ್ಲಿ ಇವರ ರಾಜ್ಯವನ್ನು ವಶಪಡಿಸಿಕೊಂಡಿದ್ದನು. ಒಂದನೇ ನರಸಿಂಹ ಯಾವಾಗ ಹೊಯ್ಸಳ ರಾಜನಾದನೋ ಅಂದಿನಿಂದ ಪಾಂಡ್ಯರು ಸ್ವತಂತ್ರರಾಗ ತೊಡಗಿದರು. ಹಾಗೂ ಚಾಲುಕ್ಯರ ಜೊತೆ ಸೇರತೊಡಗಿದರು. ಮುಂದಿನ ದಿನಗಳಲ್ಲಿ ಇವರು ಹೊಯ್ಸಳರ ಗಡಿರಾಜ್ಯಗಳ ಮೇಲೆ ಯುದ್ಧ ಸಾರಿದರು. ಈ ಯುದ್ಧವೂ ವೋಳ್ಕರಸ ನಾಯಕ, ಹುಲಿಯಾರ್‌ನ ಗೋವಿದೇವರ ಮೇಲೆ ಆಯಿತು. ಚೆಂಗಾಳ್ವರು ಮತ್ತೆ ಹೊಯ್ಸಳರ ಮೇಲೆ ಆಕ್ರಮಣ ಮಾಡುವ ಸಲುವಾಗಿ ಹೊಯ್ಸಳ ದುರ್ಬಲಸ್ಥಿತಿ ಬಳಸಿಕೊಂಡರು. ಚೆಂಗಾಳ್ವರು ಕ್ರಿ.ಶ.1149ರಲ್ಲಿ ಹಳ್ಳಿಗಳ ಮೇಲೆ ಆಕ್ರಮಣ ಮಾಡಿ ಹಸುಗಳನ್ನು ಕೊಂಡೊಯ್ದರು. ಈ ಸಮಯದಲ್ಲಿ ಅನೇಕ ಹಳ್ಳಿಯ ರೈತರು ಸಾವಿಗೀಡಾದರು. ಚೆಂಗಾಳ್ವರ ಹಿರಿಯ ಮಂತ್ರಿ ಮತ್ತು ದಂಡನಾಯಕ ಜೋಕಿಮಯ್ಯ ಈ ಆಕ್ರಮಣ ಮಾಡಿದನು. ಹಾಗೂ ಕೂರ್ಗ್‌ನಲ್ಲಿ ಮತ್ತೆ ಅಧಿಕಾರ ಸ್ಥಾಪಿಸಿದನು. ಒಂದನೇ ನರಸಿಂಹನೂ ಕ್ರಿ.ಶ.1155 ರವರೆಗೆ ಕಲ್ಯಾಣ ಚಾಲುಕ್ಯರನ್ನು ತನ್ನ ಸಾಮಂತರಾಗಿ ಮುಂದುವರಿಸಿದನು. ಭೂಲೋಕಮಲ್ಲನು 1149ರಲ್ಲಿ ಮರಣ ಹೊಂದಿದನು. ಅವನ ನಂತರ ತ್ರೈಲೋಕಮಲ್ಲ ನೂರ್ಮಡಿ ಅಧಿಕಾರಕ್ಕೆ ಬಂದನು. ಈ ಸಮಯದಲ್ಲಿ ಚಾಲುಕ್ಯ ಸಾಮ್ರಾಜ್ಯದಲ್ಲಿ ಅನೇಕ ಸಮಸ್ಯೆಗಳಿದ್ದವು. ಇದು ಹೊಯ್ಸಳರಿಗೆ ತಮ್ಮ ರಾಜ್ಯವನ್ನು ಮತ್ತೆ ಪಡೆಯಲು ಸದಾವಕಾ ಶವಾಗಿತ್ತು. ಆದರೆ ಒಂದನೇ ನರಸಿಂಹನು ವಯಸ್ಕನಾದರೂ ದುರ್ಬಲನಾಗಿದ್ದನು. ಈತನು ಆಡಳಿತದ ಬಗ್ಗೆ ಹೆಚ್ಚು ಗಮನ

ನೀಡಲಿಲ್ಲ. ಒಂದನೇ ನರಸಿಂಹನೂ ಶಾಂತಿಪ್ರಿಯ ಅರಸನಾಗಿದ್ದನು. ಒಂದನೇ ನರಸಿಂಹನು ತನ್ನ ಜವಾಬ್ದಾರಿಯನ್ನು ಮರೆತಿದ್ದನು. ಇಕ್ಕೆಲ ಅರಸ ಗಂಗ ವಿಷ್ಣುವರ್ಧನನ ಮಾಂಡಲಿಕ–ನಾಗಿದ್ದನು. ತುಂಗಭದ್ರಾ ಪ್ರದೇಶವನ್ನು ಜಹಗೀರ್ ಆಗಿ ಪಡೆದಿದ್ದನು. ನರಸಿಂಹನ ಕಾಲದ 1154ರಲ್ಲಿ ಬೊಮ್ಮರಸ ಗುಟ್ಟಿಯ ಅರಸ ಇಕ್ಕೆಲ ಅರಸನ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡು ತೊಂದರೆ ಉಂಟು ಮಾಡಿದನು. ಇಕ್ಕೆಲ ಅರಸ ನರಸಿಂಹನ ಸಹಾಯ ಕೇಳಿದನು. 21 ವರ್ಷದ ನರಸಿಂಹನು ಬೊಮ್ಮರಸನ ಮೇಲೆ ಯುದ್ಧ ಸಾರಿದನು. ಬೊಮ್ಮರಸನನ್ನು ಸೋಲಿಸಿ ಬನವಾಸಿಯಲ್ಲಿ ಬಂದು ಉಳಿದನು. ಸ್ವಲ್ಪ ದಿನದ ನಂತರ ದ್ವಾರಸಮುದ್ರಕ್ಕೆ ವಾಪಸ್ಸು ಆದನು.

ಆದರೆ ನರಸಿಂಹನ ಈ ಸಂತೋಷ ತುಂಬಾ ಕಾಲ ಉಳಿಯಲಿಲ್ಲ. ಏಕೆಂದರೆ ಪೂರ್ವ ಭಾಗದಲ್ಲಿದ್ದ ಚೋಳರನ್ನು ಸೋಲಿಸಿ ಕೋಲಾರ ಮತ್ತು ಕೊಂಗುವನ್ನು ವಿಷ್ಣುವರ್ಧನ ವಶಪಡಿಸಿ ಕೊಂಡಿದ್ದನು. ನರಸಿಂಹನ ದುರ್ಬಲ ಆಳ್ವಿಕೆಯಲ್ಲಿ ಉತ್ಸಾಹಿಯಾಗಿದ್ದ ರಾಜ ರಾಜದೇವಚೋಳ ಸೈನ್ಯ ಕಟ್ಟಿ ಕೋಲಾರವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಜೋಕಿಮಯ್ಯ ಎಂಬ ಹಿರಿಯ ದಂಡನಾಯಕ ಮತ್ತು ಒಂದನೇ ನರಸಿಂಹ ಒಂದುಗೂಡಿ ಶತ್ರುಗಳನ್ನು ಹಿಮ್ಮೆಟ್ಟಿಸಿ ನಂಗಲಿಯಲ್ಲಿ ಶಾಂತಿ ಸ್ಥಾಪಿಸಿದರು. ನರಸಿಂಹನು ಕೂಡ ಈ ಯುದ್ಧದಲ್ಲಿ ಭಾಗವಹಿಸಿ ಸ್ವಲ್ಪ ದಿನ ನಂಗಲಿ ಯಲ್ಲಿಯೇ ಉಳಿದು ನಂತರ ಶ್ರವಣಬೆಳಗೊಳಕ್ಕೆ ಭೇಟಿ ನೀಡಿ (1156) ದ್ವಾರಸಮುದ್ರಕ್ಕೆ ವಾಪಸ್ಸು ಆದನು. ಒಂದನೇ ನರಸಿಂಹನ ಆಳ್ವಿಕೆಯಲ್ಲಿ ಚಾಲುಕ್ಯರು ರಾಜಕೀಯವಾಗಿ ಮೇಲಕ್ಕೆ ಬಂದರು. ಉತ್ಸಾಹಿ ಜಹಗೀರನಾಗಿದ್ದ ಬಿಜ್ಜಳ 3ನೇ ನೂರ್ಮಡಿ ತೈಲಪನು ಕ್ರಿ.ಶ.1156[48]ರಲ್ಲಿ ಸಿಂಹಾಸನ ಏರಿದನು. ಆದರೆ ಈ ಘಟನೆಯಲ್ಲಿ ಸ್ವಲ್ಪವೂ ರಕ್ತಪಾತವಾಗಲಿಲ್ಲ. ಏಕೆಂದರೆ ದುರ್ಬಲ ರಾಜನೂ ಚಾಲುಕ್ಯರ ದಕ್ಷಿಣ ಭಾಗದಲ್ಲಿ ಯಾವುದೇ ವಿರೋಧ ವ್ಯಕ್ತಪಡಿಸಲಿಲ್ಲ. ಬಿಜ್ಜಳನು ಅಧಿಕಾರಕ್ಕೆ ಬಂದ ಮೇಲೆ ಜಹಗೀರು ರಾಜ್ಯಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಪ್ರವೇಶಿಸಿದನು. ಇವನು ಉಚ್ಚಂಗಿಯ ಪಾಂಡ್ಯರನ್ನು ಮತ್ತು ಸಿಂಧ್‌ರನ್ನು ಸೋಲಿಸಿದನು. ಬಿಜ್ಜಳನ ಅಧಿಕಾರ ಕೇಸಿಮ್ಮಯ್ಯ ಹೊಯ್ಸಳ ಸೈನ್ಯವನ್ನು ಕ್ರಿ.ಶ.1160[49]ರಲ್ಲಿ ಆಕ್ರಮಿಸಿದನು. ಅದೇ ವರ್ಷ ಬನವಾಸಿಯ ಬೊಮ್ಮರಸನೂ ಕೂಡ ಆತನ ಸೈನ್ಯಕ್ಕೆ ತುತ್ತಾದನು. ಶಾಸನದ ಮಾಹಿತಿಯ ಪ್ರಕಾರ ನರಸಿಂಹನ ಸೈನ್ಯವು ಸೋತು ತುಂಗಭದ್ರದಿಂದ ಹೊರಮಾಡಿಸಿದ್ದು ಕ್ರಿ.ಶ.1162[50]ರಲ್ಲಿ ದಕ್ಷಿಣದ ಭಾಗವನ್ನು ಆಕ್ರಮಿಸಿ ಬನವಾಸಿ ಹಾಗೂ ಬೆಳ್ಳಿಗಾವೆಯನ್ನು ಸಾಮಂತರಾಗಿಸಿಕೊಂಡನು (ಬಿಜ್ಜಳ) ಒಂದು ಮಾಹಿತಿಯಲ್ಲಿ ತಿಳಿದುಬರುವಂತೆ ಒಂದನೇ ನರಸಿಂಹನ ದಂಡನಾಯಕ

ಲೋಕಮಯ್ಯ ಬಿಜ್ಜಳನನು ಸೋಲಿಸಿದನು. ಆದರೆ ಬಿಜ್ಜಳನೂ ಯಾವುದೇ ಹೆದರಿಕೆಯಿಲ್ಲದೆ ಮತ್ತೆ ಆಕ್ರಮಿಸಿದನು. ಉಚ್ಚಂಗಿಯ ಪಾಂಡ್ಯರು, ಕಲಚೂರಿಯ ಜೊತೆ ಸಂಬಂಧ ಬೆಳೆಸಿದರು. (1167 ರಿಂದ) ನರಸಿಂಹ ಅನಾರೋಗ್ಯದಿಂದ ಬಳಲಲು ಪ್ರಾರಂಭಿಸಿದ ಮೇಲೆ ಆತನ ರಾಣಿ ಈಚಲ ಮಹಾದೇವಿ ಹಾಗೂ ಆತನ ಮಗ ಎರಡನೇ ಬಲ್ಲಾಳನಿಗೆ ಸ್ವಲ್ಪ ಮಟ್ಟಿನ ಜವಾಬ್ದಾರಿಯನ್ನು ನೀಡಿದನು. ನರಸಿಂಹನು ರಾಜನ ಕರ್ತವ್ಯ ಮರೆಯುತ್ತಿದ್ದಂತೆ ಹೊಯ್ಸಳ ಸಾಮ್ರಾಜ್ಯವು ಇಳಿಮುಖವಾಯಿತು. ಮುಂದಿನ ರಾಜನಾದ ಎರಡನೇ ವೀರಬಲ್ಲಾಳನೂ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿಕೊಂಡನು. ಎರಡನೇ ಬಲ್ಲಾಳನು ರಾಜಧಾನಿಯಿಂದ ಹೊರಬಂದು ತನ್ನದೇ ಸೈನ್ಯ ಕಟ್ಟಿ ಕ್ರಿ.ಶ.1173ರಲ್ಲಿ ಈ ತಂದೆಯನ್ನು ಅಧಿಕಾರದಿಂದ ಕೆಳಗಿಳಿಸಿದನು. ಇದೇ ಸಮಯದಲ್ಲಿ ಒಂದನೇ ನರಸಿಂಹನೂ ಮಾರಣಾಂತಿಕ ಕಾಯಿಲೆಯಿಂದ ನರಳುತ್ತಿದ್ದು ನಂತರ ಮರಣ ಹೊಂದಿದನು. ಕ್ರಿ.ಶ.1173ರಲ್ಲಿ ಎರಡನೇ ವೀರಬಲ್ಲಾಳ ಸಿಂಹಾಸನ ಏರಿದನು. ಇದರೊಂದಿಗೆ ಒಂದನೇ ನರಸಿಂಹನು ಬೆಳಕಿಗೆ ಬರದೆ ಆಳ್ವಿಕೆ ಕೊನೆಗೊಂಡಿತು.

## ಅಡಿಟಿಪ್ಪಣಿಗಳು

1) E.C.V, BI, 58.
2) Ibid
3) S.K.Aiyangar, Ancient India, p.238.
4) E.C. BI, 147.
5) Rice, Mysore Inscriptions, p.262 and Introd, p.76.
6) E.C.II, SB 73.
7) Ibid BI, 17.
8) Ibid Ch.83.
9) Rice, Mysore Gazetteer, p.11.
10) Ibid, p.262.
11) E.C.II, SB, 73.
12) E.C.V, BI, 17.
13) Rice, Mysore and Coorg, p.48.
14) E.C.IV, Ch.83
15) E.C.V, BI.58
16) E.C.IV, Kr.31
17) E.C.IV, Ch.83
18) E.C.V, BI.17.
19) E.C.IX, NI.84
20) E.C.V, BI.17
21) E.C.IX, Hs, 18.
22) E.C.IV, Ch.83
23) E.C.V, BI.58
24) E.C.IV, Kr.31
25) E.C.V, BI,17
26) Ibid
27) Rice, Mysore Inscriptions, p.215
28) Ibid, 178
29) Ibid, p.137
30) E.C.V, BI, 93
31) E.C.II, SB, 345

32) E.C.VI, Kd, 34

33) E.C.IV Ch.20

34) E.C.VIII, Sa, 58

35) E.C.V BI.20

36) Ibid

37) Ibid

38) E.C.V HS 41

39) Ibid

40) Ibid

41) Rice Mysore Inscriptions, p.223

42) Ibid

43) Ibid

44) EC VI, SB 71

45) Ibid

46) EC V, BI 46

47) Ibid

48) Ibid

49) EC VI, BI 10

50) Ibid

# ಅಧ್ಯಾಯ–5
# ಎರಡನೆಯ ವೀರಬಲ್ಲಾಳ ಮತ್ತು ಎರಡನೇ ವೀರನರಸಿಂಹನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯದ ವಿಸ್ತರಣೆ

5.1 ಎರಡನೆಯ ವೀರಬಲ್ಲಾಳ

- 5.1.1 ಪ್ರಾರಂಭಿಕ ಹಂತ
- 5.1.2 ವೀರಬಲ್ಲಾಳನ ದಂಗೆ
- 5.1.3 ಎರಡನೆಯ ವೀರಬಲ್ಲಾಳನ ಪಟ್ಟಾಭಿಷೇಕ
- 5.1.4 ವೀರಬಲ್ಲಾಳನ ವಿಜಯ ಯಾತ್ರೆಗಳು
- 5.1.5 ಉಚ್ಚಂಗಿಯ ಪಾಂಡ್ಯರ ಪರಾಭವ
- 5.1.6 ಕಲಚೂರ್ಯರ ಮತ್ತು ಕಲ್ಯಾಣದ ಚಾಳುಕ್ಯರ ಬಗೆಗಿನ ಎರಡನೆಯ ಬಲ್ಲಾಳನ ನೀತಿ
- 5.1.7 ದೇವಗಿರಿಯ ಸೇವುಣರೊಡನೆ ಘರ್ಷಣೆ
- 5.1.8 ಎರಡನೆಯ ಬಲ್ಲಾಳ ಮತ್ತು ಚೋಳರು
- 5.1.9 ಎರಡನೆಯ ವೀರಬಲ್ಲಾಳನ ಮರಣ
- 5.1.10 ಸಾಧನೆಗಳು

5.2 ಎರಡನೆಯ ವೀರನರಸಿಂಹ

- 5.2.1 ಮೂರನೆಯ ರಾಜೇಂದ್ರನನ್ನು ಸೆರೆಯಿಂದ ಬಿಡಿಸಲು ಎರಡನೆಯ ನರಸಿಂಹನ ಸಹಾಯ
- 5.2.2 ಎರಡನೆಯ ನರಸಿಂಹ ಮತ್ತು ಸೇವುಣರು
- 5.2.3 ಚೋಳ ಸಾಮ್ರಾಜ್ಯದಲ್ಲಿ ಬಿಕ್ಕಟ್ಟು ಮತ್ತು ಎರಡನೆಯ ನರಸಿಂಹನ ಮಧ್ಯಪ್ರವೇಶ
- 5.2.4 ಎರಡನೆಯ ನರಸಿಂಹನ ಆಲೋಚನೆಗಳು

# ಅಧ್ಯಾಯ–5
# ಎರಡನೆಯ ವೀರಬಲ್ಲಾಳ ಮತ್ತು ಎರಡನೇ ವೀರನರಸಿಂಹನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯದ ವಿಸ್ತರಣೆ

## 5.1 ಎರಡನೆಯ ವೀರಬಲ್ಲಾಳ

ಎರಡನೆಯ ವೀರಬಲ್ಲಾಳನು ಹೊಯ್ಸಳ ವಂಶದ ಅಪ್ರತಿಮ ದೊರೆಯೆಂದು ಗೌರವಿಸಲ್ಪಟ್ಟಿದ್ದಾನೆ. ಅವನು ತನ್ನ ದಂಡಯತ್ರೆಗಳಿಂದ ತನ್ನ ಸಾಮ್ರಾಜ್ಯವನ್ನು ಎಲ್ಲ ದಿಕ್ಕುಗಳಲ್ಲೂ ವಿಸ್ತರಿಸಿದ್ದಷ್ಟೇ ಅಲ್ಲದೇ ಅದನ್ನು ಶಕ್ತಿಯುತ ಮತ್ತು ಸಂಪದ್ಭರಿತವಾಗಿ ಮಾಡಿದನು. ವೀರಬಲ್ಲಾಳನ ಅರ್ಧ ಶತಮಾನಕ್ಕೂ ಮಿಗಿಲಾದ ಆಳ್ವಕೆಯ ಕಾಲದಲ್ಲಿ ಕರ್ನಾಟಕದ ಚರಿತ್ರೆಯಲ್ಲಿ, ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಒಂದು ಶಕೆಯನ್ನು ಪ್ರಾರಂಭಿಸಿತು.

### 5.1.1 ಪ್ರಾರಂಭಿಕ ಹಂತ

ಎರಡನೆಯ ವೀರಬಲ್ಲಾಳನು ಮೊದಲನೆಯ ವಿಜಯ ನರಸಿಂಹನ ಮತ್ತು ರಾಣಿ ಏಚಲಾದೇವಿಯರ ಮಗನಾಗಿದ್ದನು. ಅವನ ಹೆಸರು ಮೊದಲು ಹಾಸನ ಜಿಲ್ಲೆಯ ಚನ್ನರಾಯ–ಪಟ್ಟಣದ ಒಂದು ದತ್ತಿ ಶಾಸನದಲ್ಲಿ ಕ್ರಿ.ಶ.1153ರಲ್ಲಿ ಕಾಣಿಸಿಕೊಂಡಿದೆ. ಅದರಲ್ಲಿ ಅರಮನೆಯ ಪೂಜಾರಿಯ ಹೆಸರು ಪ್ರಮುಖವಾಗಿ ಕಂಡುಬಂದದ್ದರಿಂದ ಅವನು ಆ ವರ್ಷದಲ್ಲಿ ಹುಟ್ಟಿದ್ದನೆಂದು ತೀರ್ಮಾನಿಸಬಹುದು. ಬಹುಶಃ ಈ ಶಾಸನವು ಎರಡನೆಯ ವೀರಬಲ್ಲಾಳನು ನಾಮಕರಣಕ್ಕೆ ಸಂಬಂಧಿಸಿರಬಹುದು. ದುರಾದೃಷ್ಟಕರವಾಗಿ ಎರಡನೆಯ ವೀರಬಲ್ಲಾಳನ ಬಾಲ್ಯದ ದಿನಗಳ ಬಗ್ಗೆ ಬೆಳಕು ಚೀರುವ ಯಾವುದೇ ದಾಖಲೆಗಳು ದೊರೆತಿಲ್ಲ. ಸಹಜವಾಗಿ ಆ ಕಾಲದಲ್ಲಿ ರಾಜಕುಮಾರನಿಗೆ ಎಲ್ಲ ವಿಧದ ತರಬೇತಿಯನ್ನು ಕೊಡಿಸುವುದು ಅಂದಿನ ಪದ್ಧತಿಯಾಗಿತ್ತು. ಅವನಿಗೆ ಬಹುಶಃ ರಾಜಕೀಯ ತತ್ವಗಳು, ಯುದ್ಧಕಲೆ ಮತ್ತು ಆಡಳಿತದ ರೀತಿನೀತಿಯ ಬಗ್ಗೆ ಸರಿಯಾದ ತರಬೇತಿಯನ್ನು ಕೊಟ್ಟಿರಬೇಕು. ಅವನು ಶಾಸನಗಳೂ ಸೇರಿದಂತೆ ಅನೇಕ ದಾಖಲೆ ಪತ್ರಗಳಿಗೆ ಸಹಿಯನ್ನು ಹಾಕುತ್ತಿದ್ದನೆಂಬ ಅಂಶವು ಅವನಿಗೆ ಸರಿಯಾದ ತರಬೇತಿಯನ್ನು ಕೊಟ್ಟಿರಬೇಕೆಂಬ ಸಂಗತಿಯನ್ನು ಧೃಡಪಡಿಸುತ್ತದೆ. ಅವನ ಸಹಿಯ ಮಾದರಿಯು "ಮಲೆಪರೊಲೆಗಂಡ" ಎಂಬುದಾಗಿತ್ತು. ಎರಡನೆಯ ವೀರಬಲ್ಲಾಳನ ಕೆಲವು ಬಿರುದುಗಳಾದ "ಸರ್ವಜ್ಞ ಚೂಡಾಮಣಿ" ಬತ್ತು "ಶಬ್ದ ವಿದ್ಯಾ ಲಕ್ಷಣ ಸುಶಿಕ್ಷಿತ" ಎಂಬ ಬಿರುದುಗಳು ಅವನು

ಸಾಹಿತ್ಯಿಕವಾಗಿ ಸುಶಿಕ್ಷಿತನಾಗಿದ್ದನೆಂದು ತಿಳಿಯುತ್ತದೆ. ನಿಸ್ಸಂದೇಹವಾಗಿ ಅವನು ಬಹು ದೊಡ್ಡ ಯೋಧನಾಗಿದ್ದನು ಮತ್ತು ಅವನನ್ನು ಪುರಾಣ ನಾಯಕರುಗಳಿಗೆ ಹೋಲಿಸುತ್ತಿದ್ದರು.

ತನ್ನ ಅತಿ ಚಿಕ್ಕ ವಯಸ್ಸಿನಿಂದಲೇ ಎರಡನೆಯ ವೀರಬಲ್ಲಾಳನು ರಾಜ್ಯದ ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದನು. ಯುವರಾಜನಾಗಿ ಅವನು ದೊಡ್ಡ ಪಾತ್ರವನ್ನು ನಿರ್ವಹಿಸಿದನು. ನರಸಿಂಹನು ಅನಾರೋಗ್ಯಪೀಡಿತನಾಗಿದ್ದರಿಂದ ಅವನು ಎರಡನೆಯ ವೀರಬಲ್ಲಾಳ ಮತ್ತು ರಾಜಕುಟುಂಬದ ಇತರರಿಗೆ ರಾಜಕೀಯ ಜವಾಬ್ದಾರಿಗಳಲ್ಲಿ ಭಾಗವಹಿಸಲು ಅವಕಾಶವನ್ನು ಮಾಡಿಕೊಟ್ಟಿದ್ದನು. ಕ್ರಿ.ಶ.118[1]ರಿಂದ ಕೆಲವು ದಾಖಲೆಗಳು “ಶ್ರೀ ಮಹಾ-ಮಂಡಲೇಶ್ವರ ಅಸಹಾಯ ಶೂರ, ಏಕಾಂಗಿವೀರ ನಿಶ್ಶಂಕ ಪ್ರತಾಪ ಹೊಯ್ಸಳ ವೀರಬಲ್ಲಾಳ” ಮತ್ತು ಅವನ ತಾಯಿ ಮಹಾದೇವಿಯರಸಿಯರು ರಾಜಪ್ರತಿನಿಧಿಗಳಾಗಿ ರಾಜ್ಯವನ್ನು ಆಳುತ್ತಿದ್ದರೆಂದು ಉಲ್ಲೇಖಿಸಿವೆ. ರಾಜಕುಮಾರನೂ ಸಹ “ಗಿರಿ ವಜ್ರದಂಡ ಗಂಡಾಬೇರುಂಡ” ಎಂಬ ಬಿರುದನ್ನು ಹೊಂದಿದ್ದನು. ರಾಜಕುಮಾರನ ಈ ಬಿರುದುಗಳು ಅವನು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನೆಂದು ಸೂಚಿಸುತ್ತವೆ. ಅವನು ಕುಮಾರ ವಿಷ್ಣುವರ್ಧನ ವಿರಬಲ್ಲಾಳನೆಂದೂ ತಾನೇ ಕರೆದುಕೊಂಡಿದ್ದನು. ಅವನ ಅಜ್ಜನಂತೆ ಇವನೂ ಸಹ ಸ್ವತಂತ್ರವಾಗಿರುವ ಮಹದಾಸೆಯನ್ನು ಹೊಂದಿದ್ದನು.

### 5.1.2 ವೀರಬಲ್ಲಾಳನ ದಂಗೆ

ಬಲ್ಲಾಳನ ಸಿಂಹಾಸನಾರೋಹಣವು ಸುಲಭವಾಗಿಯೇ ನಡೆಯಿತು. ಅವನು ತನ್ನ ಆಲಸೀ ತಂದೆಯ ವಿರುದ್ಧ ಸಿಂಹಾಸನಕ್ಕಾಗಿ ದಂಗೆಯೆದ್ದನು. ಅವನ ಈ ದಂಗೆಯ ಬಗ್ಗೆ ಕೆಲವು ಚರಿತ್ರಕಾರರು ಭಿನ್ನಾಭಿಪ್ರಾಯವನ್ನು ಹೊಂದಿದ್ದಾರೆ. ಏಕೆಂದರೆ ಅವನು ತನ್ನ ತಾಯಿಯ ಜೊತೆಗೆ ರಾಜ್ಯದ ಸಹಪ್ರತಿನಿಧಿಯಾಗಿದ್ದನು. ಹಾಗಾಗಿ ಅವನು ಸಿಂಹಾಸನವನ್ನು ಏರುವುದು ಖಚಿತವಾಗಿತ್ತು. ಹಾಗಿದ್ದಲ್ಲಿ ಅವನು ಏಕೆ ದಂಗೆ ಏಳಬೇಕಿತ್ತು? ಅವನಿಗೆ ಯಾರಾದರೂ ಪ್ರತಿಸ್ಪರ್ಧಿಗಳಿದ್ದರೇ? ಆದರೆ ಸಮಕಾಲೀನ ಆಧಾರಗಳು ಅಂತಹ ಯಾವ ಸೂಚನೆಗಳನ್ನೂ ನೀಡುವುದಿಲ್ಲ. ಹಾಗಾಗಿ ಅವನ ಈ ದಂಗೆಗೆ ಸಿಂಹಾಸನಕ್ಕಾಗಿ ಪ್ರತಿಸ್ಪರ್ಧಿಯು ಇದ್ದುದಕ್ಕಾಗಿ ಆದದ್ದು ಎಂಬ ವಾದವನ್ನು ಮಂಡಿಸಲಾಗುವುದಿಲ್ಲ. ಬಲ್ಲಾಳನ ಸಿಂಹಾಸನಾರೋಹಣವನ್ನು ತಪ್ಪಿಸಲು ಅರಮನೆಯಲ್ಲಿ ಯಾವ ಒಳಸಂಚೂ ನಡೆದಿರಲಿಲ್ಲ. ಬಲ್ಲಾಳನ ಈ ಸಿಂಹಾಸನಾ-ರೋಹಣದ ನಂತರರೂ ಎಲ್ಲ ಅಧಿಕಾರಿಗಳು, ಸೈನ್ಯಾಧಿಕಾರಿಗಳು ಮತ್ತು ಮಂತ್ರಿಗಳನ್ನು ಅಧಿಕಾರದಲ್ಲಿ ಮುಂದುವರೆಸಿದನಲ್ಲದೆ ಯಾರಿಗೂ ಶಿಕ್ಷೆಯನ್ನು ಕೊಡಲಿಲ್ಲ. ಬಹುಶಃ ಅವನ

ತಂದೆಯ ವಿಚಿತ್ರ ಮನೋಭಾವವು ಇವನಿಗೆ ದಂಗೆ ಏಳುವ ಬಗ್ಗೆ ಪ್ರಚೋದಿಸಿರಬೇಕು. ಅವನ ರಾಜ್ಯದ ಗಡಿಭಾಗದ ಅನೇಕ ಪ್ರದೇಶಗಳು ಕೈ ತಪ್ಪಿಹೋಗಿದ್ದು ಇದಕ್ಕೆ ಪ್ರೇರಣೆಯಾಗಿರಬೇಕು.

ಈ ಮುಂಚೆಯೇ ತಿಳಿಸಿದಂತೆ ನರಸಿಂಹನ ಆಡಳಿತ ಕಾಲವು ಯಾವ ವಿಶೇಷ ಘಟನೆಗಳಿಂದ ಕೂಡಿರಲಿಲ್ಲ. ಅವನ ಅಳ್ವಿಕೆ ಅಂತ್ಯದ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯದ ಕೀರ್ತಿಯು ಪಾತಾಳಕ್ಕೆ ಮುಟ್ಟಿತ್ತು. ಶತೃಗಳು ರಾಜ್ಯವನ್ನು ಮುತ್ತಿದಾಗ ಕೇವಲ ಮಂತ್ರಿಗಳು ಮತ್ತು ಸೈನ್ಯಾಧಿಕಾರಿಗಳು ಕೆಲವು ಯುದ್ಧವನ್ನು ಮಾಡಿದರು. ಈ ಮುಂಚೆ ವಿಷ್ಣುವರ್ಧನನು ಸೋಲಿಸಿದ ಅನೇಕ ಸಾಮಂತರುಗಳು ಸ್ವತಂತ್ರವನ್ನು ಘೋಷಿಸಿಕೊಂಡರು. ಅನೇಕ ಸಾಮಂತರುಗಳಾದ ಸಿಂಡರು, ರಟ್ಟರು, ಕದಂಬರು ಪಾಂಡ್ಯರು ಮತ್ತು ಚೆಂಗಾಳ್ವರು ಹೊಯ್ಸಳ ಸಾಮ್ರಾಜ್ಯಕ್ಕೆ ನಿರಂತರವಾಗಿ ತೊಂದರೆಯನ್ನು ಒಡ್ಡುತ್ತಲೇ ಹೋದರು.

ನರಸಿಂಹನೂ ಕೂಡಾ ಕಳಚೂರ್ಯರು ಚಾಳುಕ್ಯರ ಸಿಂಹಾಸನವನ್ನು ಕಿತ್ತುಕೊಳ್ಳುವಾಗ ಉಂಟಾದ ಸಂದರ್ಭವನ್ನು ಸದುಪಯೋಗಿಸಿಕೊಳ್ಳಲಿಲ್ಲ. ರಾಜ್ಯದ ಒಳಗೆ ಕೂಡಾ ಪ್ರಜೆಗಳ ಸ್ವತ್ತಿಗೆ ಸರಿಯಾದ ಭದ್ರತೆಯು ಇರಲಿಲ್ಲ. ನರಸಿಂಹನ ರಾಜ್ಯದಲ್ಲಿ ನಡೆದ ಸಹಸ್ರಾರು ಘರ್ಷಣೆಗಳಿಗೆ ಸಂಬಂಧಪಟ್ಟಂತೆ ಅನೇಕ ವೀರಗಲ್ಲುಗಳಿವೆ. ದನಗಳ ಕಳ್ಳತನವಂತೂ ಅತೀ ಸಾಮಾನ್ಯವಾಗಿತ್ತು. ಇದು ಸಮಾಜದಲ್ಲಿ ಕದನಗಳಿಗೆ ಎಡೆಗೊಟ್ಟು ನೆಮ್ಮದಿಯು ಹಾಳಾಗಿತ್ತು. ಈ ಎಲ್ಲ ತೊಂದರೆಗಳ ಜೊತೆಗೆ ನರಸಿಂಹನ ಆರೋಗ್ಯವೂ ಕ್ಷಿಪ್ರಗತಿಯಲ್ಲಿ ಹಾಳಾಗುತ್ತಿತ್ತು. ಇದು ನಿಜವಾಗಿ ಎರಡನೆಯ ಬಲ್ಲಾಳನ ಎಳೆಯ ಮನಸ್ಸಿನಲ್ಲಿ ಆತಂಕವನ್ನು ಮೂಡಿಸಿತು. ನರಸಿಂಹನು ಚಿಕಿತ್ಸೆಯಲ್ಲಿ ಇದ್ದಾಗ ಅವನ ಅನಾಸಕ್ತ ಮನೋಭಾವವು ಅವನಲ್ಲಿ ನಿರಾಶೆಯನ್ನು ತಂದಿತು. ಅವನು ತನ್ನ ಮಗನ ಸಿಂಹಾಸನಾರೋಹಣವನ್ನು ನೆರವೇರಿಸಬೇಕಿತ್ತು. ಆದರೆ ನರಸಿಂಹನು ತನ್ನ ಬಲವನ್ನು ಪ್ರದರ್ಶಿಸುವಂತೆ ನಿರಾಸಕ್ತನಾಗಿ ಪರಿಸ್ಥಿತಿಯನ್ನು ಎದುರಿಸುವಂತೆ ತೀರ್ಮಾನಿಸಿದನು. ಹಾಗಾಗಿ ಈ ದಂಗೆಯು ಅನಿವಾರ್ಯವಾಯಿತು.

ಕ್ರಿ.ಶ.1172ರ[2] ಕೊನೆಯ ವೇಳೆಗೆ ಬಲ್ಲಾಳನು ರಾಜಧಾನಿಯನ್ನು ಬಿಟ್ಟು ಮಲೆನಾಡು ಪ್ರದೇಶಕ್ಕೆ ತೆರಳಿದನು. ಅಲ್ಲಿ ಅವನು ಒಂದು ಸಣ್ಣ ಪ್ರದೇಶವನ್ನು ಸ್ಥಾಪಿಸಲು ಪ್ರಯತ್ನಿಸಿದನು. ಅಲ್ಲಿನ ಅಧಿಕಾರಿಗಳು ಬಹುಷಃ ರಾಜಕುಮಾರನನ್ನು ಸ್ವಾಗತಿಸಿರಬೇಕು ಮತ್ತು ಅವನ ಉದ್ದೇಶವನ್ನು ಬೆಂಬಲಿಸಿರಬೇಕು. ಹೊಯ್ಸಳ ಶಾಸನಗಳಿಂದ ತಿಳಿದು ಬಂದಿರುವುದೇನೆಂದರೆ ಅವನು ಮಲೆನಾಡಿಗೆ ಹೋಗುತ್ತಾನೆ ಮತ್ತು ಅಲ್ಲಿ ತಂತ್ರಪಾಲ ಹಮ್ಮದಿಯಣ್ಣ ಎಂಬ ಬಳಿಗಾರನು

ಎಲ್ಲ ಪ್ರಜೆಗಳನ್ನೂ ಮತ್ತು ರೈತರನ್ನೂ ಮತ್ತು ಕೊಂಗಾಳ್ವ ಮತ್ತು ಚೆಂಗಾಳ್ವ ಮತ್ತು ಆ ಪ್ರದೇಶದ ಮುಖ್ಯಸ್ಥರನ್ನು ಸೇರಿಸುತ್ತಾನೆ. ಆ ಮೂಲಕ ಅವನು ರಾಜನಾಗಲು ಸಹಾಯವನ್ನು ಮಾಡುತ್ತಾನೆ. ಈ ವಾಕ್ಯದಿಂದ ತಿಳಿದುಬರುವುದೇನೆಂದರೆ ಮಲೆನಾಡಿನ ಮುಖ್ಯಸ್ಥರ ಸಹಾಯದಿಂದ ರಾಜಕುಮಾರನು ಬಲವನ್ನು ಒಗ್ಗೂಡಿಸಿ ತಂದೆಯನ್ನು ಹೆದರಿಸಲು ಪ್ರಯತ್ನಿಸುತ್ತಾನೆ.

ಎರಡನೆಯ ಬಲ್ಲಾಳನು ಹೀಗೆ ಒಂದು ಸಣ್ಣ ಸೈನ್ಯವನ್ನು ಒಗ್ಗೂಡಿಸಿ ರಾಜಧಾನಿಯತ್ತ ಪ್ರಯಾಣವನ್ನು ಬೆಳೆಸುತ್ತಾನೆ. ನೈರುತ್ಯದಿಂದ ರಾಜಧಾನಿಯ ಕಡೆ ಬೆಳೆಸಿದ ಪ್ರಯಾಣವನ್ನು ಕೆಲವು ವೀರಗಲ್ಲುಗಳು ಬೆಳಕನ್ನು ಚೆಲ್ಲುತ್ತದೆ. ಹೊಳೆನರಸೀಪುರ ತಾಲ್ಲೂಕಿನ ಹೂವಿನಹಳ್ಳಿ ಎಂಬಲ್ಲಿನ ಒಂದು ವೀರಗಲ್ಲು ರಾಜಕುಮಾರ ಬಲ್ಲಾಳನ ದಂಗೆಯಲ್ಲಿ ಕೆಲವು ಹಳ್ಳಿಗಳು ನಾಶವಾಗಿ ಅನೇಕ ಜನಗಳು ಮರಣವನ್ನು ಹೊಂದಿದರೆಂದು ಈ ಶಾಸನವು ತಿಳಿಸುತ್ತದೆ. ಕ್ರಿ.ಶ.1173ರ[3] ಇನ್ನೊಂದು ಶಾಸನವು ಹಾಸನ ಜಿಲ್ಲೆಯ ಗಂಡನಗೆರೆ ಎಂಬ ಹಳ್ಳಿಯಲ್ಲಿ ಸ್ವಲ್ಪ ತೊಂದರೆ ಉಂಟಾಗಿ ಅಲ್ಲಿನ ಹಳ್ಳಿಗರಿಗೆ ಸಮಸ್ಯೆಯಾಯಿತು ಎಂದು ಉಲ್ಲೇಖಿಸಿದೆ. ಅಲ್ಲದೇ ಚಿಕ್ಕಮಗಳೂರು ಜಿಲ್ಲೆಯ ಕೆಳಗೂರಿನ ಒಂದು ಉಲ್ಲೇಖವು ಭುಜವಲ ವೀರ ಗಂಗ ಪ್ರತಾಪ ನರಸಿಂಹ ಹೊಯ್ಸಳ ದೇವನು ರಾಜ್ಯವನ್ನು ಆಳುತ್ತಿದ್ದಾಗ ಕುಮಾರ ಬಲ್ಲಾಳದೇವನು ತನ್ನ ತಂದೆಯ ವಿರುದ್ಧ ದಂಗೆಯೆದ್ದು ತಳಗೆನಾಡು ಮತ್ತು ಕೊಡಗುನಾಡಿನ ಮೇಲೆ ಧಾಳಿಯನ್ನು ಮಾಡಿದನು ಎಂದು ಉಲ್ಲೇಖಿಸಿದೆ. ಈ ವಿಷಯದಲ್ಲಿ ನರಸಿಂಹನು ಯಾವ ರೀತಿಯ ಕ್ರಮವನ್ನು ತೆಗೆದುಕೊಂಡನು ಎಂಬುದು ನಮಗೆ ತಿಳಿದಿಲ್ಲ. ಬಹುಷಃ ಮಂತ್ರಿಗಳು ಮತ್ತು ಸೈನ್ಯಾಧಿಕಾರಿಗಳು ಈ ಇಬ್ಬರ ನಡುವೆ ಸಂಧಾನವನ್ನು ಮಾಡಲು ಪ್ರಯತ್ನಿಸುತ್ತಿದ್ದರು. ಬಹುಶಃ ಕ್ರಿ.ಶ.1173ರ ಪ್ರಾರಂಭದಲ್ಲಿ ನರಸಿಂಹನು ಮರಣ ಹೊಂದಿದನು. ಎರಡನೆಯ ಬಲ್ಲಾಳನ ಸಿಂಹಾಸನಾ-ರೋಹಣವು 1173ರ[4] ಜುಲೈನಲ್ಲಿ ನಡೆಯಿತು. ದುರದೃಷ್ಟವಶಾತ್ ಈ ಅಧಿಕಾರದ ಹಸ್ತಾಂತರವು ಯಾವ ರೀತಿಯಲ್ಲಿ ಆಯಿತು ಎಂಬುದಕ್ಕೆ ನಮಗೆ ಯಾವ ಆಧಾರವೂ ಸಿಕ್ಕಿಲ್ಲ. ಹಾಗೆಯೇ ನರಸಿಂಹನ ಅಂತ್ಯವು ಹೇಗೆ ಆಯಿತು ಎಂಬುದನ್ನು ಹೇಳಲಾಗುವುದಿಲ್ಲ. ಅವನು ಯುದ್ಧದಲ್ಲಿ ಸತ್ತನೋ ಅಥವ ಸಹಜವಾಗಿ ಸತ್ತನೋ ಎಂಬುದು ತಿಳಿದಿಲ್ಲ.

ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಬಲ್ಲಾಳನ ಪಟ್ಟಾಭಿಷೇಕಕ್ಕೆ ಕೆಲವು ದಿನಗಳ ಮುಂಚೆ ನರಸಿಂಹನ ಸಾವು ಆಗಿದೆಯೆಂಬ ತೀರ್ಮಾನಕ್ಕೆ ಬರಬಹುದು. ಕ್ರಿ.ಶ.1173ರ[5] ಒಂದು ದತ್ತಿಯ ಶಾಸನದಲ್ಲಿ ಅವನ ಸಾವು ಪರೋಕ್ಷವಾಗಿ ಸೂಚಿಸಲ್ಪಟ್ಟಿದೆ. ವೀರಬಲ್ಲಾಳನು ಪಟ್ಟಾಭಿಷೇಕಕ್ಕೆ ಮೊದಲು ಪಿಂಡದಾನ ಮಾಡಿದನೆಂದು ಹೇಳಲಾಗಿದೆ. ಪಿಂಡದಾನ ಎಂಬುದು

ತಂದೆಯು ಸತ್ತನಂತರ ಮಗನು ಮಾಡಬೇಕಾದ ಒಂದು ಧಾರ್ಮಿಕ ಕ್ರಿಯೆ. ಇದರಿಂದ ಬಲ್ಲಾಳನ ಪಟ್ಟಾಭಿಷೇಕದ ಸಮಯದಲ್ಲಿ ನರಸಿಂಹನು ಜೀವಂತವಿರಲಿಲ್ಲವೆಂಬುದು ಸ್ಪಷ್ಟವಾಗಿದೆ.

### 5.1.3 ಎರಡನೆಯ ವೀರಬಲ್ಲಾಳನ ಪಟ್ಟಾಭಿಷೇಕ

ಎರಡನೆಯ ವೀರಬಲ್ಲಾಳನು ಕ್ರಿ.ಶ.1173ರ ಜುಲೈ 22ರ ಸೋಮವಾರದಂದು ಸಿಂಹಾಸನವನ್ನು ಏರಿದನು ಎಂಬುದು ಸಾವಿರಾರು ಶಾಸನಗಳಲ್ಲಿ ವಿದಿತವಾಗಿದೆ.[6] ಬಲ್ಲಾಳನ ಅಧಿಕಾರ ಸ್ವೀಕಾರವು "ರಾಮರಾಜ್ಯ"ದ ಪ್ರಾರಂಭವೆಂದು ರಾಜಾಸ್ಥಾನದವರು ಸ್ವಾಗತಿಸಿದ್ದಾರೆ. ವೀರಬಲ್ಲಾಳನ ಪಟ್ಟಾಭಿಷೇಕದ ಘಟನೆಯು ಆ ವಂಶಕ್ಕೆ ಆಗಬೇಕಾದಷ್ಟು ಅದ್ಧೂರಿಯಾಗಿ ನೆರವೇರಿತು. ದೇವಾಲಯದಳಲ್ಲಿ ವಿಶೇಷ ಪೂಜೆಗಾಗಿ ವ್ಯವಸ್ಥೆಗಳನ್ನು ಮಾಡಲಾಯಿತು ಅಲ್ಲದೇ ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ ವಿಶೇಷವಾದ ದಾನ ದತ್ತಿಗಳನ್ನು ನೀಡಲಾಯಿತು.

### 5.1.4 ವೀರಬಲ್ಲಾಳನ ವಿಜಯ ಯಾತ್ರೆಗಳು

ಪಟ್ಟಾಭಿಷೇಕದ ನಂತರ ಅವನು ನಿರಂತರವಾಗಿ ತನ್ನ ಪ್ರಜೆಗಳ ಮತ್ತು ರಾಜ್ಯದ ಸಂಪತ್ತಿಗಾಗಿ ಶ್ರಮಿಸುತ್ತಿದ್ದನು. ಅವನ ಆಳ್ವಿಕೆಯು ದಕ್ಷಿಣಭಾರತದ ಚರಿತ್ರೆಯಲ್ಲಿ ಒಂದು ಮೈಲಿಗಲ್ಲಾಗಿದೆ. ಅವನ ಪಟ್ಟಾಭಿಷೇಕವಾದ ಕೂಡಲೇ ಅವನು ತನ್ನ ರಾಜ್ಯದ ಎಲ್ಲ ದಿಕ್ಕಿನಲ್ಲೂ ದಂಡಯಾತ್ರೆಯ ಸರಮಾಲೆಯನ್ನೇ ಪ್ರಾರಂಭ ಮಾಡಿದನು. ಅವನ ಅಧಿಕಾರ ಸ್ವೀಕಾರದ ಸಮಯದಲ್ಲಿ ರಾಜ್ಯದಲ್ಲಿ ಎಲ್ಲವೂ ಅವ್ಯವಸ್ಥಿತವಾಗಿತ್ತು. ಹೊಯ್ಸಳ ರಾಜ್ಯದ ಉತ್ತರದ ಗಡಿಯಲ್ಲಿರುವ ಸಾಮಂತರುಗಳು ನಾಗರೀಕ ಯುದ್ಧದ ಪರಿಣಾಮವಾಗಿ ಸ್ವಾತಂತ್ರವನ್ನು ಘೋಷಿಸಿಕೊಂಡಿದ್ದರು. ಕಲಚೂರ್ಯರ ಧಾಳಿಗಳಿಂದಾದ ರಾಜಕೀಯ ತಳಮಳ, ಅಭದ್ರತೆ ಇವುಗಳನ್ನು ಉಂಟುಮಾಡಿದ್ದಿತು. ಹಿಂದಿನ ಚಾಳುಕ್ಯ ಸಾಮಂತರು ಬಿಜ್ಜಳನ ಶಕ್ತಿಯುತ ಕೈಗಳಿಂದ ಸೋಲಿಸಲ್ಪಟ್ಟದ್ದರೂ ಕೂಡಾ ಚಾಳುಕ್ಯರ ಬಗ್ಗೆ ಅನುಕಂಪವಿದ್ದಿತು. ಅವರುಗಳು ಕಳಚೂರ್ಯರ ಮುಂದಾಳತ್ವದಲ್ಲಿ ಮುಂದುವರೆಯಲು ಸಿದ್ಧವಿರಲಿಲ್ಲ. ಇದೇ ಅಲ್ಲದೆ ನೂರ್ಮಡಿ ತೈಲನ ಮಗನಾದ ಮೂರನೆಯ ಸೋಮೇಶ್ವರನು ತನ್ನ ಸಿಂಹಾಸನವನ್ನು ಮರಳಿ ಪಡೆಯಲು ತನ್ನ ಕೈಲಾದ ಎಲ್ಲ ಪ್ರಯತ್ನಗಳನ್ನೂ ಮಾಡುತ್ತಿದ್ದನು. ಇದೇ ಸಮಯದಲ್ಲಿ ಹಿಂದಿನ ಚಾಳುಕ್ಯರ ಸಾಮಂತರಾಗಿದ್ದು ದೂರಪ್ರದೇಶದಲ್ಲಿರುವ ಸೇವುಣದೇಶದ ಸೇವುಣರು, ಆಂಧ್ರದ ಕಾಕತೀಯರು ಮೊದಲಾದವರು ತಮ್ಮ ಪ್ರದೇಶಗಳನ್ನು ರೂಪಿಸಿಕೊಳ್ಳುವುದರಲ್ಲಿ ನಿರತರಾಗಿದ್ದರು. ಹೀಗೆ ಕಲ್ಯಾಣ ಚಾಳುಕ್ಯ ವಂಶವು ಕೊನೆಯಾಗುವುದರೊಂದಿಗೆ ದಕ್ಷಿಣಕ್ಕೆ ಹಲವಾರು ತೊಂದರೆಗಳು ಉದ್ಭವಿಸಿದವು. ಈ ಕಾಲದಲ್ಲೇ ಎರಡನೆಯ ಬಲ್ಲಾಳನು ಹೊಯ್ಸಳ ಸಾಮ್ರಾಜ್ಯದ ಭವಿಷ್ಯವನ್ನು

ಬರೆದನು. ಅವನು ಧಾಳಿಗಳ ಸರಮಾಲೆಯನ್ನೇ ತನ್ನ ಸಾಮಂತರನ್ನು ಹಿಡಿತದಲ್ಲಿಟ್ಟುಕೊಳ್ಳಲು ಪ್ರಾರಂಭಿಸಿದನು. ಅವನು ಅಸಂದಿ. ಹುಳಿಯಾರು ಮತ್ತಿತರ ಪ್ರದೇಶಗಳ ಕಡೆ ಅದನ್ನು ವ್ಯವಸ್ಥಿತಗೊಳಿಸುವ ಸಲುವಾಗಿ ಹೊರಟನು. ಕೂಡಲೇ ಅವನ ರಾಜ್ಯದಲ್ಲಿ ಶಾಂತಿ ಮತ್ತು ಶಿಸ್ತು ಸ್ಥಾಪಿತವಾಯಿತು. ಚೆಂಗಾಳ್ವ ಮತ್ತಿತರರ ಸಣ್ಣ ಪುಟ್ಟದಾದ ಗುಡ್ಡಗಾಡಿನ ಮುಖ್ಯಸ್ಥರು ಮೊದಲಿಗೆ ಇವನ ಗಮನವನ್ನು ಸೆಳೆದರು. ಮೊದಲಿಗೆ ದಂಗೆಯ ಸಮಯದಲ್ಲಿ ಬಲ್ಲಾಳನನ್ನು ಬೆಂಬಲಿಸಿದ್ದ ಚೆಂಗಾಳ್ವ ದೊರೆಯು ಸ್ವತಂತ್ರವನ್ನು ಘೋಷಿಸಿಕೊಂಡಿದ್ದಲ್ಲದೇ ಹೊಯ್ಸಳ ಅನೇಕ ಬಿರುದುಗಳನ್ನು ಇಟ್ಟುಕೊಂಡನು. ಹಾಗಾಗಿ ಬೆಟ್ಟರಸ ದಂಡನಾಯಕನ ಮುಂದಾಳತ್ವದಲ್ಲಿ ಬಲ್ಲಾಳನು ಕೊಡಗಿಗೆ ಒಂದು ಸೈನ್ಯವನ್ನು ಕಳುಹಿಸಿದನು. ಬೆಟ್ಟರಸನು ಚೆಂಗಾಳ್ವರನ್ನು ಸೋಲಿಸಿ ಪಲ್ವಾರೆಯನ್ನು ವಶಕ್ಕೆ ತೆಗೆದುಕೊಂಡನು. ಸೋತ ದೊರೆ ಮಹಾದೇವನು ಒಳಗುಡ್ಡಗಾಡು ಪ್ರದೇಶದ ಮೊರೆಹೊಕ್ಕನು. ಅದರ ನಂತರ ಅವನು ಗುಡ್ಡಗಾಡಿನ ಎಲ್ಲ ಮುಖ್ಯಸ್ಥರ ಸೈನ್ಯವನ್ನು ಒಟ್ಟುಗೂಡಿಸಿದನು. ಬೆಟ್ಟರಸನು ಕಿಗ್ಗತನಾಡಿನ ಪಲ್ವಾರೆ ಕೋಟೆಯನ್ನು ಅಧೀನದಲ್ಲಿಟ್ಟು ಕೊಂದಿರುವಾಗ ಮಹಾದೇವನ ಮಗನಾದ ಪೆಮ್ಮಣ್ಣ ವೀರಪ್ಪನ ನೇತೃತ್ವದಲ್ಲಿ ಹೊಯ್ಸಳರ ಕೋಟೆಯನ್ನು ಮುತ್ತಿಗೆ ಹಾಕಿತು. ಈ ಸುದ್ದಿಯನ್ನು ಕೇಳಿದ ಕೇಡಲೇ  ವೀರಬಲ್ಲಾಳನು ಪ್ರಸಿದ್ಧ ಯೋಧನಾದ ಮಾದ್ಯಾನಾಯಕನ ಮುಂದಾಳತ್ವದಲ್ಲಿ ಇನ್ನೊಂದು ಸೈನ್ಯವನ್ನು ಕಳುಹಿಸಿದನು. ಈ ಭಯಂಕರವಾದ ಯುದ್ಧದಲ್ಲಿ ಹೊಯ್ಸಳ ಸೈನ್ಯವು ಅವರನ್ನು ಸಂಪೂರ್ಣವಾಗಿ ಸೋಲಿಸಿ ಅದನ್ನು ಚದುರಿಸಿದರು. ಈ ಯುದ್ಧದಲ್ಲಿ ಜಯವನ್ನು ಗಳಿಸಲು ಕಾರಣನಾದ ಮಾದ್ಯಾ-ನಾಯಕನು ಮರಣ ಹೊಂದಿದನು. ಅವನ ಮೇಲೆ ಅವಲಂಬಿತರಾಗಿದ್ದವರಿಗೆ ಬಲ್ಲಾಳನು ನೆತ್ತರ ಕೊಡಿಗೆಯನ್ನು ಕೊಟ್ಟನು. ಈ ಸೋಲಿನ ನಂತರ ಚೆಂಗಾಳ್ವರು ಮತ್ತೆಂದೂ ಬಲ್ಲಾಳನ ಮೇಲೆ ಕೈಯೆತ್ತುವ ಪ್ರಯತ್ನವನ್ನು ಮಾಡಲಿಲ್ಲ. ಬೆಟ್ಟರಸನು ರಾಜ್ಯಪಾಲನನ್ನಾಗಿ ನೇಮಿಸಲಾಯಿತು ಮತ್ತು ಪಲ್ವಾರೆಯು ಕೊಡಗಿನಲ್ಲಿ ಹೊಯ್ಸಳರ ಅಧಿಕಾರದ ಕೇಂದ್ರಸ್ಥಾನವಾಯಿತು. ಕೊಂಗಾಳ್ವರು ಎರಡನೆಯ ಬಲ್ಲಾಳನಿಗೆ ನಿಷ್ಠರಾಗಿ ಉಳಿದರು. ಅವರು ಬಲ್ಲಾಳನ ತನ್ನ ತಂದೆಯ ವಿರುದ್ಧದ ದಂಗೆಯ ಸಮಯದಲ್ಲಿ ಅವನಿಗೆ ಬೆಂಬಲವನ್ನು ನೀಡಿದ್ದರು. ವೀರ ಚೋಳ ಕೊಂಗಾಳ್ವದೇವನು ಬಲ್ಲಾಳನೊಂದಿಗೆ ಒಪ್ಪಂದವನ್ನು ಮಾಡಿಕೊಂಡಿದ್ದು ಕೆಲವು ರಿಯಾಯಿತಿಯನ್ನೂ ನೀಡಿದ್ದನು. ಅವನು ಹೊಯ್ಸಳರಿಗೆ ವಾರ್ಷಿಕ ಕಪ್ಪವನ್ನು ಕೊಡಲೂ ಒಪ್ಪಿದ್ದರು.

ಎರಡನೆಯ  ವೀರಬಲ್ಲಾಳನು ತುಳುವನಾಡಿನ ತುಳುವರನ್ನು ತನ್ನ ವಶಕ್ಕೆ ತಂದನು. ಎರಡನೆಯ ಬಲ್ಲಾಳನ ಕಾಲದಿಂದ ಅವರು ಹೊಯ್ಸಳರಿಗೆ ಸಾಮಂತರಾದರು. ಎರಡನೆಯ ಬಲ್ಲಾಳನು ಅಳುವಖೇಡವನ್ನು ಆಕ್ರಮಿಸಿ ಅಳುಪರನ್ನೂ ಮತ್ತು ತುಳುವ ರಾಜರನ್ನೂ ತನ್ನ ವಶಕ್ಕೆ

ತೆಗೆದುಕೊಂಡನು. ಅವನ ಒಬ್ಬ ರಾಣಿಯು ತುಳುವ ರಾಜವಂಶದಿಂದ ಬಂದವಳೆಂದು ಕಾಣಿಸುತ್ತದೆ. ಈ ವೈಹಾಹಿಕ ಸಂಬಂಧದಿಂದಾಗಿ ಈ ಎರಡೂ ವಂಶಗಳ ನಡುವಿನ ಸಂಬಂಧವು ಹೊಯ್ಸಳ ವಶದ ಕೊನೆಯವರೆಗೂ ಮುಂದುವರೆಯಿತು.

ನಂತರ ಎರಡನೆಯ ವೀರಬಲ್ಲಾಳನು ತನ್ನ ರಾಜ್ಯದ ಉತ್ತರದ ಕಡೆ ಗಮನವನ್ನು ಹರಿಸಿದನು. ತನ್ನ ಅಜ್ಜನಾದ ವಿಷ್ಣುವರ್ಧನನಿಂದ ಸೋಲಿಸಲ್ಪಟ್ಟ ಸಂತಾರರು, ಕದಂಬರು ಉಚ್ಚಂಗಿಯ ಪಾಂಡ್ಯರು ಈಗ ಹೊಯ್ಸಳರ ವಿರುದ್ಧ ತನ್ನ ತಂದೆಯ ದುರ್ಬಲ ಆಡಳಿತದ ಕಾಲದಲ್ಲಿ ತಿರುಗಿ ಬಿದ್ದಿದ್ದರು.

## 5.1.5 ಉಚ್ಚಂಗಿಯ ಪಾಂಡ್ಯರ ಪರಾಭವ

ಬಲ್ಲಾಳನು ಮೊದಲು ಉಚ್ಚಂಗಿಯ ಪಾಂಡ್ಯರ ಕಡೆ ಗಮನವನ್ನು ಹರಿಸಿದನು. ಆ ಕಾಲದಲ್ಲಿ ಉಚ್ಚಂಗಿಯ ಕೋಟೆಯು ಅಭೇದ್ಯವೆಂದು ಹೇಳಲಾಗಿತ್ತು. ಚೋಳರ ದೊರೆಯು ಈ ಕೋಟೆಯನ್ನು ವಶಪಡಿಸಿಕೊಳ್ಳುವುದರಲ್ಲಿ ವಿಫಲನಾಗಿದ್ದನು. ಕ್ರಿ.ಶ.1177[7]ರಲ್ಲಿ ಎರಡನೆಯ ವೀರಬಲ್ಲಾಳನ ಪಾಂಡ್ಯರ ರಾಜಧಾನಿಯಾದ ಉಚ್ಚಂಗಿಯ ಮೇಲಿನ ವಿಜಯಯಾತ್ರೆಯು ಒಂದು ಮುಖ್ಯವಾದ ಘಟನೆಯೆಂದು ಗುರುತಿಸಲಾಗಿದೆ. ಈ ಮುಂಚೆ ಎರಡನೆಯ ವೀರಬಲ್ಲಾಳನ ಅಜ್ಜನಾದ ವಿಷ್ಣುವರ್ಧನನು ಪಾಂಡ್ಯರ ರಾಜನದ ರಾಯಪಾಂಡ್ಯನನ್ನು ಸೋಲಿಸಿ ಅವರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡಿದ್ದನು. ಆದರೆ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಅವನು ತಮ್ಮ ನಿಷ್ಠೆಯನ್ನು ಬದಲಾಯಿಸಿಕೊಂಡಿದ್ದಷ್ಟೇ ಅಲ್ಲದೇ ಗಡಿಯ ಭಾಗದಲ್ಲಿ ಉಪಟಳವನ್ನೂ ಕೊಡುತ್ತಿದ್ದರು. ಕ್ರಿ.ಶ.1160ರಲ್ಲಿ[8] ರಾಯಪಾಂಡ್ಯನ ಮಗನಾದ ವಿಜಯ ಪಾಂಡ್ಯನು ಅವನ ನಂತರ ಅಧಿಕಾರಕ್ಕೇರಿದನು. ಕಾಮದೇವನು ಸ್ವತಂತ್ರ ರಾಜನಂತೆ ಆಳತೊಡಗಿದನು. ಆದರೆ ಅವನು ಬಿಜ್ಜಳನಿಂದ ಸೋಲಿಸಲ್ಪಟ್ಟು ಕಲಚೂರ್ಯರ ಅಧಿಪತ್ಯವನ್ನು ಒಪ್ಪಿಕೊಳ್ಳಬೇಕಾಯಿತು. ಆದರೆ ಬಿಜ್ಜಳ ಮತ್ತು ಅವನ ಹಿರಿಯ ಮಗ ವೀರ ಸೋಯಿದೇವನ ಮರಣಾನಂತರ ಪಾಂಡ್ಯ ದೊರೆಯು ಕಲ್ಯಾಣ ಚಾಳುಕ್ಯರ ಸಾಮಂತರೆಂದು ಘೋಷಿಸಿಕೊಂಡನು. ಈ ಕಾಲದಲ್ಲೇ ಅವನು ಎರಡನೆಯ ವೀರಬಲ್ಲಾಳನ ಧಾಳಿಗೆ ಒಳಗಾಗಿದ್ದು. ಕ್ರಿ.ಶ.1177ರಲ್ಲಿ[9] ಸ್ವತಹ ಹೊಯ್ಸಳ ದೊರೆಯೇ ತನ್ನ ಸೈನ್ಯವನ್ನು ಕಾಮದೇವನ ವಿರುದ್ಧ ನಡೆಸಿಕೊಂಡು ಬಂದನು. ಕಾಮದೇವನು ತನ್ನ ಸೈನ್ಯದ ಸಹಿತವಾಗಿ ರಾಜಧಾನಿಯಿಂದ ಹೊರಗೆ ಬಂದನು. ಉಮ್ಮದೂರು ಎಂಬ ಸ್ಥಳದಲ್ಲಿ ಈ ಎರಡೂ ಸೈನ್ಯಗಳು ಸಂಧಿಸಿದವು. ಇದರಲ್ಲಿ ಪಾಂಡ್ಯರು ಸೋಲಿಸಲ್ಪಟ್ಟರು. ಕಾಮದೇವನು ಓಡಿಹೋಗಿ ತನ್ನ ಕೋಟೆಯ ಒಳಗೆ ಆಶ್ರಯ ಪಡೆದನು. ವಿಜಯೀ ಹೊಯ್ಸಳ ಸೇನೆಯು

ಪಾಂಡ್ಯ ಸೇನೆಯನ್ನು ಹಿಂಬಾಲಿಸಿ ಆ ಕೋಟೆಗೆ ಮುತ್ತಿಗೆಯನ್ನು ಹಾಕಿತು. ಪಾಂಡ್ಯ ದೊರೆಯು ಹೊಯ್ಸಳರ ಸೈನ್ಯದ ಧಾಳಿಯನ್ನು ಎದುರಿಸಲಾಗಲಿಲ್ಲ. ಕೊನೆಯಲ್ಲಿ ಎರಡನೆಯ ವೀರಬಲ್ಲಾಳನು ಕೋಟೆಯನ್ನು ಶನಿವಾರ ವಶಪಡಿಸಿಕೊಂಡನು. ಕಾಮದೇವನು ತನ್ನ ರಾಣಿಯರನ್ನೂ ಮತ್ತು ಅಪಾರವಾದ ಧನರಾಶಿಯನ್ನೂ ಬಿಟ್ಟು ತಪ್ಪಿಸಿಕೊಳ್ಳುವುದರಲ್ಲಿ ಯಶಸ್ವಿಯಾದನು. ಬಲ್ಲಾಳನು ಉಚ್ಚಂಗಿಯನ್ನು ಪಡೆದುಕೊಂಡನು.[10]

ಕಾಮದೇವ ಪಾಂಡ್ಯನು ಅಲ್ಲಿಂದ ತಪ್ಪಿಸಿಕೊಂಡು ಹತ್ತಿರದ ಕಾಡಿಗೆ ಹೋದನು. ಆದರೆ ಹೊಯ್ಸಳ ಸೈನ್ಯವು ಅವನನ್ನು ಹಿಂಬಾಲಿಸಿ ಹೋಗಿ ಸೆರೆ ಹಿಡಿದರು. ಅವನನ್ನು ಎರಡನೆಯ ವೀರಬಲ್ಲಾಳನ ಮುಂದೆ ನಿಲ್ಲಿಸಲಾಯಿತು. ಕಾಮದೇವನು ದಯಾಭಿಕ್ಷೆಯನ್ನು ಬೇಡಿದನು. ಎರಡನೆಯ ವೀರಬಲ್ಲಾಳನು ಕರುಣೆಯಿಂದ ಅವನನ್ನು ಕೊಲ್ಲಿಸುವುದರ ಬದಲಾಗಿ ಪುನಹ ಪ್ರತಿಷ್ಠಾಪಿಸಿದನು. ಈ ವಿಜಯದ ನಂತರ ಎರಡನೆಯ ವೀರಬಲ್ಲಾಳನು ಅನೇಕ ಬಿರುದುಗಳನ್ನು ಸೇರಿಸಿಕೊಂಡನು. ಈ ವಿಜಯವು ಶನಿವಾರದಂದು ಆಗಿದ್ದರಿಂದ ಅವನು "ಶನಿವಾರಸಿದ್ಧಿ" ಎಂಬ ಬಿರುದನ್ನು ಇಟ್ಟುಕೊಂಡನು. ಅವನು "ಪಾಂಡ್ಯರಾಜ ಗಜಕೇಸರಿ" ಮತ್ತು "ಪಾಂಡ್ಯರಾಜ್ಯ ಪ್ರತಿಷ್ಠಾಪಾನಾಚಾರ್ಯ" ಎಂಬ ಬಿರುದುಗಳನ್ನೂ ಇಟ್ಟುಕೊಂಡನು.

ಕಾಮದೇವನು ತನ್ನ ರಾಜ್ಯವನ್ನು ಮರಳಿ ಪಡೆದರೂ ಅದನ್ನು ಹೆಚ್ಚು ಕಾಲ ಅನುಭವಿಸಲು ಆಗಲಿಲ್ಲ. ಅವನು ಎರಡನೆಯ ವೀರಬಲ್ಲಾಳನಿಗೆ ನಿಷ್ಠನಾಗಿ ಉಳಿಯಲಿಲ್ಲ. ಅವನು ತನ್ನ ನಿಷ್ಠೆಯನ್ನು ಚಾಳುಕ್ಯರಿಗೆ ಅವರ ಶಕ್ತಿಯನ್ನು ಮರಳಿ ಸ್ಥಾಪಿಸುವ ಸಲುವಾಗಿ ಬದಲಾಯಿಸಿದನು. ಕ್ರಿ.ಶ.1183 ಮತ್ತು 87ರ ನಡುವೆ ಅವನು ನೀಡಿದ ದಾನಗಳು ಅವನು ತನ್ನ ನಿಷ್ಠೆಯನ್ನು ಚಾಳುಕ್ಯರ ನಾಲ್ಕನೆಯ ಸೋಮದೇವನಿಗೆ ಬದಲಾಯಿಸಿಕೊಂಡಿದ್ದನೆಂಬುದನ್ನು ತಿಳಿಸುತ್ತದೆ. ಈ ಕಾರಣವು ಪಾಂಡ್ಯರ ಅಳ್ವಿಕೆಯನ್ನು ಕೊನೆಗೊಳಿಸಲು ಮತ್ತು ಉಚ್ಚಂಗಿಯನು ಮುಟ್ಟುಗೋಲು ಹಾಕಿಕೊಳ್ಳಲು ಎರಡನೆಯ ಬಲ್ಲಾಳನಿಗೆ ಸಾಕಾಯಿತು. ಕ್ರಿ.ಶ.1187ರ ಎರಡು ಶಾಸನಗಳು ಉಚ್ಚಂಗಿಯ ಮೇಲಿನ ಹೊಯ್ಸಳರ ಧಾಳಿಯ ಬಗ್ಗೆ ತಿಳಿಸುತ್ತವೆ. ಬಹುಶಃ ಎಲ್ಲ ರೀತಿಯಲ್ಲಿ ಇದು ಕಾಮದೇವನ ಅಂತ್ಯವಾಗಿದೆ. ಈ ದಿನಾಂಕದಿಂದ ಮುಂದೆ ಎಂದೆಂದೂ ಅವನ ವಿಚಾರಗಳು ತಿಳಿಸುಬರುವುದಿಲ್ಲ. ಬಲ್ಲಾಳನು ಈಗಿದ್ದ "ಪಾಂಡ್ಯರಾಜ್ಯ ಪ್ರತಿಷ್ಠಾಪನಾ-ಚಾರ್ಯ" ಎಂಬಬಿರುದಿನ ಜೊತೆಗೆ ಹೊಸದಾಗಿ "ಪಾಂಡ್ಯರನ್ನು ಸೋಲಿಸಿದವನು" ಎಂಬ ಬಿರುದನ್ನಿಟ್ಟುಕೊಂಡನು.

ಕಾಮದೇವನ ಮರಣವು ನೊಣಂಬವಾಡಿಯನ್ನು ಹೊಯ್ಸಳರು ಆಕ್ರಮಿಸುವುದರಲ್ಲಿ ಪರಿಣಾಮವಾಯಿತು. ಎರಡನೆಯ ವೀರಬಲ್ಲಾಳನು ಬೇಬಯ ದಣ್ಣಾಯಕನೆಂಬುವವ–ನೊಬ್ಬನನ್ನು ಅಲ್ಲಿಯ ರಾಜ್ಯಪಾಲನನ್ನಾಗಿ ನೇಮಿಸಿದನು. ಎರಡನೆಯ ವೀರಬಲ್ಲಾಳನ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಕ್ರಿ.ಶ.1220ರಲ್ಲಿನ ಒಂದು ದತ್ತಿ ಶಾಸನವು ಅವನಿಂದ ನೊಣಂಬವಾಡಿ 32000 ವನ್ನು ವಶಪಡಿಸಿಕೊಂಡಿದ್ದನ್ನು ಉಲ್ಲೇಖಿಸುತ್ತದೆ. ನೊಣಂಬವಾಡಿಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದ್ದು ರಾಜ್ಯದ ಎಲ್ಲೆಯನ್ನು ವಿಸ್ತರಿಸಿದ್ದಷ್ಟೇ ಅಲ್ಲದೆ ಬಲ್ಲಾಳನ ಕೀರ್ತಿಯನ್ನೂ ಹೆಚ್ಚಿಸಿತು.

ಕ್ರಿ.ಶ.1177ರ ಉಚ್ಚಂಗಿಯ ಯುದ್ಧವು ಆದ ಕೂಡಲೇ ಬಲ್ಲಾಳನು ಎರಡು ದಂಡಯಾತ್ರೆಯನ್ನು ಹೊರಡಿಸಿದನು. ಅದರಲ್ಲಿ ಒಂದು ಚೋಳ ಮುಖ್ಯಸ್ಥನಾದ ಹೆಂಜೇರುವಿನ ವಿರುದ್ಧವಾಗಿತ್ತು. ಚೋಳ ದೊರೆಯು ಎರಡನೆಯ ವೀರಬಲ್ಲಾಳನಿಗೆ ಶರಣಾದನು. ಇನ್ನೊಂದು ದಂಡಯಾತ್ರೆಯು ತುಂಗಭದ್ರಾ ನದಿಯನ್ನು ದಾಟಿ ಕಲಚೂರ್ಯರ ಸಾಮಂತರ ಮೇಲೆ ಆಕ್ರಮಣವನ್ನು ಮಾಡಿತು. ಉದ್ರೆಯ ಎಕ್ಕಲರಸನ ಮಗನಾದ ಉದ್ರೆಯ ತೈಲಪನ ಬೆಂಬಲಕ್ಕಾಗಿ ಹಾನಗಲ್ಲಿನ ಕದಂಬರ ಪ್ರದೇಶಗಳನ್ನು ವಶಪಡಿಸಿಕೊಂಡು ಹೊಯ್ಸಳರಿಗೆ ನಿಷ್ಠನಾಗಿದ್ದ ಇವನಿಗೆ ಕೊಡಲಾಯಿತು. ಸಿಂದ ದೊರೆಯಾಗಿದ್ದ ಗುತ್ತಿಯ ವಿಕ್ರಮಾದಿತ್ಯ ಮೇಳು ಆಕ್ರಮಣವನ್ನು ಮಾಡಿ ಸೋಲಿಸಿದರು.

ಈ ಎಲ್ಲ ದಂಡಯಾತ್ರೆಗಳ ನಂತರ ಎರಡನೆಯ ವೀರಬಲ್ಲಾಳನು ದೋರಸಮುದ್ರಕ್ಕೆ ಹಿಂತಿರುಗಿ ಅಲ್ಲಿ ಕೆಲವು ಕಾಲ ಇದ್ದನು. ಕ್ರಿ.ಶ.1178ರಲ್ಲಿ,[11] ಕೆಲವು ಕಾಲದ ನಂತರ ಅವನು ತುಂಗಭದ್ರ ಪ್ರದೇಶದ ಕಡೆ ಹೊರಟನು. ಆ ಪ್ರದೇಶದಲ್ಲಿ ಅವನು ತನ್ನ ಅಧಿಕಾರವನ್ನು ಸ್ಥಾಪಿಸಲು ಪ್ರಯತ್ನವನ್ನು ಮಾಡಿದನು. ಅವನು ಕೂಡಲೇ ಹಾನಗಲ್ಲಿನ ಕದಂಬರ ಮೇಲೆ ಧಾಳಿಯನ್ನು ಮಾಡಿ ಒಮ್ಮೆ ಅವನ ಮುತ್ತಜ್ಜನಾದ ವಿಷ್ಣುವರ್ಧನನು ಗೆದ್ದಿದ್ದ ಹಲ್ಸಿಗೆ ಮತ್ತು ಬೆಳವೊಲದವರೆಗೆ ನುಗ್ಗಿದನು, ಆದರೆ ತುಂಗಭದ್ರಾ ಪ್ರದೇಶದ ಆಚೆಗಿನ ಪ್ರದೇಶದ ಮೇಲೆ ಅವನ ಅಧಿಕಾರವನ್ನು ಸ್ಥಾಪಿಸಲು ಅವನು ಇನ್ನೂ ಕೆಲವು ವರ್ಷಗಳ ಕಾಲ ಕಾಯಬೇಕಾಯಿತು.

## 5.1.6 ಕಲಚೂರ್ಯರ ಮತ್ತು ಕಲ್ಯಾಣದ ಚಾಳುಕ್ಯರ ಬಗೆಗಿನ ಎರಡನೆಯ ವೀರಬಲ್ಲಾಳನ ನೀತಿ

ಎರಡನೆಯ ವೀರಬಲ್ಲಾಳನು ಹೊಯ್ಸಳ ಸಾಮ್ರಾಜ್ಯದ ಗಡಿಯನ್ನು ಉತ್ತರದ ಕಡೆಗೆ ವಿಸ್ತರಿಸಲು ಉತ್ಸುಕನಾಗಿದ್ದನು. ಅವನು ತನ್ನ ಅಧಿಕಾರವನ್ನು ಉತ್ತರದಲ್ಲಿ ದೂರದ ಕೃಷ್ಣಾ

ನದಿಯವರೆಗೆ ಸ್ಥಾಪಿಸಲು ತೀರ್ಮಾನಿಸಿದನು. ಅವನು ಹೊಯ್ಸಳರ ಆಧಿಪತ್ಯವನ್ನು ಸ್ಥಾಪಿಸಲು ಸಮಯ ಅನುಕೂಲವಾಗಿದೆಯೆಂದು ತಿಳಿದುಕೊಂಡನು. ಕಲಚೂರ್ಯರ ಮತ್ತು ಚಾಳುಕ್ಯರ ನಡುವೆ ನಡೆಯುತ್ತಿದ್ದ ಮೇಲಾಟದ ಬಗೆಗೆ ಅವನಿಗೆ ಅರಿವಿತ್ತು. ಕಲಚೂರ್ಯರ ಅನೇಕ ಸಾಮಂತರ ಒಲವು ಸೋಮೇಶ್ವರ ಚಾಳುಕ್ಯನೆಡೆಗೆ ಇತ್ತು ಎಂಬುದನ್ನು ತಿಳಿದುಕೊಂಡನು. ಅಲ್ಲಿ ತೀವ್ರವಾದ ಪೈಪೋಟಿಯು ಅನಿವಾರ್ಯ ಎಂಬುದನ್ನು ಅರಿತುಕೊಂಡನು. ಹಾಗಾಗಿಅವನು ಅಲ್ಲಿಯ ಬೆಳವಣಿಗೆಗಳನ್ನು ಗಮನಿಸುತ್ತಿದ್ದನು.

ಕ್ರಿ.ಶ.1156ರಲ್ಲಿ ನೂರ್ಮಡಿ ತೈಲನನ್ನು ಬಿಜ್ಜಳನು ಕಲ್ಯಾಣದಿಂದ ಓಡಿಸಿ ಅದನ್ನು ವಶಪಡಿಸಿಕೊಂಡನು. ಬಿಜ್ಜಳನು ಕ್ರಿ.ಶ.1167ರವರೆಗೆ ಆಳಿದನು. ಅವನ ನಂತರ ಅವನ ಹಿರಿಯಮಗ ರಾಯ ಮುರಾರಿ ಸೋಯಿದೇವನೆಂದೇ ಹೆಸರಾದ ಸೋಯಿದೇವನು ಕ್ರಿ.ಶ.1168ರಲ್ಲಿ ಪಟ್ಟಕ್ಕೆ ಬಂದನು. ಅವನು ಕ್ರಿ.ಶ.1177ರವರೆಗೆ ಆಳಿದನು. ಅವನ ನಂತರ ಅವನ ಸಹೋದರನಾದ ಸಂಕಮದೇವನು ಪಟ್ಟಕ್ಕೆ ಬಂದನು. ಅವನು ಕ್ರಿ.ಶ.1181ರ ಕೊನೆಯವರೆಗೆ ಆಳ್ವಿಕೆಯನ್ನು ಮಾಡಿದನು. ಇದು ಕಲಚೂರ್ಯರ ಮತ್ತು ಹೊಯ್ಸಳರ ನಡುವಿನ ಘರ್ಷಣೆಯು ನಡೆದ ಸಮಯವಾಗಿತ್ತು.

ರಾಯಮುರಾರಿ ಸೋಯಿದೇವನ ಮರಣವು ಕಲಚೂರ್ಯರ ಅಂತ್ಯದ ಸಂಕೇತ-ವಾಯಿತು. ಚಾಳುಕ್ಯ ಸೋಮೇಶ್ವರನು ಕಲಚೂರ್ಯರ ಸಾಮಂತರ ಅಪಹರಣದಿಂದಾಗಿ ಅಧಿಕಾರಕ್ಕೆ ಬಂದ ವಂಶವನ್ನು ಕೊನೆಗಾಣಿಸುವುದಕ್ಕಾಗಿ ತನ್ನ ಸಹಾಯಕ್ಕಾಗಿ ಬರಲು ಕೇಳಿಕೊಂಡನು, ಇದೇ ಅಲ್ಲದೇ ಅವನು ತನ್ನ ತಮ್ಮನಾದ ಆಹವಮಲ್ಲ ರಾಯನಾರಾಯಣನಿಂದ ಅಧಿಕಾರಕ್ಕಾಗಿ ತೀವ್ರ ಪೈಪೋಟಿಯನ್ನು ಎದುರಿಸಬೇಕಾಯಿತು. ಕಲಚೂರ್ಯರ ಈ ಗೊಂದಲದ ನಡುವೆಯೇ ಎರಡನೆಯ  ವೀರಬಲ್ಲಾಳನು ತನ್ನ ಸಾಮ್ರಾಜ್ಯದ ವಿಸ್ತರ್‍ರಣೆಯನ್ನು ಮಾಡಿಕೊಳ್ಳಲು ಹೊರಟಿದ್ದು.

ಕಲಚೂರ್ಯರ ಮತ್ತು ಚಾಳುಕ್ಯರ ನಡುವೆ ನಡೆಯುತ್ತಿದ್ದ ಘರ್ಷಣೆಯ ಲಾಭವನ್ನು ಪಡೆದು ಕಲಚೂರ್ಯರ ಅಧೀನದಲ್ಲಿದ್ದ ಸಾಮಂತರ ಮೇಲೆ ಧಾಳಿಯನ್ನು ಮಾಡಿದನು. ಸಂಕಮನು ಚಾಳುಕ್ಯರೊಡನೆ ಯುದ್ಧದಲ್ಲಿ ನಿರತನಾಗಿದ್ದುದರಿಂದ ಅವನು ಹೊಯ್ಸಳರ ಸೇನೆಯೊಡನೆ ಪರಿಣಾಮಕಾರಿಯಾಗಿ ಹೋರಾಟವನ್ನು ಮಾಡಲಾಗಲಿಲ್ಲ. ಎರಡನೆಯ ವೀರಬಲ್ಲಾಳನು ತನ್ನ ದಂಡನಾಯಕನಾದ ಕಬ್ಬಹುನಾಡಿನ ಬೇಬಯ ದಣ್ಣಾಯಕನ

ಮುಂದಾಳತ್ವದಲ್ಲಿ ಒಂದು ಸೈನ್ಯವನ್ನು ಕಲಚೂರ್ಯರ ವಿರುದ್ಧ ಕಳುಹಿಸಿದನು. ಅವನು ಸಂಕಮನ ವಿರುದ್ಧ ಹೋರಾಡಿದನು. ಎರಡನೆಯ ವೀರಬಲ್ಲಾಳನೂ ಸಹ ಉತ್ತರದಿಂದ ನಡೆದು ಉದ್ರೆಯ ಕೋಟೆಯನ್ನು ಮುತ್ತಿಗೆ ಹಾಕಿ ಅದನ್ನು ಸಂಕಮನ ರಾಜ್ಯಪಾಲನ ಕಡೆಯಿಂದ ವಶಪಡಿಸಿಕೊಂಡನು. ಕ್ರಿ.ಶ.೧೧೮೦ರಲ್ಲಿ ಸ್ವತಹ ಎರಡನೆಯ ವೀರಬಲ್ಲಾಳನೇ ಬಂದು ಹಳ್ಳವೂರು ಎಂಬಲ್ಲಿ ತಂಗಿ ಕಲಚೂರ್ಯರ ಸಾಮ್ರಾಜ್ಯದ ಅನೇಕ ಕೋಟೆಗಳನ್ನು ವಶಪಡಿಸಿಕೊಂಡನು. ಹೊಯ್ಸಳರ ಸೈನ್ಯ ಮತ್ತು ಕಲಚೂರ್ಯರ ನಡುವೆ ಅನೇಕ ಹೋರಾಟಗಳಾದವು. ಈ ಯುದ್ಧದ ಪರಿಣಾಮಗಳು ಸ್ಪಷ್ಟವಾಗಿ ತಿಳಿದಿಲ್ಲ. ಕ್ರಿ.ಶ.೧೧೮೧ರ[12] ಒಂದು ಶಾಸನವು ಕಲಚೂರ್ಯರ ಮತ್ತು ಹೊಯ್ಸಳರ ನಡುವೆ ಆದ ಒಪ್ಪಂದವೊದರ ಬಗ್ಗೆ ಉಲ್ಲೇಖಿಸುತ್ತದೆ. ಆದರೆ ಸಂಕಮನ ಕಾರ್ಯಗಳ ನಿಮಿತ್ತವಾಗಿ ಈ ಒಪ್ಪಂದದ ವಿವರಗಳು ಕಾರ್ಯಗತವಾಗಲಿಲ್ಲ. ಈ ಒಪ್ಪಂದದ ಪರಿಣಾಮವಾಗಿ ಎರಡನೆಯ ವೀರಬಲ್ಲಾಳನು ತುಂಗಭದ್ರದ ಕೆಳಗಿನ ಪ್ರದೇಶಗಳಿಗೆ ಸರ್ವಶ್ರೇಷ್ಠ ಸಾರ್ವಭೌಮನಾದನು. ಬಹುಶಃ ಸಂಕಮನು ಚಾಳುಕ್ಯ ಸೋಮೇಶ್ವರನೊಡನೆ ಯುದ್ಧವನ್ನು ಮಾಡಲು ಬಲ್ಲಾಳನ ಸಹಾಯವನ್ನು ಅಪೇಕ್ಷಿಸಿರಬೇಕು.

ಈ ಬೆಳವಣಿಗೆಗಳು ಆಗುತ್ತಿದ್ದಂತೆ ಆಹವಮಲ್ಲನು ಮರಣ ಹೊಂದಿದನು. ಅವನ ನಂತರ ರಾಯನಾರಾಯಣ ಆಹವಮಲ್ಲನು ಕಲಚೂರ್ಯ ಚಕ್ರವರ್ತಿಯಾಗಿ ಸಿಂಹಾಸನವನ್ನು ಏರಿದನು. ಅವನು ಕೂಡಾ ಅವನ ಸ್ಥಾನವನ್ನು ಬಹಳ ಕಾಲ ಅನುಭವಿಸಲಾಗಲಿಲ್ಲ. ಕ್ರಿ.ಶ.೧೧೮೩ರ ಕೊನೆಯ ವೇಳೆಗೆ ಕಲಚೂರ್ಯರ ಅಧಿಕಾರವು ನಷ್ಟ ಹೊಂದಿ ೧೧೮೪ರ ವೇಳೆಗೆ ಚಾಳುಕ್ಯರು ಮತ್ತೆ ಅಧಿಕಾರವನು ಪಡೆದು ಸೋಮೇಶ್ವರನು ಚಕ್ರವರ್ತಿಯಾದನು. ಕೆಲವೇ ಕಾಲ ಆಳಿದ ಕಲಚೂರ್ಯ ವಂಶವು ಒಂದು ತಲೆಮಾರಿಗೂ ಹೆಚ್ಚು ಕಾಲ ಕುಂತಲ ಸಾಮ್ರಾಜ್ಯವನ್ನು ನಡೆಸಿಕೊಂದು ಹೋಯಿತು.

ಬಲ್ಲಾಳನ ಸಮಕಾಲೀನರಾಗಿ ಬಿಜ್ಜಳ ಮತ್ತು ಅವನ ನಾಲ್ಕು ಜನ ಮಕ್ಕಳೂ ಶೀಘ್ರವಾಗಿ ಒಬ್ಬರಾದ ಮೇಲೆ ಒಬ್ಬರಂತೆ ಪಟ್ಟಕ್ಕೆ ಬಂದು ಹೋದರು. ಹೊಯ್ಸಳರು ಮತ್ತು ಕಲಚೂರ್ಯರು ಅಧಿಕಾರಕ್ಕಾಗಿ ತಮ್ಮತಮ್ಮಲ್ಲೇ ಮೇಲಾಟವನ್ನು ನಡೆಸಿದರು. ಆದರೆ ಇಬ್ಬರೂ ಯಶಸ್ವಿಯಾಗಲಿಲ್ಲ. ಆದರೆ ಹೊಯ್ಸಳರು ತಮ್ಮ ನಿರಂತರವಾದ ಧಾಳಿಯಿಂದ, ಕಲಚೂರಿಗಳ ಗಮನವನ್ನು ನಿರಂತರವಾಗಿ ತುಂಗಭದ್ರಾ ಪ್ರದೇಶದಲ್ಲಿ ಯಶಸ್ವಿಯಾಗಿ ಉಚ್ಚಂಗಿಯವರನ್ನು ಹೊಡೆದು ಮತ್ತು ಇತರ ಸಾಮಂತರನ್ನು ಗೆಲ್ಲುವ ಮೂಲಕವಾಗಿ ಸೆಳೆಯುತ್ತಿದ್ದರು ಎಂದೇ ಇಲ್ಲಿ ಹೇಳಬೇಕಾಗುತ್ತದೆ. ಎರಡನೆಯ ವೀರಬಲ್ಲಾಳನು ಕಲಚೂರ್ಯರ ಮೇಲಿನ ನಿರಂತರವಾದ

ಧಾಳಿಯಿಂದ ಅವರಿಗೆ ಬಹಳ ನಷ್ಟವನ್ನು ಉಂಟುಮಾದಿದನಲ್ಲದೇ ಇದೇ ಆಂಶಿಕವಾಗಿ ಕಲಚೂರ್ಯರ ಪತನಕ್ಕೆ ಕಾರಣವಾಯಿತು.

ಚಾಳುಕ್ಯರ ಶಕ್ತಿಗೆ ಮತ್ತೆ ಜೀವವನ್ನು ಕೊಡಿಸಿದ ನಾಲ್ಕನೆಯ ಸೋಮೇಶ್ವರನಿಗೆ ತನ್ನ ಸಾಮಂತರನ್ನು ನಿಯಂತ್ರಿಸುವ ಅಥವ ತನ್ನ ಸ್ಥಾನವನ್ನು ಭದ್ರಪಡಿಸುಕೊಳ್ಳುವ ಶಕ್ತಿಯಾಗಲೀ ಇರಲಿಲ್ಲ. ಕುಂತಳ ಸಾಮ್ರಾಜ್ಯದ ಮೇಲೆ ಶ್ರೇಷ್ಟತೆಯನ್ನು ಸಾಧಿಸಲು ಅದೇ ಸಮಯದಲ್ಲಿ ದಕ್ಷಿಣದಲ್ಲಿ ಹೊಯ್ಸಳರ ಎರಡನೆಯ ವೀರಬಲ್ಲಾಳ ಮತ್ತು ಉತ್ತರದಲ್ಲಿ ಸೇವುಣರು ಸಮಯವನ್ನು ಪ್ರಯತ್ನಿಸುತ್ತಿದ್ದರು.

ಎರಡನೆಯ ವೀರಬಲ್ಲಾಳನು ಚಾಳುಕ್ಯ ಸಾಮ್ರಾಜ್ಯವನ್ನು ದಕ್ಷಿಣ ಭಾಗದಿಂದ ಆಕ್ರಮಣವನ್ನು ಮಾಡಿದನು. ಈ ಧಾಳಿಯ ಸಮಯದಲ್ಲಿ ಕ್ರಿ.ಶ.1188ರಲ್ಲಿ ಒಬ್ಬ ಸೈನ್ಯಧಿಕಾರಿ–ಯಾದ ಬ್ರಹ್ಮನು ಹೊಯ್ಸಳ ಎರಡನೆಯ ವೀರಬಲ್ಲಾಳನ ಸೈನ್ಯವನ್ನು ಚದುರಿಸಿದುದಾಗಿ ಹೇಳಿಕೊಂಡಿದ್ದಾನೆ. ಆದರೆ ಇದು ಸುಳ್ಳು ಬಡಾಯಿಯಾಗಿತ್ತು. ಏಕೆಂದರೆ ತಡವಿಲ್ಲದೇ ಬ್ರಹ್ಮನು ಎರಡನೆಯ ವೀರಬಲ್ಲಾಳನ ಕೈಗಳಿಂದ ಬಲವಾದ ಹೊಡೆತವನ್ನು ತಿಂದನು.

ಕ್ರಿ.ಶ.1189ರಲ್ಲಿ[13] ಚಾಳುಕ್ಯ ಸೋಮೇಶ್ವರನ ಆಳ್ವಿಕೆಯು ಕೊನೆಗೊಂಡಿತು. ಅದಾದ ನಂತರ ನಾಲ್ಕನೆಯ ಸೋಮೇಶ್ವರ ಮತ್ತು ಅವನ ದಂಡಾಧಿಕಾರಿಯಾದ ಬ್ರಹ್ಮನು ಕಣ್ಮರೆಯಾಗುತ್ತಾರೆ. ಕ್ರಿ.ಶ.1189ರ ಮಧ್ಯಭಾಗದಲ್ಲಿ ಎರಡನೆಯ ವೀರಬಲ್ಲಾಳನು ಉತ್ತರದ ಕಡೆಗೆ ಹೊರಟನು. ಅವನು ಚಾಳುಕ್ಯರ ಸೈನ್ಯದ ಮೇಲೆ ಧಾಳಿಯನ್ನು ಮಾಡಿದನು. ಎರಡನೆಯ ವೀರಬಲ್ಲಾಳನ ಗದಗಿನ ಪ್ರಸಿದ್ಧ ದಾಖಲೆಯಲ್ಲಿ ನಮೂದಾಗಿರುವಂತೆ ಸೈನ್ಯಾಧಿಕಾರಿಯಾದ ಬ್ರಹ್ಮನು ತೀವ್ರವಾಗಿ ಸೋಲುತ್ತಾನೆ ಎಂದು ಸ್ಪಷ್ಟವಾಗಿದೆ. ನಾಲ್ಕನೆಯ ಸೋಮೇಶ್ವರನಿಗೆ ಸೈನ್ಯಾಧಿಕಾರಿ ಬ್ರಹ್ಮನ ಸೋಲು ತೀವ್ರವಾದ ಹೊಡೆತವಾಗುತ್ತದೆ. ಕ್ರಿ.ಶ.1189ರ ಅಂತ್ಯದ ವೇಳೆಗೆ ನಡೆದ ಈ ಘಟನೆಯ ನಂತರ ನಮಗೆ ಚಾಳುಕ್ಯ ಸೋಮೇಶ್ವರ ಮತ್ತು ಬ್ರಹ್ಮರ ಬಗ್ಗೆ ಏನೂ ತಿಳಿದಿಲ್ಲ. ಸೋಮೇಶ್ವರನು ಕಲ್ಯಾಣಿಯನ್ನು ಬಿಟ್ಟು ಒಬ್ಬ ಸಾಮಂತನಲ್ಲಿ ಆಶ್ರಯವನ್ನು ಪಡೆಯುತ್ತಾನೆ. ಕಲ್ಯಾಣವೂ ಸೇರಿದಂತೆ ದೂರದ ಪೆರ್ಡೂರಿನವರೆಗೆ ಎರಡನೆಯ ವೀರಬಲ್ಲಾಳನು ಆಕ್ರಮಿಸುತ್ತಾನೆ.

ಎರಡು ದತ್ತಿಗಳು ಕೃಷ್ಣಾದ ವರೆಗಿನ ವೀರಬಲ್ಲಾಳನ ವಿಜಯವನ್ನು ಖಚಿತಪಡಿಸುತ್ತವೆ. ಅದರಲ್ಲಿ ಒಂದು ಬಲ್ಲಾಳನ ಖ್ಯಾತಿಯಿಂದ ಕೊಲೆಯಾದ ಸೈನಿಕರು ಹಿಡಿದ ಸ್ಥಾನಗಳು, ಮತ್ತು

ವಿಷ್ಣುವಿನ ಹಲಸಿಗೆ, ಬೆಳುವೊಲ, ಹುಲಿಗೆರೆ ಮತ್ತು ಲೊಕ್ಕುಂಡಿ ಅಲ್ಲದೆ ದೂರದ ಹೆದ್ದೊರೆ (ಕೃಷ್ಣ) ದವರೆಗಿನ ವಿಜಯದ ಕುರಿತಾಗಿದೆ. ಇನ್ನೊಂದು ದಾಖಲೆಯು ನೊಳಂಬವಾಡಿ, ಬನವಾಸಿ ಹಲಸಿಗೆ, ಬೆಳುವೊಲ, ಹುಲಿಗೆರೆ ಮತ್ತು ಹೆದ್ದೊರೆಯ ಆಡಳಿತದಲ್ಲಿ ವೀರಬಲ್ಲಾಳನ ದುಷ್ಟ ಶಿಕ್ಷಣ ಮತ್ತು ಶಿಷ್ಟ ರಕ್ಷಣದ ಬಗ್ಗೆ ಇದೆ.

ಈ ಸಾಧನೆಯ ಹೆಗ್ಗುರುತಾಗಿ ಅವನು ಮೊತ್ತಮೊದಲಿಗೆ ಬಹುದೊಡ್ಡ ಬಿರುದಾದ "ಪ್ರತಾಪಚಕ್ರವರ್ತಿ" ಎಂಬ ಬಿರುದನ್ನು ಇಟ್ಟುಕೊಂಡನು. ಈ ಬಿರುದು ಎರೆಡನೆಯ ವೀರಬಲ್ಲಾಳನು ಉನ್ನತಿಯ ಸ್ಥಾನಕ್ಕೇರಿದ್ದನ್ನು ಸ್ಪಷ್ಟಪಡಿಸುತ್ತದೆ.

ಈ ಮೇಲಿನ ವಿವರಣೆಯಿಂದ ಕ್ರಿ.ಶ.1189 ಇದು ಹೊಯ್ಸಳ ವಂಶದ ಚರಿತ್ರೆ ಮತ್ತು ದಕ್ಷಿಣದ ಚರಿತ್ರೆಗೆ ಒಂದು ಮಹತ್ವದ ತಿರುವಾಗಿದೆ. ಕಲ್ಯಾಣದ ಚಾಳುಕ್ಯರು ಅಲ್ಲಿಂದ ಮರೆಯಾದ ನಂತರ ಅವರ ಸಾಮ್ರಾಜ್ಯದ ಬಹುಭಾಗವನ್ನು ಹೊಯ್ಸಳರ ವಶಕ್ಕೆ ತರಲಾಯಿತು. ಕೆಲವು ಭಾಗಗಳನ್ನು ದೇವಗಿರಿಯ ಸೇವುಣರು ವಶಪಡಿಸಿಕೊಂಡರು. ವೀರಬಲ್ಲಾಳನು ಕುಂತಳದ ಚಕ್ರವರ್ತಿ ಎಂದು ಘೋಷಿಸಿಕೊಂಡನು. ಚಾಳುಕ್ಯರ ಪತನವು ಎರಡು ರಾಜಮನೆತನದವರಾದ ದೇವಗಿರಿಯ ಸೇವುಣರು ಮತ್ತು ದೋರಸಮುದ್ರದ ಹೊಯ್ಸಳರ ನಡುವೆ ಮೇಲಾಟಕ್ಕಾಗಿ ಸ್ಪರ್ಧೆಯು ನಡೆಯತೊಡಗಿತು.

### 5.1.7 ದೇವಗಿರಿಯ ಸೇವುಣರೊಡನೆ ಘರ್ಷಣೆ

ಕ್ರಿ.ಶ.1189ರಲ್ಲಿ ಚಾಳುಕ್ಯರ ಪತನವು ದಕ್ಷಿಣದಲ್ಲಿ ಶ್ರೇಷ್ಟತೆಗಾಗಿ ಹೊಯ್ಸಳರು ಮತ್ತು ದೇವಗಿರಿಯ ಸೇವುಣರ ನಡುವೆ ಮುಗಿಯದ ತಿಕ್ಕಾಟಗಳು ಆರಂಭವಾದವು. ಹೊಯ್ಸಳರು, ಸೇವುಣರು ಮತ್ತು ವಾರಂಗಲ್ಲಿನ ಕಾಕತೀಯರು ಕಲ್ಯಾಣದ ಚಾಳುಕ್ಯರ ಸಮಾಧಿಯ ಮೇಲೆ ಸ್ವತಂತ್ರ ಶಕ್ತಿಗಳಾಗಿ ಉದಯಿಸಿದವು. ಕಾಕತೀಯರು ಹೊಯ್ಸಳರೊಂದಿಗೆ ಘರ್ಷಣೆಯಲ್ಲಿ ಇಳಿಯಲಿಲ್ಲ. ಆದರೆ ಅವರು ಸೇವುಣರೊಂದಿಗೆ ಹೋರಾಟವನ್ನು ಮುಂದುವರೆಸಿದರು. ಸೇವುಣರು ಮತ್ತು ಹೊಯ್ಸಳರಿಬ್ಬರೂ ಕಲ್ಯಾಣದ ಪತನದ ನಂತರ ಮೇಲುಗೈಯ್ಯನ್ನು ಪಡೆಯಲು ಸ್ಪರ್ಧಿಸುತ್ತಿದರು. ಚಾಳುಕ್ಯರ ಪತನದ ನಂತರ ಆರಂಭಗೊಂಡ ಈ ವೈರತ್ವವು ಸೇವುಣ ವಂಶವು ಪತನಗೊಳ್ಳುವವರೆಗೂ ಮುಂದುವರೆಯಿತು.

ಕ್ರಿ.ಶ.1189ರಲ್ಲಿ ಕಲ್ಯಾಣವನ್ನು ವಶಪಡಿಸಿಕೊಂಡದ್ದಕ್ಕಾಗಿ ವಿಜಯೋತ್ಸವನ್ನು ಆಚರಿಸಲು ತನ್ನ ರಾಜಧಾನಿಯಾದ ದೋರಸಮುದ್ರಕ್ಕೆ ವೀರಬಲ್ಲಾಳನು ಹಿಂತಿರು ದನು. ಅವನು ಹಿಂತಿರುಗಿದ ಕೂಡಲೇ ಸೇವುಣರ ಭಿಲ್ಲಮನು ಕುಂತಲದ ದಕ್ಷಿಣದ ಭಾಗದ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಲು ಬೃಹತ್ತಾದ ಪ್ರಯತ್ನವನ್ನು ಮಾಡಿದನು. ಈಗಾಗಲೇ ಚಾಳುಕ್ಯರ ಸಾಮಂತರನ್ನು ಸೋಲಿಸಿದ ಭಿಲ್ಲಮನು ಬಹುದೊಡ್ಡದಾದ ಸೈನ್ಯವನ್ನು ತೆಗೆದುಕೊಂಡು ಕಲ್ಯಾಣ ಮತ್ತು ಇನ್ನೂ ಮುಂದೆ ಹೊರಟನು. ಕ್ರಿ.ಶ.1191ರ ಪ್ರಾರಂಭದಲ್ಲಿ ಸೇವುಣರ ಸೈನ್ಯವು ಹೇರೂರನ್ನು ತಲುಪಿ ಅಲ್ಲಿ ಕೆಲಕಾಲ ತಂಗಿತು ಹೇರೂರಿನಲ್ಲಿ ಭಿಲ್ಲಮನು ಹಿರಿಯ ಹಂದಿಗೊಳ ಎಂಬ ಹಳ್ಳಿಯನ್ನು "ಸತ್ಯವಾಕ್ಯ" ಎಂದು ಹೆಸರಾದ ಸಿದ್ಧಾಂತ ಚಂದ್ರ ಭೂಷಣ ದೇವ ಸ್ವಯಂಭೂ ತ್ರಿಕೂಟೇಶ್ವರ ದೇವರ ದೇವಾಲಯಕ್ಕೆ ಕ್ರಿ.ಶ.1191ರಲ್ಲಿ ದಾನವನ್ನು ಕೊಟ್ಟನು. ಬೃಹತ್ತಾದ ಸೇವುಣರ ಸೈನ್ಯವು ಮುಂದೆ ಚಲಿಸಿ ಧಾರವಾಡ ಜಿಲ್ಲೆಯ ಸೊರಳೂರು ಎಂಬ ಹಳ್ಳಿಯ ಬಳಿ ಬಂದಿತು. ಆ ಸೈನ್ಯವು ಭಿಲ್ಲಮನ ಬಲಗೈ ಎಂದೇ ಹೆಸರಾದ ಜೈತುಗಿ ಎಂಬ ಒಬ್ಬನ ಮುಂದಾಳ್ತನದಲ್ಲಿತ್ತು.

ಸೇವುಣರ ಸೈನ್ಯವು ಬರುತ್ತಿರುವುದರ ಸುದ್ದಿಯನ್ನು ಕೇಳಿದ ಕೂಡಲೇ ಬಲ್ಲಾಳನು ತನ್ನ ಸೈನ್ಯದೊಂದಿಗೆ ಸೊರಟೂರಿನ ಕಡೆ ಹೊರಟನು. ಕ್ರಿ.ಶ.1192ರಲ್ಲಿ ಅಲ್ಲಿ ಭೀಕರವಾದ ಯುದ್ಧವು ಜರುಗಿತು. ಸೇವುಣರ ಸೈನ್ಯವು ಹೊಯ್ಸಳ ರ ಧಾಳಿಯನ್ನು ತಡೆದುಕೊಳ್ಳಲಾಗಲಿಲ್ಲ. ಸೇವುಣರ ಸೈನ್ಯದಲ್ಲಿ ಗಲಿಬಿಲಿ ಮತ್ತು ಗೊಂದಲಗಳು ಎದ್ದವು. ಜನ್ನನು ಈ ಘಟನೆಯನ್ನು ದಪ್ಪ ಅಕ್ಷರಗಳಲ್ಲಿ ದಾಖಲಿಸಿದ್ದಾನೆ. ಇನ್ನೊಂದು ದಾಖಲೆಯು ಬಲ್ಲಾಳನು ಧೀರನಂತೆ ಸೊರಟೂರು ಯುದ್ಧದಲ್ಲಿ ಹೋರಾಡಿ ಜೈತ್ರುಸಿಂಹನನ್ನು ಸೋಲಿಸಿದನೆಂದು ಒಂದು ವೀರಗಲ್ಲು ದಾಖಲಿಸಿದೆ. ಸೊರಟೂರಿನ ಈ ಯುದ್ಧದಲ್ಲಿ ಬಲ್ಲಾಳನು ಪ್ರದರ್ಶಿಸಿದ ಶೌರ್ಯ, ಸಾಹಸಗಳನ್ನು ಮುಂದಿನ ಅನೇಕ ಶಾಸನಗಳಲಿ್ಲ ವರ್ಣಿಸಿದೆ. ಸೊರಟೂರು ಯುದ್ಧರಂಗದಿಂದ ಕಾಲ್ಕಿತ್ತ ಸೇವುಣರ ಸೈನ್ಯವು ಗದಗದಿಂದ ಎಂಟು ಮೈಲು ದೂರವಿರುವ ಲೊಕ್ಕುಂಡಿಯ ಕೋಟೆಯಲ್ಲಿ ಆಶ್ರಯವನ್ನು ಪಡೆಯಿತು. ಲೊಕ್ಕುಂಡಿ ಪಟ್ಟಣವು ಲೊಕ್ಕಿಗುಂಡಿ ಎಂದು ಹೆಸರು ಪಡೆದಿದ್ದು ಹೊಯ್ಸಳರು ಮತ್ತು ಸೇವುಣರು ಸೇರಿದಂತೆ ಅನೇಕ ರಾಜಮನೆತನದವರ ಉಪರಾಜಧಾನಿಯಾಗಿತ್ತು. ಸಮಕಾಲೀನ ದಾಖಲೆಗಳಲ್ಲಿ ಇದನ್ನು ಅಭೇದ್ಯವಾದ ಕೋಟೆ ಎಂದೇ ವರ್ಣಿಸಿದ್ದಾರೆ. ಬಲ್ಲಾಳನು ಸೇವುಣರ ಸೈನ್ಯವನ್ನು ಹಿಂಬಾಲಿಸಿಕೊಂಡು ಬಂದು ಈ ಲೊಕ್ಕಿಗುಂಡಿ ಕೋಟೆಗೆ ಮುತ್ತಿಗೆಯನ್ನು ಹಾಕಿದನು. ಅಲ್ಲಿ ಇನ್ನೊಂದು ಭೀಕರವಾದ ಕಾಳಗವು ಕ್ರಿ.ಶ.1192ರ[14] ನವೆಂಬರ್ ಮಾಹೆಗೂ ಮುಂಚೆಯೇ ನಡೆಯಿತು. ಅನೇಕ ದಾಖಲೆಗಳ ಪ್ರಕಾರ ಸೇವುಣರ ಅನೇಕ ಸೈನಿಕರು ಪ್ರಾಣವನ್ನು ತೆತ್ತರು. ಭಿಲ್ಲಮನ ಸೈನ್ಯಾಧಿಪತಿಯಾದ ಜೈತುಗಿಯೂ ಯುದ್ಧದಲ್ಲಿ ಮರಣಹೊಂದಿದನು.

ಭಯಭೀತ ಸೇವುಣರ ಸೈನ್ಯವು ದಿಕ್ಕಾಪಾಲಾಗಿ ಓಡಿತು. ಈ ಕೋಟೆಯನ್ನು ನಾಶಪಡಿಸ-ಲಾಯಿತು ಮತ್ತು ವಶಪಡಿಸಿಕೊಳ್ಳಲಾಯಿತು. ಪ್ರಸಿದ್ಧ ವಿದ್ವಾಂಸರಾದ ರಾಜಾದಿತ್ಯರು ಬಲ್ಲಾಳನಿಂದ ಸೇವುಣರ ಸೈನ್ಯದ ವಿನಾಶವನ್ನು ತಮ್ಮ ವ್ಯವಹಾರಗಣಿತದಲ್ಲಿ ಬರೆದಿದ್ದಾರೆ. ಭಿಲ್ಲಮನು ಉಳಿದಿದ್ದ ಆರುನೂರು ಕುದುರೆಸವಾರರ ಜೊತೆಗೆ ಯುದ್ಧರಂಗದಿಂದ ಪರಾರಿಯಾದನು.

ಎರಡನೆಯ ಬಲ್ಲಾಳನು ಕ್ರಿ.ಶ.1192ರಲ್ಲಿ[15] ಲೊಕ್ಕುಂಡಿಯ ವಿಜಯೀ ಬಿಡಾರದಲ್ಲಿ ಈ ಮಹಾ ವಿಜಯದ ನಂತರ ಹೊಂಬಳಲು (ಈಗಿನ ಹೊಂಬಾಳ್) ಗ್ರಾಮವನ್ನು ವಿದ್ಯಾಭರಣ ಗುರುದೇವ, ಸತ್ಯವಾಕ್ಯ ಎಂದೂ ಹೆಸರಾದ ಗದಗಿನ ತ್ರಿಕೂಟೇಶ್ವರ ದೇವರ ಆಚಾರ್ಯರಿಗೆ ದತ್ತಿಯಾಗಿ ನೀಡಿದನು. ಈ ಮುಖ್ಯವಾದ ದಾಖಲೆಯಲ್ಲಿ ಎರಡನೆಯ ಬಲ್ಲಾಳನ ಕೈಯಿಂದಚಾಳುಕ್ಯ ಸೈನ್ಯಾಧಿಪತಿ ಬೊಮ್ಮನ ಸೋಲು ಮತ್ತು ಜೈತುಗಿಯ ಮರಣದ ಬಗ್ಗೆ ಪ್ರಸ್ತಾಪವಿದೆ. ನಾರಾಯಣ ದೇವರ ಅನುಗ್ರಹದಿಂದ ಕುಂತಲ ಸಾಮ್ರಾಜ್ಯದ ಮೇಲೆ ಬಲ್ಲಾಳನ ಅಧಿಕಾರ ಪ್ರಾಪ್ತಿಯಾದ ಬಗ್ಗೆಯೂ ಕೂಡಾ ಈ ದಾಖಲೆಯಲ್ಲಿ ಪ್ರಸ್ತಾಪವಿದೆ. ಅವನು ಶ್ರೇಷ್ಠ ಬಿರುದಾದ " ಶ್ರೀ ಪೃಥ್ವೀವಲ್ಲಭ" "ಸಮಸ್ತ ಭುವನಾಶ್ರಯ" ಮತ್ತು "ತೆಂಕಣ ಚಕ್ರವರ್ತಿ" ಅಥವ ದಕ್ಷಿಣದ ದೊರೆ ಎಂದು ಇಟ್ಟುಕೊಂಡನು.

ಲೊಕ್ಕುಂಡಿಯನ್ನು ಗೆದ್ದ ನಂತರ ಬಲ್ಲಾಳನು ಸೈನ್ಯವನ್ನು ಹೆದ್ದೊರೆಯವರೆಗೆ ಅಟ್ಟಿಸಿ-ಕೊಂಡು ಹೋದನು. ಆ ಸಂಘರ್ಷಣೆಯಲ್ಲಿ ಭಿಲ್ಲಮನೂ ತನ್ನ ಪ್ರಾಣವನ್ನು ಕಳೆದುಕೊಂಡನು. ಲೊಕ್ಕುಂಡಿಯನ್ನು ಬಲ್ಲಾಳನು ವಶಪಡಿಸಿಕೊಂಡ ನಂತರ ಭಿಲ್ಲಮನ ಹೆಸರನ್ನು ಎಲ್ಲೂ ಪ್ರಸ್ಥಾಪಿಸಿಲ್ಲ. ಅವನ ನಂತರ ಅವನ ಮಗ ಜೈತ್ರು ಸಿಂಹನು ಅದೇ ವರ್ಷ ಕ್ರಿ.ಶ.1192ರಲ್ಲಿ ಪಟ್ಟಕ್ಕೆ ಬಂದನು. ಮುಂದೆ ಎರಡನೆಯ ಬಲ್ಲಾಳನ ಕೈಯಲ್ಲಿ ಭಿಲ್ಲಮನ ಮರಣವು ಅಣ್ಣಿಗೆರೆಯ ದಾಖಲೆಗಳಿಂದ ಧೃಡಪಟ್ಟಿದೆ. ಬಲ್ಲಾಳನ ಸಾವಿರಾರು ಶಾಸನಗಳೂ ಸಹ ಭಿಲ್ಲಮನ ಮರಣಕ್ಕೆ ಸಂಬಂಧಿಸಿವೆ. ಈ ವಿವರಣೆಗಳಿಂದ ಎರಡನೆಯ ಬಲ್ಲಾಳನು ಪಾಂಡ್ಯ ದೊರೆ ಕಾಮದೇವನನ್ನು, ಸೇವುಣ ಸೈನ್ಯಾಧಿಪತಿ ಜೈತುಗ ಮತ್ತು ಸೇವುಣರ ದೊರೆ ಭಿಲ್ಲಮರನ್ನು ಕೊಂದನೆಂದು ತಿಳಿಯಬಹುದು.

ಸೊರಟೂರು ಕದನವು ಹೊಯ್ಸಳ ವಂಶದಲ್ಲಿ ಒಂದು ಮುಖ್ಯವಾದ ಘಟನೆಯಾಗಿದೆ. ಹೊಯ್ಸಳರು ಸೇವುಣರ ವಿರುದ್ಧ ಮೇಲುಗೈಯನ್ನು ಸಾಧಿಸಿದರು. ಸೇವುಣರ ಹೆಸರು

ತಾತ್ಕಾಲಿಕವಾಗಿ ಮರೆಯಾಯಿತು. ಈ ವಿಜಯದ ಪರಿಣಾಮವಾಗಿ ಬಲ್ಲಾಳನು ಕುರುಗೋಡು, ಮತಂಗ ಬೆಟ್ಟ ದೊರೆವಾಡಿ ಗುತ್ತಿ ಗುತ್ತವೊಳಲು, ಉದ್ರೆ, ಕಳದಿ, ಬಂದನಿಕೆ ಸೊರತೂರು ಎರಂಬರ್ಗೆ ಹಳುವೆ ಮನುವೆ ಲೊಕ್ಕುಂಡಿ ಮೊದಲಾದ ಆನೇಕ ನಗರಗಳು ಅಲ್ಲದೇ ಕೃಷ್ಣಾ ಪ್ರದೇಶಗಳು ಮತ್ತು ಭೀಮರತಿ ಮೊದಲಾದ ಪಟ್ಟಣಗಳನ್ನು ವಶಕ್ಕೆ ತೆಗೆದುಕೊಂಡನು. ಬಲ್ಲಾಳನು "ದಕ್ಷಿಣ ಚಕ್ರವರ್ತಿ", ಸಮಸ್ತ ಭುವನಾಶ್ರಯ" ಮತ್ತು "ಶ್ರೀಪೃಥ್ವೀವಲ್ಲಭ" ಎಂಬ ಬಿರುದುಗಳನ್ನು ಹೊತ್ತನು. ಇದಲ್ಲದೇ "ಸೇವುಣ ಬಡಬನಾಲ ವಾರಿಧಿ" ಮತ್ತು "ಸೇವುಣ ಕಟಕಸುರೇಕರ" ಎಂಬ ಬಿರುದುಗಳನ್ನೂ ಹೊತ್ತನು. ಈ ವಿಜಯವನ್ನು ಆಚರಿಸಲು ಅವನು ಕ್ರಿ.ಶ.1192ರಲ್ಲಿ ತನ್ನದೇ ಆದ ಶಕೆಯನ್ನು ಪ್ರಾರಂಬಿಸಿದನು. ಈ ಬಲವಾದ ಹೊಡೆತದಿಂದ ಸುಧಾರಿಸಿಕೊಳ್ಳಲು ಸೇವುಣರಿಗೆ ಅನೇಕ ವರ್ಷಗಳೇ ಬೇಕಾಯಿತು.[16]

ಸುಮಾರು ಎರಡು ದಶಕಗಳ ಕಾಲ ಸೇವುಣರು ಹೊಯ್ಸಳರ ವಿರುದ್ಧ ತಮ್ಮ ಕೈಯನ್ನು ಎತ್ತಲಾಗಲಿಲ್ಲ. ಈ ಮಹತ್ತಾದ ವಿಜಯದಿಂದ ವೀರಬಲ್ಲಾಳನು ಕರ್ನಾಟಕಕ್ಕೇ ಚಕ್ರವರ್ತಿಯಾಗಿ ದಕ್ಷಿಣ ಭಾರತದಲ್ಲಿ ಯಾವುದೇ ಶಾಂತಿ ಅಥವ ಯುದ್ಧಕ್ಕೆ ಪ್ರಚೋದಿಸುವ ಪ್ರಾಮುಖ್ಯತೆಯನ್ನು ಗಳಿಸಿಕೊಂಡನು. ಬಲ್ಲಾಳನು ತನ್ನ ಗೆದ್ದ ಪ್ರದೇಶಗಳಿಗೆ ಸೈನ್ಯಾಧಿಕಾರಿಗಳನ್ನು ಮತ್ತು ಮಂತ್ರಿಗಳನ್ನು ರಾಜ್ಯಪಾಲರನ್ನಾಗಿ ನೇಮಿಸಿತನ್ನ ರಾಜಧಾನಿಗೆ ಹಿಂತಿರುಗಿದನು. ಸುಮಾರು ಇಪ್ಪತ್ತು ವರ್ಷಗಳಿಗೂ ಹೆಚ್ಚು ಕಾಲ ಆ ಪ್ರದೇಶದಿಂದ ಯಾವ ತೊಂದರೆಯೂ ಆಗಲಿಲ್ಲ.

ಸೇವುಣರ ದೊರೆ ಜೈತುಗಿಯ ಮಗನಾದ ಸಿಂಘನನು ಪಟ್ಟಕ್ಕೆ ಬಂದನು. ಅವನು ಕೆಲವು ವರ್ಷದ ನಂತರ ಹೊಯ್ಸಳರ ಗಡಿಯ ಮೇಲೆ ಧಾಳಿಯನ್ನು ಮಾಡಲು ಪ್ರಾರಂಬಿಸಿದನು. ವೀರಬಲ್ಲಾಳನು ತನ್ನ ಸಾಮ್ರಾಜ್ಯದ ಉತ್ತರದ ಗಡಿಯ ಕ್ರಿ.ಶ.1112ರಲ್ಲಿ ಕಡೆ ಹೊರಟನು. ಸಿಂಘನನು ನೇರವಾಗಿ ಹೊಯ್ಸಳರ ಸೈನ್ಯವನ್ನು ಎದುರಿಸಿ ಯುದ್ಧವನ್ನು ಮಾಡುವ ಪರಿಸ್ಥಿತಿಯಲ್ಲಿ ಇರಲಿಲ್ಲ. ವೀರಬಲ್ಲಾಳನು ರಾಜಧಾನಿಗೆ ಹಿಂತಿರುಗಿದನು.[17] ಸಿಂಘನನು ಪುನಹ ಹೊಯ್ಸಳರ ಗಡಿಗಳ ಮೇಲೆ ಧಾಳಿಯನ್ನು ಪ್ರಾರಂಭಿಸಿದನು. ಈ ಧಾಳಿಗಳ ಹೊರತಾಗಿಯೂ ತುಂಗಭದ್ರಾ ನದಿಯು ಹೊಯ್ಸಳರ ಸಾಮ್ರಾಜ್ಯದ ಉತ್ತರದ ಗಡಿಯಾಗಿ ಕೊನೆಯವರೆಗೂ ಉಳಿಯಿತು.

### 5.1.8 ಎರಡನೆಯ ಬಲ್ಲಾಳ ಮತು ಚೋಳರು

ತಮಿಳುನಾಡಿನಲ್ಲಿ ಇದ್ದ ರಾಜಕೀಯ ಪರಿಸ್ಥಿತಿಯು ಎರಡನೆಯ ಬಲ್ಲಾಳನನ್ನು ಆಕರ್ಷಿಸಿತು. ಮೂರನೆಯ ಕುಲೋತ್ತುಂಗನು ತನ್ನ ರಾಜ್ಯದಲ್ಲಿ ಅಶಾಂತಿಯನ್ನು ಗಮನಿಸಿ

ಅದಕ್ಕಾಗಿ ನೆರೆಯವರಾದ ಹೊಯ್ಸಳರೊಡನೆ ಆಪ್ತ ಸಂಬಂಧವನ್ನು ಹೊಂದಲು ಇಚ್ಛಿಸಿದನು. ಕ್ರಿ.ಶ.1200ರ ಸುಮಾರಿಗೆ ಚೋಳ ದೊರೆ ಕುಲೋತ್ತುಂಗನ ಮಗಳಾದ ಚೋಳಮಹಾದೇವಿ-ಯನ್ನು ಎರಡನೆಯ ಬಲ್ಲಾಳನಿಗೆ ಕೊಟ್ಟು ವಿವಾಹವನ್ನು ಮಾಡಲಾಗಿತ್ತು ಎಂದು ಹೇಳಲಾಗುತ್ತಿದೆ. ಮುಂದೆ ಮೂರನೆಯ ರಾಜರಾಜಚೋಳನು ಎರಡನೆಯ ಬಲ್ಲಾಳನ ಪುತ್ರಿಯಾದ ಸೋಮಲಾ-ದೇವಿಯನ್ನು ವಿವಾಹ ಮಾಡಿಕೊಂಡನು. ಈ ಸಂದರ್ಭದಲ್ಲಿ ಎರಡನೆಯ ಬಲ್ಲಾಳನು ಎಂದೂ ಪ್ರಾದೇಶಿಕ ಭಾವನೆಗಳಿಗೆ ಅವಕಾಶವನ್ನು ಮಾಡಿಕೊಡಲಿಲ್ಲ ಆದರೆ ಕ್ರಿ.ಶ.1216ರ ವೇಳೆಗೆ ತಮಿಳುನಾಡಿನಲ್ಲಿ ಉಂಟಾದ ಕೆಲವು ಬೆಳವಣಿಗೆಗಳು ಚೋಳ ಸಾಮ್ರಾಜ್ಯದ ವ್ಯವಹಾರಗಳಲ್ಲಿ ಮಧ್ಯೆ ಪ್ರವೇಶಿಸುವಂತೆ ಮಾಡಿತು. ಚೋಳ ಸಾಮ್ರಾಜ್ಯವು ಮದುರೈನ ಪಾಂಡ್ಯರಿಂದ ಕಿರುಕುಳವನ್ನು ಎದುರಿಸಲು ಪ್ರಾರಂಭವಾಯಿತು.

ಪಾಂಡ್ಯರ ದೊರೆ ಮಾರವರ್ಮನ್‌ನು ಹೆಸರಿಗೆ ಮಾತ್ರ ಇದ್ದ ಚೋಳ ಆಧಿಪತ್ಯವನ್ನು ಕಿತ್ತುಹಾಕಲು ನಿರ್ಧರಿಸಿದನು. ಅವನು ಚೋಳರ ಇತರ ಸಾಮಂತರಾದ ಬಾಣರು ಮತ್ತು ಕಾಡವರೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡನು. ಅದರ ನಂತರ ಸುಂದರ ಪಾಂಡ್ಯನು ಮೂರನೆಯ ರಾಜರಾಜನ ಮೇಲೆ ಧಾಳಿಯನ್ನು ಮಾಡಿ ಅವಮಾನಗೊಳಿಸಿದನು. ಚೋಳದೊರೆಯು ಎರಡನೆಯ ಬಲ್ಲಾಳನನ್ನು ಸಹಾಯಕ್ಕಾಗಿ ಕೇಳಿಕೊಂಡನು. ಎರಡನೆಯ ಬಲ್ಲಾಳನು ಚೋಳ ದೊರೆಯ ಸಹಾಯಕ್ಕೆ ಹೋಗಲು ನಿರ್ಧರಿಸಿದನು. ಈಗಾಗಲೇ ಈ ಎರಡೂ ವಂಶಗಳು ವೈವಾಹಿಕ ಸಂಬಂಧವನ್ನು ಹೊಂದಿದ್ದವು. ಎರಡನೆಯ ಬಲ್ಲಾಳನು ಕೊನೆಯಲ್ಲಿ ತನ್ನ ಸೈನ್ಯವನ್ನು ಅವನ ಮಗನಾದ ಎರಡನೆಯ ನರಸಿಂಹನ ನಾಯಕತ್ವದಲ್ಲಿ ಕ್ರಿ.ಶ.1218ರಲ್ಲಿ ಕಳುಹಿಸಿದನು.[18]

ಹೊಯ್ಸಳರು ಬಾಣರ ರಾಜ್ಯಕ್ಕೆ ನೇರವಾದ ಸಂಪರ್ಕವನ್ನು ಹೊಂದಿದ್ದರು. ಅತ್ತೂರು ಘಟ್ಟದ ಕೆಳಗಿದ್ದು ಅದು ಬಾಣರ ಮುಖ್ಯಸ್ಥಳವಾಗಿದ್ದು ಅದರ ವ್ಯಾಪ್ತಿಯು ಪೂರ್ವಕ್ಕೆ ದೂರದ ತಾರಮಂಗಲಮ್, ಉತ್ತರಕ್ಕೆ ದೂರದ ವೆಲ್ಲಾರ್‌ನ ತಿತ್ತಗುಡಿ ಪೊನ್ನಿಯಾರ್ ಅಲ್ಲದೆ ತಿರುವ ಸಂಗಮ್ ಮತು ಜಂಬ ಇವುಗಳನ್ನು ಒಳಗೊಂಡಿತ್ತು. ತಿರುವಣ್ಣಾಮಲೈಯನ್ನೂ ಒಳಗೊಂಡಂತೆ ಪೊನ್ನಿಯಾರ್ ಅನ್ನು ಆದಿಜೈಮನ್‌ನು ಆಳುತ್ತಿದ್ದನು. ಅಲ್ಲಿಂದ ಅವನು ಕಾವೇರಿ ಬಯಲನ್ನು ತಲುಪಿದನು. ಎರಡನೆಯ ನರಸಿಂಹನು ಆದಿಜೈಮನ್ ಮತ್ತು ಬಾಣರ ಸೈನ್ಯಗಳನ್ನು ಸಂಧಿಸಿ ಶ್ರೀರಂಗಂನ ಬಳಿ ಸೋಲಿಸಿದನು. ಪಾಂಡ್ಯನ್ ಸೈನ್ಯವನ್ನು ಓಡಿಸುವುದರಲ್ಲಿ ಮಲ್ಲಯ್ಯನಾಯಕ-ನೆಂಬುವವನೊಬ್ಬನು ಅಪ್ರತಿಮ ಸಾಹಸವನ್ನು ತೋರಿಸಿದನು. ಈ ಧಾಳಿಯಿಂದ ಪ್ರತಾಪ

ನರಸಿಂಹನು ರಾಜರಾಜನನ್ನು ಅವನ ಸಾಮಂತರಿಂದ ಉಳಿಸಿ ನಂತರ ತನ್ನ ರಾಜಧಾನಿಗೆ ಹಿಂತಿರುಗಿದನು. ರಾಜಕುಮಾರ ನರಸಿಂಹನು "ಚೋಳಪ್ರತಿಷ್ಠಾಪನಾಚಾರ್ಯ" ಮತ್ತು "ಆದಿಯಮಯಕಗರಟ್ಟ" ಮತ್ತು "ಮಗರ ರಾಜ್ಯ ದಿಸಾಪಟ್ಟ" ಎಂಬ ಬಿರುದುಗಳನ್ನು ಪಡೆದುಕೊಂಡನು. ಅವನು ರಾಜಧಾನಿಗೆ ಹಿಂದಿರುಗಿದಕೂಡಲೇ ಅವನಿಗೆ "ವಿಜಯಾಭಿಷೇಕ" ವನ್ನು ವ್ಯವಸ್ಥೆ ಮಾಡಲಾಯಿತು ಮತ್ತು ಎರಡನೆಯ ಬಲ್ಲಾಳನೂ ಸಹ "ಮಗರ ರಾಜ್ಯ ನಿರ್ಮೂಲವ" (ಮಗರ ರಾಜ್ಯವನ್ನು ನಾಶಮಾಡಿದವ), "ತಾಂಡ್ಯ ರಾಜ್ಯ ಗಜಕೇಸರಿ" (ಪಾಂಡ್ಯ ದೊರೆಗೆ ಆನೆಗೆ ಸಿಂಹವಿದ್ದಂತೆ), ಮತ್ತು "ರಾಜರಾಜ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದಗಳನ್ನು ಹೊತ್ತುಕೊಂಡನು. ರುದ್ರಭಟ್ಟನೂ ಸಹ ತನ್ನ ಜಗನ್ನಾಥ ವಿಜಯದಲ್ಲಿ ಈ ಘಟನೆಯನ್ನು ಎರಡನೆಯ ಬಲ್ಲಾಳನಿಗೆ ರಾಜರಾಜ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದಿನೊಂದಿಗೆ ಉಲ್ಲೇಖಿಸಿದ್ದಾನೆ. ಕಂಚಿ ಮತ್ತು ಶ್ರೀರಂಗಂನ ವಿಚಾರದಲ್ಲಿ ಇದೇ ಮೊದಲ ಬಾರಿಗೆ ವೀರಬಲ್ಲಾಳನು ತಮಿಳುನಾಡಿಗೆ ಪ್ರವೇಶ ಮಾಡಿದುದು. ಇದು ಮುಂದೆ ಎರಡನೆಯ ನರಸಿಂನ ಮತ್ತು ಸೋಮೇಶ್ವರನಿಗೆ ತಮ್ಮ ಹಿರಿಮೆಯನ್ನು ತಮಿಳುನಾಡಿನಲ್ಲಿ ಸ್ಥಾಪಿಸಲು ಒಂದು ಅವಕಾಶವಾಯಿತು.

ಆಡಳಿತದಲ್ಲಿ ಒಳ್ಳೆಯ ತರಬೇತಿಯನ್ನು ಕೊಟ್ಟು ಕ್ರಿ.ಶ.1220ರಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಸುಮಾರು 47 ವರ್ಷಗಳ ಘಟನಾಪೂರ್ವಕವಾದ ಮತ್ತು ಹೊಯ್ಸಳ ವಂಶದ ಕೀರ್ತಿಪತಾಕೆಯನ್ನು ಅದರ ತುಟ್ಟತುದಿಯಲ್ಲಿ ಹಾರಾಡಿಸಿದ ಮೇಲೆ ಕ್ರಿ.ಶ.1220ರಲ್ಲಿ ಎರಡನೆಯ ಬಲ್ಲಾಳನು ಮರಣವನ್ನು ಹೊಂದಿದನು.[19] ಅವನ ರಾಣಿಯರೂ ಕೂಡಾ ಸಾಮ್ರಾಜ್ಯದ ಆಡಳಿತದಲ್ಲಿ ಆಸಕ್ತಿಯನ್ನು ಹೊಂದಿದ್ದರು. ಅವರು ಸಾರ್ವಜನಿಕರ ಒಳಿತಿಗಾಗಿ ಕಾರ್ಯವನ್ನು ಮಾಡುತ್ತಿದರು. ಪಟ್ಟಮಹಿಷಿಯಾದ ಪದ್ಮಾವತಿ ಎಂದು ಹೆಸರಾದ ಪದ್ಮಲಾದೇವಿಯು ನರಸಿಂಹನ ತಾಯಿಯಾಗಿದ್ದಳು ಮತ್ತು ಅವಳು ಬೆಳಗವತಿನಾಡನ್ನು ನೋಡಿಕೊಳ್ಳುತ್ತಿದಳು. ರಾಣಿ ಉಮಾದೇವಿಯು ಧೀರ ಯೋದ್ಧಳಾಗಿದ್ದು ಎರಡು ಬಾರಿ ಸಿಂಡ ರಾಜ್ಯವನ್ನು ಆಕ್ರಮಣವನ್ನು ಮಾಡಿದಳು. ರಾಣಿ ಬೊಮ್ಮಲಾದೇವಿಯು ಯಶಸ್ವೀ ಮಹಿಳೆಯಾಗಿದ್ದು ಅವಳು ಸಂಗೀತ ಮತ್ತು ನೃತ್ಯದಲ್ಲಿ ಪ್ರವೀಣೆಯಾಗಿದ್ದಳು. ಇನ್ನೊಬ್ಬ ರಾಣಿಯಾದ ಚೋಳ ಮಹಾದೇವಿಯು ಕೆಂಬಳನಾಡನ್ನು ರಾಜ್ಯಪಾಲೆಯಾಗಿ ಆಳುತ್ತಿದ್ದಳು. ಅಭಿನವ ಕೇತಾಳದೇವಿಯು ರಾಜಧಾನಿಯಲ್ಲಿ ಪ್ರಸಿದ್ಧವಾದ ಕೇದಾರೇಶ್ವರ ದೇವಾಲಯವನ್ನು ಕಟ್ಟಿಸಿದಳು. ಇತರ ರಾಣಿಯರಾದ ತುಳುವಲಾದೇವಿ, ಬಿಚ್ಚಳಾದೇವಿ ಮತ್ತು ಶಾಂತಳಾದೇವಿಯರು ಸಂಸ್ಕೃತಿಯ ಪ್ರಸಾರದ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಹಿಸಿದರು. ಅವನು ಅಸಂಖ್ಯಾತ ದೇವಾಲಯಗಳು ಮತ್ತು ಕೆರೆಗಳನ್ನು

ಕಟ್ಟಿಸಿದರು ಮತ್ತು ದತ್ತಿಗಳನ್ನು ನೀಡಿದರು. ಅವರು ಸಂಸ್ಕೃತಿಯ ಬೆಳವಣಿಗೆಗೆ ಅಪರವಾದ ಕೊಡುಗೆಗಳನ್ನು ನೀಡಿದರು.

### 5.1.9 ಎರಡನೆಯ ವೀರಬಲ್ಲಾಳನ ಮರಣ

ಮುಂದಾಲೋಚನೆಯುಳ್ಳ ದೊರೆಯು ತನ್ನ ಅನುಭವಶಾಲೀ ಮಗನಾದ ಎರಡನೆಯ ನರಸಿಂಹನಿಗೆ ತನ್ನ ಮರಣದ ಕೆಲವೇ ತಿಂಗಳುಗಳ ಮುಂಚೆ ಪಟ್ಟವನ್ನು ಕಟ್ಟಿದನು. ಬಲ್ಲಾಳನು ತನ್ನ ಕೀರ್ತಿಯ ಉಚ್ಛ್ರಾಯಕಾಲದಲ್ಲಿ ಮರಣವನ್ನಪ್ಪಿದನು. ಅವನ ಮರಣಕ್ಕಾಗಿ ಎಲ್ಲ ಪ್ರಜೆಗಳು ಮತ್ತು ಆಸ್ಥಾನಿಕರು ಬಹಳವಾಗಿಯೇ ಶೋಕಿಸಿದರು. ಅವನ ಸೈನ್ಯಾಧಿಪತಿ ಮತ್ತು ಮಂತ್ರಿಯಾದ ಕುವರ ಲಕ್ಷ್ಮನು ಹಳೆಬೀಡಿನಲ್ಲಿ ಸುಂದರವಾದ ಕಂಭದಮೇಲೆ ವೀರ ಶಾಸನವನ್ನು ಮಾಡಿಸಿ ತನ್ನ ಪತ್ನಿ ಮತ್ತು ಹಿಂಬಾಲಕರೊಂದಿಗೆ ಗರುಡನಾದನು ಇದು ಜನರು ತಮ್ಮ ಕೃತಜ್ಞತೆಗಳನ್ನು ತಮ್ಮ ರಾಜರಿಗೆ ಅರ್ಪಿಸುವ ರೀತಿಯಾಗಿತ್ತು. ಇದು ನಾಯಕೀಯ ಯುಗದಲ್ಲಿ ಒಂದು ತ್ಯಾಗವಾಗಿತ್ತು.

### 5.1.10 ಸಾಧನೆಗಳು

ಎರಡನೆಯ ವೀರಬಲ್ಲಾಳನು ನಿಸ್ಸಂದೇಹವಾಗಿ ಹೊಯ್ಸಳ ವಂಶದಲ್ಲಿ ಬಹುದೊಡ್ಡ ರಾಜನಾಗಿದ್ದನು. ಅವನು ತನ್ನ ಸಾಮರ್ಥ್ಯದ ಪ್ರಭಾವದಿಂದ ತನ್ನ ರಾಜ್ಯವನ್ನು ಸಂಪದ್ಭರಿತ ಸಾಮ್ರಾಜ್ಯವನ್ನಾಗಿ ಮಾಡಿದನು. ಅವನು ನಿರಂತರವಾಗಿ ತನ್ನ ನೆರೆಯವರ ವಿರುದ್ಧ ಯುದ್ಧದಲ್ಲಿ ತೊಡಗಿದ್ದು ಅದರಲ್ಲಿ ಯಶಸ್ಸನ್ನು ಬಹುಮಟ್ಟಿಗೆ ಪಡೆಯುತ್ತಿದ್ದನು. ಅವನ ಆಳ್ವಿಕ ಕಾಲದಲ್ಲಿ ಹೊಯ್ಸಳರ ಖ್ಯಾತಿಯು ತಮಿಳುನಾಡಿಗೂ ಹಬ್ಬಿ "ದಕ್ಷಿಣ ಚಕ್ರವರ್ತಿ" ಎಂಬ ಬಿರುದು ಸಾರ್ಥಕವಾಗಿತ್ತು. ಅವನು ಶಿಕ್ಷಣ, ಕಲೆಗಳು ಮತ್ತು ಧರ್ಮದ ಬಗ್ಗೆ ಅಪಾರವಾದ ಗೌರವವನ್ನು ಇಟ್ಟುಕೊಂಡಿದ್ದನು. ಎರಡನೆಯ ವೀರಬಲ್ಲಾಳನ ಕಾಲದಲ್ಲಿ ಅವನ ಸಾಮ್ರಾಜ್ಯವು ಅಪಾರವಾದ ಐಶ್ವರ್ಯವನ್ನು ಅನುಭವಿಸಿತು. ಎರಡನೆಯ ವೀರಬಲ್ಲಾಳನ ಯುಗವು ಪ್ರಗತಿಯನ್ನು ಕಂಡಿತು ಮತ್ತು ಶಕೆಯ ಆರಂಭವೆನಿಸಿತು.[20]

### 5.2 ಎರಡನೆಯ ವೀರ ನರಸಿಂಹ

ಎರಡನೆಯ ವೀರ ನರಸಿಂಹನು ಪ್ರತಾಪ ನರಸಿಂಹನೆಂದೂ ಹೆಸರಾಗಿದ್ದಾನೆ. ಅವನ ರಾಣಿಯು ಪದ್ಮಲಾ ಮಹಾದೇವಿ. ಅವನು ಕ್ರಿ.ಶ.1183[21]ರಲ್ಲಿ ಹುಟ್ಟಿದನು. ಎರಡನೆಯ ವೀರಬಲ್ಲಾಳನು ಒಬ್ಬ ಸಮರ್ಥ ವಿದ್ವಾಂಸನನ್ನು ರಾಜಕುಮಾರನಿಗೆ ಪಾಠ ಹೇಳಿಕೊಡಲು ನೇಮಿಸಿದನು. ವೀರ ನರಸಿಂಹನು ತನ್ನ ರಾಜ್ಯದ ಆಡಳಿತದಲ್ಲಿ ತನ್ನ ಚಿಕ್ಕ ವಯಸ್ಸಿನಿಂದಲೇ

ಸಹಾಯ ಮಾಡುತ್ತಿದ್ದನು. ಅವನಿಗೆ ಯುದ್ಧಕಲೆಯಲ್ಲಿಯೂ ಯೋಗ್ಯವಾದ ತರಬೇತಿಯನ್ನು ಕೊಡಲಾಗಿತ್ತು. ಯುವರಾಜನಾಗಿದ್ದಾಗಲೇ ಅವನು ಸೈನ್ಯದೊಡನೆ ತಮಿಳುನಾಡಿಗೆ ಹೋಗಿ ಶತೃಗಳನ್ನು ಸೋಲಿಸಿ ಮೂರನೆಯ ರಾಜರಾಜನನ್ನು ಪುನಹ ಸ್ಥಾಪಿಸಿ ಬಂದನು. ಎರಡನೆಯ ಬಲ್ಲಾಳನು ವೀರನರಸಿಂಹನಿಗೆ ಕ್ರಿ.ಶ.1220ರ ಏಪ್ರಿಲ್ 16ರಂದು ಪಟ್ಟಾಭಿಷೇಕವನ್ನು ಮಾಡಿದನು.

ಎರಡನೆಯ ವೀರ ನರಸಿಂಹನ ಆಳ್ವಿಕೆಯು ಅನೇಕ ಘಟನಾವಳಿಯನ್ನು ಕಂಡಿತು. ಸೇವುಣರು ರಾಜ್ಯದ ಉತ್ತರದ ಗಡಿಯಲ್ಲಿ ಬಹಳ ತೊಂದರೆಯನ್ನು ನೀಡುತ್ತಿದ್ದರು. ಅವನು ಈ ಧಾಳಿಗಳನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿದನು. ಈ ಯಾತ್ರೆಯ ನಂತರ ಕ್ರಿ.ಶ.1220[22]ರ ಕೊನೆಯ ವೇಳೆಗೆ ನರಸಿಂಹನು ಮಾಗರ ದೊರೆಯ ಮೇಲೆ ಬಿದ್ದನು. ಚೋಳರ ಸಾಮಂತ-ನಾಗಿದ್ದು ಹೆಸರಿಗೆ ಮಾತ್ರ ರಾಜನಾಗಿದ್ದು ಪಾಂಡ್ಯರ ಜೊತೆ ಸೇರಿಕೊಂದು ಮೂರನೆಯ ರಾಜರಾಜನಿಗೆ ಉಪಟಳವನ್ನು ನೀಡುತ್ತಿದ್ದನು. ಎರಡನೆಯ ನರಸಿಂಹನು ಮಾಗರ ರಾಜನನ್ನು ಸೋಲಿಸಿದನು. ಎರಡನೆಯ ನರಸಿಂಹನ ಈ ಸಾಧನೆಯನ್ನು ಒಂದು ಶಾಸನದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದೆ. ಎರಡನೆಯ ನರಸಿಂಹನು ದೋರಸಮುದ್ರಕ್ಕೆ ಬಹುಷಃ ಕ್ರಿ.ಶ.1221ರ ಕೊನೆಯ ವೇಳೆಗೆ ಹಿಂತಿರುಗಿ ಬಂದನು.

### 5.2.1 ಮೂರನೆಯ ರಾಜೇಂದ್ರನನ್ನು ಸೆರೆಯಿಂದ ಬಿಡಿಸಲು ಎರಡನೆಯ ನರಸಿಂಹನ ಸಹಾಯ

ನರಸಿಂಹನು ಬಹಳ ಕಾಲ ತನ್ನ ರಾಜಧಾನಿಯಲ್ಲಿ ಉಳಿಯಲಾಗಲಿಲ್ಲ. ಕ್ರಿ.ಶ.122ರಲ್ಲಿ ಅವನು ತಮಿಳುನಾಡಿಗೆ ಅನಿವಾರ್ಯವಾಗಿ ಹೋಗಬೇಕಾಯಿತು. ಆ ವೇಳೆಗಾಗಲೇ ಪಾಂಡ್ಯರು, ಕಾಡವರು ಮತ್ತು ಬಾಣ ದೊರೆಗಳು ನೆಪಮಾತ್ರಕ್ಕೆ ಇದ್ದ ಚೋಳರ ಆಧಿಪತ್ಯವನ್ನು ಕೊನೆಗೊಳಿಸುವ ಸಲುವಾಗಿ ಒಂದು ಒಪ್ಪಂದಕ್ಕೆ ಬಂದರು ಮತ್ತು ಮೂರನೆಯ ರಾಜರಾಜನ ಮೇಲೆ ಆಕ್ರಮಣವನ್ನು ಮಾಡಿದರು. ಮೂರನೆಯ ರಾಜರಾಜನು ಯುದ್ಧರಂಗದಿಂದ ಓಡಿಹೋಗಲು ಪ್ರಯತ್ನಿಸುತ್ತಿದ್ದಾಗ ಕಾಡವ ಕಪ್ಪೆತುಂಜಿಗನು ಅವನನ್ನು ಕಾಂಚಿಯಿಂದ 30 ಮೈಲು ದೂರವಿರುವ ತೆಲ್ಲೂರು ಎಂಬಲ್ಲಿ ವಶಪಡಿಸಿಕೊಂಡನು. ಬಹುಶಃ ಅವನು ಹೊಯ್ಸಳರ ಬಳಿಗೆ ಕ್ಷೇಮವಾಗಿ ಉಳಿಯುವುದಕ್ಕಗಿ ಹೋಗುತ್ತಿದ್ದನು. ಅವನು ಕೂಡಲೇ ಎರಡನೆಯ ನರಸಿಂಹನನ್ನು ಸಹಾಯಕ್ಕಾಗಿ ಕೇಳಿಕೊಂಡನು. ನರಸಿಂಹನೂ ಕೂಡಲೇ ಒಂದು ಸೈನ್ಯವನ್ನು ತಮಿಳುನಾಡಿಗೆ ಕಳುಹಿಸಿದನು. ಆದರೆ ಈ ಸೈನ್ಯವು ಮೂರನೆಯ ರಾಜರಾಜನಿಗೆ ರಕ್ಷಣೆಯನ್ನು ಕೊಡುವುದರಲ್ಲಿ ವಿಫಲವಾಗಿದ್ದರಿಂದ ಸ್ವತಹ ನರಸಿಂಹನೇ ಕಾಂಚೀ ಪ್ರದೇಶಕ್ಕೆ ಬಂದನು. ಅವನು

ಆದಿಜೈಮನ್‌ನನ್ನು, ಕಾಡವರ ಸೈನ್ಯವನ್ನು ಸೋಲಿಸಿದನು ಮತ್ತು ಚೋಳ ದೊರೆಯನ್ನು ಬಿಡಿಸಿದನು. ಅವನು ತಮಿಳುನಾಡಿನಲ್ಲಿ ಒಂದು ಹೊಯ್ಸಳ ಸೈನ್ಯವನ್ನು ಚೋಳ ದೊರೆಯ ಸಹಾಯಕ್ಕಾಗಿ ಇರಿಸಿದನು. ಹೊಯ್ಸಳ ಚಕ್ರವರ್ತಿಯು ಚೋಳ ದೊರೆಯಿಂದ ಅಪಾರವಾದ ಧನರಾಶಿಯನ್ನು ಸಂಗ್ರಹಿಸಿಕೊಂಡು ದೋರಸಮುದ್ರಕ್ಕೆ ಹಿಂತಿರುಗಿದನು.

### 5.2.2 ಎರಡನೆಯ ನರಸಿಂಹ ಮತ್ತು ಸೇವುಣರು

ಎರಡನೆಯ ನರಸಿಂಹನು ತಮಿಳುನಾಡಿನಲ್ಲಿ ರಾಜರಾಜನ ಶತೃಗಳ ವಿರುದ್ಧ ಹೋರಾಟ-ದಲ್ಲಿ ನಿರತನಾಗಿದ್ದಾಗ ಸೇವುಣರು ಹೊಯ್ಸಳ ಶಕ್ತಿಯನ್ನು ನಾಶ ಮಾಡಲು ಒಂದು ವಿಸ್ತಾರವಾದ ಪ್ರಯತ್ನವನ್ನು ಮಾಡಿದರು. ಸಿಂಘಣನ ಉತ್ತರಾಧಿಕಾರಿಯಾದ ಕೃಷ್ಣ ಅಥವ ಕಂದರ ಅಥವ ಕಂಧರನು ಹೊಯ್ಸಳರ ಪ್ರದೇಶದ ಮೇಲೆ ಧಾಳಿಯನ್ನು ಮಾಡಿದನು ಮತ್ತು ತುಂಗಭದ್ರ ಪ್ರದೇಶವನ್ನು ವಶಪಡಿಸಿಕೊಂಡನು. ಅವನ ಬಯಕೆಯು ದೋರಸಮುದ್ರದವರೆಗೆ ಹೋಗಿ ಅದನ್ನು ಲೂಟಿ ಹೊಡೆಯಬೇಕೆಂಬುದಾಗಿತ್ತು. ಆದರೆ ಕೂಡಲೇ ಎರಡನೆಯ ನರಸಿಂಹನು ತನ್ನ ಸೈನ್ಯವನ್ನು ಶತೃವಿನ ಕಡೆ ನುಗ್ಗಿಸಿ ಸೇವುಣರನ್ನು ಸೋಲಿಸಿದನು. ನರಸಿಂಹನ ಶತೃವನ್ನು ಸೋಲಿಸಿದ ಈ ಸಾಹಸೀ ಕಾರ್ಯವನ್ನು ಸಾವಿರಾರು ಶಾಸನಗಳು ವರ್ಣಿಸಿವೆ. ನರಸಿಂಹನು ಸೇವುಣರ ಸೈನ್ಯಾಧಿಪತಿಗಳಾದ ವಿಕ್ರಮಪಾಲ ಮತ್ತು ಪರುಶರೂ ಸೇರಿದಂತೆ ಅನೇಕ ವೀರರುಗಳನ್ನು ಕೊಂದನೆಂದು ಹೇಳಲಾಗುತ್ತಿದೆ. ತುಂಗಭದ್ರದ ನೀರು ರಕ್ತದಿಂದ ತುಂಬಿತ್ತು ಎಂದು ಹೇಳಲಾಗಿದೆ. ನರಸಿಂಹನ ಸೈನ್ಯಾಧಿಕಾರಿಯಾದ ಅಡ್ಡಯದ ಹರಿಹರನೂ ಕೂಡಾ ಈ ಯುದ್ಧದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿದ್ದನು. ನರಸಿಂಹನ ಇನ್ನೊಬ್ಬ ಸೈನ್ಯಾಧಿಪತಿಯಾದ ಪೊಳವಲನು ಸೇವುಣರ ವಿರುದ್ಧ ಅತ್ಯಂತ ಶೌರ್ಯದಿಂದ ಹೋರಾಡಿ ಸೇವುಣ ಅನೇಕ ಸೈನಿಕರನ್ನು ಕೊಂದನು. ಸೇವುಣರ ಸೈನ್ಯವು ದೇವಗಿರಿಯ ಕಡೆಗೆ ಓಡಿಹೋಯಿತು. ಆದರೆ ನರಸಿಂಹನು ತಮಿಳುನಾಡಿನಲ್ಲಿ ಕಾರ್ಯನಿರತನಾಗಿದ್ದರಿಂದ ಸೇವುಣರ ಸೈನ್ಯವನ್ನು ಹಿಂಬಾಲಿಸಿಕೊಂಡು ಹೋಗಲಾಗಲಿಲ್ಲ. ತುಂಗಭದ್ರವು ಹೊಯ್ಸಳರ ಸಾಮ್ರಾಜ್ಯಕ್ಕೆ ಉತ್ತರದ ಗಡಿಯಾಯಿತು. ಆ ಭೀಕರ ಘರ್ಷಣೆಯ ಕಾರಣವಾಗಿ ಸೇವುಣರು ಎರಡನೆಯ ನರಸಿಂಹನು ಆಳುತ್ತಿರುವವರೆಗೂ ಮತ್ತೆ ಹೊಯ್ಸಳರ ಜೊತೆ ಘರ್ಷಣೆಗೆ ಇಳಿಯಲಿಲ್ಲ. ಎರಡನೆಯ ನರಸಿಂಹನು ತಮಿಳುನಾಡಿನ ರಾಜಕೀಯದಲ್ಲಿ ನಿರತನಾಗಿದ್ದುದರಿಂದ ಕೆಲವು ಮುಖ್ಯ ಸ್ಥಳಗಳು ಸೇವುಣರ ಅಧೀನದಲ್ಲೇ ಉಳಿಯಿತು.

### 5.2.3 ಚೋಳ ಸಾಮ್ರಾಜ್ಯದಲ್ಲಿ ಬಿಕ್ಕಟ್ಟು ಮತ್ತು ಎರಡನೆಯ ನರಸಿಂಹನ ಮಧ್ಯಪ್ರವೇಶ

ನರಸಿಂಹನು ಮತ್ತೆ ಅನಿವಾರ್ಯವಾಗಿ ತಮಿಳುನಾಡಿಗೆ ಹೋಗಬೇಕಾಯಿತು. ಚೋಳರ ಸಹಾಯಕ್ಕಾಗಿ ಅಲ್ಲಿ ಒಂದು ಸಣ್ಣ ಸೈನ್ಯವನ್ನು ಇರಿಸಿದ್ದರೂ ನರಸಿಂಹನೇ ಅಲ್ಲಿಗೆ ಹೋಗಬೇಕಾಯಿತು. ಮತ್ತೆ ಪಾಂಡ್ಯ ದೊರೆ ಮಾರವರ್ಮನ್ ಸುಂದರಪಾಂಡ್ಯನು ಕಾಡವರು ಮತ್ತು ಮಗರರೊಡನೆ ಸಂಧಾನವನ್ನು ಮಾಡಿಕೊಂಡು ತೆಲುಗು ಮುಖ್ಯಸ್ಥನಾದ ತಿಕ್ಕ ಗಂಡ ಗೋಪಾಲನ ಸಹಾನುಭೂತಿ ಮತ್ತು ಬೆಂಬಲವನ್ನು ಗಳಿಸಿಕೊಂಡನು. ಅವರು ಚೋಳ ದೊರೆಯ ಮೇಲೆ ಆಕ್ರಮಣವನ್ನು ಮಾಡಿದರು ಮತ್ತು ಚೋಳ ದೊರೆಯುಎರಡನೆಯ ಬಾರಿಗೆ ತನ್ನ ಕ್ಷೇಮಕ್ಕಾಗಿ ಓಡಿಹೋದನು. ಮತ್ತೆ ಅವನನ್ನು ಕಡವ ಮುಖ್ಯಸ್ಥನು ವೃದ್ಧಾಚಲಂನಿಂದ ಹದಿಮೂರು ಮೈಲು ದೂರವಿರುವ ಸೆಂದಲ್ ಮಂಗಳಮ್ ಬಳ ಸೆರೆ ಹಿಡಿದನು. ಈ ಘಟನೆಯನ್ನು ಗದ್ಯಕಾಮಾಮೃತದಲ್ಲಿ ಉಲ್ಲೇಖಿಸಲಾಗಿದೆ. ಕೆಲವು ಶಾಸನಗಳೂ ಸಹ ಈ ಉಲ್ಲೇಖವನ್ನು ಮಾಡಿವೆ.

ನರಸಿಂಹನು ಚೋಳ ದೊರೆಗೆ ಸಹಾಯ ಮಾಡಲು ನಿರ್ಧರಿಸಿದನು. ಅವನು ಮೊದಲು ಮಾಗರ ರಾಜ್ಯದ ಮೇಲೆ ಆಕ್ರಮಣವನ್ನು ಮಾಡಿದನು ಮತ್ತು ದೊರೆ, ಹೆಂಗಸರು ಮತ್ತು ಧನವನ್ನು ವಶಪಡಿಸಿಕೊಂಡು ದೂರದ ಕಣ್ಣಾನೂರಿಗೆ ತೆರಳಿದನು. ಅವನು ತನ್ನ ಸೈನಾಧಿಪತಿಗಳನ್ನು ಕಾಡವರ ವಿರುದ್ಧ ಚೋಳರ ದೊರೆಯನ್ನು ರಕ್ಷಿಸಲು ಕಳುಹಿಸಿದನು. ಅವನು ಪಾಂಡ್ಯರ ದೊರೆಯ ಮೇಲೆ ಧಾಳಿ ಮಾಡಿದನು. ನರಸಿಂಹನ ಸೈನ್ಯಾಧಿಪತಿಗಳಾದ ಅಪ್ಪಯ್ಯ ಮತ್ತು ಗೋಪಣ್ಣರು ಕೊಪ್ಪೆರುಂಜಿರನ್ನು ಸೋಲಿಸಿದರು ಮತ್ತು ಅವರು ಚೋಳ ದೊರೆಯನ್ನು ಬಿಡುಗಡೆ ಮಾಡಲು ಒಪ್ಪಿದರು. ಹೊಯ್ಸಳ ಸೈನ್ಯಾಧಿಪತಿಗಳು ಚೋಳ ದೊರೆಯನ್ನು ಅವನ ರಾಜಧಾನಿಗೆ ತಲುಪವವರೆಗೆ ಜೊತೆಯಲ್ಲೇ ಇದ್ದರು. ರಾಜರಾಜನು ಈ ಸೈನ್ಯಾಧಿಪತಿಗಳಿಗೆ ಬಹುಮೂಲ್ಯವಾದ ಕಾಣಿಕೆಗಳನ್ನು ಕೊಟ್ಟನು ಮತ್ತು ಹೊಯ್ಸಳರ ಈ ಸಾಧನೆಯನ್ನು ನೆನಪಿನಲ್ಲಿಟ್ಟುಕೊಳ್ಳುವ ಸಲುವಾಗಿ ಒಂದು ಶಾಸನವನ್ನು ಬರೆಸಿದನು. ಈ ಘಟನೆಯ ಸ್ಮರಣಾರ್ಥವಾಗಿ ಹೊಯ್ಸಳ ಸೈನ್ಯಾಧಿಪತಿಗಳೂ ಕೂಡಾ ಕಾಂಚಿಯ ಅಲ್ಲನಾಥನ ದೇವಾಲಯಕ್ಕೆ ಸ್ವಲ್ಪ ಭೂಮಿಯನ್ನು ನೀಡಿದರು.

ಈ ಸಮಯದಲ್ಲಿ ನರಸಿಂಹನು ಪಾಂಡ್ಯರ, ಬಾಣ ಮತ್ತು ಕಾಡವರ ಸಂಯುಕ್ತ ಬಲದ ಮೇಲೆ ಆಕ್ರಮಣವನ್ನು ಮಾಡಿದನು. ಗದ್ಯಕಾಮಾಮೃತದಲ್ಲಿ ಉಲ್ಲೇಖಿಸಿರುವಂತೆ ಕೆಲವು ವಿದೇಶೀ ಸೈನಿಕರೂ ಕೂಡಾ ಪಾಂಡ್ಯ ಮತ್ತು ಮಿತ್ರಕೂಟದ ಜೊತೆ ಹೋರಾಡಿದರು. ಆದರೆ ಈ

ಮಿತ್ರಕೂಟದ ಬಗ್ಗೆ ವಿವರಗಳು ದೊರೆತಿಲ್ಲ. ಅವರು ಬಹುಶಃ ಚೀನೀಯರು ಅಥವ ಮುಸ್ಲಿಮ್ ಸೈನಿಕರಾಗಿರಬೇಕು. ನರಸಿಂಹನು ಅವುಗಳಿಗೆ ಹೀನಾಯವಾದ ಸೋಲನ್ನುಣಿಸಿದನು. ಪಾಂಡ್ಯ ದೊರೆ ಮತ್ತು ಮಾರವರ್ಮ ಮತ್ತು ಅವರ ಮಿತ್ರಕೂಟವು ನರಸಿಂಹನಿಗೆ ಶರಣಾದರು ಮತ್ತು ಅವರ ಸಾಮಂತರಾದರು. ಈ ಮಹಾವಿಜಯದ ನಂತರ ನರಸಿಂಹನು ದೂರದ ಸೇತುವಿಗೆ ಬಂದು ಅಲ್ಲಿ ವಿಜಯಸ್ಥಂಭವೊಂದನ್ನು ಕಟ್ಟಿಸಿದನು. ಅವನು ತಮಿಳುನಾಡಿನಲ್ಲಿ ಕೆಲವು ಕಾಲ ಇದ್ದು ಆ ರಾಜ್ಯದ ಆಡಳಿತ ಮತ್ತಿತರ ವಿಷಯಗಳ ಕಡೆ ಗಮನ ಹರಿಸಿದನು.

ಈ ಸಹಾಯದ ಫಲವಾಗಿ ಎರಡನೆಯ ನರಸಿಂಹನು ಶ್ರೀರಂಗಂನ ಸುತ್ತ ವಿಶಾಲವಾದ ಮೂರನೆಯ ರಾಜರಾಜನಿಂದ ಭೂಮಿಯನ್ನು ಪಡೆದನು. ಶ್ರೀರಂಗಂನ ಬಳಿ ಇರುವ ಕಣ್ಣಾನೂರು ಅಥವ ವಿಕ್ರಮಪುರವು ತಮಿಳುನಾಡಿನಲ್ಲಿ ಹೊಯ್ಸಳರ ಕೇಂದ್ರ ಸ್ಥಾನವಾಯಿತು. ಅಲ್ಲಿ ಒಂದು ಸೈನ್ಯವನ್ನು ಇರಿಸಲಾಯಿತು. ರಾಜರಾಜನ ಹಿತಾಸಕ್ತಿಯನ್ನು ಕಾಪಾಡಲು ಹೊಯ್ಸಳರ ರಾಜಕುಮಾರನಾದ ಸೋಮೇಶ್ವರನು ತನ್ನ ತಂದೆ ಎರಡನೆಯ ನರಸಿಂಹನ ಸಹಾಯಕನಾಗಿ ಇದ್ದನು. ಈ ರೀತಿ ಚೋಳ ರಾಜ್ಯದ ಮೇಲೆ ಹೊಯ್ಸಳರ ರಕ್ಷಣಾ ಛತ್ರಿಯು ಸಂಪೂರ್ಣ-ವಾಯಿತು.

### 5.2.4 ಎರಡನೆಯ ನರಸಿಂಹನ ಆಲೋಚನೆಗಳು

ನರಸಿಂಹನು ಕ್ರಿ.ಶ.1236[23]ರಲ್ಲಿ ಮರಣ ಹೊಂದಿದನು. ಡೆರ್ರೆಟ್‌ರವರು ಎರಡನೆಯ ನರಸಿಂಹನ ಮರಣದೊಂದಿಗೆ ಹೊಯ್ಸಳ ಚರಿತ್ರೆಯ ಸುವರ್ಣಯುಗವು ಮುಕ್ತಾಯವಾಯಿತು ಎಂದು ಹೇಳುತ್ತಾರೆ. ಎರಡನೆಯ ನರಸಿಂಹನು ತನ್ನ ಮಹಾನ್ ತಂದೆಯ ಮಹಾನ್ ಮಗನಾಗಿದ್ದನು. ಅವನು ತನ್ನ ಸಾಮ್ರಾಜ್ಯವನ್ನು ಬಹಳ ಚೆನ್ನಾಗಿ ಇಟ್ಟುಕೊಂಡಿದ್ದನು. ಅವನು ಚೋಳರ ಶತೃಗಳನ್ನು ಕನಿಷ್ಠಪಕ್ಷ ಐದು ಬಾರಿ ಸೋಲಿಸಿ ತಮಿಳುನಾಡಿಗೆ ರಕ್ಷಾಕವಚವನ್ನು ಸಂಪೂರ್ಣಗೊಳಿಸಿದನು. ಹೊಯ್ಸಳ ಮತ್ತು ಚೋಳ ವಂಶದವರು ವೈವಾಹಿಕ ಸಂಬಂಧಗಳಿಂದ ಆಪ್ತರಾಗಿದ್ದರು.

ನರಸಿಂಹನ ಕಾಲದಲ್ಲಿ ಅತಿಹೆಚ್ಚು ಧಾರ್ಮಿಕ ಸ್ವಾತಂತ್ರವಿದ್ದು ಹರಿ ಮತ್ತು ಹರನ ದೇವಾಲಯಗಳನ್ನು ಕಟ್ಟಿಸಲಾಯಿತು. ಅಮಿತಯ್ಯ ದಂಡನಾಯಕನು ಅಜ, ಹರಿ ಮತ್ತು ಹರನಿಗಾಗಿ ಚನ್ನರಾಯಪಟ್ಟನದ ತಾಲ್ಲೂಕಿನ ಶಿವಾರದಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದನು, ನರಸಿಂಹನ ಆಳ್ವಿಕೆಯ ಕಾಲದಲ್ಲಿ ರಾಜ್ಯದಲ್ಲಿ ಶಾಂತಿ ಮತ್ತು ಐಶ್ವರ್ಯವು ತುಂಬಿ

ತುಳುಕಾಡುತಿತ್ತು. ವಾಣಿಜ್ಯ ಮತ್ತು ವ್ಯಾಪಾರಗಳು ಅಭಿವೃದ್ಧಿಗೊಂಡವು. ಕೇರಳದ ವ್ಯಾಪಾರಿಗಳಾದ ದಾಮೋದರಶೆಟ್ಟಿ ಮತ್ತು ಕುಂಜಣಾಂಚಿಯವರು ಎರಡನೆಯ ನರಸಿಂಹನ ವಿಶ್ವಾಸ ಮತ್ತು ನಂಬಿಕೆಗಳನ್ನು ಗಳಿಸಿಕೊಂಡಿದ್ದರು. ಈ ಅವಧಿಯು ಅನೇಕ ಸುಂದರ ದೇವಾಲಯಗಳಿಗಾಗಿ ಪ್ರಸಿದ್ಧಿಯನ್ನು ಹೊಂಡಿತು. ಅನೇಕ ದೇವಾಲಯಗಳು ಕಟ್ಟಲ್ಪಟ್ಟವು. ಅವನು ಹರಿಹರೇಶ್ವರವನ್ನು ಹರಿಹರದಲ್ಲಿ ಮತ್ತು ಬೆಳ್ಳೂರಿನಲ್ಲಿ ಮಾಲಿಂಗೇಶ್ವರ, ಹಾರನಹಳ್ಳಿಯಲ್ಲಿ ಸೋಮೇಶ್ವರ, ಮತ್ತು ಅಲ್ಲೇ ಕೇಶವ ದೇವಾಲಯಗಳು, ಬಸರಾಳನಲ್ಲಿ ಮಲ್ಲಿಕಾರ್ಜುನ ದೇವಾಲಯ ಇವುಗಳು ಎರಡನೆಯ ನರಸಿಂಹನ ಕಾಲದಲ್ಲಿ ಕಟ್ಟಿಸಿದ ಮುಖ್ಯ ದೇವಾಲಯಗಳು.

ಉಮಾದೇವಿ ಮತ್ತು ಕಾಳಲಾದೇವಿಯರು ಎರಡನೆಯ ನರಸಿಂಹನ ಇಬ್ಬರು ರಾಣಿಯರಾಗಿದ್ದರು. ಸೋಮೇಶ್ವರನು ರಾಣಿ ಕಾಳಲಾದೇವಿ ಮತ್ತು ನರಸಿಂಹ ಮಗನಾಗಿದ್ದನು. ನರಸಿಂಹನು ಅನೇಕ ಬಿರುದುಗಳಾದ ಸಮಸ್ತ ಭುವನಾಶ್ರಯ, ಪರಮೇಶ್ವರ ಮತ್ತು ನಿಸಾಂಕ ಪ್ರತಾಪ ಚಕ್ರವರ್ತಿ ಇವುಗಳನ್ನು ಅನುಭವಿಸಿದನು. ಅವನ ಮರಣಾನಂತರ ಅವನ ಮಗನಾದ ಸೋಮೇಶ್ವರನು ಕ್ರಿ.ಶ.1236ರಲ್ಲಿ ಪಟ್ಟಕ್ಕೆ ಬಂದನು.

ಎರಡನೆಯ ಬಲ್ಲಾಳನು ಅವನ ತಂದೆ ಯ ವಿರುದ್ಧದ ಯಶಸ್ವೀ ದಂಗೆಯ ನಂತರ ಅಧಿಕಾರಕ್ಕೆ ಬಂದನು. ಅವನನ್ನು ಹೊಯ್ಸಳ ವಂಶದ ಬಹುದೊಡ್ಡ ರಾಜನೆಂದು ಪರಿಗಣಿಸ-ಲಾಗುತ್ತದೆ. ಅವನು ಕ್ರಿ.ಶ.1173[24]ರಿಂದ 1220ರ ವರೆಗೆ ಆಳದನು. ಆಂತರಿಕ ಯುದ್ಧದ ಸಮಯದಲ್ಲಿ ಅನೇಕ ಸಾಮಂತರು ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಎರಡನೆಯ ಬಲ್ಲಾಳನು ಈ ಎಲ್ಲ ಸಾಮಂತರುಗಳಿಗೆ ಶಿಕ್ಷೆಯನ್ನು ಕೊಟ್ಟು ರಾಜ್ಯದಲ್ಲಿ ಶಾಂತಿ ಮತ್ತು ವ್ಯವಸ್ಥೆಯನ್ನು ಕಾಪಾಡಿಕೊಂಡನು. ಆಗಿನ ಚಾಳುಕ್ಯ ಸಾಮ್ರಾಜ್ಯದ ಪರಿಸ್ಥಿತಿಯೂ ಕೂಡಾ ಹೊಯ್ಸಳರಿಗೆ ತಮ್ಮ ಸಾಮ್ರಾಜ್ಯವನ್ನು ಉತ್ತರದಲ್ಲಿ ಕೃಷ್ಣಾದವರೆಗೆ ವಿಸ್ತರಿಸಲು ಅವಕಾಶ ಮಾಡಿಕೊಟ್ಟಂತಿತ್ತು. ಕಲ್ಯಾಣದ ಚಾಳುಕ್ಯರ ಸಾಮಂತರಾಗಿದ್ದ ಕಲಚೂರ್ಯರು ಅವರನ್ನು ಧಿಕ್ಕರಿಸಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಕಲಚೂರ್ಯ ಬಿಜ್ಜಳನು ಕ್ರಿ.ಶ.1156[25]ರಿಂದ 1167ರ ವರೆಗೆ ಆಳದನು. ಕಲಚೂರ್ಯರ ಆಳ್ವಿಕೆಯು ಬಹಳ ಕಾಲ ಇರಲಿಲ್ಲ. ಕ್ರಿ.ಶ.1154[26]ರ ವೇಳೆಗೆ ಚಾಳುಕ್ಯರ ನಾಲ್ಕನೆಯ ಸೋಮೇಶ್ವರನು ಕಲಚೂರ್ಯರ ಅಧಿಕಾರವನ್ನು ಕಿತ್ತೊಗೆದು ತನ್ನ ಆಧಿಪತ್ಯವನ್ನು ಸ್ಥಾಪಿಸಿದನು. ದುರದೃಷ್ಟವಶಾತ್ ನಾಲ್ಕನೆಯ ಸೋಮೇಶ್ವರನೂ ಬಹಳ ಕಾಲ ಆಳಲಿಲ್ಲ. ಏಕೆಂದರೆ ಅವನಿಗೆ ಎರಡೂ ವಂಶಗಳಿಂದ ಒತ್ತಡವಿತ್ತು. ಉತ್ತರದಿಂದ ಸೇವುನರು ಚಾಳುಕ್ಯರ ಪ್ರದೇಶಗಳನ್ನು ಗೆಲ್ಲಲು ಪ್ರಯತ್ನಿಸುತಿದ್ದರು. ದಕ್ಷಿಣದ ಕಡೆಯಿಂದ

ಹೊಯ್ಸಳರು ಕುಂತಲ ಪ್ರದೇಶವನ್ನು ಆಕ್ರಮಿಸಲು ಪ್ರಯತ್ನಿಸುತ್ತಿದ್ದರು. ಕೊನೆಗೆ ಕ್ರಿ.ಶ.1189[27]ರಲ್ಲಿ ನಾಲ್ಕನೆಯ ಸೋಮೇಶ್ವರ ಮತ್ತು ಅವನ ಸೈನ್ಯಾಧಿಪತಿ ಬ್ರಹ್ಮನು ಸೋತರು. ಸೋಮೇಶ್ವರನು ರಾಜಧಾನಿಯಿಂದ ಓಡಿಹೋದನು. ಕಲ್ಯಾಣವು ಎರಡನೆಯ ಬಲ್ಲಾಳನಿಂದ ಆಕ್ರಮಿಸಲ್ಪಟ್ಟಿತು. ಇದು ಚಾಳುಕ್ಯರ ಅಂತ್ಯವಾಯಿತು. ಎರಡನೆಯ ಬಲ್ಲಾಳನು ತನ್ನ ರಾಜಧಾನಿಗೆ ಹಿಂತಿರುಗಿದ ಕೂಡಲೇ ಬಲ್ಲಾಳನ ಹಿರಿಮೆಗೆ ಸೇವುಣ ರಾಜ ಭಿಲ್ಲಮನು ಸವಾಲು ಹಾಕಿದನು. ಐದನೆಯ ಭಿಲ್ಲಮನು ಕಲ್ಯಾಣವನ್ನು ಗೆದ್ದು ಮತ್ತೆ ಮುಂದುವರೆದನು. ಅವನು ಸೊರಟೂರಿಗೆ ಬಂದನು. ಅಲ್ಲಿ ನಿರ್ಣಾಯಕ ಯುದ್ಧವು ನಡೆಯಿತು. ಕೊನೆಯಲ್ಲಿ ಭಿಲ್ಲಮನ ಸೈನ್ಯವು ಎರಡನೆಯ ಬಲ್ಲಾಳನ ಸೈನ್ಯದಿಂದ ಸೋತಿತು. ಆಗ ಈ ಸೈನ್ಯವು ಲೊಕ್ಕುಂಡಿಗೆ ಓಡಿತು. ಬಲ್ಲಾಳನ ಸೈನ್ಯವು ಭಿಲ್ಲಮನ ಸೈನ್ಯವನ್ನು ಹಿಂಬಾಲಿಸಿಕೊಂಡು ಹೋಗಿ ಭಿಲ್ಲಮನನ್ನು ಮತ್ತು ಅವನ ಸೈನ್ಯಾಧಿಪತಿಯನ್ನು ಕೊಂದಿತು. ಹೀಗೆ ಕುಂತಲ ಪ್ರದೇಶದ ಮೇಲೆ ಹೊಯ್ಸಳರ ಅಧಿಕಾರವು ಸ್ಥಾಪಿತವಾಯಿತು.

ಬಲ್ಲಾಳನು ತಮಿಳುನಾಡಿನ ರಾಜಕೀಯದಲ್ಲಿ ಮಧ್ಯೆ ಪ್ರವೇಶಿಸಿದನು. ಈ ಸಮಯಕ್ಕೆ ಚೋಳರು ಬಹಳ ದುರ್ಬಲರಾಗಿದ್ದರು. ಪಾಂಡ್ಯರು ಮೂರನೆಯ ರಾಜರಾಜನ ಮೇಲೆ ಧಾಳಿಯನ್ನು ಮಾಡಿದರು. ಚೋಳರು ಬಲ್ಲಾಳನನ್ನು ಸಹಾಯಕ್ಕಾಗಿ ಕೇಳಿಕೊಂಡರು. ಇದು ಚೋಳ ರಾಜ್ಯದ ಮೇಲೆ ಹೊಯ್ಸಳರಿಗೆ ರಕ್ಷಣಾ ಛತ್ರಿಯನ್ನು ಕೂರಿಸಲು ದಾರಿಯಾಯಿತು. ಹಾಗೆಯೇ ಸಂಸ್ಕೃತಿಯ ಬೆಳವಣಿಗೆಗೆ ಬಹು ದೊಡ್ಡ ಸಹಾಯವಾಯಿತು. ಈ ಸಾಮ್ರಾಜ್ಯವು ಹಿಂದೆಂದೂ ಕೇಳದ ರೀತಿಯಲ್ಲಿ ಸಂಪದ್ಭರಿತವಾಯಿತು. ಅನೇಕ ದೇವಾಲಯಗಳು ಕಟ್ಟಲ್ಪಟ್ಟವು. ಎರಡನೆಯ ಬಲ್ಲಾಳನು ನಿಸ್ಸಂದೇಹವಾಗಿ ಹೊಯ್ಸಳ ವಂಶದ ಬಹುದೊಡ್ಡ ದೊರೆಯಾಗಿದ್ದನು. ಎರಡನೆಯ ವೀರಬಲ್ಲಾಳನ ನಂತರ ಅವನ ಮಗ ವೀರ ನರಸಿಂಹನು ಪಟ್ಟಕ್ಕೆ ಬಂದನು. ಅವನ ತಂದೆಯಂತೆಯೇ ಅವನೂ ಕೂಡ ತನ್ನ ಸಮಕಾಲೀನ ರಾಜರುಗಳೊಂದಿಗೆ ಹೋರಾಟವನ್ನು ಮಾಡಿದನು. ಚೋಳರ ಹಿತಾಸಕ್ತಿಯನ್ನು ಕಾಪಾಡಲು ತಮಿಳ್ನಾಡನ್ನೂ ಸಹ ಇವನು ರಕ್ಷಿಸಿದನು. ಎರಡನೆಯ ನರಸಿಂಹನ ಆಳ್ವಿಕೆಯ ಕೊನೆಯೊಂದಿಗೆ ಹೊಯ್ಸಳರ ಚರಿತ್ರೆಯಲ್ಲಿ ವೈಭವೋಪೇತ ಕಾಲವೂ ಕೂಡಾ ಮುಗಿಯಿತು.

## ಅಡಿಟಿಪ್ಪಣಿಗಳು

1) MAR, 1916, p.53.
2) MAR, 1912-13, p.36
3) Ibid
4) Ibid BI.118
5) Ibid, Kd, 139
6) MAR, 1911-12, p.42
7) EC IV, HS, 111
8) EC IV< Hs, 20
9) EC I, Cg 33-70
10) EC V, Hn 162
11) EC V, Cn 220
12) EC XII, Tp.31
13) EC XII, CK, 36
14) EC 11, SB, 327
15) EC, XII, CK, 36
16) Ibid, 21-22
17) Ibid BI, 137, 175
18) Ibid, BI, 137, 178
19) MAR, 1926, p.51
20) EC V, BI, 137
21) EC XI, Cd, 13
22) Ibid, Cd, 33
23) EC, XI, Ed.33
24) Ibid Dg. 44
25) EC VI, Mg 4
26) EC XI, Cd, 3d
27) Ibid, HK, 4

# ಅಧ್ಯಾಯ–6

# ಹೊಯ್ಸಳರ ರಾಜ ವಿಭಜನೆ ವೀರ ಸೋಮೇಶ್ವರ, ರಾಮನಾಥ, ಮೂರನೆಯ ನರಸಿಂಹ ಮತ್ತು ಹೊಯ್ಸಳರ ಅವನತಿ ಪ್ರಾರಂಭ

6.1 ವೀರ ಸೋಮೇಶ್ವರ

- 6.1.1 ವೀರ ಸೋಮೇಶ್ವರನ ಜೀವನ ಯಾತ್ರೆ ಮತ್ತು ಒಪ್ಪಿಗೆ
- 6.1.2 ವೀರ ಸೋಮೇಶ್ವರನ ಮುಖ್ಯ ಸ್ಥಳವಾಗಿ ಕಣ್ಣಾನೂರು
- 6.1.3 ಚೋಳ ಸಾಮ್ರಾಜ್ಯದ ಬಗೆಗೆ ತಂದೆಯವರ ನೀತಿಯ ಮುಂದುವರಿಕೆ
- 6.1.4 ಸೇವುಣರ ವಿರುದ್ಧ ಯುದ್ಧ
- 6.1.5 ಹೊಯ್ಸಳರು ಮತ್ತು ಪಾಂಡ್ಯರು
- 6.1.6 ಹೊಯ್ಸಳ ಮತ್ತು ಪಾಂಡ್ಯರ ಮೈತ್ರಿಯ ಬಗ್ಗೆ ಚೋಳರ ಅತೃಪ್ತಿ
- 6.1.7 ಹೊಯ್ಸಳರ ಮತ್ತು ಪಾಂಡ್ಯರ ನಡುವಣ ಸಂಬಂಧದಲ್ಲಿ ಅಪಶೃತಿ
- 6.1.8 ತಮಿಳುನಾಡಿನಲ್ಲಿ ಬದಲಾಗುತ್ತಿರುವ ಮೈತ್ರಿಗಳಿಂದ ಉಂಟಾಗುವ ಪರಿಣಾಮಗಳು
- 6.1.9 ಹೊಯ್ಸಳ ಸಾಮ್ರಾಜ್ಯದ ವಿಭಜನೆ
- 6.1.10 ವೀರ ಸೋಮೇಶ್ವರನ ಆಳ್ವಿಕೆ ಒಂದು ನೋಟ

6.2 ರಾಮನಾಥ

6.3 ಉಪಸಂಹಾರ

6.4 ಮೂರನೇ ನರಸಿಂಹ

# ಅಧ್ಯಾಯ–6
# ಹೊಯ್ಸಳರ ರಾಜ ವಿಭಜನೆ ವೀರ ಸೋಮೇಶ್ವರ, ರಾಮನಾಥ, ಮೂರನೆಯ ನರಸಿಂಹ ಮತ್ತು ಹೊಯ್ಸಳರ ಅವನತಿ ಪ್ರಾರಂಭ

## 6.1 ವೀರ ಸೋಮೇಶ್ವರ

ಎರಡನೆಯ ನರಸಿಂಹನು ವೀರ ಸೋಮೇಶ್ವರನ ನಂತರ ಪಟ್ಟಕ್ಕೆ ಬಂದವನು. ಇವನ ಆಳ್ವಿಕೆಯ ಕಾಲದಲ್ಲಿ ವಿಶೇಷವಾಗಿ ತಮಿಳುನಾಡಿನಲ್ಲಿ ಅನೇಕ ಹೊಸ ಘಟನೆಗಳು ನಡೆದವು. ಅವನು ಅಜ್ಜನ ರೀತಿ ನೀತಿಯನ್ನೇ ಮುಂದುವರೆಸಿಕೊಂಡು ಬಂದನು. ಅವನು ಪಾಂಡ್ಯರ ಮನೆತನದವರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿ ಸಮತೋಲನವನ್ನು ಕಾಪಾಡಿ–ಕೊಂಡು ಬಂದನು. ಹೊಯ್ಸಳರ ಅಧೀನದಿಂದ ಚೋಳದೊರೆ ರಾಜರಾಜನು ಸ್ವತಂತ್ರವಾಗಲು ಪ್ರಯತ್ನಿಸಿದನು. ಸೋಮೇಶ್ವರನು ಅವನ ಬಂಡಾಯವನ್ನು ಮಣಿಸಿದನು. ಸೋಮೇಶ್ವರನು ಆಳ್ವಿಕೆಯ ಕಾಲದಲ್ಲಿ ಉತ್ತರದ ಗಡಿಯ ಸೇವುಣರು ಸಮಸ್ಯೆಯನ್ನು ತಂದೊಡ್ಡಿದರು. ಅವನು ಅವುಗಳನ್ನೆಲ್ಲಾ ಸಮರ್ಥವಾಗಿ ಎದುರಿಸಿದನು. ಸುಂದರಪಾಂಡ್ಯನ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನಲ್ಲಿ ಅನೇಕ ಬೆಳವಣಿಗೆಗಳುಂಟಾದವು. ಅವನು ಅದನ್ನು ಬುದ್ಧಿವಂತಿಕೆಯಿಂದ ಸಮರ್ಥವಾಗಿ ನಿಭಾಯಿಸಿದನು. ಬಹಳ ಮುಖ್ಯವಾದ ಬೆಳವಣಿಗೆ ಎಂದರೆ ಅದು ಹೊಯ್ಸಳ ಸಾಮ್ರಾಜ್ಯದಲ್ಲಿ ಉಂಟಾಯಿತು. ಇದೆಂದರೆ ಸಾಮ್ರಾಜ್ಯದ ವಿಭಾಗ. ಅವನು ತನ್ನ ಇಬ್ಬರು ಮಕ್ಕಳಿಗೆ ಸಾಮ್ರಾಜ್ಯವನ್ನು ಸಮಭಾಗ ಮಾಡಿದನು. ಈ ಘಟನೆಯು ಇವರ ಜೀವನದಲ್ಲಿ ವೇಗದ ಅವನತಿಗೆ ದಾರಿ ಮಾಡಿಕೊಟ್ಟಂತಾಯಿತು.

### 6.1.1 ವೀರ ಸೋಮೇಶ್ವರನ ಜೀವನ ಯಾತ್ರೆ ಮತ್ತು ಒಪ್ಪಿಗೆ

ವೀರಸೋಮೇಶ್ವರನು ಎರಡನೆಯ ನರಸಿಂಹ ಮತ್ತು ಮಹಾರಾಣಿ ಕಾಳಲಾದೇವಿಯರ ಮಗ ಎಂದು ಕ್ರಿ.ಶ.1223ರ ಒಂದು ಶಾಸನದಲ್ಲಿ ದೊರೆತಿದೆ. ಇವನ ತಾಯಿಯು ಇವನ ಬಾಲ್ಯದಲ್ಲೇ ತೀರಿಕೊಂಡಳು. ಸೋಯಲಾದೇವಿಯೇ ಇವನನ್ನು ಲಾಲಿಸಿದಳು. ಸೋವಳಳನ್ನು ಮೂರನೆಯ ರಾಜರಾಜನಿಗೆ ಕೊಟ್ಟು ವಿವಾಹ ಮಾಡಲಾಗಿತ್ತು.[1] ಬಾಲ್ಯದಿಂದಲೇ ಅವನು ತಮಿಳುನಾಡಿನ ವ್ಯವಹಾರಗಳಲ್ಲಿ ಪ್ರಬುದ್ಧನಾಗಿದ್ದನು. ಅವನ ತಂದೆಯ ಕಾಲದಲ್ಲಿ ತಮಿಳುನಾಡಿನ ವ್ಯವಹಾರಗಳನ್ನು ನೋಡಿಕೊಳ್ಳಲು ಇವನ ನೇಮಕವಾಗಿತ್ತು. ಅವನು ತಮಿಳುನಾಡಿನ ದೊರೆಗಳನ್ನು ರಕ್ಷಿಸಲು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು. ತಮಿಳುನಾಡಿನ ವ್ಯವಹಾರಗಳಲ್ಲಿ ಸೋಮೇಶ್ವರನಿಗೆ ಅನುವಂಶಿಕವಾದ ಬದ್ಧತೆ ಇತ್ತೆಂಬುದನ್ನು

ಗಮನಿಸಬಹುದು. ಏಕೆಂದರೆ ಸಾಮಂತ ರಾಜರು ಪ್ರಾಬಲ್ಯವನ್ನು ಹೊಂದುತ್ತಿರುವ ಕಾರಣದಿಂದ ಚೋಳ ಸಾಮ್ರಾಜ್ಯವು ದಿನೇ ದಿನೇ ದುರ್ಬಲವಾಗುತ್ತಿತ್ತು ಎಂಬುದನ್ನು ಅವನು ಕಂಡುಕೊಂಡನು. ಹಾಗಾಗಿ ಅವನ ಮಗ ವೀರ ಸೋಮೇಶ್ವರನನ್ನು ದೂರ ದಕ್ಷಿಣದ ರಾಜಕೀಯ ರೂಪುರೇಷೆಯನ್ನು ನೋಡಿಕೊಳ್ಳಲು ಕಳುಹಿಸಿದನು. ಕ್ರಿ.ಶ.1337ರ ಗೋವಿಂದನ ಹಳ್ಳಿಯಲ್ಲಿ ಸಿಕ್ಕಿದ ಒಂದು ಶಾಸನದಲ್ಲಿ ಅವನು ಹುಡುಗನಾಗಿದ್ದಾಗಲೇ ಶತೃಗಳೊಡನೆ ಯುದ್ಧವನ್ನು ಒಂದು ಆಟವನ್ನಾಗಿ ಪರಿಗಣಿಸಿದ್ದ ಎಂದು ಉಲ್ಲೇಖವಿದೆ. ಹಾಗಾಗಿ ಎರಡನೆಯ ನರಸಿಂಹನು ಸೋಮೇಶ್ವರನನ್ನು ತಮಿಳು ನಾಡಿನ ವ್ಯವಹಾರಗಳೊಡನೆ ಜೋಡಿಸಿದನು. ಬದನಾಳನ ಮಹಾಲಿಂಗೇಶ್ವರ ದೇವಸ್ಥಾನದಲ್ಲಿದ್ದ ಕ್ರಿ.ಶ.1229[2]ರ ಶಾಸನವು ಸೋಮೇಶ್ವರನು ಚೋಳರಾಜರ ಜೊತೆಗೆ ಕಣ್ಣಾನೂರಿನಲ್ಲಿದ್ದ ಎಂದು ಉಲ್ಲೇಖಿಸುತ್ತದೆ. ಕ್ರಿ.ಶ.1223[3]ರಲ್ಲಿ ಅವನನ್ನು ಅವನ ತಂದೆಯೂ ಸಹ ರಾಜಪ್ರತಿನಿಧಿಯಾಗಿ ನೇಮಿಸಿದ. ಸೋಮೇಶ್ವರನು ಅಲ್ಲಿ ಹೊಯ್ಸಳೇಶ್ವರ ದೇವಾಲಯವೂ ಸೇರಿದಂತೆ ಅನೇಕ ಕಟ್ಟಡಗಳನ್ನು ಕಟ್ಟಿಸಿದನು. ಸೋಮೇಶ್ವರನು ಆ ನಗರವನ್ನು ಅಭಿವೃದ್ಧಿ ಮಾಡುವುದರಲ್ಲಿ ಬಹಳ ಆಸಕ್ತಿಯನ್ನು ತೋರಿಸಿದನು. ಈ ನಗರಕ್ಕೆ ವಿಕ್ರಮಪುರ ಮತ್ತು ವಿಕ್ರಮರಾಜೇಂದ್ರಪುರ ಎಂದೂ ಕರೆಯುತ್ತಿದ್ದರು.

### 6.1.2 ವೀರ ಸೋಮೇಶ್ವರನ ಮುಖ್ಯಸ್ಥಳವಾಗಿ ಕಣ್ಣಾನೂರು

ಡೆರ್ರೆಟ್‌ರವರ ಪ್ರಕಾರ ಕಣ್ಣಾನೂರು ನಗರವು ಕ್ರಿ.ಶ.1237ರಲ್ಲಿ ನಿರ್ಮಿಸಲಾಯಿತು.[4] ಆದರೆ ಈ ಅಭಿಪ್ರಾಯವು ಸಮಂಜಸವಾಗಿಲ್ಲ. ಏಕೆಂದರೆ ಕ್ರಿ.ಶ.1229ರಲ್ಲೇ ಹೊಯ್ಸಳರು ಈ ನಗರವನ್ನು ಆಕ್ರಮಿಸಿದ್ದರು. ಸೋಮೇಶ್ವರದ ಜಂಬುಕೇಶ್ವರ ದೇವಾಲಯದಲ್ಲಿ ದೊರಕಿದ ಶಾಸನದ ಪ್ರಕಾರ ಬೆಂಗಳೂರಿನ ವಸ್ತುಸಂಗ್ರಹಾಲಯದಲ್ಲಿನ ತಾಮ್ರದ ನಾಣ್ಯದಲ್ಲಿ ಕಂಡು ಬಂದಂತೆ ವಿಕ್ರಮಪುರದ ಬಗ್ಗೆ ಉಲ್ಲೇಖವಿದ್ದು ಅದನ್ನು ಹುಲ್ಜ್‌ರವರು ಹೇಳಿದ್ದಾರೆ. ಹೊಳೆನರಸೀಪುರ ತಾಲ್ಲೂಕಿನ ಎಳ್ಳೇಶಪುರದ ಎಳ್ಳೇಶ್ವರ ದೇವಾಲಯದಲ್ಲಿ ದೊರಕಿದ ಎರಡು ದಾಖಲೆಗಳ ಪ್ರಕಾರ ಕ್ರಿ.ಶ.1238[5]ರಲ್ಲಿ ಚೋಳ ರಾಜ್ಯದ ಸೋಮೇಶ್ವರನ ಇನ್ನೊಂದು ಮನೆಯಾಗಿತ್ತು. ಆದರೆ ಅವರ ಅಭಿಪ್ರಾಯಕ್ಕೆ ಬೇರೆ ದಾಖಲೆಗಳು ಇಲ್ಲದಿದ್ದರಿಂದ ಈ ತಮಿಳುನಾಡಿಗೆ ಇನ್ನೊಂದು ರಾಜಧಾನಿ ಇತ್ತೆಂಬ ವಾದವನ್ನು ತಳ್ಳಹಾಕಲಾಗಿದೆ. ಹಾಗಾಗಿ ವಿಜಯರಾಜಪಟ್ಟಣವೇ ಕಣ್ಣಾನೂರು ಆಗಿರಬೇಕು. ಜಂಬುಕೇಶ್ವರ ದೇವಾಲಯದ ಶಾಸನದಲ್ಲಿ ಕಣ್ಣಾನೂರಿನ ಹೊಯ್ಸಳೇಶ್ವರ ದೇವಾಲಯದ ಕಟ್ಟುತ್ತಿರುವ ಬಗ್ಗೆ ಉಲ್ಲೇಖವಿದೆ. ಸೋಮೇಶ್ವರನು ಜಂಬುಕೇಶ್ವರ ದೇವಾಲಯದಲ್ಲಿ ತನ್ನ ಅಜ್ಜ ಎರಡನೆಯ ವೀರಬಲ್ಲಾಳ, ಅಜ್ಜಿ ಪದ್ಮಲಾದೇವಿ

ಮತ್ತು ತನ್ನ ತಂದೆ ಎರಡನೆಯ ನರಸಿಂಹರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿದ್ದಾನೆ. ಅವನು ಕ್ರಿ.ಶ.1236ರಲ್ಲಿ ಸಿಂಹಾಸನಕ್ಕೇರಿದ. ಪಟ್ಟಾಭಿಷೇಕವಾದ ಕೂಡಲೇ ಅವನು ಕಣ್ಣಾನೂರಿಗೆ ತೆರಳಿದ. ಅವನು ಹೆಚ್ಚಿನ ಕಾಲ ಕಣ್ಣಾನೂರಿನಲ್ಲೇ ಇದ್ದು ಆಗಾಗ ಮಾತ್ರ ದೋರಸಮುದ್ರಕ್ಕೆ ಆಗಾಗ ಭೇಟಿ ಕೊಡುತ್ತಿದ್ದ.

ಸೋಮೇಶ್ವರನ ಆಳ್ವಿಕೆಯಲ್ಲಿ ಮುಖ್ಯ ಚಟುವಟಿಕೆಗಳು ದೋರಸಮುದ್ರದಿಂದ ಕಣ್ಣಾನೂರಿಗೆ ವರ್ಗವಾಯಿತು. ಇದು ಸೋಮೇಶ್ವರನು ತನ್ನ ತಂದೆಯಿಂದ ಪಡೆದ ತರಬೇತಿಯನ್ನು ಗಮನಿಸಿದರೆ ಇದು ಅಸಹಜವಾಗೇನೂ ಇರಲಿಲ್ಲ. ಆದರೆ ಚೊಯೆಹ್ಲೋನಂತೆ ಸೋಮೇಶ್ವರನು ದೋರಸಮುದ್ರಕ್ಕೆ ಬಹಳ ಅಪರೂಪಕ್ಕೆ ಭೇಟಿ ಕೊಡುತ್ತಿದ್ದ. ಆದರೆ ಇದು ಸತ್ಯಕ್ಕೆ ಬಹಳ ದೂರವಾಗಿದೆ. ಕ್ರಿ.ಶ.1235, 1237, 1242[6] ಮತ್ತು 1252ರಲ್ಲಿ ಅವನು ದೋರಸಮುದ್ರದಿಂದ ಆಡಳಿತವನ್ನು ನಡೆಸುತ್ತಿದ್ದನೆಂಬುದಕ್ಕೆ ಶಾಸನಗಳ ಆಧಾರವಿದೆ. ಅವನು ತನ್ನ ಪ್ರದೇಶದ ಜನರನ್ನು ನಿರ್ಲಕ್ಷಿಸುತ್ತಿದ್ದ ಎಂಬುದಕ್ಕೆ ಯಾವುದೇ ದಾಖಲೆಗಳು ಇಲ್ಲ. ಅವನು ತಮಿಳುನಾಡಿನಲ್ಲಿ ನಡೆಯುತ್ತಿದ್ದ ರಾಜಕೀಯ ಬೆಳವಣಿಗೆಗಳಿಂದ ಬಲವಂತವಾಗಿ ಕಣ್ಣಾನೂರಿನಲ್ಲಿ ಇರಬೇಕಾಯಿತು.

ಸೋಮೇಶ್ವರನು ತನ್ನ ತಂದೆಯ ರಾಜಪ್ರತಿನಿಧಿಯಾಗಿ ಆಡಳಿತ ನಡೆಸುತ್ತಿರಬೇಕಾದರೆ ಅಲ್ಲಿನ ರಾಜಕೀಯದ ಚದುರಂಗದಾಟಗಳು ಬಹಳ ಆಕರ್ಷಣೀಯವಾಗಿರುತ್ತಿದ್ದವು. ಸೋಮೇಶ್ವರನು ಮೂರನೆಯ ರಾಜ ರಾಜನ ಚೋಳ ಸಾಮ್ರಾಜ್ಯವನ್ನು ದುಷ್ಟ ಕಾಡವರಿಂದ ರಕ್ಷಿಸಿ ಅವನನು ಚೋಳ ಸಾಮ್ರಾಜ್ಯದ ಸಂಸ್ಥಾಪಕ ಎಂದು ಕರೆದುಕೊಂಡನಲ್ಲದೆ ಹೊಯ್ಸಳರ ರಾಜಕೀಯ ಪ್ರಭಾವವನ್ನು ತಮಿಳುನಾಡಿನಲ್ಲಿ ವಿಸ್ತರಿಸಿದನು. ವೀರ ಸೋಮೇಶ್ವರನು ಮೂರನೆಯ ರಾಜರಾಜಚೋಳ, ಮೂರನೆಯ ರಾಜೇಂದ್ರ, ಮಾರವರ್ಮನ್ ಸುಂದರಪಾಂಡ್ಯ ಮತ್ತು ಅವನ ತಂದೆ ಜಾತವರ್ಮನ್ ಸುಂದರಪಾಂಡೆ, ತೆಲುಗು ಪಾಳೆಯಗಾರ ಗಂಡ-ಗೋಪಾಲ ಇವರುಗಳ ಸಮಕಾಲೀನನಾಗಿದ್ದ. ಮೂರನೆ ರಾಜರಾಜ ಮತ್ತು ಮಾರವರ್ಮನ್ ಸುಂದರಪಾಂಡೆ ಇವರಿಬ್ಬರ ಹೊರತಾಗಿ ಇನ್ನೆಲ್ಲ ಸಮಕಾಲೀನ ರಾಜರೊಂದಿಗೂ ಸೋಮೇಶ್ವರನು ಘರ್ಷಣೆಯನ್ನು ಹೊಂದಿದ್ದ.

### 6.1.3 ಚೋಳ ಸಾಮ್ರಾಜ್ಯದ ಬಗೆಗೆ ತಂದೆಯವರ ನೀತಿಯ ಮುಂದುವರಿಕೆ

ಚೋಳ ಸಾಮ್ರಾಜ್ಯದವರಿಗೆ ಸೋಮೇಶ್ವರನು ತನ್ನ ತಂದೆಯವರ ನೀತಿಯನ್ನೇ ಮುಂದುವರೆಸಿಕೊಂಡು ಅವರಿಗೆ ಬೆಂಬಲವನ್ನು ನೀಡತೊಡಗಿದನು. ಸೋಮೇಶ್ವರನ

ಪಟ್ಟಾಭಿಷೇಕದ ನಂತರ ಕಾಡವ ದೊರೆಯು ಮೂರನೆಯ ರಾಜರಾಜನಿಗೆ ಉಪಟಳವನ್ನು ಕೊಡತೊಡಗಿದ. ಕ್ರಿ.ಶ.1237[7]ರಲ್ಲಿ ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಿ ಕೊಪ್ಪರುಂಜಿಗನ ಮೇಲೆ ಧಾಳಿ ಮಾಡಿದನು. ಕೊನೆಗೆ ಮಂಗಳದಕೊಪ್ಪ ಎಂಬ ಸ್ಥಳದಲ್ಲಿ ಅವನು ಸೋಮೇಶ್ವರನಿಂದ ಸೋಲಿಸಲ್ಪಟ್ಟನು. ಹೊಯ್ಸಳರ ಸೋಮೇಶ್ವರನು ತೆಲುಗು ಚೋಳ ಚಿಕ್ಕ ಗಂಡಗೋಪಾಲನ ಮೇಲೆ ಕ್ರಿ.ಶ.1240[8]ರಲ್ಲಿ ಯುದ್ಧವನ್ನು ಸಾರಿದ. ತೆಲುಗು ಕವಿ ಚಿಕ್ಕಣ್ಣ ಸೋಮಯಾಜಿಯು ತನ್ನ ಕಾವ್ಯ "ನಿರ್ವಚನತರ ರಾಮಾಯಣ" ದ ಆರಂಭಿಕ ಪದ್ಯಗಳಲ್ಲಿ ಚೋಳರನ್ನು ಬೇಟೆನಾಯಿಯಂತೆ ನಾಶ ಮಾಡಿ ತನಗೆ ತಾನೇ “ಪಳಗಿಸದ ತೋಳುಗಳ ಸೊಕ್ಕಿನ ಕರ್ನಾಟಕ ಸೊಮೇಶ್ವರ” ಎಂಬ ಬಿರುದನ್ನು ಕೊಟ್ಟುಕೊಂಡ ಎಂದು ವರ್ಣಿಸಿದ್ದಾನೆ. ಇದರಿಂದ ಗಂಡಗೋಪಾಲನು ಕೆಲಕಾಲದ ಮಟ್ಟಿಗಾದರೂ ಹೊಯ್ಸಳರ ವಿರುದ್ಧದ ಯುದ್ಧದಲ್ಲಿ ಚೋಳರ ಜೊತೆಗಿದ್ದ ಎಂಬ ತೀರ್ಮಾನಕ್ಕೆ ಬರಬಹುದು. ನಿಸ್ಸಂದೇಹವಾಗಿ ಗಂಡಗೋಪಾಲನು ಕಾಡವನನ್ನು ಸೋಲಿಸಿ ಮೂರನೆಯ ರಾಜೇಂದ್ರನನ್ನು ಹೊಯ್ಸಳರ ಹಿಡಿತದಿಂದ ತಪ್ಪಿಸಿ ಕೊಳ್ಳುವಂತೆ ಪ್ರಚೋದಿಸಿದನು. ಮೂರನೆಯ ರಾಜೇಂದ್ರನೂ ಸಹ ಹೊಯ್ಸಳರಿಂದ ಮುಕ್ತಿಯನ್ನು ಪಡೆಯುವ ಚಿಂತನೆಯಲ್ಲೇ ಇದ್ದನು. 1240[9]ರಲ್ಲಿ ಗಂಡಗೋಪಾಲನ ಚಿತಾವಣೆಯಿಂದ ರಾಜೇಂದ್ರನು ಸ್ವತಂತ್ರ ರಾಜನೆಂದು ಸಾರಿಕೊಂಡನು. ಅನಂತರ ಪಾಂಡ್ಯ ದೊರೆ ಮಾರವರ್ಮ ಸುಂದರಪಾಂಡ್ಯನ ಮೇಲೆ ಯುದ್ಧವನ್ನು ಸಾರಿದನು.

ವೀರಸೋಮೇಶ್ವರನಿಗೆ ಮೂರನೆಯ ರಾಜೇಂದ್ರನು ಸಾಮಂತ ಪಟ್ಟದಿಂದ ಹೊರಬಂದ ಸಮಾಚಾರ ತಿಳಿದಕೂಡಲೇ ಅವನನ್ನು ಶಿಕ್ಷಿಸುವ ತೀರ್ಮಾನವನ್ನು ತೆಗೆದುಕೊಂಡನು. ಕಡೂರಿನ ಕ್ರಿ.ಶ1240[10]ರ ಒಂದು ದಾಖಲೆಯಂತೆ ಅವನು ಮೂರನೆಯ ರಾಜೇಂದ್ರ ಮತ್ತು ಗಂಡಗೋಪಾಲನ ವಿರುದ್ಧ ಯುದ್ಧಕ್ಕೆ ಹೋಗುತ್ತಿದ್ದಂತೆ ರಾಜೇಂದ್ರನು ಶರಣಾದನು, ಆದರೂ ಅವನನ್ನು ಸೋಮೇಶ್ವರನು ಸೋಲಿಸಿದನು; ನಂತರ ಅವನು ನಿರಾಶ್ರಿತನಂತೆ ಬಂದಾಗ ಅವನನ್ನು ರಕ್ಷಿಸಿದನು. ಹೀಗೆ ಚೋಳ ಎರಡನೆಯ ರಾಜೇಂದ್ರನ ಸ್ವತಂತ್ರವನ್ನು ಘೋಷಿಸಿಕೊಳ್ಳುವ ಪ್ರಯತ್ನವು ವಿಫಲವಾಯಿತು. ಸಾವಿರಾರು ಘಟನೆಗಳು ಅವನನ್ನು ಪುನಹ ರಕ್ಷಿಸುವಂತೆ ಮಾಡಿತು.

ಹೀಗೆ ಹೊಯ್ಸಳರು ತಮ್ಮ ಪ್ರಭಾವವನ್ನು ಚೋಳರ ಮೇಲೆ ಹೆಚ್ಚಿಸುತ್ತಾ ಹೋದರು. ಕ್ರಿ.ಶ.1240[11]ರ ಒಂದು ಶಾಸನವು ಮುಡಿಕೊಂಡಚೋಳಪುರಂಗೆ ಸಂಬಂಧಪಟ್ಟಂತೆ ಶ್ರೀವೈಷ್ಣವರಿಗೆ ನೀಡಿದ ದತ್ತಿಗಳ ಬಗ್ಗೆ ಇದೆ. ಎಂದರೆ ಇದು ತಮಿಳು ದೇಶದ ಮೇಲೆ ಇದ್ದ

ಹೊಯ್ಸಳರ ಪ್ರಭಾವವನ್ನು ಇದು ತಿಳಿಸುತ್ತದೆ. ಮೂರನೆಯ ರಾಜೇಂದ್ರನ ಎರಡು ಶಾಸನಗಳು ಮೊದಲನೆಯದು ಅವನ ಆಳ್ವಿಕೆಯ ನಾಲ್ಕನೆಯ ವರ್ಷ (1250 ಮತ್ತು ಇನ್ನೊಂದು ಆಳ್ವಿಕೆಯ ಐದನೆಯ ವರ್ಷ (1251) ಇದರಲ್ಲಿ ಚೋಳ ರಾಜ್ಯಕ್ಕೆ ಹೊಯ್ಸಳ ರಾಜರ ಕೊಡುಗೆಯ ಬಗ್ಗೆ ಉಲ್ಲೇಖವಿದ್ದು ಚೋಳ ರಾಜರ ಮೇಲೆ ಹೊಯ್ಸಳರ ಹೆಚ್ಚುಗಾರಿಕೆಯ ಒಂದು ಸೂಚನೆಯಾಗಿದೆ.

## 6.1.4 ಸೇವುಣರ ವಿರುದ್ಧ ಯುದ್ಧ

ನರಸಿಂಹನ ನಂತರ ಹೊಯ್ಸಳರ ರಾಜಕೀಯ ನೀತಿಗಳು ಸೇವುಣ ದೊರೆಯು ದಕ್ಷಿಣ ಪ್ರಾಂತ್ಯದ ಮೇಲೆ ಅವನ ಹಿಡಿತವನ್ನು ಸಾಧಿಸಲು ಸಾಧ್ಯವಾಯಿತು. ನರಸಿಂಹನ ಮಗನಾದ ಸೋಮೇಶ್ವರನು ರಾಜಕೀಯವಾಗಿ ಮತ್ತು ಭಾವನಾತ್ಮಕವಾಗಿ ಚೋಳದೇಶದೊಂದಿಗೆ ಹೊಂದಿಕೊಂಡಿದ್ದನು. ಅವನ ಬಾಲ್ಯದಿಂದಲೇ ಅವನ ತಂದೆಯ ಕಾಲದಿಂದಲೂ ತಮಿಳು ದೇಶದಲ್ಲಿ ಬೆಳೆದಿದ್ದವನು ಮತ್ತು ಅವನನ್ನು ಒಂದು ಭಾಗಕ್ಕೆ ರಾಜ್ಯಪಾಲರನ್ನಾಗಿ ನೇಮಿಸಿದ್ದರು. ಸಹಜವಾಗಿಯೇ ಅವನು ಉತ್ತರದ ಭಾಗಗಳ ಬಗ್ಗೆ ಹೆಚ್ಚಿನ ಗಮನವನ್ನು ಕೊಡಲಿಲ್ಲ. ಅಲ್ಲದೆ ಅವನು ಸೇವುಣರಿಂದ ಕಳೆದುಕೊಂಡ ಭಾಗಗಳನ್ನು ಮರಳಿ ಪಡೆಯುವ ಬಗ್ಗೆ ಪ್ರಯತ್ನವನ್ನು ನಡೆಸಲಿಲ್ಲ.

ಕ್ರಿ.ಶ.1248[12]ರ ಒಂದು ಶಾಸನವು ಸೋಮೇಶ್ವರನ ಒಂದು ಬಿರುದಾದ "ಸೇವುಣ ಬಿಪಾಲ-ಬಲಾರ್ಣವ ದಾವಾನಲ" ಎಂಬುದು ಸ್ಪಷ್ಟವಾಗಿ ಅವನು ಸೇವುಣರ ವಿರುದ್ಧ ಹೊಂದಿದ್ದ ಘರ್ಷಣೆಯನ್ನು ಸೂಚಿಸುತ್ತದೆ. ಇದು ಸಿಂಘನನ ಕೊನೆಯ ದಿನಗಳಲ್ಲಿ ಅಥವ ಮುಂದಿನ ರಾಜನಾದ ಕಣ್ಣಾರದ ಪ್ರಾರಂಭದ ದಿನಗಳಲ್ಲಿ ಆಗಿರಬಹುದು. ಸೋಮೇಶ್ವರನು ತಮಿಳುನಾಡಿನ ವ್ಯವಹಾರಗಳಲ್ಲಿ ತಲ್ಲೀನನಾದಾಗ ಸೇವುಣರು ಹೊಯ್ಸಳರ ಗಡಿಗಳ ಮೇಲೆ ಆಕ್ರಮಣ ಮಾಡಲು ಪ್ರಯತ್ನಿಸಿದರು. ಸೇವುಣರ ಸಿಂಘನ, ಅನಂತರ ಅವನ ಮಗ ಕೃಷ್ಣ ಕಂಧರನು ಉತ್ತರ ಭಾಗದ ಹೊಯ್ಸಳ ಸಾಮಂತರ ಪಟ್ಟಿ ಮಾಡಿ ಅವರ ಸಹಾಯವನ್ನು ಪಡೆದು ಗಡಿಭಾಗದ ಹಳ್ಳಿಗಳ ಮೇಲೆ ಆಕ್ರಮಣವನ್ನು ಮಾಡಿದನು. ಹೊಯ್ಸಳರು ನಿರಂತರವಾಗಿ ಸೇವುಣರ ಮಿಂಚಿನ ಧಾಳಿಯನ್ನು ಎದುರಿಸಲು ನಿರಂತರವಾಗಿ ಹೋರಾಡುತ್ತಿದ್ದರು. ಹೊಸಗುಂದದ ಪಾಳೆಯಗಾರನಾದ ಸಂತಾರನು ಹೊಯ್ಸಳರಿಗೆ ಸಾಮಂತನಾಗಿದ್ದು ನಿಷ್ಠನಾಗಿಯೇ ಉಳಿದನು. ಸಂತಾರನ ಸಾಮಂತನಾದ ಬಿನರಸನು ಸೈನ್ಯದ ಮೇಲೆ ಧಾಳಿ ಮಾಡಿದನು. ಗಡಿಯ ಭಾಗದಲ್ಲಿ ಸಾಲಾಗಿ ಆಕ್ರಮಣಗಳು ನಡೆದವು. ಇದರ ಪರಿಣಾಮವಾಗಿ ಸೋಮೇಶ್ವರನು ತಮಿಳುನಾಡಿನಿಂದ ದೋರಸಮುದ್ರಕ್ಕೆ ಬರಬೇಕಾಯಿತು. ರಾಜಧಾನಿಗೆ

ಬಂದನಂತರ ಅವನು ಸೇವುಣರ ರಾಜ ಕೃಷ್ಣನ ವಿರುದ್ಧ ಯುದ್ಧ ಮಾಡಲು ಒಂದು ಸೈನ್ಯವನ್ನು ಕಳುಹಿಸಿಕೊಟ್ಟನು. ಸೇವುಣರ ಸೈನ್ಯದ ಅಧಿಕಾರಿಗಳು ಹೊಯ್ಸಳರ ಸೈನ್ಯವನ್ನು ಸೋಲಿಸಿದುದಾಗಿ ಬಡಾಯಿ ಕೊಚ್ಚಿಕೊಂಡರು. ಈ ಯುದ್ಧದ ವಿವರಗಳು ನಮಗೆ ಲಭ್ಯವಿಲ್ಲವಾದರೂ ಚೌಡಸೆಟ್ಟಿಯ ಬಿರುದಾದ 'ಹೊಯ್ಸಳ ಚಕ್ರವರ್ತಿ–ಸೋಮೇಶ್ವರ–ಮಂಡವರನ (ಹೊಯ್ಸಳ ದೊರೆ ಸೋಮೇಶ್ವರನನ್ನು ಸೋಲಿಸಿದವನು) ಎಂಬ ಬಿರುದು ಚೌಡಸೆಟ್ಟಿಯು ಯುದ್ಧದಲ್ಲಿ ಜಯ ಗಳಿಸಿದನೆಂದು ಹೇಳುತ್ತದೆ. ಆದರೆ ಕಣ್ಣಯ್ಯ ನಾಯ್ಕ ಮೊದಲಾದ ಸೈನ್ಯದ ಅಧಿಕಾರಿಗಳು ಸೇವುಣರ ಸೈನ್ಯವನ್ನು ಸೋಲಿಸಿ ಉತ್ತರ ಗಡಿಯನ್ನು ತೆರವುಗೊಳಿಸಿದರೆಂದು ಹೇಳಿಕೊಂಡಿದ್ದಾರೆ. ಕೃಷ್ಣದ ಒಬ್ಬ ಹಿರಿಯ ಸೈನ್ಯಾಧಿಕಾರಿಯು ಗಲಭೆ–ಗೊಳಗಾದ ಹೊಯ್ಸಳರ ರಾಜ್ಯದ ಗಡಿಭಾಗವನ್ನು ವಶಪಡಿಸಿಕೊಂಡಿದ್ದಾಗಿ ಹೇಳಿಕೊಂಡಿದ್ದಾರೆ. ಈ ಗಡಿ ವಿವಾದಗಳ ಬಗ್ಗೆ ಏನನ್ನೂ ನಿರ್ದಿಷ್ಟವಾಗಿ ಹೇಳುವಂತಿಲ್ಲ. ವೀರ ಸೋಮೇಶ್ವರ ಮತ್ತು ಅವನ ತಂದೆಯ ಎರಡನೆಯ ನರಸಿಂಹ ಹೊಯ್ಸಳ ಗಡಿಯನ್ನು ಕೃಷ್ಣಾ ನದಿಯವರೆಗೆ ಹಿಂದೆ ಪಡೆಯಲಾಗಲಿಲ್ಲ. ಇದಕ್ಕೆ ಮುಖ್ಯವಾಗಿ ಅವರು ತಮಿಳುನಾಡಿನ ವ್ಯವಹಾರಗಳಲ್ಲಿ ಮುಳುಗಿದುದೇ ಕಾರಣ.

ಸೋಮೇಶ್ವರನ ತಮಿಳುನಾಡಿನ ವ್ಯವಹಾರವು ಸೇವುಣರ ವಿರುದ್ಧದ ಸೋಲಿಗೆ ಪ್ರಮುಖ ಕಾರಣವೆಂದು ಕಾಣುತ್ತದೆ. ಅವನು ಆ ಪ್ರದೇಶದಲ್ಲಿ ಇರಲಾಗದಿದ್ದರಿಂದ ಅಲ್ಲಿ ಚೋಳ ಮತ್ತು ಪಾಂಡ್ಯರ ನಡುವೆ ದೊಡ್ಡ ಯುದ್ಧವಾಯಿತು ಮತ್ತು ಸೋಮೇಶ್ವರನು ಆ ಸಂದರ್ಭವನ್ನು ನಿಭಾಯಿಸಲು ಅಲ್ಲಿಗೆ ಬರಬೇಕಾಯಿತು. ಅಂತಹ ಸಂದರ್ಭಗಳು ಕಣ್ಣಾರನಿಗೆ ಅನುಕೂಲಕರವಾಗಿ ಪರಿಣಮಿಸಿ ಅವನು ಅದನ್ನು ಬುದ್ಧಿವಂತಿಕೆಯಿಂದ ನಿಭಾಯಿಸಿ ಹೊಯ್ಸಳ ರಾಜ್ಯದ ಉತ್ತರದ ಭಾಗಗಳಲ್ಲಿ ನೆಲೆಯೂರಿದನು; ಈ ವಿಚಾರವು ಚಿತ್ರದುರ್ಗದ ಶಿಲಾಶಾಸನಗಳಿಂದ ತಿಳಿದುಬರುತ್ತದೆ.

### 6.1.5 ಹೊಯ್ಸಳರು ಮತ್ತು ಪಾಂಡ್ಯರು

ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ–ಪಾಂಡ್ಯರ ನಡುವಿನ ಸಂಬಂಧಗಳಲ್ಲಿ ಬಹಳ ಬದಲಾವಣೆಗಳಾದುವು. ಪ್ರಾರಂಭದಲ್ಲಿ ಅವನ್ನು ಪಾಂಡ್ಯರೊಡನೆ ಸ್ನೇಹಪೂರ್ವಕ–ವಾಗಿದ್ದು ಅವರೊಡನೆ ವೈವಾಹಿಕ ಸಂಬಂಧವನ್ನೂ ಬೆಳೆಸಿದನು. ಆದರೆ ಎರಡನೆಯ ಸುಂದರಪಾಂಡ್ಯನ ಮಗನಾದ ಜಾತವರ್ಮ ಪಾಂಡ್ಯನ ಆಗಮನದ ನಂತರ ಇವರಿಬ್ಬರ ವಂಶಗಳ ನಡುವೆ ವೈರತ್ವವು ಬೆಳೆಯಲಾರಂಭಿಸಿತು. ಈಗಾಗಲೇ ಹೇಳಿದಂತೆ ಹೊಯ್ಸಳರು

ಮೂರನೆಯ ರಾಜರಾಜವರ್ಮದ ಬೆಂಬಲದ ಉದ್ದೇಶದಿಂದ ಪಾಂಡ್ಯರ ವಿರುದ್ಧ ಅನೇಕ ಯುದ್ಧಗಳನ್ನು ಹೊಯ್ಸಳರು ಹೂಡಿದರು. ಪ್ರಾರಂಭದಲ್ಲಿ ವೀರ ನರಸಿಂಹ ಮತ್ತು ಎರಡನೆಯ ಬಲ್ಲಾಳ ಇಬ್ಬರೂ "ಪಾಂಡ್ಯ ರಾಜ ಗಜ ಕೇಸರಿ" ಎಂಬ ಬಿರುದನ್ನು ಹೊಂದಿದ್ದರು.[13] ಸ್ವತಹ ಸೋಮೇಶ್ವರನೇ ತನ್ನನ್ನು ತಾನೇ "ಪಾಂಡ್ಯ ರಾಜ ದಿಸಾಪಟ್ಟ" ಎಂಬ ಬಿರುದನ್ನು ಹೆಮ್ಮೆಯಿಂದ ಹೊಂದಿದ್ದ. ಆದರೆ ಮೂರನೆಯ ರಾಜೇಂದ್ರನ ಪ್ರವೇಶದ ನಂತರ ಇವರಿಬ್ಬರ ಸಂಬಂಧಗಳಲ್ಲಿ ಬದಲಾವಣೆಗಳು ಕಂಡುಬಂದವು. ಹೊಯ್ಸಳರು ಎರಡನೆಯ ಸುಂದರ ಪಾಂಡ್ಯನೊಡನೆ ಹೆಚ್ಚು ಸಮೀಪವಾಗತೊಡಗಿದರು. ತಿರುಮಯಮ್ ಮತ್ತು ತಿನ್ನಲ್ವೇಲಿಯ ಶಾಸನಗಳಂತೆ ಸೊಮೇಶ್ವರನು ತನ್ನನ್ನು ತಾನೇ "ಮಾಮಡಿ" ಎಂದು ಕರೆದುಕೊಂಡನು. ಇದು ಈ ಎರಡು ವಂಶಗಳ ನಡುವೆ ಇದ್ದ ಕೆಲವು ವೈವಾಹಿಕ ಸಂಬಂಧಗಳ ಬಗ್ಗೆ ಸೂಚಿಸುತ್ತವೆ. ಕೆಲವು ವಿದ್ವಾಂಸರ ಪ್ರಕಾರ ಮಗಳು ಅಥವ ಹತ್ತಿರದ ಸಂಬಂಧಿಯಾದ ಪೆಮ್ಮಿಯಕ್ಕನ್ ಎಂಬುವವಳನ್ನು ಸುಂದರಪಾಂಡ್ಯನಿಗೆ ಕೊಟ್ಟು ವಿವಾಹವನ್ನು ಮಾಡಿಕೊಟ್ಟಿದ್ದನು. ಹೊಯ್ಸಳ, ಚೋಳ ಮತ್ತು ಪಾಂಡ್ಯರ ಮನೆತನದ ನಡುವೆ ವೈವಾಹಿಕ ಸಂಬಂಧ ಇದ್ದಿತೆಂಬುದು ಸ್ವಾರಸ್ಯಕರವಾದ ವಿಷಯವಾಗಿದೆ.

ಹೊಯ್ಸಳರು ಯಾವಾಗಲೂ ಪಾಂಡ್ಯರ ಬೆಂಬಲಕ್ಕೆ ನಿಂತರು. ಆದರೆ ಅವನ ಈ ಸ್ನೇಹೀ ಮನೋಭಾವ ಮತ್ತು ಹೊಸ ವೈವಾಹಿಕ ಸಂಬಂಧವು ಚೋಳರಿಗೆ ಹೆಚ್ಚಿನ ಕಿರಿಕಿರಿಯನ್ನು ಉಂಟುಮಾಡಿತು. ಮೂರನೆಯ ರಾಜೇಂದ್ರನು ಸುಂದರ ಪಾಂಡ್ಯನ ಮೇಲೆ ಧಾಳಿ ಮಾಡಿದನು. ಈ ಸಮಯದಲ್ಲಿ ಸೋಮೇಶ್ವರನು ಮಧ್ಯ ಪ್ರವೇಶಿಸಿ ಸುಂದರ ಪಾಂಡ್ಯನಿಗೆ ಮೂರನೆಯ ರಾಜೇಂದ್ರನ ವಿರುದ್ಧ ಸಹಾಯ ಮಾಡಿದನು. ಕ್ರಿ.ಶ.1246ರ ಒಂದು ಶಾಸನದಂತೆ ಸೊಮೇಶ್ವರನಿಗೆ "ಪಾಂಡ್ಯ ರಾಜ ಸಂಸ್ಥಾಪನಾಚಾರ್ಯ" ಎಂಬ ಬಿರುದು ಇತ್ತು. 1248ರ ಇನ್ನೊಂದು ಶಾಸನದಂತೆ ಅವನನ್ನು "ಪಾಂಡ್ಯ ಕುಲ ಸಂರಕ್ಷಕ", "ದಕ್ಷ-ದಕ್ಷಿಣ ಭಜನ್" ಅಥವಾ ಪಾಂಡ್ಯರ ಬಲಗೈ ಎಂದು ಹೇಳದೆ. ಇನ್ನೊಂದು ಗಮನಾರ್ಹ ವಿಷಯವೆಂದರೆ ಒಂದು ತಮಿಳು ಶಾಸನವು ವೀರ ಸೋಮೇಶ್ವರರ ಒಬ್ಬ ಮಂತ್ರಿಯಾದ ಅಪ್ಪಣ್ಣನಾಯಕನಿಂದ ಶೈವ ಮತ್ತು ವೈಷ್ಣವ ನಡುವೆ ಆದ ಒಂದು ವಿವಾದ ಪರಿಹಾರದ ವಿಚಾರದ್ದಾಗಿದೆ. ಹೀಗೆ ಕ್ರಿ.ಶ.1250[14]ರವರೆಗೆ ಸೋಮೇಶ್ವರನು ತಮಿಳುನಾಡಿನಲ್ಲಿ ಹೊಯ್ಸಳರ ಮೇಲುಗೈಯನ್ನು ಕಾಪಾಡಿಕೊಂಡಿದ್ದನು. ಅವನಿಗೆ ಚೋಳ ಮತ್ತು ಪಾಂಡ್ಯ ದೊರೆಗಳಿಂದ "ಮಾಮುದಿಗಳ್" ಎಂಬ ಬಿರುದು ಬಂದಿತ್ತು. ಅಲ್ಲದೆ ಅವನು ಚೋಳ ರಾಜ್ಯದ ಮತ್ತು ಪಾಂಡ್ಯರ ಕುಲ ರಕ್ಷಕ ಎಂಬ ಹೆಮ್ಮೆಯ ಬಿರುದು ಹೊಂದಿದನು.

ಸೋಮೇಶ್ವರನಿಗೆ ಕೆಲವು ಕಾಲ ಎಲ್ಲವೂ ಸರಾಗವಾಗಿ ನಡೆದುಕೊಂಡು ಹೋಗುತ್ತಿದೆ ಎನಿಸಿತ್ತು. ಆದರೆ ಅದು ಬಹಳ ಕಾಲ ಇರಲಿಲ್ಲ. ಆಗಲೇ ತಮಿಳು ದೇಶದಲ್ಲಿ ತೊಂದರೆಗಳು ಕಾಣಿಸಿಕೊಳ್ಳಲು ಪ್ರಾರಂಭವಾಗಿತ್ತು.

## 6.1.6 ಹೊಯ್ಸಳ ಮತ್ತು ಪಾಂಡ್ಯರ ಮೈತ್ರಿಯ ಬಗ್ಗೆ ಚೋಳರ ಅತೃಪ್ತಿ

ಸೋಮೇಶ್ವರನ ನೀತಿಯು ಪಾಂಡ್ಯರೊಡನೆ ಸ್ನೇಹವನ್ನು ತಂದಿತ್ತಾದರೂ ಅದು ರಾಜೇಂದ್ರ ಚೋಳನೊಡನೆ ವೈರತ್ವವನ್ನು ಕಟ್ಟಿಕೊಳ್ಳಲು ಕಾರಣವಾಯಿತು. ಕ್ರಿ.ಶ.1252[15] ರ ರಂಗನಥಸ್ವಾಮಿ ದೇವಾಲಯದ ಶಾಸನವೊಂದು ಸೋಮೇಶ್ವರನನ್ನು "ಕನ್ನಡಿಗರಿಗೆ ಮೃತ್ಯುವಿನ ದಂಡ, ಕಲಿಯ ಶಕ್ತಿಯನ್ನು ಸಮುದ್ರದಲ್ಲಿ ಮುಳುಗಿಸಿದವನು" ಎಂದೆಲ್ಲಾ ವಿವರಿಸಿದೆ. ಡೆರೆಟ್ಟ್‌ರವರಂತೆ ಈ ಶಾಸನವು ಶ್ರೀರಂಗಂ ನಲ್ಲಿರುದರಿಂದ ಕಣ್ಣಾನೂರಿನ ಸುತ್ತಮುತ್ತಲಿನ ಪ್ರದೇಶವು ಹೊಯ್ಸಳರಿಂದ ಕೈತಪ್ಪಿರಬೇಕು. ಒಂದು ವೇಳೆ ಇದು ನಿಜವಾದರೂ ಇದು ಕೇವಲ ಸ್ವಲ್ಪ ಕಾಲ ಮಾತ್ರ. ಕ್ರಿ.ಶ.1253[16]ರ ಒಂದು ಶಾಸನವು ಮಹಾ ರಾಜಧಾನಿಯಾದ ವಿಕ್ರಮಪುರ (ಕಣ್ಣಾನೂರು) ದಲ್ಲಿ ಸೋಮೇಶ್ವರನು ತಂಗಿದ್ದ ಎಂದು ಉಲ್ಲೇಖಿಸುತ್ತದೆ. ನಮಗೆ ಯಾವುದೇ ಸಂದರ್ಭದಲ್ಲಿಯೂ ಕೂಡಾ ರಾಜೇಂದ್ರನು ಹೊಯ್ಸಳರೊಡನೆ ಮೇಲುಗೈ ಸಾಧಿಸಿದ್ದನೆಂಬುದಕ್ಕೆ ಆಧಾರಗಳು ಸಿಕ್ಕಿಲ್ಲ. ಹೊಯ್ಸಳನು "ಚೋಳ ಸಾಮ್ರಾಜ್ಯದ ಸಂರಕ್ಷಕ" ಎಂಬ ಬಿರುದನ್ನು ಹೊಂದಿಯೇ ಇದ್ದನು.

## 6.1.7 ಹೊಯ್ಸಳರ ಮತ್ತು ಪಾಂಡ್ಯರ ನಡುವಿನ ಸಂಬಂಧದಲ್ಲಿ ಅಪಶೃತಿ

ಕ್ರಿ.ಶ.1251[17]ರಲ್ಲಿ ಜಾತವರ್ಮನ್ ಸುಂದರ ಪಾಂಡ್ಯನು ಸಿಂಹಾಸನವನ್ನೇರಿದೊಡನೆ ತಮಿಳುನಾಡಿನ ರಾಜಕೀಯವು ಹೊಸ ತಿರುವನ್ನು ಪಡೆದುಕೊಂಡಿತು. ಅವನ ಸಿಂಹಾಸನಾ–ರೋಹಣದ ನಂತರ ಪಾಂಡ್ಯರ ಚರಿತ್ರೆಯಲ್ಲಿ ಅನೇಕ ಗಮನಾರ್ಹ ಘಟನೆಗಳು ನಡೆದವು. ಈ ಸಿಂಹಾಸನಾರೋಹಣದ ನಂತರ ಹೊಯ್ಸಳ, ಚೋಳ ಮತ್ತು ಪಾಂಡ್ಯರ ನಡುವಿನ ಸಂಬಂಧಗಳು ವ್ಯತ್ಯಾಸಗೊಂಡವು. ಜಾತವರ್ಮನ್ ಸುಂದರಪಾಂಡ್ಯನು ಒಬ್ಬ ಶಕ್ತಿಶಾಲಿ ದೊರೆಯಾಗಿದ್ದನು. ಅವನು ರಾಜ್ಯದ ಎಲ್ಲ ಕಡೆಗಳಲ್ಲಿಯೂ ವಿಜಯಯಾತ್ರೆಯ ನೀತಿಯನ್ನು ಪ್ರಾರಂಭಿಸಿದನು. ಅವನು ಕೇರಳದ ವಂಶದವರನ್ನು ಸೋಲಿಸಿದ; ಲಂಕೆಯ ರಾಜನನ್ನು ಸೂರೆಮಾಡಿದ; ಪರ್ವತಗಳಲ್ಲಿ ಮಿಂಚಾದ, ಕರ್ನಾಟಕದ ರಾಜನನ್ನು ಓಡಿಸಿದ. ನಿಜವಾಗಿಯೂ ಅವನು ಪಾಂಡ್ಯ ರಾಜರುಗಳಲ್ಲಿ, ಮತ್ತು ಪಾಳೆಯಗಾರರಲ್ಲಿ ದೊಡ್ಡ ನಾಯಕನಾದ. ಹೊಯ್ಸಳರ ಮತ್ತು ಪಾಂಡ್ಯರ ನಡುವಿನ ಘರ್ಷಣೆಯು ಪ್ರಾರಂಭವಾಯಿತು. ಕ್ರಿ.ಶ.1256[18]ರ ಒಂದು

ಶಾಸನದ ಪ್ರಕಾರ ಸಿಂಘನನೂ ಸೇರಿದಂತೆ ಹೊಯ್ಸಳರ ಅನೇಕ ಸೈನ್ಯಾಧಿಕಾರಿಗಳು ಒಂದು ಮುತ್ತಿಗೆಯಲ್ಲಿ ಪ್ರಾಣ ಕೊಟ್ಟರು. ಜಾತವರ್ಮನ್‌ನು ಕರ್ನಾಟಕದ ಹಿರಿಮೆಯನ್ನು ಕೆಳಗಿಳಿಸಲು ಪ್ರಾರಂಭಿಸಿದ ಎಂದು ಶ್ರೀರಂಗಂನ ಒಂದು ದಿನಾಂಕವಿಲ್ಲದ ಶಾಸನವು ತಿಳಿಸುತ್ತದೆ. ಈ ಆಧಾರಗಳನ್ನು ಆವಲಂಬಿಸಿ ಕೆಲವು ವಿದ್ವಾಂಸರು ಸೋಮೇಶ್ವರನು ಇದರಲ್ಲಿ ಪ್ರಾಣತ್ಯಾಗ ಮಾಡಿದನೆಂಬ ತೀರ್ಮಾನಕ್ಕೆ ಬರುತ್ತಾರೆ. ಆದರೆ ಇದು ಸತ್ಯಕ್ಕೆ ದೂರವಾದದ್ದು. ಏಕೆಂದರೆ ಅವನು ದೊರಸಮುದ್ರದಲ್ಲಿ ಖಾಯಿಲೆಯಿಂದ ಮರಣವು ಸಂಭವಿಸುತ್ತದೆ. ಈ ಜಾತವರ್ಮನ್ ಸುಂದರಪಾಂಡ್ಯನ ಘಟನೆಯಿಂದ ತಮಿಳುನಾಡಿನಲ್ಲಿ ಹೊಯ್ಸಳರ ಪ್ರಾಬಲ್ಯ ಕಡಿಮೆಯಾಯಿ-ತೆಂಬುದು ಸತ್ಯ. ಆದರೆ ಸೋಮೇಶ್ವರನು ಕಣ್ಣಾನೂರು ಪ್ರಾಂತ್ಯದ ಮೇಲೆ ತನ್ನ ಹಿಡಿತವನ್ನು ಇಟ್ಟುಕೊಂಡೇ ಇದ್ದ.

## 6.1.8 ತಮಿಳುನಾಡಿನಲ್ಲಿ ಬದಲಾಗುತ್ತಿರುವ ಮೈತ್ರಿಗಳಿಂದ ಉಂಟಾಗುವ ಪರಿಣಾಮಗಳು

ತಮಿಳುನಾಡಿನಲ್ಲಿ ಬದಲಾಗುತ್ತಿರುವ ಮೈತ್ರಿಗಳು ಸೋಮೇಶ್ವರನಿಗೆ ಸಂಕಟವನ್ನುಂಟು ಮಾಡಿದುವು. ಅವರ ಪ್ರದೇಶದಲ್ಲಿ ಸೋಮೇಶ್ವರನ ಇರುವಿಕೆಯು ತಮಿಳುನಾಡಿನಲ್ಲಿನ ಅಶಾಂತತೆಗೆ ಕಾರಣ ವಾಗಿರಬಹುದಾದರೂ ಅದು ಬಹಳ ಮಟ್ಟಿಗೆ ತಮಿಳು ದೊರೆಗಳ ಮಹಾತ್ವಾಂಕಾಕ್ಷೆಯೇ ಕಾರಣ ಎಂಬುದು ಡಾ॥ಬಿ.ಸುರೇಂದ್ರರಾವ್‌ರವರ ಅಭಿಪ್ರಾಯವಾಗಿದೆ. ಜಾತವರ್ಮನ್ ಸುಂದರಪಾಂಡ್ಯನು ಬಹಳ ಮಟ್ಟಿಗೆ ತನ್ನ ಮಹತ್ವಾಂಕಾಕ್ಷೆಯಿಂದ ಯುದ್ಧದ ಕಣಕ್ಕೆ ಧುಮುಕಿದನು; ಮೂರನೆಯ ಚೋಳನಾದ ರಾಜೇಂದ್ರನು ಹೊಯ್ಸಳರೊಂದಿಗೆ ಕೆಲಮಟ್ಟಿನ ತೊಂದರೆಯನ್ನು ಹೊಂದಿದ್ದನು. ತಮಿಳುದೇಶದ ಸಂಕೀರ್ಣವಾದ ರಾಜಕೀಯವು ಹೊಯ್ಸಳರಿಗೆ ಅಪಕೀರ್ತಿಯನ್ನು ತಂದೊಡ್ಡಿತು.

## 6.1.9 ಹೊಯ್ಸಳ ಸಾಮ್ರಾಜ್ಯದ ವಿಭಜನೆ

ಸೋಮೇಶ್ವರನು ತನ್ನ ಆಯುಷ್ಯದ ಕೊನೆಯ ಭಾಗದಲ್ಲಿ ಅನಾರೋಗ್ಯದಿಂದ ನರಳುತ್ತಿದ್ದನು. ಕ್ರಿ.ಶ.1254[19]ರಲ್ಲಿ ಅವನು ದೋರಸಮುದ್ರಕ್ಕೆ ಭೇಟಿ ಕೊಟ್ಟನು ಮತ್ತು ಜೈನಮುನಿ ವಿಜಯತೀರ್ಥ ಆದಿನಾಥನನ್ನು ಸನ್ಮಾನಿಸಿದನು. ಅವನು ಬೇಲೂರಿನ ಚನ್ನಕೇಶವ ದೇವಾಲಯಕ್ಕೂ ಭೇಟಿ ನೀಡಿದನು ಮತ್ತು ಅದಕ್ಕೆ ಬೇಕಾದ ಅನುದಾನಗಳನ್ನೂ ನೀಡಿದನು. ಅವನ ಮಗನಾದ ಮೂರನೆಯ ನರಸಿಂಹನು ದೋರಸಮುದ್ರದ ವಿಜಯ ಪಾರ್ಶ್ವನಾಥ

ಬಸದಿಗೆ ಅನೇಕ ಅನುದಾನಗಳನ್ನು ನೀಡಿದನು. ವೀರ ಸೋಮೇಶ್ವರರಿಗೆ ಇಬ್ಬರು ಗಂಡು ಮಕ್ಕಳಿದ್ದರು. ಅವನಿಗೆ ವೀರ ನರಸಿಂಹನು ರಾಣಿ ಬಿಜ್ಜಳ ಮಹದೇವಿಯಿಂದಲೂ, ವೀರ ರಾಮನಾಥನು ರಾಣಿ ದೇವಲಾದೇವಿಯಿಂದಲೂ ಮಕ್ಕಳಾಗಿದ್ದರು. ಕ್ರಿ.ಶ.1255[20]ರ ವೇಳೆಗೆ ಅವರಿಬ್ಬರೂ 15 ವರ್ಷ ವಯಸ್ಸಿನವರಾಗಿದ್ದರು. ದುರದೃಷ್ಟವಶಾತ್ ಇಬ್ಬರು ಮಕ್ಕಳಲ್ಲಿಯೂ ಹೊಂದಾಣಿಕೆ ಇರಲಿಲ್ಲ. ಅವರಿಬ್ಬರನ್ನೂ ಬೇರೆ ಬೇರೆ ಸ್ಥಳಗಳಲ್ಲಿ ಇಡಲಾಗಿತ್ತು. ವೀರ ನರಸಿಂಹನನ್ನು ಕಣ್ಣಾನೂರಿನಲ್ಲಿಯೂ ಮತ್ತು ವೀರ ರಾಮನಾಥನನ್ನು ದೋರದಮುದ್ರ-ದಲ್ಲಿಯೂ ಇರುವಂತೆ ಮಾಡಲಾಗಿತ್ತು. ಇವರಿಬ್ಬರೂ ಸೋಮೇಶ್ವರನಿಗೆ ರಾಜ್ಯಾಡಳಿತದಲ್ಲಿ ಸಹಕಾರವನ್ನು ನೀಡುತ್ತಿದ್ದರು. ಸೋಮೇಶ್ವರನಿಗೆ ಇಬ್ಬರು ಮಕ್ಕಳೂ ತನ್ನ ನಂತರ ಸಿಂಹಾಸನಕ್ಕೆ ದಾಯಾದಿ ಕಲಹದಲ್ಲಿ ತೊಡಗಬಹುದೆಂಬ ಶಂಕೆ ಇತ್ತು. ಹಾಗಾಗಿ ಅವನು ತನ್ನ ಸಾಮ್ರಾಜ್ಯವನ್ನು ತನ್ನ ಮಕ್ಕಳಿಗಾಗಿ ಎರಡು ಭಾಗವನ್ನಾಗಿ ಮಾಡಿದನು.

ಸೋಮೇಶ್ವರನು ತನ್ನ ರಾಜ್ಯವನ್ನು ಎರಡು ಭಾಗವಾಗಿ ಮಾಡಿದರೂ ತನ್ನ ಕೊನೆಯ ಉಸಿರಿನವರೆಗೂ ಆತನೇ ರಾಜ್ಯಭಾರವನ್ನು ಮಾಡಿದನು. ಕ್ರಿ.ಶ.1254ರ ಒಂದು ಶಾಸನವು ಒಂದು ದಾನವನ್ನು ಮೂರನೆಯ ನರಸಿಂಹನು ಮಾಡಿದರೂ ಅದಕ್ಕೆ ಸೋಮೇಶ್ವರನ ಸಹಿ ಇತ್ತು ಎಂದು ಹೇಳುತ್ತದೆ. ಅದೇ ವರ್ಷದ ಅದಕ್ಕಿಂತ ಸ್ವಲ್ಪ ಮುಂದಿನ ಇನ್ನೊಂದು ಶಾಸನವು ನರಸಿಂಹನು ಸಿಂಹಾಸನವನ್ನೇರಿದ್ದ ಎಂಬುದನ್ನು ಖಾತ್ರಿಪಡಿಸುತ್ತದೆ. ವೀರ ರಾಮನಾಥನು ಕ್ರಿ.ಶ.1255 (ಶಕ 1177)ರಲ್ಲಿ ತಮಿಳುನಾಡಿನ ಅಧಿಕಾರವನ್ನು ವಹಿಸಿಕೊಂಡಿರಬೇಕು ಮತ್ತು ಈ ದಿನಾಂಕವನ್ನು ಇನ್ನೊಂದು ದಾಖಲೆಯು ಖಚಿತಪಡಿಸುತ್ತದೆ; ಅದು ಶಕ 1182[21] ನ್ನು ಆಳ್ವಿಕೆಯ ಆರನೆಯ ವರ್ಷ ಎಂದು ಹೇಳಿದೆ. ಹೀಗೆ ಸಾಮ್ರಾಜ್ಯವು ಕ್ರಿ.ಶ.1255ರಲ್ಲಿ ಹೋಳಾಯಿ-ತೆಂಬುದಕ್ಕೆ ದಾಖಲೆಗಳಿವೆ. ಈ ಇಬ್ಭಾಗ ಮಾಡುವ ತೀರ್ಮಾನವನ್ನು ತೆಗೆದುಕೊಂಡ ಮೇಲೂ ಸಹ ಅವನು ಅವನ ಮರಣದವರೆಗೂ ರಾಜ್ಯಭಾರವನ್ನು ಮಾಡುತ್ತಿದ್ದ. ಕ್ರಿ.ಶ.1255ರಲ್ಲು ಕೂಡಾ ಅವನು ತನ್ನ ಸಾರ್ವಭೌಮತೆಯನ್ನು ಪ್ರಚಾರಪಡಿಸಲು ಅವನು ಇದ್ದ ಕಣ್ಣಾನೂರಿನಲ್ಲಿ 'ಹಿರಣ್ಯಗರ್ಭ' ಮತ್ತು 'ತುಲಾಪುರುಷ'ವನ್ನು ಮಾಡಿಸಿದ್ದ. ಕ್ರಿ.ಶ.1256ರ ಗಂಡಸಿಯ ಈಶ್ವರ ದೇವಾಲಯದಲ್ಲಿನ ಶಾಸನವೊಂದು ಸೋಮೇಶ್ವರನು ಕಣ್ಣಾನೂರಿನಿಂದಲೇ ಆಳ್ವಿಕೆಯನ್ನು ಮಾಡುತ್ತಿದ್ದ ಎಂದು ಹೇಳುತ್ತದೆ. ಹಾಗಾಗಿ ಈ ಸಾಮ್ರಾಜ್ಯದ ಇಬ್ಭಾಗವನ್ನು ಆಡಳಿತಾತ್ಮಕ ತುರ್ತು ಅಥವ ಇಬ್ಬರು ಮಕ್ಕಳ ಹೊಂದಿಕೊಳ್ಳಲಾಗದ ಸ್ವಭಾವದಿಂದಲೇ ಆಗಿರಬೇಕು ಎನಿಸುತ್ತದೆ.

ಈಗ ಪ್ರಶ್ನೆ ಎಂದರೆ ಸೋಮೇಶ್ವರನು ತನ್ನ ಸಾಮ್ರಾಜ್ಯದ ಇಬ್ಭಾಗ ಮಾಡಿದುದು ಸರಿಯೇ ಅಲ್ಲವೇ ಎಂಬುದು. ವೀರ ರಾಮನಾಥ ಮತ್ತು ಮೂರನೆಯ ನರಸಿಂಹ ಇವರ ನಡುವೆ ಇದ್ದ ವೈರತ್ವವನ್ನು ಗಮನಿಸಿದರೆ ಮುಂಬರುವ ದಿನಗಳಲ್ಲಿ ಇವರಿಬ್ಬರ ನಡುವೆ ದಾಯಾದಿ ಕಲಹವನ್ನು ಇದು ತಡೆಯುತ್ತದೆ ಎಂಬುದು ಕಾರಣವಾಯಿತು ಎನ್ನಬೇಕು. ಒಂದು ವೇಳೆ ಸಾಮ್ರಾಜ್ಯವನ್ನು ಭಾಗ ಮಾಡದೇ ಇದ್ದಲ್ಲಿ ದಾಯಾದಿ ಕಲಹವು ತಪ್ಪುತ್ತಿರಲಿಲ್ಲ. ಏಕೆಂದರೆ ಈ ಭಾಗವನ್ನು ಮಾಡಿದ ಮೇಲೂ ಸಹ ಇವರಿಬ್ಬರೂ ತಮ್ಮ ತಮ್ಮಲ್ಲೇ ರಾಜ್ಯದ ಪ್ರದೇಶಕ್ಕಾಗಿ ಆಕ್ರಮಣವನ್ನು ಮಾಡಿದರು. ಕ್ರಿ.ಶ.1256ರಕ್ಕೆ ಮುಂಚೆ ಅಂದರೆ ವೀರ ಸೋಮೇಶ್ವರನು ತೀರಿಕೊಳ್ಳುವುದಕ್ಕೆ ಮುಂಚೆ ತಮಿಳುನಾಡಿನಲ್ಲಿದ್ದ ವಾತಾವರಣವು ಸಾಮ್ರಾಜ್ಯವನ್ನು ಇಬ್ಭಾಗ ಮಾಡುವುದಕ್ಕೆ ಕಾರಣವಾಯಿತೆಂಬುದು ಸತ್ಯಕ್ಕೆ ದೂರವಾದದ್ದು. ಕೃಷ್ಣರಾಜ ಪೇಟೆಯಲ್ಲಿ ದೊರಕಿದ ಒಂದು ಶಾಸನದ ಪ್ರಕಾರ ಕನ್ನಯ್ಯ ನಾಯಕನೂ ಸೇರಿದಂತೆ ಅನೇಕ ವೀರರು ಸೋಮೇಶ್ವರನು ಮರಣಿಸಿದಾಗ ಗರುಡನನ್ನು ಅಪ್ಪಿಕೊಂಡು ತಮ್ಮ ವಿಧೇಯತೆಯನ್ನು ತೋರಿಸುವುದಕ್ಕಾಗಿ ಪ್ರಾಣ ಬಿಟ್ಟರು ಎಂದು ತಿಳಿಸುತ್ತದೆ.

### 6.1.10 ವೀರ ಸೋಮೇಶ್ವರನ ಆಳ್ವಿಕೆ ಒಂದು ನೋಟ

ಸೋಮೇಶ್ವರನ ಯುದ್ಧಗಳು ಮತ್ತು ತಮಿಳುನಾಡಿನ ವ್ಯವಹಾರಗಳಲ್ಲಿನ ಕಾರ್ಯಗಳು ಇವುಗಳ ನಡುವೆಯೂ ಹೊಯ್ಸಳ ಸಾಮ್ರಾಜ್ಯದಲ್ಲಿ ಸಮೃದ್ಧಿ ಮತ್ತು ಶಾಂತಿ ನೆಲೆಸಿತ್ತು. ರಾಜ್ಯದಾದ್ಯಂತ ಅನೇಕ ದೇವಾಲಯಗಳನ್ನು ಕಟ್ಟಿಸಲಾಯಿತು. ನುಗ್ಗೇಹಳ್ಳಿಯಲ್ಲಿ ಲಕ್ಷ್ಮೀ ನರಸಿಂಹ ಮತ್ತು ಸದಾಶಿವ, ಜಾವಗಲ್‌ನಲ್ಲಿ ಲಕ್ಷ್ಮೀನರಸಿಂಹ, ಬೂದನೂರಿನಲ್ಲಿ ಈಶ್ವರ ಮತ್ತು ಪದ್ಮನಾಭ, ತಂಡಗದಲ್ಲಿ ಕೇಶವ, ಹೊಸಹೊಳಲುವಿನಲ್ಲಿ ಲಕ್ಷ್ಮೀನಾರಾಯಣ ಮೊದಲಾದ ದೇವಾಲಯಗಳು ಕಟ್ಟಲ್ಪಟ್ಟವು. ಈ ದೇವಾಲಯಗಳು ಆ ಸಾಮ್ರಾಜ್ಯದ ಆರ್ಥಿಕತೆಯ ವೈಭವವನ್ನು ಸಾರುತ್ತದೆ. ಕೃಷಿ ಮತ್ತು ಕೈಗಾರಿಕೆಗಳು ಹೆಚ್ಚಿದವು. ಆ ದೇಶದಲ್ಲಿ ವಾಣಿಜ್ಯ ಮತ್ತು ವ್ಯವಹಾರಗಳು ಚುರುಕಾಗಿದ್ದವು. ಬಹಳಷ್ಟು ಕೆರೆಗಳನ್ನು ಕಟ್ಟಿಸಿದರು. ಆ ಕಾಲದ ಶಾಸನವೊಂದು ಕೇರಳದ ವ್ಯಾಪಾರಿಯ ಮಗಳಾದ ಚೊಂದವ್ವೆಗೆ 'ಗಾನಕುಮಾರಿ' ಎಂಬ ಬಿರುದನ್ನು ಕೊಟ್ಟನು ಎಂದು ಉಲ್ಲೇಖಿಸಿದೆ.

ಅವನು ಹೊಯ್ಸಳರ ಹಿತಾಸಕ್ತಿಯನ್ನು ಕಾಪಾಡಲು ಅವನ ಇಪ್ಪತ್ತು ವರ್ಷದ ಆಳ್ವಿಕೆಯಲ್ಲಿ ವೀರನಂತೆ ಯುದ್ಧ ಮಾಡಿದನು. ಅವನು ಚೋಳರು ಮತ್ತು ಪಾಂಡ್ಯರಿಂದ ಹೊಯ್ಸಳರನ್ನು ರಕ್ಷಕ ಎಂಬ ಸ್ಥಾನವನ್ನು ಪಡೆದಿದ್ದ. ಆದರೆ ಅವನ ಕೊನೆಯ ದಿನಗಳಲ್ಲಿ

ಪಾಂಡ್ಯರು ಅವನಿಗೆ ಬಹಳ ಉಪಟಳವನ್ನು ಕೊಟ್ಟರು. ಜಾತವರ್ಮನ್ ಸುಂದರ ಪಾಂಡ್ಯದ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ರಾಜನಾದ ಸೋಮೇಶ್ವರನು ಬಹಳಷ್ಟು ಸಮಸ್ಯೆಗಳನ್ನು ಎದುರಿಸಿದನು. ಅವನ ಕೊನೆಯ ದಿನಗಳಲ್ಲಿ ಆರೋಗ್ಯವು ಕ್ಷೀಣಿಸತೊಡಗಿದಾಗ ಅವನ ಮಕ್ಕಳು ಅಂತಃಕಲಹದಲ್ಲಿ ಮುಳುಗಿದ್ದರು. ಹೊಯ್ಸಳ ಸಾಮ್ರಾಜ್ಯವನ್ನು ವಿಭಾಗ ಮಾಡಿದ್ದು ಅವನ ಬಹಳ ದೊಡ್ಡ ತಪ್ಪಾಗಿತ್ತು. ಒಂದು ವೇಳೆ ಅವನು ಸಾಮ್ರಾಜ್ಯವನ್ನು ವಿಭಾಗ ಮಾಡದಿದ್ದರೂ ಮಕ್ಕಳ ವೈರತ್ವ ಮತ್ತು ಒಳಜಗಳಗಳನ್ನು ತಪ್ಪಿಸಲಾಗುತ್ತಿರಲಿಲ್ಲ. ಜಾತವರ್ಮನ್ ಸುಂದರಪಾಂಡ್ಯನಿಂದ ಆದ ಉಪಟಳದ ಹೊರತಾಗಿಯೂ ಅವನು ಶ್ರೀರಂಗಂ ಪ್ರದೇಶವನ್ನು ಹಿಡಿತದಲ್ಲಿಟ್ಟುಕೊಂಡನು. ಆಂತರಿಕ ಸಮಸ್ಯೆಗಳು ಮತ್ತು ಬಾಹ್ಯ ಬೆದರಿಕೆಗಳಿಂದ ಅವನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಹೊಯ್ಸಳ ಸಾಮ್ರಾಜ್ಯವು ದುರ್ಬಲವಾಗತೊಡಗಿತು. ವೀರ ಸೋಮೇಶ್ವರನ ಆಳ್ವಿಕೆಯ ಬಗ್ಗೆ ಬೇರೆಬೇರೆಯಾದ ಅಭಿಪ್ರಾಯಗಳು ಇವೆ. ಡಾ. ಡೆರೆಟ್ಟ್‌ರವರು ಅದನ್ನು ಹೊಯ್ಸಳ ರಾಜರ ಆಳ್ವಿಕೆಯಲ್ಲಿ ಇದೊಂದು ದೊಡ್ಡ ದುರಂತವೆಂದಿದ್ದಾರೆ. ಡೆರೆಟ್ಟ್–ರವರು ವೀರ ಸೋಮೇಶ್ವರನ ಬಗ್ಗೆ ಬಹಳ ಕಟುವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಜಾತವರ್ಮನ್ ಸುಂದರಪಾಂಡ್ಯನ ಕೈಯಲ್ಲಿ ಅವನಿಗೆ ಆದ ಅಂತಿಮ ಪರಾಭವ ಅವನ ಆಳ್ವಿಕೆಯನ್ನು ದುರಂತವೆಂದು ಹೆಸರಿಸಲಾಗುವುದಿಲ್ಲ. ತಮಿಳು ರಾಜರರೊಡನೆ ಅವನು ತನ್ನ ಶಕ್ತಿಮೀರಿ ವೀರೋಚಿತವಾಗಿ ಹೋರಾಡಿದರೂ ಕೊನೆಗೆ ಬಂದ ಶಕ್ತಿಯುತನಾದ ಪಾಂಡ್ಯ ರಾಜನಿಂದ ಸೋಲಿಸಲ್ಪಟ್ಟನು. ಶ್ರೀ ಕೆ.ಆರ್.ವೆಂಕಟರಾಮನ್‌ರವರಂತೆ ಸೋಮೇಶ್ವರನ ಕಾಲದಲ್ಲಿ ಅವನ ಆಳ್ವಿಕೆಯು ಮತ್ತು ತಮಿಳುನಾಡಿನ ಮೇಲಿನ ಪ್ರಭಾವವು ವೈಭವವು ತುಟ್ಟತುದಿಗೇರಿತ್ತು. ಆದರೆ ಕೊಎಹ್ಲೋ ಮತ್ತು ಹೆಚ್.ಕೃಷ್ಣಶಾಸ್ತ್ರಿಗಳು ಸೋಮೇಶ್ವರನ ಆಳ್ವಿಕೆಯ ಬಗ್ಗೆ ಟೀಕೆ ಮಾಡುವುದರಿಂದ ಹಿಂದೆ ಸರಿದಿದ್ದಾರೆ. ಹೊಯ್ಸಳರು ತಮ್ಮ ಆಳ್ವಿಕೆಯ ಕಾಲದಲ್ಲಿ ಎದುರಿಸಬೇಕಾದ ಸಮಸ್ಯೆಗಳು ಎರೆಡನೆಯ ವೀರಬಲ್ಲಾಳನಂತಹ ರಾಜನನ್ನು ಬಯಸಿತ್ತು. ಆದರೆ ಸೋಮೇಶ್ವರನು ಎರಡನೆಯ ವೀರಬಲ್ಲಾಳನಾಗಿರಲಿಲ್ಲ.

### 6.2 ರಾಮನಾಥ

ಈ ಸಾಮ್ರಾಜ್ಯವು ಒಡೆದುದಕ್ಕೆ ಕಾರಣವಾದ ಘಟನೆಗಳನ್ನು ಈ ಹಿಂದೆ ವಿವರಿಸಿದೆ. ಸೋಮೇಶ್ವರನು ಎರಡು ರಾಜಧಾನಿಗಳನ್ನು ಹೊಂದಿ ಒಂದೆಡೆಯಿಂದ ಇನ್ನೊಂದೆಡೆಗೆ ಮತ್ತೆ ಮತ್ತೆ ಓಡಾಡಬೇಕಾದ ಪರಿಸ್ಥಿತಿಯಿಂದ ವಿವಿಧ ಭಾಗದ ಜನರ ಸಮಸ್ಯೆಗಳನ್ನು ಪರಿಹರಿಸಲು ಆಗುವುದಿಲ್ಲ ಎಂಬುದನ್ನು ಮನಗಂಡಿದ್ದನು. ಹಾಗಾಗಿ ಅವನು ತನ್ನ ಸಾಮ್ರಾಜ್ಯವನ್ನು ಎರಡು ಭಾಗವಾಗಿ ವಿಂಗಡಿಸಿ ಇಬ್ಬರು ಮಕ್ಕಳಿಗೆ ಕೊಡುವುದು ಸರಿಯಾಗುತ್ತದೆ ಎಂದು

ಆಲೋಚಿಸಿದನು. ಹಾಗೆಯೇ ಅವನು ತನ್ನ ಹಿರಿಯ ಮಗನಾದ ಮೂರನೆಯ ನರಸಿಂಹನಿಗೆ ದೋರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿ ರಾಜ್ಯದ ಉತ್ತರದ ಭಾಗವನ್ನು ಕೊಟ್ಟನು ಮತ್ತು ರಾಮನಾಥನಿಗೆ, ದಕ್ಷಿಣದ ಪ್ರದೇಶವನ್ನು, ಕಣ್ಣಾನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲು ವ್ಯವಸ್ಥೆ ಮಾಡಿದನು. ಸೋಮೇಶ್ವರನು ಕಣ್ಣಾನೂರಿನಲ್ಲೇ ಇರುವ ತೀರ್ಮಾನವನ್ನು ಮಾಡಿದನು ಮತ್ತು ಅಲ್ಲಿ ಕೆಲವು ವರ್ಷಗಳ ಕಾಲ ಜೀವಿಸಿದ್ದನು.

ಸಾಮ್ರಾಜ್ಯದ ವಿಭಾಗವು ಕ್ರಿ.ಶ.1253[22]ರಲ್ಲಿ ನಡೆಯಿತು. ಕ್ರಿ.ಶ.1253ರ ಶಿವಮೊಗ್ಗ ಜಿಲ್ಲೆಯಲ್ಲಿ ಸಿಕ್ಕಿದ ಒಂದು ಶಾಸನವು ಆ ಇಬ್ಬರು ರಾಜಕುಮಾರರ ನಡುವೆ ಇದ್ದ ತಿಕ್ಕಾಟದ ಬಗ್ಗೆ ಉಲ್ಲೇಖಿಸಿದೆ; ಅಲ್ಲದೆ ಈ ವಿಭಾಗವು ಕ್ರಿ.ಶ.1253 ರ ಆರಂಭದಲ್ಲಿ ಅಥವ ಇನ್ನೂ ಮುಂಚೆ ಆಗಿರಬೇಕು ಎಂದು ಹೇಳಲಾಗಿದೆ. ಈ ಶಾಸನವು ಇಬ್ಬರು ಸಹೋದರರ ನಡುವಿನಲ್ಲಿ ಉತ್ತರ ಭಾಗದಲ್ಲಿ ನಡೆದ ಹೋರಾಟದಲ್ಲಿ ಸೇತುವಿನ ಪ್ರಧಾನನಾದ ಇಮ್ಮಡಿ ಬಲ್ಲಾಳದೇವನು ಅವನ ಸೈನ್ಯಾಧಿಕಾರಿ ತಮ್ಮ ಸಾಮಂತನಿಗೆ ರಾಮನಾಥನಿಗೆ ಸಹಾಯ ಮಾಡಲು ಆಜ್ಞಾಪಿಸಿದನು. ಆ ಯುದ್ಧವು ಮೂರನೆಯ ನರಸಿಂಹನ ಆಳ್ವಿಕೆಯ ಪ್ರದೇಶದಲ್ಲಿ ನಡೆದದ್ದರಿಂದ ಆ ಪ್ರದೇಶವು ಆ ಭಾಗವು ಅವನ ಸಹೋದರನಿಂದ ಆಕ್ರಮಿಸಲ್ಪಟ್ಟಿತು ಎಂದು ಹೇಳಬಹುದು ಮತ್ತು ಸಾಮ್ರಾಜ್ಯದ ವಿಭಾಗದ ಮುಂಚೆಯೂ ಕೂಡಾ ಅವರ ಬಾಂಧವ್ಯವು ಉತ್ತಮವಾಗಿರಲಿಲ್ಲ ಎಂಬುದು ತಿಳಿದು ಬರುತ್ತದೆ.

ಸೋಮೇಶ್ವರನ ಆಳ್ವಿಕೆಯ ಕಡೆಯ ವರ್ಷಗಳಲ್ಲಿ ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವವು ಕಡಿಮೆಯಾಗುತ್ತಾ ಬಂದಿತು. ಅದಕ್ಕೆ ಮುಖ್ಯ ಕಾರಣವೆಂದರೆ ಹೊಯ್ಸಳರು ಉದ್ದಕ್ಕೂ ಚೋಳರಿಗೆ ಮತ್ತು ಪಾಂಡ್ಯರಿಗೂ ಸಹಾಯ ಮಾಡಿದ್ದು. ಚೋಳರು ಮತ್ತು ಹೊಯ್ಸಳರಿಗೂ ಬೆಳೆಯುತ್ತಿದ್ದ ಭಿನ್ನಾಭಿಪ್ರಾಯಗಳು ಚೋಳರು ಪಾಂಡ್ಯರ ಮೇಲೆ ಆಕ್ರಮಣವನ್ನು ಮಾಡಿದಾಗ ಕಾಣಿಸಿಕೊಂಡಿತು. ಸೋಮೇಶ್ವರನು ಇಲ್ಲಿಯವರೆಗೆ ಚೋಳರಿಗೆ ಬೆಂಬಲವನ್ನು ನೀಡಿದವನು ಈ ಬಾರಿ ಪಾಂಡ್ಯರನ್ನು ಬೆಂಬಲಿಸಿ ರಾಜೇಂದ್ರನನ್ನು ಸೋಲಿಸಿ ಪಾಂಡ್ಯಕುಲವನ್ನು ಕಾಪಾಡಿ "ಪಾಂಡ್ಯ ಕುಲಸಂರಕ್ಷಣಾ-ದಕ್ಷ-ದಕ್ಷಿಣಭುಜ" ಎಂಬ ಬಿರುದನ್ನು ಸಂಪಾದಿಸಿದ. 'ಕರ್ನಾಟ ರಾಯ ಕಳಾದಂಡ' ಮತ್ತಿತರ ಬಿರುದುಗಳು ರಾಜೇಂದ್ರನು ಹೊಯ್ಸಳ ದೊರೆಯ ಮೇಲಿಟ್ಟಿರುವ ಅಭಿಪ್ರಾಯವನ್ನು ಸೂಚಿಸುತ್ತದೆ. ಆದರೆ ರಾಜೇಂದ್ರನಿಗೆ ಎಲ್ಲ ಕಡೆಯಿಂದಲೂ ಸಮಸ್ಯೆಗಳಿದ್ದವು. ಕಾಕತೀಯ ದೊರೆಯಾದ ಗಣಪತಿಯು ಕಾಂಚಿಗೆ ಮುತ್ತಿಗೆಯನ್ನು ಹಾಕಿದನು. ಪಾಂಡ್ಯರ ಭಯವು ಸದಾ ಇತ್ತು. ಈ ಪರಿಸ್ಥಿತಿಯು ರಾಜೇಂದ್ರನಿಗೆ

ಸೋಮೇಶ್ವರನೊಂದಿಗೆ ಸಂಧಿಯನ್ನು ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಈ ಸಂಧಿಯ ಹೊರತಾಗಿಯೂ ಭಿನ್ನಾಭಿಪ್ರಾಯಗಳು ಮುಂದುವರೆದವು.

ರಾಮನಾಥನು ಸಿಂಹಾಸನವನ್ನು ಏರುವ ವೇಳೆಗೆ ಜಾತವರ್ಮನ್ ಸುಂದರ ಪಾಂಡ್ಯನು ಎರಡಾನೆಯ ಮಾರವರ್ಮನ್ ಸುಂದರ ಪಂಡ್ಯನನ್ನು ಗೆದ್ದಿದ್ದನು. ಕ್ರಿ.ಶ.1257[23]ರಲ್ಲಿ ಚೋಳರು ಮತ್ತು ಹೊಯ್ಸಳರ ನಡುವಿನ ಸಂಬಂಧ ಮತ್ತು ಅದರ ಪರಿಣಾಮವಾಗಿ ಅದು ದುರ್ಬಲ-ವಾದುದನ್ನು ಗಮನಿಸಿ ಜಾತವರ್ಮನ್‌ನು ಚೋಳ ರಾಜ್ಯದ ಗಡಿಯ ಮೇಲೆ ಬಲವಾದ ಧಾಳಿಯನ್ನು ಮಾಡಿದನು. ರಾಮನಾಥ ಮತ್ತು ಅವನ ತಂದೆ ಸೋಮೇಶ್ವರರು ಅವನ ಎದುರಿಗೆ ನಿಲ್ಲಲಾಗದೇ ಯುದ್ಧರಂಗದಿಂದ ಪಲಾಯನ ಮಾಡಿದರು. ಜಾತವರ್ಮನ್‌ನು ಅಲ್ಲಿನ ಕಾಡವರು, ಬಾಣರು ಮೊದಲಾದ ಎಲ್ಲ ಮುಖ್ಯಸ್ಥರನ್ನೂ ಸೋಲಿಸಿ ಚೋಳ ರಾಜ್ಯವನ್ನು ಆಕ್ರಮಿಸಿಕೊಂಡನು. ಹೊಯ್ಸಳರ ವಶದಲ್ಲಿದ್ದ ಕಣ್ಣಾನೂರೂ ಸೇರಿದಂತೆ ಇಡೀ ಚೋಳ ರಾಜ್ಯವೂ ಈಗ ಪಾಂಡ್ಯರ ವಶಕ್ಕೆ ಬಂದಿತು.

ತನ್ನ ವೃತ್ತಿಯ ಪ್ರಾರಂಭದಿಂದಲೂ ಅಂದರೆ ಕ್ರಿ.ಶ.1253ರಿಂದಲೂ ರಾಮನಾಥನು ತನ್ನ ಸಹೋದರನೊಂದಿಗೆ ಸೇರಿಕೊಂಡು ಯುದ್ಧ ಮಾಡುತ್ತಿದ್ದವನು ಈಗ ತಮಿಳುನಾಡಿನ ಯುದ್ಧಗಳನ್ನು ಮೇಲಿಂದ ಮೇಲೆ ಸೋಲುತ್ತಿದ್ದರಿಂದ ಅವನ ಮೇಲಿನ ಶತೃತ್ವನ್ನು ಕಡಿಮೆ ಮಾಡುತ್ತಾ ಬಂದನು. ಈ ಕಲಹಗಳು ಮೂರನೆಯ ನರಸಿಂಹನ ಮರಣದವರೆಗೂ ಅಂದರೆ ಕ್ರಿ.ಶ.1291 ರವರೆಗೂ ಮುಂದುವರೆದು ಆ ಪ್ರದೇಶದ ಕೆಲವು ಶಾಸನಗಳು ಉಲ್ಲೇಖಿಸುವಂತೆ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳು ಅವನ ವಶಕ್ಕೆ ಬಂದುವು. ರಾಮನಾಥನು ತನ್ನ ರಾಜಧಾನಿ ಕಣ್ಣಾನೂರನ್ನು ಸೋತು ಅದರ ಉತ್ತರ ಭಾಗದ ಕುಂದನಿಯನ್ನು ರಾಜಧಾನಿ-ಯನ್ನಾಗಿ ಮಾಡಿಕೊಂಡನು. ಅವನು ಕ್ರಿ.ಶ.1295ರವರೆಗೆ ಅಂದರೆ ಅವನ ಮರಣದವರೆಗೆ ಅಲ್ಲಿಂದಲೇ ಎಲ್ಲ ವ್ಯವಹಾರಗಳನ್ನೂ ನೋಡಿಕೊಳ್ಳುತ್ತಿದ್ದನು.

ಮೂರನೆಯ ಬಲ್ಲಾಳನು ನರಸಿಂಹನ ಮರಣಾನಂತರ ದೋರಸಮುದ್ರದಲ್ಲಿ ಸಿಂಹಾಸನವನ್ನೇರಿದೊಡನೆ ಅವನ ರಾಜ್ಯವನ್ನು ಒಂದುಗೂಡಿಸುವ ಪ್ರಯತ್ನವು ಸಾಗಿತು. ನರಸಿಂಹನ ಮರಣವು ರಾಮನಾಥನ ಸ್ವಭಾವವನ್ನು ಬದಲಾಯಿಸಲಿಲ್ಲ. ಅವನು ಮೂರನೆಯ ಬಲ್ಲಾಳನ ಆಧಿಪತ್ಯವನ್ನು ವಿರೋಧಿಸಿದನು. ರಾಮನಾಥನು ದಕ್ಷಿಣದಲ್ಲಿ ಬಹಳ ದುರ್ಬಲನಾಗಿದ್ದನು. ಹಾಗಾಗಿ ಅವನು ತನ್ನ ಸಹೋದರನು ಆಳುತ್ತಿದ್ದ ಪ್ರದೇಶಗಳನ್ನು ತನ್ನ

ವಶಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸಿದನು. ಅವನ ದಾಖಲೆಗಳು ದಕ್ಷಿಣ ಕರ್ನಾಟಕದಲ್ಲಿ ಆಗಾಗ್ಗೆ ಕಾಣುತ್ತವೆ. ಸುಮಾರು ಕ್ರಿ.ಶ.1295ರಲ್ಲಿ ಅವನ ಮಗ ವಿಶ್ವನಾಥನು ಪಟ್ಟಕ್ಕೇರಿದನು. ಅವನು ದುರ್ಬಲನಾಗಿದ್ದರಿಂದ ಅವನ ತಂದೆಯ ನೀತಿಗಳನ್ನು ಮುಂದುವರೆಸಿಕೊಂಡು ಹೋಗ-ಲಾಗಲಿಲ್ಲ. ಅವನು ಬಹಳ ಕಾಲ ರಾಜ್ಯವನ್ನು ಆಳಲಿಲ್ಲ. ಕ್ರಿ.ಶ.1297ರ ನಂತರ ಅವನ ಬಗ್ಗೆ ಯಾವ ಪ್ರಸ್ತಾಪವೂ ಇಲ್ಲ. ಮೂರನೆಯ ಬಲ್ಲಾಳನು ಇದನ್ನು ಅರಿತುಕೊಂಡು ಅವನನ್ನು ಆಕ್ರಮಣ ಮಾಡಿ ಹೊರಹಾಕಿರಬೇಕು ಮತ್ತು ಹೀಗೆ ಹೊಯ್ಸಳ ರಾಜ್ಯವು ಮತ್ತೆ ಒಗ್ಗಟ್ಟಾಯಿತು.

## 6.3 ಉಪಸಂಹಾರ

ಎರಡನೆಯ ನರಸಿಂಹನು ವೀರ ಸೋಮೇಶ್ವರನ ಹಕ್ಕುದಾರನಾದನು. ಅವನ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನಲ್ಲಿ ಅನೇಕ ಮುಖ್ಯ ಸಂಗತಿಗಳು ನಡೆದವು. ಕಣ್ಣಾನೂರು ಅವನ ಸಾಮ್ರಾಜ್ಯದ ರಾಜಧಾನಿಯಾಯಿತು. ಆದರೆ ಮತ್ತೆ ಮತ್ತೆ ಅವನು ದೋರಸಮುದ್ರಕ್ಕೆ ಭೇಟಿ ಕೊಡುತ್ತಿದ್ದನು. ಅವನ ತಂದೆಯಂತೆ ಅವನೂ ಚೋಳರನ್ನು ಬೆಂಬಲಿಸಿದನು. ಆದರೆ ಚೋಳ ರಾಜರು ಹೊಯ್ಸಳರ ಹಿಡಿತದಿಂದ ಬಿಡುಗಡೆ ಹೊಂದಲು ಪ್ರಯತ್ನಿಸಿದರು. ಅವನು ಪಾಂಡ್ಯ ರಾಜನ ಮೇಲೆ ಯುದ್ಧವನ್ನು ಸಾರಿದನು. ಆದರೆ ಸಂದರ್ಭಗಳು ಅವನನ್ನು ಹೊಯ್ಸಳರಿಗೆ ಶರಣಾಗತರಾಗುವಂತೆ ಮಾಡಿತು. ಸೇವುಣರು ಉತ್ತರದ ಗಡಿಯನ್ನು ಆಕ್ರಮಿಸಿದರು. ವೀರ ಸೋಮೇಶ್ವರನು ಈ ಆಕ್ರಮಣಗಳನ್ನು ಹಿಂದಕ್ಕಟ್ಟಿದನು. ಹಿಂದಿನಂತೆ ಅವನು ಚೋಳರನ್ನು ಬೆಂಬಲಿಸಿದ ಮತ್ತು ಪಾಂಡ್ಯರ ವಿರುದ್ಧವಾಗಿ ಯುದ್ಧ ಮಾಡಿದ. ಆದರೆ ವೈವಾಹಿಕ ಸಂಬಂಧದ ಫಲವಾಗಿ ಹೊಯ್ಸಳರು ಮತ್ತು ಪಾಂಡ್ಯರು ಹತ್ತಿರವಾದರು. ಆದರೆ ಚೋಳರಿಗೆ ಇದನ್ನು ಸಹಿಸಲಾಗಲಿಲ್ಲ. ಚೋಳರು ಪಾಂಡ್ಯರ ಮೇಲೆ ಆಕ್ರಮಣ ಮಾಡಿದರು. ಚೋಳ ರಾಜರು ಹೊಯ್ಸಳ ಹಿಡಿತದಿಂದ ಬಿಡುಗಡೆ ಹೊಂದಲು ಪ್ರಯತ್ನಿಸಿದರು. ಆದರೆ ಪಾಂಡ್ಯರ ವಿರುದ್ಧದ ಕದನಗಳಲ್ಲಿ ಆದ ಸೋಲಿನಿಂದ ಅವನು ಹೊಯ್ಸಳರಿಗೆ ಶರಣಾಗತನಾದರು. ಜಾತವರ್ಮನ್ ಸುಂದರಪಾಂಡೆಯ ಆಳ್ವಿಕೆಯ ಕಾಲದಲ್ಲಿ ಹೊಯ್ಸಳರು ತಮಿಳುದೇಶದವರಿಂದ ಹಿನ್ನಡೆಯನ್ನು ಅನುಭವಿಸಿದರು. ಅವನು ಪಾಂಡ್ಯರ ಬಹು ದೊಡ್ಡ ನಾಯಕನಾಗಿದ್ದ. ಅವನು ಹೊಯ್ಸಳರ ಸೋಮೇಶ್ವರನನ್ನು ಅನೇಕ ಸ್ಥಳಗಳಲ್ಲಿ ಸೋಲಿಸಿದನು. ತಮಿಳುನಾಡಿನ ಜಟಿಲ ರಾಜಕೀಯದಿಂದಾಗಿ ಸೋಮೇಶ್ವರನ ನೀತಿಗಳು ವಿಫಲವಾದುವು. ಇನ್ನೊಂದು ಬಹುಮುಖ್ಯ ಘಟ್ಟವೆಂದರೆ ರಾಜ್ಯದ ವಿಭಾಗ. ಇದು ನಿಜವಾಗಿಯೂ ರಾಜ್ಯದ ಐಕ್ಯತೆಯ ಮೇಲೆ ಪರಿಣಾಮವನ್ನುಂಟು ಮಾಡಿತು. ಅವನು ತನ್ನ ರಾಜ್ಯವನ್ನು ತನ್ನ ಇಬ್ಬರು ಮಕ್ಕಳಗೆ ಹಂಚಿದನು. ತಮಿಳು ಪ್ರದೇಶವನ್ನು ರಾಜಧಾನಿ ಕಣ್ಣಾನೂರಿನೊಂದಿಗೆ ವೀರ ರಾಮನಾಥನ

ವಶಕ್ಕೆ ಕೊಟ್ಟನು. ಮೂರನೆಯ ನರಸಿಂಹನ ವಶಕ್ಕೆ ಕರ್ನಾಟಕದ ಪ್ರಾಂತ್ಯಗಳನ್ನೊಳಗೊಂಡ ಇತರ ಪ್ರದೇಶವನ್ನು ರಾಜಧಾನಿ ದೋರಸಮುದ್ರದೊಂದಿಗೆ ಕೊಟ್ಟನು. ವೀರ ಸೋಮೇಶ್ವರನು ಅವನ ಇಪ್ಪತ್ತು ವರ್ಷದ ಆಳ್ವಿಕೆಯಲ್ಲಿ ಸಮರ್ಥವಾಗಿ ಹೋರಾಡಿ ಹೊಯ್ಸಳರ ಆಂತರಿಕ ಪ್ರದೇಶವನ್ನು ಕಾಪಾಡಿಕೊಂಡು ಬಂದನು. ಆದರೆ ಅವನ ಕೊನೆಯ ವರ್ಷಗಳಲ್ಲಿ ಅವನು ಪಾಂಡ್ಯರಿಂದ ಸೋಲನ್ನು ಅನುಭವಿಸಿದನು.

ಮೂರನೆಯ ನರಸಿಂಹನು ದೋರಸಮುದ್ರದಲ್ಲಿ ಸಿಂಹಾಸನವನ್ನು ಆರೋಹಣ ಮಾಡಿದನು. ದುರದೃಷ್ಟವಾಗಿ ಸಾಮ್ರಾಜ್ಯದ ವಿಭಾಗವು ಸೋಮೇಶ್ವರನ ನಿರೀಕ್ಷೆಯಂತೆ ಅಣ್ಣ ತಮ್ಮಂದಿರಲ್ಲಿ ಐಕ್ಯತೆಯನ್ನು ತರುವುದರ ಬದಲಾಗಿ ವೈರತ್ವವು ಬೆಳೆಯಿತು. ಈ ಸಹೋದರರು ತಮ್ಮತಮ್ಮಲ್ಲೇ ಅಂತಃಕಲಹವನ್ನು ಮುಂದುವರೆಸಿದರು. ಈ ಕಾರಣವಾಗಿ ಸೇವುಣರ ವಿರುದ್ಧವಾಗಿ ಯಾವುದೇ ಬಲವಾದ ಕ್ರಮವನ್ನು ತೆಗೆದುಕೊಳ್ಳಲಾಗಲಿಲ್ಲ. ಸೇವುಣರು ದೋರಸಮುದ್ರವನ್ನು ಜಯಿಸಲು ತೀರ್ಮಾನಿಸಿದರು. ಸೇವುಣರ ರಾಮಚಂದ್ರನು ಅನೇಕ ಸೈನ್ಯಾಧಿಕಾರಿಗಳನ್ನು ಈ ಉದ್ದೇಶಕ್ಕಾಗಿ ನಿಯೋಜಿಸಿದನು. ಅನೇಕ ಯುದ್ಧಗಳು ನಡೆದವು. ಎರಡೂ ಪಕ್ಷದವರೂ ಜಯ ಪಡದೆವೆಂದು ಹೇಳಿಕೊಂಡರು. ಆದರೆ ಸೇವುಣರು ದೋರ–ಸಮುದ್ರವನ್ನು ವಶಪಡಿಸಿಕೊಂಡರು. ಆದರೆ ಇದು ಸತ್ಯಕ್ಕೆ ದೂರವಾದ ಸಂಗತಿಯಾಗಿದೆ. ಇದರಲ್ಲಿ ಕುಮ್ಮಟದ ರಾಜಪ್ರತಿನಿಧಿಯಾದ ಸಿಂಗಯ್ಯನಾಯಕನೂ ಹೊಯ್ಸಳ ಪರವಾಗಿ ಯುದ್ಧವನ್ನು ಮಾಡಿದನು. ನರಸಿಂಹನ ಮರಣಾನಂತರವೂ ಕದನವು ಮುಂದುವರೆಯಿತು.

ರಾಮನಾಥನು ಕ್ರಿ.ಶ.1253 ರಿಂದ 1295ರ ವರೆಗೆ ತಮಿಳು ಪ್ರಾಂತ್ಯದಲ್ಲಿ ಆಳ್ವಿಕೆಯನ್ನು ಮಾಡಿದನು. ರಾಮನಾಥನು ಕಣ್ಣಾನೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ರಾಮನಾಥನು ತನ್ನ ಸಹೋದರನ ಪ್ರಾಂತ್ಯದ ಮೇಲೆ ಆಕ್ರಮಣವನ್ನು ಮಾಡಿದನು. ರಾಮನಾಥನು ಪಾಂಡ್ಯ ದೊರೆ ಜಾತವರ್ಮನ್ ಸುಂದರ ಪಾಂಡ್ಯನಿಂದ ಪರಾಜಿತನಾಗಿ ಅವನು ತನ್ನ ರಾಜ್ಯದ ಅನೇಕ ಪ್ರಾಂತ್ಯದ ಮೇಲಿನ ಹಿಡಿತವನ್ನು ಕಳೆದುಕೊಂಡನು. ರಾಮನಾಥನು ತನ್ನ ರಾಜಧಾನಿ ಕಣ್ಣಾನೂರನ್ನು ಕಳೆದುಕೊಂಡು ಅದನ್ನು ಕಣ್ಣಾನೂರಿನ ಸಮೀಪವಿರುವ ಕುಂದನ್‌ಗೆ ವರ್ಗಾಯಿಸಿದನು. ಅಲ್ಲಿಂದಲೇ ಅವನು ತನ್ನ ಸಹೋದರನ ರಾಜ್ಯದ ಮೇಲೆ ಆಕ್ರಮಣವನ್ನು ಪ್ರಾರಂಭಿಸಿದನು. ರಾಮನಾಥನು ಕ್ರಿ.ಶ.1295 ರಲ್ಲಿ ಮರಣ ಹೊಂದಿದನು. ಅವನ ನಂತರ ಅವನ ಮಗ ವಿಶ್ವನಾಥನು ರಾಜನಾದನು. ಆದರೆ ಅವನು ದುರ್ಬಲ ರಾಜನಾಗಿದ್ದನು. ಅವನು ಹೆಚ್ಚು ಕಾಲ ಆಳ್ವಿಕೆ ಮಾಡಲಿಲ್ಲ. ಕ್ರಿ.ಶ.1297 ರ ನಂತರ

ಅವನ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಮೂರನೆಯ ನರಸಿಂಹನ ನಂತರ ಬಂದ ಮೂರನೆಯ ಬಲ್ಲಾಳನು ದೋರಸಮುದ್ರದಲ್ಲಿದ್ದು ಬಹುಶಃ ಅವನ ಮೇಲೆ ಧಾಳಿ ಮಾಡಿ ಸೋಲಿಸಿರಬೇಕು. ಹೀಗೆ ಹೊಯ್ಸಳ ರಾಜ್ಯವು ಪುನಃ ಒಗ್ಗಟ್ಟಾಯಿತು.

## 6.4 ಮೂರನೇ ನರಸಿಂಹ

ನರಸಿಂಹನು ಕ್ರಿ.ಶ.1240ರ ಆಗಸ್ಟ್ 12ರಂದು ಜನಿಸಿದನು. ಅವನ ತಂದೆ ತಾಯಿಗಳು ವೀರ ಸೋಮೇಶ್ವರ ಮತ್ತು ಬಿಜ್ಜಲರಾಣಿ. ಗಂಡಗೋಪಾಲನ ವಿರುದ್ಧ ಮುನ್ನಡೆಯುತ್ತಿರುವಾಗ, ಸೈನ್ಯ ಶಿಬಿರದಲ್ಲಿದ್ದಾಗ, ಮಗನ ಜನನದ ಸುದ್ದಿಯನ್ನು ಪಡೆದನು–ಅವನೇ ಮೂರನೇ ನರಸಿಂಹ.

ನರಸಿಂಹನ ಮೊದಲನೆಯ ಶಿಲಾಲೇಖದ ದಿನಾಂಕವು ಕ್ರಿ.ಶ.1254ರ ನವಂಬರ್ 26 ಎಂದು ನಮೂದಿಸಲ್ಪಟ್ಟಿದೆ. ಯುವರಾಜ ನರಸಿಂಹನು ಹದಿನಾಲ್ಕು ವರುಷಗಳ ಬಾಲಕ–ನಾಗಿದ್ದಾಗಲೇ. ಅತೃಪ್ತಿ ಮತ್ತು ಅಶಾಂತಿಯಿಂದ ಕೂಡಿದ ರಾಜ್ಯವೊಂದರ ಮೇಲೆ ಹಿಡಿತ ಸಾಧಿಸಿದ್ದನು. ನರಸಿಂಹನ ಸಿಂಹಾಸನಾರೋಹಣವನ್ನು ಪ್ರಜೆಗಳು ಸಂತೋಷದಿಂದಾಗಲೇ ಸ್ವಾಗತಿಸಿದರು. ಏಕೆಂದರೆ ಅವರಿಗೆ, ತಮಿಳು ದೇಶದಲ್ಲೇ ಸದಾ ವ್ಯಸ್ತನಾಗಿರುತ್ತಿದ್ದ, ಸೋಮೇಶ್ವರನ ಬಗ್ಗೆ ಬೇಸರವಿತ್ತು. ರಾಜಧಾನಿಯಾದ ದೋರಸಮುದ್ರವು ಹೆಸರಿಗೆ ಮಾತ್ರವಿತ್ತು ಮತ್ತು ಸೋಮೇಶ್ವರನು ಯಾವಾಗಲೂ ತಮಿಳುನಾಡಿನ ರಾಜಕೀಯದಲ್ಲಿಯೇ ಮುಳುಗಿದ್ದನು. ಈ ಅವಕಾಶದ ಲಾಭ ಪಡೆದುಕೊಂಡು, ಸೇವುಣರು ಬಹಳ ಪ್ರಬಲರಾದರು ಮತ್ತು ಹೊಯ್ಸಳ ರಾಜ್ಯದ ಉತ್ತರದ ಭಾಗಗಳನ್ನು ಅತಿಕ್ರಮಿಸಲು ಪ್ರಯತ್ನಿಸುತ್ತಿದ್ದರು.

ಕ್ರಿ.ಶ.1254[24]ರಲ್ಲಿ ನರಸಿಂಹನು ಬೇಲೂರಿನ ಚನ್ನಕೇಶವನ ದೇವಾಲಯದಲ್ಲಿ ಒಂದು ಸಹಾಯಧನದ ಘೋಷಣೆ ಹೊರಡಿಸಿದನು. ಇದಕ್ಕೆ ಸೋಮೇಶ್ವರನು ಸಹಿ ಹಾಕಿದನು. ಇದರಿಂದ ಸೋಮೇಶ್ವರನು ತಾನಾಗಿಯೇ ತನ್ನ ಮಗನ ಪರವಾಗಿ, ಸಿಂಹಾಸನವನ್ನು ಬಿಟ್ಟುಕೊಟ್ಟಿರುವುದನ್ನು ಸೂಚಿಸುತ್ತದೆ. ನರಸಿಂಹನ ದೃಢತೆಯಿಂದ ಅವನ ತಂದೆಯಾದ ಸೋಮೇಶ್ವರನು ಎಷ್ಟು ಪ್ರಭಾವಿತನಾದನೆಂದರೆ, ತನ್ನ ತಂದೆಯ ಒಪ್ಪಿಗೆಯಿಂದಲೇ ನರಸಿಂಹನು ಹೊಯ್ಸಳ ರಾಜ್ಯದ ರಕ್ಷಣೆಗಾಗಿ ಸಿಂಹಾಸನವನ್ನೇರಿದನೆಂದು ಮತ್ತೊಂದು ದಾಖಲೆಯು ತಿಳಿಸುತ್ತದೆ. ಹೊಯ್ಸಳ ರಾಜ್ಯದ ವಿಭಜನೆಯು ಕ್ರಿ.ಶ.1253ಕ್ಕಿಂತ ಮುಂಚಿತವಾಗಿಯೇ ನಡೆಯಿತು. ಏಕೆಂದರೆ ಅದೇ ವರ್ಷದ ಶಿಲಾಲೇಖವು ತಿಳಿಸುವಂತೆ,

ನರಸಿಂಹ ಮತ್ತವನ ಮಲಸಹೋದರನಾದ ರಾಮನಾಥನು ಪರಸ್ಪರ ಹೊಡೆದಾಡುತ್ತಿರುವಾಗ, ಇಮ್ಮಡಿ ಬಲ್ಲಾಳದೇವರಸ ಎನ್ನುವ ಯಾರೋ ಸಾಮಂತ ಮುಖ್ಯಸ್ಥನು ರಾಮನಾಥನನ್ನು ಬೆಂಬಲಿಸಿದನೆಂದು ತೋರುತ್ತದೆ. ಮೇಲೆ ತಿಳಿಸಿದ ಶಿಲಾಲೇಖವು ಸಾಮ್ರಾಜ್ಯದ ವಿಭಜನೆಯು ಕ್ರಿ.ಶ.1253ರ ಪ್ರಾರಂಭದಲ್ಲಿಯೇ ಅಥವಾ ಇನ್ನೂ ಮುಂಚಿತವಾಗಿಯೇ ನಡೆದಿರಬಹುದೆಂಬ ಸುಳಿವನ್ನು ಕೊಡುತ್ತದೆ. ತನ್ನ ಹತ್ತಿರ ಹತ್ತಿರ ಮೂವತ್ತು ವರ್ಷಗಳ ದೀರ್ಘಾನುಭವದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಆಳುವುದು ಕಷ್ಟಸಾಧ್ಯ ಎಂಬುದನ್ನು ಸೋಮೇಶ್ವರನು ಮನಗಂಡಿದ್ದನು. ಉತ್ತರದಲ್ಲಿ ಸೇವುಣರು ಮತ್ತು ದಕ್ಷಿಣದಲ್ಲಿ ಪಾಂಡ್ಯರು, ಹೊಯ್ಸಳ ರಾಜ್ಯವನ್ನು ಆಕ್ರಮಿಸುವ ಬೆದರಿಕೆಯೊಡ್ಡಿದಾಗ, ಪರಿಸ್ಥಿತಿಯು ಇನ್ನೇನು ಕಷ್ಟಕರವಾಗಿ ತೋರಿತು. ಈ ಕಷ್ಟಗಳ ಬಗೆಗಿನ ಮುಂದಾಲೋಚನೆಯಿಂದ, ಸೋಮೇಶ್ವರನು, ಆಡಳಿತದ ಅನುಕೂಲಕ್ಕಾಗಿ, ಹೊಯ್ಸಳ ಸಾಮ್ರಾಜ್ಯವನ್ನು ವಿಭಜಿಸಿದನು. ಪೂರ್ವಿಕ ಭೂಭಾಗವು ಮೂರನೇ ನರಸಿಂಹನಿಗೆ ಕೊಡಲ್ಪಟ್ಟಿತು ಮತ್ತು ಕೋಲಾರ ಜಿಲ್ಲೆ ಮತ್ತು ತಮಿಳುನಾಡಿನ ಕೆಲಭಾಗಗಳನ್ನೊಳಗೊಂಡ ಭೂಭಾಗವು ರಾಮನಾಥನ ಪಾಲಾಯಿತು. ರಾಮನಾಥನ ತಮಿಳು ಪ್ರಾಂತ್ಯಗಳು ಈಗಿನ ಸೇಲಂ ಜಿಲ್ಲೆ, ಉತ್ತರ ಆರ್ಕಾಟಿನ ಪಶ್ಚಿಮಾರ್ಧ ಮತ್ತು ಚಿತ್ತೂರು ಕರೂರ್ ತಾಮಜಾವೂರ್, ಪಾಪನಾಸಂ ಮತ್ತು ತಂಜಾವೂರಿನ ಮನ್ನಾರ್ ಗುಡಿ ತಾಲ್ಲೂಕುಗಳನ್ನು ಬಿಟ್ಟು ಪೂರ್ಣ ತಿರುಚನಾಪಳ್ಳಿ ಇವುಗಳ ಬಹು ಭಾಗಗಳು ಸೇರಿದ್ದವು. ಕುಂದನಿಯು ಅವನ ಪ್ರಾಂತೀಯ ರಾಜಧಾನಿಯಾಗಿತ್ತು. ಇದು ಹೊಸೂರು ತಾಲೂಕಿನ ಕುಂದನಿ ಗ್ರಾಮದೊಂದಿಗೆ ಗುರುತಿಸಲಾಗಿದೆ. ಇದನ್ನು ದೇವ ಸಮುದ್ರಂ ಕುಂದನಿ ಅಥವಾ ದೇವರ ಕುಂದನಿ ಎಂದೂ ಹೇಳುವರು.

ನರಸಿಂಹನ ಪಟ್ಟಾಭಿಷೇಕದ ಸಮಾರಂಭದ ವಿವರಗಳು ದೊರೆತಿಲ್ಲ. ಆದರೆ ಕ್ರಿ.ಶ.1254ರ ಶಿಲಾಲೇಖವೊಂದರ ಪ್ರಕಾರ, ನರಸಿಂಹನ ಪಟ್ಟಾಭಿಷೇಕದ ಸಂದರ್ಭದಲ್ಲಿ, ಅದೇ ವರುಷ ಅವನು ಬೇಲೂರಿನಲ್ಲಿರುವ ಬೊಪ್ಪದೇವ ದಂಡನಾಯಕ ಬಸದಿಗೆ ಭೇಟಿ ಇತ್ತನು ಮತ್ತು ದೇವ ವಿಜಯ ಪಾರ್ಶ್ವನಿಗೆ ಕಾಣಿಕೆಯನ್ನಿತ್ತನು. ಅದೇ ಶಿಲಾಲಿಪಿಯು ಸೋಮೇಶ್ವರನು ಮುಕ್ಕೊಡೆ ಅಥವಾ ಮೂರು ಕೊಡೆಗಳನ್ನು ವಿಜಯತಿರ್ಥಾದಿನಾಥ ಬಸದಿಯಲ್ಲಿ ಸ್ಥಾಪಿಸಿದ–ನೆಂಬ ಅಂಶವನ್ನು ಬಹಿರಂಗಗೊಳಿಸುತ್ತದೆ. ಕೊಯಲ್ ಹೊಂ ರವರ ಅಭಿಪ್ರಾಯದಂತೆ ಮುಕ್ಕೊಡೆಯು, ಸೋಮೇಶ್ವರ ನರಸಿಂಹ ಮತ್ತು ರಾಮನಾಥ ಮೂವರ ಆಳ್ವಿಕೆಯ ಸಂಕೇತ ಸೂಚಕವಾಗಿದೆ. ಆದರೆ ಮುಕ್ಕೊಡೆಯು ಮೂರು ರತ್ನಗಳನ್ನು ಪ್ರತಿಬಿಂಬಿಸುವ ಒಂದು ಜೈನ ಸಂಪ್ರದಾಯವೆಂಬುದನ್ನು ಮನಗಾಣಬೇಕು. ಕ್ರಿ.ಶ.1255ರಲ್ಲಿ ಯುವರಾಜ ಕುಮಾರ

ನರಸಿಂಹದೇವನ ಉಪನಯನವು ಆಚರಿಸಲ್ಪಟ್ಟಿತು ಮತ್ತು ಈ ಸಂದರ್ಭದಲ್ಲಿ ಅವನು ಬೊಪ್ಪದೇವ ದಂಡನಾಯಕನ ವಿಜಯಪಾರ್ಶ್ವ ಬಸದಿಗೆ ಸಹಾಯಧನ ನೀಡಿದನು.

ದೇಶವು ರಾಜಕೀಯ ಅವ್ಯವಸ್ಥೆಯಲ್ಲಿದ್ದಾಗ ನರಸಿಂಹನು ಸಿಂಹಾಸನವನ್ನೇರಿದ್ದನು ತಮಿಳುನಾಡಿನಲ್ಲಿ ಸೋಮೇಶ್ವರನ ಚಟುವಟಿಕೆಗಳಿಂದ ಸೇವುಣರು ಮೊದಲಾದ ಇತರ ಸಮಕಾಲೀನ ರಾಜರು ಬಹಳ ಪ್ರಬಲರಾಗಿದ್ದರು ಮತ್ತು ಯಾವಾಗಲೂ ಹೊಯ್ಸಳರ ಮೇಲೆ ರಾಜಕೀಯ ಪರಮಾಧಿಕಾರವನ್ನು ವಿಸ್ತರಿಸಲು ಕಾತರರಾಗಿದ್ದರು. ನರಸಿಂಹನು ಸಮಕಾಲೀನ ರಾಜಕೀಯ ಪರಿಸ್ಥಿತಿಗೆ ಹೊಂದಿಕೊಳ್ಳುವ ಪ್ರಯತ್ನದಲ್ಲಿದ್ದಾಗಲೇ ಅವನ ಮಲ ಸಹೋದರನಾದ ರಾಮನಾಥನು ಅವನ ವಿರುದ್ಧ ದಂಗೆ ಎದ್ದನು. ರಾಮನಾಥನು ತನ್ನ ಪಾಲಿನ ಭೂಭಾಗದಿಂದ ತೃಪ್ತನಾಗದೆ ನರಸಿಂಹನ ರಾಜ್ಯದ ಒಂದು ಭಾಗವನ್ನು ಪಡೆದುಕೊಳ್ಳುವ ಕೆಲಸದಲ್ಲಿ ತೊಡಗಿದ್ದನು. ನರಸಿಂಹ ಮತ್ತು ರಾಮನಾಥರ ನಡುವಿನ ಯುದ್ಧದಲ್ಲಿ ಇಮ್ಮಡಿ ಬಲ್ಲಾಳ ದೇವರಸನಂತಹ ಸಾಮಂತ ಮುಖ್ಯಸ್ಥನು ರಾಮನಾಥನಿಗೆ ಸಹಾಯ ಮಾಡಿದನು. ಒಂದು ಶಿಲಾಲೇಖವು ತಿಳಿಸುವಂತೆ, ಮಹಾಮಂಡಲೇಶ್ವರ ಕುಮಾರ ಇಮ್ಮಡಿ ಬಲ್ಲಾಳದೇವರಸ ಸೇತುವರೆಗೆ ಮುಂದುವರೆದನು ಮತ್ತು ತಮ್ಮ ಸಾಮಂತನಿಗೆ ರಾಮನಾಥನ ಪರವಾಗಿ, ಹೋರಾಡಲು ಅಪ್ಪಣೆಯಿತ್ತನು. ಈ ಯುದ್ಧದಲ್ಲಿ ಬೀರನೆಂಬುವನು ತನ್ನ ಪ್ರಾಣ ಕಳೆದು ಕೊಂಡನು.

ಈ ಶಿಲಾಲಿಪಿಯಲ್ಲಿ ಸ್ವಾರಸ್ಯಕರ ಅಂಶವೆಂದರೆ ಇದು ಹೊಯ್ಸಳ ರಾಜನ ಆಳ್ವಿಕೆಯ ಕಾಲಕ್ಕೆ ಸೇರಿಲ್ಲ. ಆದರೆ ಮಹಾಮಂಡಲೇಶ್ವರ ತಮ್ಮ ಸಾಮಂತನ ಆಳ್ವಿಕೆಯ ಹದಿಮೂರನೆಯ ವರ್ಷಕ್ಕೆ ಸೇರಿದುದಾಗಿದೆ. ಇದಕ್ಕೆ ಕಾರಣ ಬಹುಶಃ ಕಿರಿಮುಖ್ಯಸ್ಥರು, ರಾಮನಾಥನ ಸಹಾಯದೊಂದಿಗೆ ಸ್ವತಂತ್ರರಾಗಲು ಪ್ರಯತ್ನಿಸಿದ್ದಿರಬಹುದು. ಯುದ್ಧವು ಮೂರನೆಯ ನರಸಿಂಹನ ಆಳ್ವಿಕೆಯ ಕಾಲದೊಳಗೆ ನಡೆದುದರಿಂದ ಭೂಭಾಗವು ರಾಮನಾಥನಿಂದ ಆಕ್ರಮಣಕ್ಕೊಳಗಾಗಿದ್ದಿರಬಹುದೆಂದು ಹೇಳಬಹುದು. ಸೋಮೇಶ್ವರನು ತನ್ನ ರಾಜ್ಯವನ್ನು ಒಳ್ಳೆಯ ನಿರ್ಧಾರದಿಂದಲೇ ವಿಭಜನೆ ಮಾಡಿದ್ದರೂ ಅವನ ಕನಸು ನನಸಾಗಲೇ ಇಲ್ಲ. ಇಬ್ಬರು ಸಹೋದರರು ತಮ್ಮ ತಮ್ಮ ರಾಜ್ಯಗಳನ್ನು ಪರಸ್ಪರ ಸಹಕಾರದಿಂದ ಆಳುವುದರ ಬದಲು ಒಬ್ಬರಿಗೊಬ್ಬರು ತಮ್ಮ ಜೀವಮಾನದುದ್ದಕ್ಕೂ ಅಹಿತವನ್ನೇ ಸಾಧಿಸುತ್ತಲೇ ಬಂದರು. ಅವರಲ್ಲಿ ಪರಸ್ಪರ ತಿಳುವಳಿಕೆ ಸಾಮರಸ್ಯವಿದ್ದಿದ್ದರೆ, ಸಾಮ್ರಾಜ್ಯ ವಿಭಜನೆಯೇ ಹೆಚ್ಚು ಫಲಪ್ರದ–ವಾಗಿರುತ್ತಿತ್ತು. ಪಾಂಡ್ಯನ ರಾಜ್ಯದಲ್ಲಿ ರಾಜರಲ್ಲಿ ಒಬ್ಬನನ್ನು ಸಾರ್ವಭೌಮನೆಂದು ಒಪ್ಪಲಾಗಿ,

ಇತರರು ಅವನಿಗೆ ಸಾಮಂತರಾಗಿದ್ದರು. ಬಹುಶಃ ಸೋಮೇಶ್ವರನು ರಾಜ್ಯ ವಿಭಜನೆಯನ್ನು ತೃಪ್ತಿಕರವಾಗಿ ಮಾಡಲಿಲ್ಲವೆಂದು ತೋರುತ್ತದೆ. ಅವನು ನರಸಿಂಹನನ್ನು ಮೇಲಿನ ಸ್ಥಾನದಲ್ಲಿರಿಸಿದುದನ್ನು ರಾಮನಾಥನು ಒಪ್ಪಲು ಸಿದ್ಧವಿರಲಿಲ್ಲ ಸಾಮ್ರಾಜ್ಯ ವಿಭಜನೆಯು ಆಡಳಿತದ ಅನುಕೂಲಕ್ಕಾಗಿ ಮಾಡಿದ್ದಿರಬೇಕು. ವಿಭಜನೆಯ ನಂತರವೂ ಸೋಮೇಶ್ವರನು ಕಣ್ಣಾನೂರಿನಲ್ಲಿ ಆಳುತ್ತಿದ್ದನು. ಕ್ರಿ.ಶ.1255ರ ಒಂದು ಶಿಲಾಲಿಪಿಯು ಸೋಮೇಶ್ವರನು "ಹಿರಣ್ಯಗರ್ಭ" ಮತ್ತು 'ತುಲಾಪುರುಷ'ಗಳನ್ನು ತನ್ನ ಸಾರ್ವಭೌಮತ್ವವನ್ನು ಸಾರಲು ಆಚರಿಸುತ್ತಿದ್ದನೆಂದು ತಿಳಿಸುತ್ತದೆ. ಮತ್ತೊಂದು ಶಿಲಾಲಿಪಿಯು ಕ್ರಿ.ಶ.1256ನೇ ವರ್ಷಕ್ಕೆ ಸೇರಿದ ಇದು ಸೋಮೇಶ್ವರನು ತನ್ನ ರಾಜ್ಯವನ್ನು ಕಣ್ಣಾನೂರಿನಿಂದಲೇ ಆಳುತ್ತಿದ್ದನೆಂದು ತಿಳಿಸುತ್ತದೆ.

ಮೂರನೆಯ ನರಸಿಂಹನೊಂದಿಗೆ ಅವನ ಮೊದಲನೆಯ ಘರ್ಷಣೆಯ ನಂತರ ರಾಮನಾಥನು ಹೆಚ್ಚಾಗಿ ತನ್ನ ಚಟುವಟಿಕೆಗಳನ್ನು ತಮಿಳು ದೇಶದಲ್ಲಿಯೇ ಇಟ್ಟುಕೊಂಡನು. ರಾಮನಾಥನು ತನ್ನ ತಂದೆ ಸೋಮೇಶ್ವರನ ಮೊದಲ ಎಂಟು ವರ್ಷಗಳ ಆಳ್ವಿಕೆಯಲ್ಲಿ ತನ್ನ ತಂದೆಯೊಂದಿಗೆ ರಾಜಪ್ರತಿನಿಧಿಯಾಗಿದ್ದನು. ಮತ್ತು ಸೋಮೇಶ್ವರನ ಒಪ್ಪಂದಗಳು ರಾಮನಾಥನ ವಿಧಿ ಬರಹವನ್ನೇ ಬೇರೆಯಾಗಿಸಿತು. ಸೋಮೇಶ್ವರನು ಸಮಕಾಲೀನ ಚೋಳ ರಾಜನಾದ ಮೂರನೇ ರಾಜರಾಜನನ್ನು ಕಡವರ ಆಕ್ರಮಣದ ವಿರುದ್ಧ ಬೆಂಬಲಿಸಿದನು. ಮತ್ತು ತನ್ನನ್ನು ತಾನು "ಚೋಳ ಸಾಮ್ರಾಜ್ಯ ಸ್ಥಾಪಕ" ಎಂದು ಕರೆದುಕೊಂಡನು. ಹೀಗೆ ಸೋಮೇಶ್ವರನು ಬಿದ್ದು ಹೋಗುತ್ತಿದ್ದ ಚೋಳರಾಜ್ಯಕ್ಕೆ ಹೊಸ ಜೀವವನ್ನು ನೀಡಿ ಆ ದೇಶದ ಮೇಲೆ ರಾಜಕೀಯ ಪ್ರಭಾವವನ್ನು ವಿಸ್ತರಿಸಲು ಸಮರ್ಥನಿದ್ದನು. ಸೋಮೇಶ್ವರನು ತನ್ನ ಮಗಳಾದ 'ಪಮ್ಮಿಯಕ್ಕನ್'ಳನ್ನು ಎರಡನೇ ಪಾಂಡ್ಯನಿಗೆ ಮದುವೆ ಮಾಡಿ ಕೊಟ್ಟು ಪಾಂಡ್ಯರ ಸಖ್ಯವನ್ನೂ ಸಹ ಬೆಳೆಸಿದನು. ಈ ವೈವಾಹಿಕ ಸಂಬಂಧವು ರಾಜಕೀಯ ಒಪ್ಪಂದಕ್ಕೂ ದಾರಿ ಮಾಡಿ ಕೊಟ್ಟಿತು ಮತ್ತು ಸೋಮೇಶ್ವರನು ತನ್ನ ಬಿರುದನ್ನು "ಪಾಂಡ್ಯ ದಪ್ಪತ್ತು" ದಿಂದ "ಪಾಂಡ್ಯರಾಜ್ಯ ಸ್ಥಾಮನಾಚಾರ್ಯ" ಎಂದು ಬದಲಿಸಿದನು. ಆದರೆ ಈ ಸ್ಥಿತಿಗತಿಗಳು ಬಹುಕಾಲ ಉಳಿಯಲಿಲ್ಲ. ಕ್ರಿ.ಶ.1251ರಲ್ಲಿ ಜಾತವರ್ಮನ್ ಸುಂದರ ಪಾಂಡ್ಯನು ಪಾಂಡ್ಯ ಸಿಂಹಾಸನವನ್ನೇರಿದಾಗ, ತಮಿಳು ದೇಶದಲ್ಲಿ ರಾಜಕೀಯವು ಒಂದು ಹೊಸ ರೂಪವನ್ನು ಪಡೆಯಿತು. ಅವನು ಮಹತ್ವಾಕಾಂಕ್ಷಿಯಾಗಿದ್ದನು ಮತ್ತು ಯುದ್ಧಪ್ರೀಯನಾಗಿದ್ದನು ಮತ್ತು ಸಮಕಾಲೀನ ದಕ್ಷಿಣ ಭಾರತದ ರಾಜ್ಯಗಳು ಬಹುಬೇಗ ಅವನ ತೋಳ್ಬಲವನ್ನು ಅನುಭವಿಸಿದುವು. ಹೊಯ್ಸಳರು ಮತ್ತು ಚೋಳರು ಇವರಲ್ಲಿ ಮೊದಲಿಗರು ಪಾಂಡ್ಯರು ಹೊಯ್ಸಳರಿಂದ ಶ್ರೀರಂಗಂನ್ನು ತೆಗೆದುಕೊಂಡರು.

ಚೋಳರು ಸಹ ಕ್ರಿ.ಶ.1254ರಲ್ಲಿ ಸೋಮೇಶ್ವರನನ್ನು ಸೋಲಿಸಿ, ಹೊಯ್ಸಳರನ್ನು ತಮ್ಮ ಪೂರ್ವಕರ ರಾಜ್ಯಗಳಿಂದ ಕಿತ್ತೊಗೆದರು. ಅದೇ ಸಮಯದಲ್ಲಿ ಚೋಳರೂ ಸಹ ಪಾಂಡ್ಯ ರಾಜ ಸುಂದರ ಪಾಂಡ್ಯನಿಂದ ಸೋಲಿಸಲ್ಪಟ್ಟರು. ಸೋಮೇಶ್ವರ ಮತ್ತು ರಾಮನಾಥ ಪಾಂಡ್ಯರ ಆಕ್ರಮಣವನ್ನು ಎದುರಿಸಲಾರದೆ ಹೋದರು ಮತ್ತು ಅವರು ತಿರುವಣ್ಣಾಮಲೈನಲ್ಲಿ ಆಶ್ರಯಪಡೆದರು. ಇಡೀ ತಮಿಳುದೇಶ ಮತ್ತು ತೆಲುಗು ಜಿಲ್ಲೆಗಳ ಕೆಲವು ಭಾಗಗಳು ಪಾಂಡ್ಯರ ಆಳ್ವಿಕೆಗೆ ಸೇರಿಹೋದವು/ಅಧೀನವಾದುವು. ಹೊಯ್ಸಳರ ರಾಜಧಾನಿ ಕಣ್ಣಾನೂರು ಪಾಂಡ್ಯರಿಂದ ಆಕ್ರಮಿಸಲ್ಪಟ್ಟಿತು. ಶ್ರೀರಂಗಂನಲ್ಲಿ ದೊರೆತಿರುವ ದಿನಾಂಕರಹಿತ ಶಿಲಾಶಾನಸವೊಂದು "ಸುಂದರ ಪಾಂಡ್ಯನು ಕರ್ನಾಟಕ ದೇಶದ ಚಂದ್ರವನ್ನು ಬೇರೆ ಜಗತ್ತಿಗೆ ಕಳುಹಿಸಿಕೊಟ್ಟನು" ಎಂದು ದಾಖಲಿಸಿದೆ. ಆದರೆ ಈ ಹೇಳಿಕೆಯನ್ನು ದೊರೆತಿರುವ ಸಾಕ್ಷ್ಯಾಧಾರಗಳ ಮೇಲೆ ಸಾಬೀತು ಮಾಡಲಾಗುವುದಿಲ್ಲ. ಇದರ ಪ್ರಕಾರ ಸೋಮೇಶ್ವರನು ಕ್ರಿ.ಶ.1262ರವರೆವಿಗೂ ಜೀವಿಸಿದ್ದನೆಂದಾಗುತ್ತಿದೆ. ರಾಮನಾಥ ಮತ್ತು ಸೋಮೇಶ್ವರರು ಪಾಂಡ್ಯರಿಂದ ಸೋಲಿಸಲ್ಪಟ್ಟರೂ ಶ್ರೀರಂಗಂನ್ನು ಅವರಿಗೇ ಬಿಟ್ಟುಕೊಡಲಾಯ್ತು ಎನ್ನುವ ವಿಚಾರವು ರಾಮನಾಥನ ಆಳ್ವಿಕೆಯ ಎರಡನೆಯ, ಏಳನೆಯ ಹದಿನೈದನೆಯ ಮತ್ತು ಹದಿನೇಳನೆಯ ವರುಷಗಳ ದಿನಾಂಕವು ನಮೂದಿಸಲ್ಪಟ್ಟಿರುವ, ಅನೇಕ ಶಿಲಾಶಾಸನಗಳಿಂದ ಊಹಿಸಬಹುದಾಗಿದೆ. ಇದಕ್ಕೆ ಮೊದಲು ಚೋಳರು ಹೊಯ್ಸಳರೊಂದಿಗೆ ಒಪ್ಪಂದ ಮಾಡಿಕೊಂಡರು ಮತ್ತು ರಾಮನಾಥನು ವಂಶಪಾರಂಪರ್ಯ ಬಿರುದನ್ನು ಚೋಳ ರಾಜ್ಯ ಸಂಸ್ಥಾಪಕ ಎನ್ನು ಬಿರುದನ್ನು ಪಡೆದನು. ಹೀಗೆ ತನ್ನ ನೆರೆಯವಾದ ಚೋಳ ಮತ್ತು ಪಾಂಡ್ಯರೊಂದಿಗೆ ಶಾಂತಿಯುತನಾಗಿ, ಬಗೆಹರಿದ ಮೇಲೆ, ರಾಮನಾಥನು ತನ್ನ ಮಲ ಸಹೋದರನಾದ ಮೂರನೆಯ ನರಸಿಂಹನ ಕಡೆ ಗಮನ ಹರಿಸಿದನು.

ರಾಮನಾಥನು ಕ್ರಿ.ಶ.1260[25]ರಲ್ಲಿ ನರಸಿಂಹನ ಭೂಭಾಗದ ಮೇಲೆ ಆಕ್ರಮಣ ಮಾಡಿದನು. ನರಸಿಂಹನು ಅವನ ತಂದೆಯು ರಾಜ್ಯದ ಸಂಪತ್ತಿನೊಂದಿಗೆ ಪ್ರೀತಿಯಿಂದ ಹಂಚಿಕೊಂಡಿದ್ದ. ಸಕಲ ಸಂಪದ್ಭರಿತ ದೋರಸಮುದ್ರದ ರಾಜಧಾನಿಯಲ್ಲಿ, ತನ್ನದೇ ಆದ ದೇಶದಲ್ಲಿ ವಾಸಿಸುತ್ತಿದ್ದನು. ರಾಮನಾಥನ ಸೈನ್ಯವು ಚನ್ನರಾಯಪಟ್ಟಣದವರೆಗೂ ಮುನ್ನಡೆದಿತ್ತು. ಎರಡೂ ಸೈನ್ಯಗಳ ಹೋರಾಟದಲ್ಲಿ ಕಂಬಾಳ ಇರಿಗೆಸೆಟ್ಟಿ ಹೋರಾಡಿ ಮಡಿದನು.

ಇದು ಒಂದು ಚಿಕ್ಕ ಹೋರಾಟ ಮಾತ್ರವಾಗಿತ್ತು ಮತ್ತು ರಾಮನಾಥನು ತನ್ನ ಪ್ರಯತ್ನದಲ್ಲಿ ನಷ್ಟವನ್ನು ಅನುಭವಿಸಿದನು. ಕ್ರಿ.ಶ.1262ರ ವರೆವಿಗೂ ರಾಮನಾಥನ

ಚಟುವಟಿಕೆಗಳು ಕಣ್ಣಾನೂರಿನಲ್ಲಿ ಒಂದು ಸಣ್ಣ ಪ್ರದೇಶದವರೆಗೆ ಮಾತ್ರ ಸೀಮಿತವಾದ್ದುವು. ಅವನ ಶಲಾಶಾಸನಗಳು ಕನ್ನಡ ರಾಜ್ಯದಲ್ಲಿ ಈ ದಿನಾಂಕದ ನಂತರವೇ ಕಂಡು ಬಂದಿವೆ. ಡಿರೆಟ್‌ರವರ ಅಭಿಪ್ರಾಯದಂತೆ ರಾಮನಾಥನು ಪಾಂಡ್ಯರ ಸಾಮಂತವಾಗಿದ್ದನು. ಆದುದರಿಂದ ಅವನು ಕುಂದಣಿಯಲ್ಲಿ ಮತ್ತೊಂದು ರಾಜಧಾನಿಯನ್ನು ಸ್ಥಾಪಿಸಿದನು ಮತ್ತು ತನ್ನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಅಲ್ಲಿಯೇ ನೆಲಸಿದನು. ಕ್ರಿ.ಶ.1256[26]ರಲ್ಲಿ ರಾಮನಾಥ ಮತ್ತು ಸೋಮೇಶ್ವರರು ಸುಂದರ ಪಾಂಡ್ಯನಿಂದ ಸೋಲಿಸಲ್ಪಟ್ಟರೂ, ಅವರು ತಿರುಚನಾಪಳ್ಳಿ ಜಿಲ್ಲೆಯನ್ನು ಮೇಲಿನ ಅವನ ಹಿಡಿತ ಹಾಗೆಯೇ ಮುಂದುವರೆದಿತ್ತು ಮತ್ತು ಅನೇಕ ಶಿಲಾಶಾಸನಗಳು, ಸೋಮೇಶ್ವರನ 25ನೆಯ ವರ್ಷದಿಂದ ಅವನ 29ನೇ ವರ್ಷದವರೆಗೆ ಅಂದರೆ ಕ್ರಿ.ಶ.1262ರವರೆಗಿನ, ದಿನಾಂಕಗಳ ಸಹಿತ, ಇಲ್ಲಿ ದೊರೆತಿವೆ. ಜಾತವರ್ಮ ಸುಂದರ ಪಾಂಡ್ಯ ಮತ್ತು ಸೋಮೇಶ್ವರನ ಮೇಲೆ 1263ರಲ್ಲಿ ಆಕ್ರಮಣ ಮಾಡಿದನು ಮತ್ತು ಕಣ್ಣಾನೂರು ಅವನಿಂದ ಆಕ್ರಮಿಸಲ್ಪಟಿತು. ಆದರೆ ತಿರುಚನಾಪಳ್ಳಿ ಜಿಲ್ಲೆ ತ್ರಿರುವೆಲ್ಲರಿ ಮತ್ತು ತಿರುಪತ್ತೂರು-ಗಳಲ್ಲಿ ರಾಮನಾಥನ ಶಿಲಾಶಾಸನಗಳು. ರಾಮನಾಥನು ಕಣ್ಣಾನೂರು ಮತ್ತು ಅದರ ನೆರೆಹೊರೆಯ ರಾಜ್ಯ ಮೇಲೆ ತನ್ನ ಹಿಡಿತ ಸಾಧಿಸಿದ್ದನೆಂದೇ ಸೂಚಿಸುತ್ತವೆ. ಕ್ರಿ.ಶ.1262[27]ರ ರಾಮನಾಥನ ಶಿಲಾಶಾಸನಗಳು. ತಿರುಚನಾಪಳ್ಳಿಯಲ್ಲಿ ದೊರೆತಿವೆ ಮತ್ತು ಅವುಗಳಲ್ಲಿ ಕೆಲವು ಶಿಲಾಶಾಸನಗಳು ಅವನನ್ನು "ಸಾರ್ವಭೌಮ ಚಕ್ರವರ್ತಿ ವೀರ ರಾಮನಾಥದೇವ" ಎಂದು ಕರೆದಿವೆ.

ಹಾನಗಲ್‌ನ ಕದಂಬರು ಎರಡನೇ ಬಲ್ಲಾಳ ಮತ್ತು ವಿಷ್ಣುವರ್ಧನನ ಕೈ ಕೆಳಗೆ ಸಾಮಂತರಸರಾಗಿದ್ದರು. ಎರಡನೇ ಬಲ್ಲಾಳನ ಕಾಲದಲ್ಲಿ ಕದಂಬರ ಮುಖ್ಯಸ್ಥನಾದ ಕಾಮದೇವನು ಕದಂಬ ಚಕ್ರವರ್ತಿ ಎಂಬ ಬಿರುದಿನೊಡನೆ ಸ್ವತಂತ್ರನಾಗಿ ಆಳುತ್ತಿದ್ದನು. ಕ್ರಿ.ಶ.1260[28]ರಲ್ಲಿ ಕಾಮದೇವರಸನು ಹಾನಗಲ್ ಮತ್ತು ಬನವಾಸಿ ಪ್ರಾಂತ್ಯಗಳ ರಾಜನ ಸಮಕಾಲೀನ ಅರಸನಾಗಿದ್ದನು. ಮೂರನೇ ನರಸಿಂಹನು ತನ್ನ ಸೇವುಣ ವಿರೋಧಿ ನೀತಿಗಳಲ್ಲಿ ಈ ವಂಶದ ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಂಡು ಇವರನ್ನು ತನ್ನ ಅಧೀನಪಡಿಸಿ-ಕೊಳ್ಳುವ ಸಲುವಾಗಿ ಕ್ರಿ.ಶ.1262ರಲ್ಲಿ ಅವರ ಮೇಲೆ ಯುದ್ಧ ಹೊಡಿದನು. ಪೂರ್ವದಲ್ಲಿ ನಿರಕಲ್‌ನಲ್ಲಿ ಶತ್ರುವನ್ನು ಸದೆ ಬಡಿದನು. ಕದನದಲ್ಲಿ ಒಬ್ಬ ಮಸೆಯನಾಯಕನು ಬಿದ್ದನು.

ಹಾನಗಲ್‌ನ ಕದಂಬರ ಮೇಲೆ ಆಕ್ರಮಣ ನಡೆಸಿದ ತಕ್ಷಣವೇ ಹೊಯ್ಸಳರ ಕೈಕೆಳಗೆ ಮುಖ್ಯ ಸಾಮಂತನಾಗಿದ್ದ ಹೊಸಗುಂಡದ ಬೀರಾರಸ ಸಂತರಸನ ಮಗನಾದ ನಂತರ

ಮುಖ್ಯಸ್ಥನಾದ ಬೊಮ್ಮದೇವರಸನ ಮೇಲೆ ವಿಜಯದ ಧಾಳಿಯನ್ನು ನಡೆಸಿದನು. ಅವನ ರಾಜಧಾನಿಯಾದ ಸಂತಲಿಗೆಯು ಉತ್ತರದಲ್ಲಿ ಸೆವುಣ ಸೈನ್ಯ ಮತ್ತು ದಕ್ಷಿಣದಲ್ಲಿ ಹೊಯ್ಸಳರ ನಡುವೆ, ಒಂದು ಅಡ್ಡಗೋಡೆಯಂತಿತ್ತು. ಸೋಮೇಶ್ವರನ ಕಾಲದಲ್ಲಿ ಸಂತರಸರು ತಮ್ಮನ್ನು ತಾವು ಸ್ವತಂತ್ರರೆಂದು ಘೋಷಿಸಿದರು. ಆದುದರಿಂದ ಮೂರನೇ ನರಸಿಂಹನು ಪಟ್ಟಕ್ಕೆ ಬಂದಾಗ ತನ್ನ ಸಾಮಂತ ಮುಖ್ಯಸ್ಥರ ಮೇಲೆ ತನ್ನ ಅಧಿಕಾರವನ್ನು ಪುನಃ ಸ್ಥಾಪಿಸಲು ಕಾರ್ಯವನ್ನು ಕೈಗೊಂಡನು. ಈ ಸಮಯದಲ್ಲಿ ಸಂತರ ಮುಖ್ಯಸ್ಥನಾದ ಬೊಮ್ಮದೇವರಸನು ಸೇವುನರ ಮೇಲೆ ಅವಲಂಬಿತನಾಗಿ ಹೊಸಗುಂಡದಲ್ಲಿ ಆಳುತ್ತಿದ್ದನು. ಕ್ರಿ.ಶ.1265[29]ರಲ್ಲಿ ನರಸಿಂಹನು ತನ್ನ ಸೇನಾನಿ ಸಿಂಗಯ ದಂಡನಾಯಕನನ್ನು ಸಂತಾರ ದೇಶವನ್ನು ಧಾಳಿ ಮಾಡಲು ಕಳುಹಿಸಿದನು. ಸಂತಾರಾ ಕಡೆಯಿಂದ ನಲ್‌ಪ್ರಭು ಕಾಳಗೌಡ ಮತ್ತು ಮೈಜುರದ ಸ್ವಂತ ಸಿಂಗಯ ದಂಡನಾಯಕನ ವಿರುದ್ಧ ಸಾಹಸದಿಂದ ಹೋರಾಡಿದರು. ಅವನು ಶತ್ರುವನ್ನು ವೊನ್ನಾಲಿಯ ಅಂದರೆ ಶಿವಮೊಗ್ಗ ಜಿಲ್ಲೆಯಲ್ಲ ಈಗಿನ ಹೊನ್ನಾಳಿಯ ಬಳಿ ಎದುರಿಸಿದನು ಮತ್ತು ಆನೆ ಮತ್ತು ದನಗಳನ್ನು ವಾಪಸ್ಸು ತಂದನು. ಈ ಧಾಳಿಯ ಸಮಯದಲ್ಲಿ ಸಂತಾರ ಬೊಮ್ಮದೇವರಸನು ಮಲ್ಯೆನಲ್ಲಿ ತನ್ನ ರಾಜ್ಯದ ವಿರುದ್ದದ ಕೊನೆಯಲ್ಲಿ ಹೋರಾಟದಲ್ಲಿ ವ್ಯಸ್ತನಾಗಿದ್ದನು. ಆದುದರಿಂದ ಸಿಂಗಯ ದಂಡನಾಯಕ ಕೊಡಲಿಯಲ್ಲಿ ತನ್ನ ಧಾಳಿಯನ್ನು ಪ್ರಾರಂಭಿಸಬೇಕಿತ್ತು ಮತ್ತು ಸಂತಾರರ ಸೊತ್ತಾಗಿದ್ದ ಕಡವೂರಿನ ಮೇಲೆ ಆಕ್ರಮಣ ನಡೆಸಿದನು.

ಈ ಹೋರಾಟವು ಬಹುಶಃ ಭಾಗಶಃ ಜಯಪ್ರದವಾಗಿತ್ತು. ಹೊಯ್ಸಳರ ಕಡೆಯಿಂದ, ಹೊಯ್ಸಳರ ಸೇನಾನಿ ಸಿಂಗಯ ದಂಡನಾಯಕನು ಸಂತಾರ ಭೂಪ್ರದೇಶವಾಗಿದ್ದ ಕಡವೂರನ್ನು ತನ್ನ ಧಾಳಿಯ ನೆಲೆ ಮಾಡಿಕೊಂಡರು.

ಕ್ರಿ.ಶ.1267[30]ರ ಮತ್ತೊಂದು ಶಿಲಾಶಾಸನವು ಒಂದು ಕಡೆ ಗೋವೆಯ ಚಟ್ಟಾಯದೇವ ಮತ್ತು ಇನ್ನೊಂದು ಕಡೆ ಸಂತಾರ ಸೋಯಿದೇವರಸ ಮತ್ತು ಬೊಮ್ಮರಸರ ನಡುವೆ ಕದನ ಬಗ್ಗೆ ತಿಳಿಸುತ್ತದೆ. ಸೋಯಿದೇವರಸ ಆಗ ಬೊಮ್ಮರಸನೊಂದಿಗೆ ಆಳುತ್ತಿದ್ದನೆಂದು ತೋರುತ್ತದೆ. ಚಟ್ಟಯಾದೇವ ತನ್ನ ಸೈನ್ಯದೊಡನೆ ಮುನ್ನಡೆದನು ಮತ್ತು ಗಟ್ಟಿ ಎಂಬಲ್ಲಿ ಬಿಡಾರ ಹೊಡಿದನು. ಇದೇ ಸಮಯದಲ್ಲಿ ಸೋಯಿದೇವ ಮತ್ತು ಬೊಮ್ಮರಸ ಹೆದ್ದರೆಯಲ್ಲಿ ಬಿಡಾರ ಹೊಡಿದನು. ಸೋಯಿದೇವ ಮತ್ತು ಬೊಮ್ಮರಸರೂ ತನ್ನ ಸಾಮಂತನಾದ ಮುಕ್ಕರಸನಿಗೆ ಶತ್ರುವನ್ನು ಎದುರಿಸಲು ಅಪ್ಪಣೆ ಮಾಡಿದರು ಹಾಗೆಯೇ ಅವನು ಸಾಹಸದಿಂದ ಹೋರಾಡಿದನು. ಈ ಕದನದಲ್ಲಿ ಅವನು ತನ್ನ ಪ್ರಾಣವನ್ನು ಕಳೆದುಕೊಂಡನು. ಗೋವೆಯ ಚಟ್ಟಾಯದೇವನು ಚಟ್ಟಿ

ಅಥವಾ ಗೋವದ ಕದಂಬ ಕುಟುಂಬದ ಮೂರನೆಯ ಶಾಶ್ತದೇವನಾಗಿದ್ದನು. ಗುತ್ತಿಯು ಶಿವಮೊಗ್ಗ ಜಿಲ್ಲೆಯಲ್ಲಿರುವ ಚಂದ್ರಗುತ್ತಿಯೇ ಆಗಿರುವುದು. ಈ ಸ್ಥಳವು ಹಾನಗಲ್ ಕದಂಬರ ಅಧೀನದಲ್ಲಿದ್ದ ಪ್ರಸಿದ್ಧ ಕೋಟೆಯಾಗಿತ್ತು. ಮತ್ತು ಹೊಯ್ಸಳ ರಾಜ್ಯದ ಗಡಿಯಲ್ಲಿತ್ತು. ಮುರನೇ ನರಸಿಂಹನ ಸಾಮಂತರಾಗಿದ್ದ, ಸಂತಾರ ಕುಟುಂಬದ ಮುಖ್ಯಸ್ಥರಾಗಿದ್ದ ಸೋಯಿದೇವರಸ ಮತ್ತು ಬೊಮ್ಮರಸರು ತಮ್ಮ ಒಡೆಯರಾಗಿ, ಕದನದಲ್ಲಿ ಹೋರಾಡಿದರು. ಮೂರನೇ ಶಶ್ತನು ಈ ಯುದ್ಧದಲ್ಲಿ ಸೆವುಣ ರಾಜನ ಪರವಾಗಿ ಭಾಗವಹಿಸಿದನು.

ನರಸಿಂಹನು ಈಗ ಕರ್ನಾಟಕ ನಾಡಿನ (ಈಗಿನ ಬೆಂಗಳೂರು ಮತ್ತು ಕೋಲಾರ) ರಾಜನ ಕಡೆ ತನ್ನ ಗಮನ ಹರಿಸಿದನು. ಇವನು ತನ್ನ ಬಿರುದಿನ ಹಿಂದೆ 'ಕೋಲ' ಎನ್ನುವ ಹೆಸರನ್ನು ಸೇರಿಸುವ ಉದ್ಧಟತನವನ್ನು ತೋರಿದ್ದನು. ನರಸಿಂಹನು ಆತನ ಸೊಕ್ಕನ್ನಡಗಿಸಲು ದೊಡ್ಡ ಸೈನ್ಯವನ್ನು ಕಳುಹಿಸಿದನು. ನಡವಾಳ ಮುಖ್ಯಸ್ಥನ ವಿದ್ರೋಹವು ಆರ್ಥಿಕವಾಗಿತ್ತು. ಏಕೆಂದರೆ, ನರಸಿಂಹ ಮತ್ತು ರಾಮನಾಥ ಇಬ್ಬರೂ, ಪ್ರಸಿದ್ಧ ಭೂಮಿಯ ಹಳೆಯ ಕೋಲಾನಿಗೆ ಸೇರದ ಸ್ವತ್ತಿನ ಮೇಲೆ ಭೂ ಕಂದಾಯದ ಮೇಲೆ ಹಕ್ಕು ಚಲಾಯಿಸಿದ್ದರು. ಇದಕ್ಕೆ ವಿರುದ್ಧವಾಗಿ ಮುಖ್ಯಸ್ಥರು ಚೋಳ ದೇಶದೊಂದಿಗೆ ಪ್ರಭುತ್ವವನ್ನು ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ ಮತ್ತು ಇಬ್ಬರು ಸಹೋದರರಲ್ಲಿ ಯಾರಿಂದಲೇ ಆಗಲಿ, ಸರಕಾರೀ ತೆರಿಗೆಯ ಹೇರಿಕೆಯನ್ನು ವಿರೋಧಿಸಿದರು. ಅಂತಿಮವಾಗಿ ನರಸಿಂಹನು ತನ್ನ ಹಕ್ಕನ್ನು ಬಿಟ್ಟುಕೊಡಬೇಕಾಯಿತು.

ನರಸಿಂಹನು ನಿಧಾನವಾಗಿ ತನ್ನ ರಾಜಕೀಯ ಹಿನ್ನಡೆಗೆ ಹೊಂದಿಕೊಳ್ಳುತ್ತಿರುವಾಗಲೇ ನಿಡುಗಲ್ ಚೋಳ ರಾಜರು ಕ್ರಿ.ಶ.1269[31]ರಲ್ಲಿ ಈಗಿನ ತುಮಕೂರು ಜಿಲ್ಲೆಯಲ್ಲಿನ ಕೆಲವು ಹಳ್ಳಿಗಳ ಮೇಲೆ ಧಾಳಿ ನಡಿಸಿದನು. ಇರುಂಗೋಳದ ಇಡೀ ಸೈನ್ಯವು ಸ್ಥಳೀಯ ಮುಖ್ಯಸ್ಥ ಗೆಳೆಯ-ನಾಯಕರ ಜೊತೆ ಸೇರಿ ಅನೆಬದ್ದರಸಿನಾಡುವಿನ ಮೇಲೆ ಧಾಳಿ ನಡೆಸಿದ. ಈ ಪ್ರಾಂತ್ಯವನ್ನು ನರಸಿಂಹನ ಮಂತ್ರಿಯಾದ ಕುಮಾರ ವೀರ ಚಿಕ್ಕ ಕೇತಯ-ನಾಯಕನು ಆಳುತ್ತಿದ್ದನು.

ಮೂರನೇಯ ನರಸಿಂಹನು ತನ್ನ ಸಹೋದರನೇ ಆದ ರಾಮನಾಥ ಮತ್ತು ಸೇವುಣರ ವಿರುದ್ಧ ಹೋರಾಟಗಳಲ್ಲಿಯೇ ತೊಡಗುತ್ತಿದ್ದ ಕಾರಣ, ಆ ಕಾಲದ ರಾಜಕೀಯ ಪರಿಸ್ಥಿತಿಯು ಎರಡನೇಯ ಇರುಂಗೋಳನ ಪರವಾಗಿತ್ತು. ಈ ಅವಕಾಶವನ್ನು ಉಪಯೋಗಿಸಿಕೊಂಡು, ನಿಡುಗಲ್ ಚೋಳ ಮುಖಂಡನು ಹೊಯ್ಸಳ ರಾಜ್ಯದ ಮೇಲೆ ಆಕ್ರಮಣ ಮಾಡಿದನು. ಆದರೆ

ಹೊಯ್ಸಳ ಸೇನಾಧಿಕಾರಿ, ಚಿಕ್ಕ ಕೇತಯ ದಮಡನಾಯಕನು ಧಾಳಿ ಮಾಡುತ್ತಿದ್ದ ಸೈನ್ಯವನ್ನು ಬಲವಾಗಿ ವಿರೋಧಿಸಿದನು.

ಹನ್ನೆರಡನೇಯ ಶತಮಾನದ ಕೊನೆಯ ಕಾಲುಭಾಗವು ಮತ್ತು ಹದಿಮೂರನೇಯ ಶತಮಾನದ ಇಡೀ ಭಾಗವು ಹೊಯ್ಸಳರ ಮತ್ತು ಸೇವುಣರ ನಡುವೆ ಪರಮಾಧಿಕಾರಕ್ಕಾಗಿ ನಡೆದ ನಿರಂತರ ಹೋರಾಟಕ್ಕೆ ಸಾಕ್ಷಿಯಾಗಿದೆ. ಎರಡನೆಯ ಬಲ್ಲಾಳನು ಸೇವುಣ ರಾಜ ಐದನೆಯ ಬಿಲ್ಲಣನನ್ನು ಸೋಲಿಸಿ ತನ್ನ ಸಾಮ್ರಾಜ್ಯದ ಒಗ್ಗೂಡುವಿಕೆಗೆ ಇದ್ದ ದೊಡ್ಡ ಅಡಚಣೆ-ಯನ್ನು ನಿವಾರಿಸಿದನು. ಪರುಮಲೆಯು ರತ್ನಪಾಲನ ಜವನಿಕೆಯನ್ನು ವಶಪಡಿಸಿಕೊಂಡನು ಮತ್ತು 'ಜವನಿಕ ನಾರಾಯಣ' ಎಂಬ ಬಿರುದನ್ನು ಪಡೆದನು.

ಹೊಯ್ಸಳ ದಾಖಲೆಗಳ ಪ್ರಕಾರ ಹೊಯ್ಸಳ ಸೈನ್ಯವು ಚಿಕ್ಕ ಕೇತಯ ದಂಡನಾಯಕನ ನೇತೃತ್ವದಲ್ಲಿ ರಕ್ಷಣೆಗಾಗಿ ಬಲವಾಗಿ ಹೋರಡಿತು ಮತ್ತು ಸೇವುಣ ಸೈನ್ಯವು ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲೆಗಳ ಗಡಿಪ್ರದೇಶದಲ್ಲಿರುವ ಒಂದು ಗುಡ್ಡ ಡಮ್ಮಿಯವರೆವಿಗೂ ಹಿಂದೆ ಸರಿಯಲೇ ಬೇಕಾಯಿತು. ನರಸಿಂಹನು ಈಗ ನಿಡುಗಲ್ ಚೋಳರ ವಿರುದ್ಧ ಮುನ್ನಡೆದನು. ನಿಡುಗಲ್ ಚೋಳರ ರಾಜ ಎರಡನೆಯ ಇರುಂಗೋಲನು ಹೊಯ್ಸಳರ ರಾಜಧಾನಿಯಾದ ದೋರ ಸಮುದ್ರದ ಮೆಲೆ ಧಾಳಿ ಮಾಡಲು ಕ್ರಿ.ಶ.1276[32]ರಲ್ಲಿ ಸೇವುಣ ಸೈನ್ಯವನ್ನು ಸೇರಿದ್ದನು. ಇರುಂಗೋಲನಿಗೆ ತುರ್ತು ಅಪಾಯವು ಹೊಯ್ಸಳರಿಂದ ಇದ್ದುದರಿಮದ ಹೊಯ್ಸಳರ ಶತ್ರುಗಳಾಗಿದ್ದ ದೇವಗಿರಿಯ ಸೇವುಣರೊಂದಿಗೆ ಕೈ ಜೋಡಿಸುವುದಲ್ಲದೆ ಬೇರೆ ದಾರಿಯೇ ಇರಲಿಲ್ಲ. ಕ್ರಿ.ಶ.1277ರಲ್ಲಿ ಎರಡನೇ ಇರುಂಗೋಲನು "ಯುದ್ಧ ಭಯಂಕರ" ಮತ್ತು "ತ್ರಿಭುವನ ಮಲ್ಲ" ಮೊದಲಾದ ಭಾರೀ ಬಿರುದುಗಳೊಂದಿಗೆ ತನ್ನ ರಾಜ್ಯವನ್ನಾಳುತ್ತಿದ್ದನು. ಈ ಬಿರುದುಗಳನ್ನು ಕ್ರಿ.ಶ.1276ರ ಮೊದಲು ಹೊಂದಿರಲಿಲ್ಲ. ಇರುಂಗೋಲನ ಉತ್ತರಾಧಿಕಾರಿ ಬೊಮ್ಮಿದೇವ ಹೊಯ್ಸಳರಿಂದ ಆಕ್ರಮಣವನ್ನು ಎದುರಿಸಬೇಕಾಯಿತು. ಕ್ರಿ.ಶ.1285ರಲ್ಲಿ ರಾಜಾ ನರಸಿಂಹನು ನಿಡುಗಲ್ ಕೋಟೆಯ ವಿರುದ್ಧ ದಂಡೆತ್ತಿಹೋದನು ಮತ್ತು ಬಾಗೆಯಕೆರೆಯನ್ನು ವಶಪಡಿಸಿಕೊಂಡ ನಂತರ ಕೋಟೆಯನ್ನು ವಶಪಡಿಸಿಕೊಂಡನು. ಕ್ರಿ.ಶ.1286ರ ದಿನಾಂಕವುಳ್ಳ ಒಂದು ವೀರಗಲ್ಲು ನರಸಿಂಹನು ನಿಡುಗಲ್ ಕೋಟೆ ವಶಪಡಿಸಿಕೊಳ್ಳುವಾಗ ಏಕ್ಕತಿ ರಾಮೇಯನಾಯಕನು ಮರಣ ಹೊಂದಿದ ಬಗ್ಗೆ ಪ್ರಸ್ತಾಪಿಸಿದೆ.

ಕ್ರಿ.ಶ.1289ರಲ್ಲಿ ಬಿಟ್ಟನ ಕೋಟೆಯ ಮೇಲೆ ನರಸಿಂಹನು ಧಾಳಿ ನಡೆಸಿದನು. ಮಹಾಪಾಸಯಿತ ಅಡಗಿದನು. ಕದನಕ್ಕೆ ನುಗ್ಗಲು ಸೈನ್ಯಕ್ಕೆ ಅಪ್ಪಣೆ ಮಾಡಿದನು. ಮತ್ತು

ಬಸವನಹಳ್ಳಿ ಮತ್ತು ದೇವಲಿಂಗ ನಾಡಿನಲ್ಲಿ ಬೇಲೂರಿನ ಕೆಲ ಯೋಧರು ಕದನಕ್ಕೆ ನಡೆದರು ಮತ್ತು ರಾಮನಾಥನ ಸೈನ್ಯದ ವಿರುದ್ಧ ಹೋರಾಡಿದರು ಮತ್ತು ರಾಮನಾಥನು ಅವರನ್ನು ಅಡಗಿಸಿದನು. ಮುಂದಿನ ಹೋರಾಟವು ಕ್ರಿ.ಶ.1290ರಲ್ಲಿ ಈ ಸಹೋದರರ ನಡುವೆ ನಡೆಯಿತು. ಹೋರಾಟದ ದೃಶ್ಯವು ಈಗಿನ ತುಮಕೂರಿನ ಪೂರ್ವಭಾಗವಾಗಿತ್ತು. ಸನ್ನೆಹಳ್ಳಿಯ ಕಿರಿಯ ನಾಯಕನು ಒಂದು ಆನೆಯ ಕಾಲಿನ ಕೆಳಗೆ ಬಿದ್ದು ಸತ್ತು ಹೋದನು. ಮೊದಲನೆಯ ಮತ್ತು ಎರಡನೆಯ ಪ್ರಯತ್ನದ ನಡುವಿನ ಧೀರ್ಘ ವಿರಾಮವು ರಾಮನಾಥನು ತಮಿಳು ದೇಶದ ಕಡೆ ಗಮನವನ್ನು ಹೆಚ್ಚು ಕೇಂದ್ರೀಕರಿಸಿದ್ದನೆಂಬುವುದನ್ನು ಸೂಚಿಸುತ್ತದೆ.

ಈ ಕಾಲದ ರಾಜಕೀಯ ಇತಿಹಾಸದ ಅಧ್ಯಯನವು ರಾಮನಾಥನು ದಕ್ಷಿಣದಲ್ಲಿ ಹೊಯ್ಸಳರ ಸ್ವತ್ತನ್ನು ವಾಪಸ್ಸು ಪಡೆಯಲು ಹತಾಶ ಪ್ರಯತ್ನಗಳನ್ನು ಮಾಡಿದನೆಂಬುದನ್ನು ಸೂಚಿಸುತ್ತದೆ. ಕ್ರಿ.ಶ.1279ರಲ್ಲಿ ಮೂರನೆ ರಾಜೇಂದ್ರನ ಮರಣಾನಂತರ ಚೋಳ ಸಾಮ್ರಾಜ್ಯದ ಅವನತಿಯು ದಕ್ಷಿಣದಲ್ಲಿ ಹೊಯ್ಸಳರಿಗೆ ಒಂದು ಮರಣಾಂತಿಕ ಪೆಟ್ಟಾಗಿತ್ತು. ರಾಮನಾಥನ ತಮಿಳು ಪ್ರದೇಶಗಳು ಈ ಸಮಯದಲ್ಲಿ ಕೈ ಬಿಟ್ಟವು. ರಾಮನಾಥನ ಮೂವತ್ತಂಟನೆಯ ಆಳ್ವಿಕೆಯ ವರ್ಷದ ಬಗ್ಗೆ ಅಂದರೆ 1292-93ರಲ್ಲಿ ತಿಳಿಸುವ ಅವನ ಒಂದೇ ಒಂದು ದಾಖಲೆಯು ಚಿತ್ತೂರು ಜಿಲ್ಲೆಯ ಪುಂಗನೂರು ಎಂಬಲ್ಲಿ ದೊರೆತಿದೆ. ಡಾ||ವೆಂಕಟರಾಮಯ್ಯ-ನವರ "ಹೊಯ್ಸಳರು ಕರ್ನಾಟಕದಲ್ಲಿ ತಮ್ಮ ಪೂರ್ವಿಕರ ಭೂ ಪ್ರದೇಶಗಳಗಷ್ಟೇ ಮುಂದಿನ ಮೂವತ್ತು ವರ್ಷಗಳವರೆಗೆ ತೃಪ್ತರಾಗಿ ಉಳಿಯಬೇಕಾಯಿತು. ಏಕೆಂದರೆ ಬಲಶಾಲಿಯಾದ ಮುಮದುವರೆದ ಮಾರವರ್ಮ ಕುಲಶೇಖರನ ಆಳ್ವಿಕೆಯು ದಕ್ಷಿಣದಲ್ಲಿ ಅವರ ಭೂ ವಿಸ್ತರಣೆಯ ಕನಸನ್ನು ಅಸಾಧ್ಯ ಮಾಡಿಬಿಟ್ಟಿತು." ಎನ್ನುವ ಇವರ ಅಭಿಪ್ರಾಯವನ್ನು ನಾವು ಒಪ್ಪಿಕೊಳ್ಳ-ಬಹುದಾಗಿದೆ.

ನರಸಿಂಹನ ಕೊನೆಯ ವರ್ಷಗಳು ರಾಮನಾಥನ ವಿರುದ್ಧ ಹೋರಾಡುತ್ತಲೇ ಕಳೆದವು ಮತ್ತು ಆಗಾಗ್ಗೆ ನಡೆದ ಈ ಯುದ್ಧಗಳು ಎರಡೂ ಕಡೆಗಳಲ್ಲಿ ಹೊಯ್ಸಳ ಬಲವನ್ನು ಕುಗ್ಗಿಸಿದವು. ಕ್ರಿ.ಶ.1291ರಲ್ಲಿ ನರಸಿಂಹನ ಮಗನಾದ ಮೂರನೇ ಬಲ್ಲಾಳನ ಸಾರ್ವಭೌಮಿಕ ಬಿರುದು-ಗಳೊಂದಿಗೆ ರಾಜ್ಯವಾಳುವುದನ್ನು ಕಾಣುತ್ತೇವೆ. ಕ್ರಿ.ಶ.1281ರಲ್ಲಿ ಅವನು ಯುವರಾಜನಾಗಿದ್ದನು ಮತ್ತು ಮೂಡಬಿದ್ರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತುಳುವರನ್ನು ಆಳಿದನು. ಕ್ರಿ.ಶ.1291ರಲ್ಲಿ ರಾಜಾ ನರಸಿಂಹನು ಮರಣ ಹೊಂದಿದನು. ಅದೇ ವರುಷ ಅವನ ಅಂಗರಕ್ಷಕರು ಆತ್ಮಾಹುತಿ ಹೊಂದಿದರು. ಅಗ್ರಹಾರ ನಚಲ್ಲಿಯಲ್ಲಿ ದೊರೆತಿರುವ ಶಿಲಾಶಾಸನ-

ವೊಂದು ರಂಗೇಯನಾಯಕ ತನ್ನ ಪತ್ನಿಯರಾದ ಕೇತವ್ವೆನಾಯಕಿತಿ, ಹೊನ್ನವೆನಾಯಕಿತಿ, ಹತ್ತುಲೆಂಕಿತಿಯರು ಮತ್ತು ಇಪ್ಪತ್ತೊಂದು ಲೆಂಕರು ನರಸಿಂಹನು ಸತ್ತಾಗ ಗರುಡರಾದರೆಂದು ತಿಳಿಸುತ್ತದೆ. ಇದು ಆ ದಿನಗಳ ಸಾಮಾನ್ಯ ಪದ್ಧತಿಯಾಗಿತ್ತು.

ರಾಜಾ ನರಸಿಂಹನು "ಶ್ರೀ ಪೃಥ್ವೀವಲ್ಲಭಂ, ಮಹಾ ರಾಜಾಧಿರಾಜಮ್ ಪರಮೇಶ್ವರಮ್ ಪರಮಭಟ್ಟಾರಕವರ್ ದ್ವಾರಾವತಿಪುರಾಧೀಶ್ವರಮ್, ಸತ್ಯಾಶ್ರಯ ಕುಲತಿಲಕಮ್, ಯಾದವ-ಕುಲಂಬರ-ದ್ಯುಮಣಿ ಸರ್ವಜ್ಞ-ಚೂಡಾಮಣಿ, ಮಲೆರಾಜರಾಜ, ಮಲಾಪರಲ್ ಗಂಡ, ಗಂಡ-ಬೇರುಂಡ, ಕದನ ಪ್ರಚಂಡ, ಅಸಹಾಯ ಶೂರ, ಏಕಾಂಗವೀರ, ಸನಿವರಸಿದ್ಧಿ ಗಿರಿದುರ್ಗಮಲ್ಲ, ಛಲದಂಕರಾಮ-ವೈರಿಭ-ಕಂಠೀರವಮ್ ಚೋಳರಾಯ ಸ್ಥಾಪನಾಚಾರ್ಯ, ಪಾಂಡ್ಯ ರಾಜ್ಯ ಪ್ರತಿಷ್ಟಾಹಾರ್ಯ ಮಗದರಾಯ-ರಾಜ್ಯ-ನಿರ್ಮೂಲನಂ, ಭುಜಬಲ ಪ್ರತಾಪಚಕ್ರವರ್ತಿನ್" ಎಂಬ ಇವೇ ಮೊದಲಾದ ಬಿರುದುಗಳನ್ನು ಹೊಂದಿದ್ದನು.

ಈ ಬಿರುದುಗಳ ಅರ್ಥವು "ಅದೃಷ್ಟ ಸಂಪತ್ತಿನೊಡೆಯ", ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರ್ಕ", ದ್ವಾರಾವತಿಪುರದ ಒಡೆಯ", ಸತ್ಯಾಶ್ರಯ-ಕುಲದ ಕೀರ್ತಿ", "ಯಾದವಕುಲದ ಆಕಾಶದಲ್ಲಿ ಸೂರ್ಯ", "ಸರ್ವಜ್ಞಾನಶಿರೋಮಣಿ", "ಪುರುಷ-ರಾಜರ ರಾಜ", "ಮಲಪಾಸರಲ್ಲಿ ಅಗ್ರಗಣ್ಯ", "ಗಂಡಬೇರುಂಡ". "ಯುದ್ಧದಲ್ಲಿ ಶೂರ", "ಅಸಹಾಯ ಯೋಧ", "ಏಕನಾಯಕ", "ಸನಿವಾರಸಿದ್ಧಿ", "ಗಿರಿದುರ್ಗ್ಗಮಲ್ಲ", "ಯುದ್ಧದಲ್ಲಿ ಶಕ್ತಿಯಲ್ಲಿ ರಾಮ", "ಶತ್ರುಗಳಿಗೆ ಆನೆಗೆ ಸಿಂಹ", "ಚೋಳ ರಾಯ ಸ್ಥಾಪಕ", "ಪಾಂಡ್ಯರಾಯ ಸ್ಥಾಪಕ", ಮಗರರಾಯನ ಬುಡಮೇಲು ಮಾಡುವವನ ಭುಜಬಲ ಪ್ರತಾಪ ಚಕ್ರವರ್ತಿ".

## ಅಡಿಟಿಪ್ಪಣಿಗಳು

1) EC VI, Kp.12
2) EC XI, AK, 123
3) QJMS, II, pp.126
4) MAR, 1912-13, p.37
5) EC XII, p.12
6) Aiyangar, Ancient India, p.158
7) E.I.VII, p.176
8) Ibid, p.177
9) EC XI, Dg. 129
10) EC V, AK, 166
11) Ibid, p.502
12) EC III, Md. 62
13) EC IV, KP 9
14) EC VI, Kd, 115
15) EC IX, Bn 6
16) Ibid, p.23
17) EC IV, Hg 10
18) Ibid Cn 242
19) Ibid, TP 23
20) Ibid
21) EC X, BI 27
22) Ibid IX, HK 24
23) EC IV, CD 130
24) EC V, Dg 111
25) EC X, Mg 102
26) EC VI BI 97
27) EC VII, HK 86
28) EC VIII, Mg 47
29) EC V, BI 151
30) EC IV, SB 101
31) Ibid, 105
32) Ibid, 110

# ಅಧ್ಯಾಯ–7
# ಮೂರನೆಯ ವೀರಬಲ್ಲಾಳ: ಯುದ್ಧಗಳು ಮತ್ತು ಹೊಯ್ಸಳರ ಅವನತಿ

7.1 ಐತಿಹಾಸಿಕ ಹಿನ್ನೆಲೆ

7.2 ಮೂರನೆಯ ವೀರಬಲ್ಲಾಳನ ರಾಜಕೀಯ ಇತಿಹಾಸ

- 7.2.1 ದಕ್ಷಿಣ ಭಾರತದ ಪರಿಸ್ಥಿತಿ
- 7.2.2 ಮೂರನೆಯ ವೀರಬಲ್ಲಾಳನ ಪಟ್ಟಾಭಿಷೇಕ
- 7.2.3 ಮೂರನೆಯ ಬಲ್ಲಾಳನ ಯುದ್ಧಗಳು
- 7.2.4 ಮೂರನೇ ಬಲ್ಲಾಳ ಮತ್ತು ವಿಜಯನಗರ

# ಅಧ್ಯಾಯ–7
# ಮೂರನೆಯ ವೀರಬಲ್ಲಾಳ: ಯುದ್ಧಗಳು ಮತ್ತು ಹೊಯ್ಸಳರ ಅವನತಿ

## 7.1 ಐತಿಹಾಸಿಕ ಹಿನ್ನೆಲೆ

ಎರಡನೇ ಬಲ್ಲಾಳನು ಹೊಯ್ಸಳ ಆಳ್ವಿಕೆಯ ರಾಜರುಗಳಲ್ಲಿ ಪ್ರಮುಖನಾದವನು ಹಾಗೂ ಅವರ ಸಮಕಾಲೀನ ರಾಜರ ಆಳ್ವಿಕೆಯಲ್ಲಿ ಹೊಯ್ಸಳರ ಅಧಿಕಾರದ ಪರಾಕಾಷ್ಠತೆಯನ್ನು ಮುಟ್ಟಿಸಿದನು. ಪುನಃ ಆ ಮಟ್ಟಕ್ಕೆ ಹೊಯ್ಸಳರು ಏರಲಾಗಲಿಲ್ಲ.

ಮೂರನೆಯ ವೀರಬಲ್ಲಾಳನು ಅಧಿಕಾರದ ಚುಕ್ಕಾಣಿಯನ್ನು ಹಿಡಿಯುವ ವೇಳೆಗೆ ಪರಿಸ್ಥಿತಿಯು ಬಹಳ ಹದಗೆಟ್ಟಿತ್ತು. ಆತನು ತನ್ನ ಸಾಮ್ರಾಜ್ಯವನ್ನು, ಸುತ್ತಲೂ ಇರುವ ಶತ್ರುಗಳಿಂದ ಕಾಪಾಡಿಕೊಳ್ಳುವುದು ಅತಿ ಮುಖ್ಯವಾಗಿತ್ತು. ಹಾಗಾಗಿ ಮೂರನೆಯ ವೀರಬಲ್ಲಾಳನ ಆಳ್ವಿಕೆಯಲ್ಲಿ ಯುದ್ದಗಳು ಹೆಚ್ಚಾಗಿದ್ದವು. ಜನರ ಕ್ಷೇಮಾಭಿವೃದ್ಧಿಗೆ ಹೆಚ್ಚಿನ ಗಮನ ನೀಡಲಾಗಲಿಲ್ಲ. ಕಲೆ, ಸಾಹಿತ್ಯ, ಶಿಕ್ಷಣ, ವಾಸ್ತುಶಿಲ್ಪದಲ್ಲೂ ಗಣನೀಯ ಅಭಿವೃದ್ಧಿ ಕಂಡುಬರಲಿಲ್ಲ.

ಕ್ರಿ.ಶ.1222ರ ಚಿಕ್ಕಮಗಳೂರು ಶಾಸನವು ಮೂರನೆಯ ವೀರಬಲ್ಲಾಳನ ಪಟ್ಟಾಭಿಷೇಕದ ಉಲ್ಲೇಖಮಾಡಿದೆ. ತನ್ನ ಪಟ್ಟಾಭಿಷೇಕದ ನಂತರ 3ನೆಯ ವೀರಬಲ್ಲಾಳನು ದೋರಸಮುದ್ರ–ದಿಂದ ಆಳ್ವಿಕೆಯನ್ನು ಮಾಡುತ್ತಿದ್ದನು. ಆಗ ಮರಕಾಲದ ಸಮುದ್ರ ಪಾಂಡ್ಯನು ಕಳಸ–ಕಾರ್ಕಳ ಭಾಗದಲ್ಲಿ 3ನೆಯ ವೀರಬಲ್ಲಾಳನ ಸಾಮಂತ ರಾಜನಾಗಿದ್ದ ವೀರ ಪಾಂಡ್ಯನ ಪ್ರಾಂತ್ಯದ ಮೇಲೆ ದಂಡೆತ್ತಿ ಹೋಗಿದ್ದನು ಎಂದು ಆ ಶಾಸನದಲ್ಲಿ ಉಲ್ಲೇಖವಾಗಿದೆ.

ಹೊಯ್ಸಳ ಮೂರನೆಯ ವೀರಬಲ್ಲಾಳ ಹಾಗು ಸೇವುಣರ ಸೈನ್ಯದ ನಡುವೆ ಅನೇಕ ಬಾರಿ ಸಂಘರ್ಷಗಳು ನಡೆದಿದ್ದವು. ಮೂರನೆಯ ವೀರಬಲ್ಲಾಳನ ಆಳ್ವಿಕೆಗೂ ಮೊದಲು ರಾಮಚಂದ್ರನು ಹೊಯ್ಸಳರ ಮೇಲೆ ಅನೇಕ ಬಾರಿ ಆಕ್ರಮಣ ಮಾಡಿದ್ದನು. ಕ್ರಿ.ಶ.1276ರಲ್ಲಿ ಅತಿ ದೊಡ್ಡ ಸೈನ್ಯವನ್ನು ಸಾಳುವ ಚಿಕ್ಕಮನ ನಾಯಕತ್ವದಲ್ಲಿ ಕಳುಹಿಸಿದ್ದ ಕೆಲವೇ ಶಾಸನಗಳು ಹೇಳುವಂತೆ ಸಮಯಪ್ರಜ್ಞೆಯಿಂದಾಗಿ ತಮ್ಮ ನಾಶವನ್ನು ಕೆಲಕಾಲ ಮುಂದೂಡಿದರು. ಹೊಯ್ಸಳರ ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಸೇವುಣರ ಸೈನ್ಯಕ್ಕೆ ನಡುಕವನ್ನು ಉಂಟುಮಾಡಿ, ತಮ್ಮ ವಿಜಯ ಸಾಧಿಸಿದರು ಎಂದಿದೆ. ಆದರೆ ಸೇವುಣರ ಶಾಸನಗಳಲ್ಲಿ ಇರುವ

ಚಿತ್ರಣವೇ ಬೇರೆ. ಹೊಯ್ಸಳರ ರಾಜಧಾನಿ ದೋರಸಮುದ್ರವನ್ನು ತಮ್ಮ ಸ್ವಾಧೀನ ಪಡಿಸಿಕೊಂಡು ಅವರ ಆಸ್ತಿ, ಕುದುರೆ, ಆನೆಗಳನ್ನು ಕಪ್ಪ ಕಾಣಿಕೆಯಾಗಿ ಪಡೆದು ವಿಜಯ ಪತಾಕೆ ಹಾರಿಸಿದರು ಎಂದು ಶಾಸನಗಳು ಹೇಳುತ್ತದೆ.

ಸೇವುಣ ಮನೆತನದ ಮಹಾರಾಜ ರಾಮಚಂದ್ರ ವೀರಬಲ್ಲಾಳನ ಕಾರ್ಯಶಕ್ತಿಯನ್ನು ಗೌರವಿಸಿದ್ದನು. ಹೊಯ್ಸಳರ 3ನೆಯ ಬಲ್ಲಾಳನನ್ನು ಉದ್ದೇಶಿಸುತ್ತಾ ಆ ಒರಟು ಹುಡುಗನನ್ನು ಅಂದರೆ, ಕರ್ನಾಟಕದ ಮಹಾರಾಜನನ್ನು ಹಿಡಿದು ತರುವಂತೆ ತಮ್ಮವರಿಗೆ ಆದೇಶಿಸಿದ್ದ. ಕುಮ್ಮಟದ ಕಪಿಲದೇವ ಸೇವುಣರ ಸಾಮಂತ ರಾಜನಾಗಿದ್ದ ಎಂದು ಶಾಸನಗಳು ಹೇಳುತ್ತವೆ. ಅವರ ಪರವಾಗಿ ಯುದ್ದಮಾಡಿದ ಕಪಿಲದೇವ ಸೇವುಣರ ಅವಸಾನದ ನಂತರ ಸ್ವತಂತ್ರನಾದರೂ ಹೊಯ್ಸಳರ ವಿರುದ್ಧದ ಹಗೆ ಮುಂದುವರೆದಿತ್ತು. ಕನಿಷ್ಠ ನಾಲ್ಕು ಯುದ್ಧಗಳು ಇವರ ನಡುವೆ ನಡೆದಿದ್ದಾಗಿ ಶಾಸನಗಳೂ ತಿಳಿಸುತ್ತವೆ.

ಮುಸಲ್ಮಾನ ಇತಿಹಾಸ ಲೇಖಕರು ಮುಸ್ಲಿಂ-ಹೊಯ್ಸಳರ ನಡುವಿನ ಸಂಘರ್ಷದ ಒಂದು ಮುಖವನ್ನೇ ತಿಳಿಸಿದ್ದಾರೆ. ಮೂರನೆಯ ವೀರಬಲ್ಲಾಳನು ಮುಸಲ್ಮಾನರ ಸೈನ್ಯಕ್ಕೆ ಸ್ವೇಚ್ಛೆಯಿಂದ ವಶವಾಗಲಿಲ್ಲ. ತಮ್ಮ ಪ್ರಯತ್ನ ಫಲಿಸದಿದ್ದಾಗ ಅವರಿಗೆ ಶರಣಾದನು ಎಂದು ಶಾಸನವು ತಿಳಿಸುತ್ತದೆ.

ಕ್ರಿ.ಶ.1310ರ ಶಾಸನವು ಹೇಳುವಂತೆ ಹಾಸನ ತಾಲ್ಲೂಕು ದುದ್ದದಿಂದ ನಾಡ ಗೋವೆಯ ಮಾಚೇಯ ನಾಯಕನ ಮಗ ಬೈಚೇಯ ನಾಯಕ ಮಹಮದೀಯರ ಆಕ್ರಮಣವನ್ನು ತಡೆಯಲು ಪ್ರಯತ್ನಿಸಿದನು. ಹೊಯ್ಸಳರ ರಾಜಧಾನಿಯ ಮರು ನಿರ್ಮಾಣ ಹಾಗು 4ನೇ ವೀರಬಲ್ಲಾಳನನ್ನು ದೆಹಲಿಯ ಸುಲ್ತಾನರು ರಾಜಸ್ಥಾನಕ್ಕೆ ಕಳುಹಿಸಿದ್ದು, ನಂತರ ಕ್ರಿ.ಶ.1313ರಲ್ಲಿ ವಾಪಸಾದದ್ದು ಶಾಸನಗಳಿಂದಷ್ಟೆ ತಿಳಿಯುತ್ತದೆ.

ವೀರಬಲ್ಲಾಳನ ಆಡಳಿತದ ಒಂದು ಮುಖ್ಯವಾದ ಲಕ್ಷಣವೆಂದರೆ ಆತನು ಒಂದೇ ಸ್ಥಳದಲ್ಲಿ ಹೆಚ್ಚುಕಾಲ ಅನವಶ್ಯಕವಾಗಿ ಇರುತ್ತಿರಲಿಲ್ಲ. ದಕ್ಷಿಣ ರಾಜಧಾನಿ ತಿರುವಣ್ಣಾಮಲೈನಿಂದ ದೂರದ ಉತ್ತರದ ವಿರೂಪಾಕ್ಷ ಪಟ್ಟಾಣಕ್ಕೆ ವೇಗವಾಗಿ ಸಂಚರಿಸುತ್ತಾ ಆಡಳಿತದ ವಿಷಯದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿದ್ದ ಎಂದು ಶಾಸನಗಳು ಸ್ಪಷ್ಟವಾಗಿ ತಿಳಿಸುತ್ತದೆ.

ಶಿಲಾಶಾಸನಗಳು 3ನೇ ವೀರಬಲ್ಲಾಳನ ಪಾರಂಪರಿಕ ರಾಜಧಾನಿ ದೋರ ಸಮುದ್ರದ ಹೊರತು ಪಡಿಸಿ ಬೇರೆಬೇರೆ ರಾಜಧಾನಿ ಕುರಿತು ಏನೂ ಮಾಹಿತಿ ನೀಡಿಲ್ಲ. ಬಹಳಷ್ಟು ಶಾಸನಗಳು ತಿಳಿಸುವಂತೆ ಮತ್ತೊಂದು ರಾಜಧಾನಿಯಾಗಿದ್ದ ತಿರುವಣ್ಣಾಮಲೈನಲ್ಲಿ ತನ್ನ ಅಧಿಪತ್ಯದ ಉತ್ತರಾರ್ದದಲ್ಲಿ ವಾಸ್ತವ್ಯ ಹೂಡಿದ್ದ. ಅರುಣಸಮುದ್ರ ಮತ್ತೊಂದು ರಾಜಧಾನಿಯಾದರೂ, ತಿರುವಣ್ಣಾಮಲೈಗಿಂತ ಭಿನ್ನವಾದುದ್ದು. ವಿರೂಪಾಕ್ಷ ಪಟ್ಟಣ ಅಥವ ವಿರೂಪಾಕ್ಷ ಹೊಸದುರ್ಗವು ಮತ್ತೊಂದು ರಾಜಧಾನಿಯಾಗಿತ್ತು. ಅದೇ ಇಂದಿನ ಹಂಪಿ ಎಂದು ಗುರ್ತಿಸಲ್ಪಟ್ಟಿದೆ. ಕನ್ನಡ ನಾಡಿನ ವಿಜಯನಗರದ ಮೂಲವೂ ಇದೇ.

ಕಡೂರು ತಾಲ್ಲೂಕಿನ ಕ್ರಿ.ಶ.1368ರ ಶಾಸನವು 3ನೇ ವೀರಬಲ್ಲಾಳನ ಕೊನೆಯ ದಿನಾಂಕವನ್ನು ತಿಳಿಸುತ್ತದೆ. ಕಂಕಯನ ಮರಣವನ್ನು ಸ್ಮರಿಸುತ್ತಾ ಆ ಶಾಸನದಲ್ಲಿ ಹೀಗೆ ಉಲ್ಲೇಖಿಸಿದೆ "ದೇವರ ಕೂಡೆ ದೇವಲೋಕವ ಸೂರೆಗೊಂಡಂಥ ಕಂಕಯ" ಅಂದರೆ ಕ್ರಿ.ಶ.1342ರಲ್ಲಿ ತಿರುಚನಾಪಳ್ಳಿಯಲ್ಲಿ ಮಹಮದೀಯರ ವಿರುದ್ಧನಡೆದ ಕಾಳಗದಲ್ಲಿ 3ನೇ ವೀರಬಲ್ಲಾಳನೊಂದಿಗೆ ಕಂಕಯನೂ ಮರಣವನ್ನಪ್ಪಿದ. ವಿರೂಪಾಕ್ಷ ಬಲ್ಲಾಳನ ಶಾಸನಗಳೇ ಹೇಳುವಂತೆ ಆತನ ಆಳ್ವಿಕೆಯ ಅವಧಿ ಕೇವಲ ಮೂರರಿಂದ ನಾಲ್ಕು ವರ್ಷ. ಈತನೊಂದಿಗೇ ಹೊಯ್ಸಳ ಸಾಮ್ರಾಜ್ಯದ ರಾಜಕೀಯ ಪ್ರಭಾವವು ಮರೆಯಾಯಿತು.

ಜೀವನೋಪಾಯ ಕುರಿತಂತೆ ತಿಳಿಸಲು ಸಹಾಯವಾಗುವುದು ಶಾಸನಗಳಿಂದಲೇ. 3ನೇ ವೀರಬಲ್ಲಾಳನ ಪಟ್ಟದ ಪೆರಿಯರಸಿಯಾಗಿ ಚಿಕ್ಕಾಯಿತಾಯಿ ಬರುತ್ತಾಳೆ. ತನ್ನ ಗಂಡನ ಪರವಾಗಿ ದಕ್ಷಿಣ ಕೆನರಾದ ಬರಹಕನ್ಯಾಪುರದಿಂದ ಆಳುಪ ಪರಂಪರೆಯವರೆಗೂ ಅದು ಆಳುಪರ ಕೇಂದ್ರ ಕಾರ್ಯಸ್ಥಾನವಾಗಿತ್ತು. ಕ್ರಿ.ಶ.1348ರ ವರೆಗೂ ಆಳ್ವಿಕೆ ನಡೆಸಿದಳು. 3ನೇ ವೀರಬಲ್ಲಾಳನ ಮರ್ಣಾನಂತರ ಸಂಗಮ ಮನೆತನದ ಹರಿಹರ ಹಾಗು ಸಹೋದರರ ಸಂಪರ್ಕವೇರ್ಪಟ್ಟಿ ಮಿತ್ರಳಾಗಿ ಅಥವ ಸಾಮಂತರಾಣಿಯಾಗಿದ್ದಳು. ಈಕೆಯ ಮರಣಾನಂತರ ಪುತ್ರ ಕುಲಶೇಖರ ಅಧಿಕಾರಕ್ಕೆ ಬರುತ್ತಾನೆ. ಆದರೆ ಕೆಲಕಾಲ ಮಾತ್ರ ಆಳ್ವಿಕೆ ಮಾಡಿದ ಎಂದು ಶಾಸನಗಳಿಂದ ತಿಳಿಯುತ್ತದೆ.

3ನೇ ವೀರಬಲ್ಲಾಳನಿಗೆ ಸಂಬಂಧಿಸಿದಂತೆ ಐತಿಹಾಸಿಕ ಮಹತ್ವವುಳ್ಳ ಕೃತಿ "ರುಕ್ಮಿಣಿ ಕಲ್ಯಾಣ"ವನ್ನು ಸಂಸ್ಕೃತದಲ್ಲಿ ಆಸ್ಥಾನ ಕವಿ 3ನೇ ವಿದ್ಯಾಚಕ್ರವರ್ತಿನ್ ರಚಿಸಿದ. ಈ ಮಹಾಕಾವ್ಯ ಅನೇಕ ಅಧ್ಯಾಯಗಳನ್ನೊಳಗೊಂಡಿದೆ. ಮೊದಲ ಅಧ್ಯಾಯ ಅಂದರೆ

ಪರಿಚಯಾತ್ಮಕ ಅಧಾಯವು ಹೊಯ್ಸಳರ ಸಂಕ್ಷಿಪ್ತ ಇತಿಹಾಸವನ್ನು ತಿಳಿಸುತ್ತದೆ. 2ನೇ ವೀರಬಲ್ಲಾಳನ ಆಡಳಿತ ಕಾಲದಿಂದ 3ನೇ ವೀರಬಲ್ಲಾಳನ ಕಾಲದವರೆಗೂ ತಿಳಿಸುತ್ತದೆ. ಆದರೆ, ಕಾಯವದಲ್ಲಿ ನಿಜವಾಗಿ ಇರುವುದು ಶ್ರೀಕೃಷ್ಣನ ಕಥೆ ಅದಕ್ಕೂ ಹೊಯ್ಸಳ ಇತಿಹಾಸದೊಂದಿಗೆ ಯಾವುದೇ ಸಂಬಂಧವಿಲ್ಲ.

"ರುಕ್ಮಿಣಿ ಕಲ್ಯಾಣ" ಮಹಾಕಾವ್ಯದ ಲೇಖಕ ಶ್ರೀ ವಿದ್ಯಾಚಕ್ರವರ್ತಿನ್ 3ನೇ ನರಸಿಂಹನ ಆಸ್ಥಾನ ಕವಿ ವಾಸುದೇವನ ಮಗ. ಆತನ ಹಿರಿಯ ಸಹೋದರ ಮಹಾದೇವ 3ನೇ ನರಸಿಂಹನ ಮಗ 3ನೇ ವೀರಬಲ್ಲಾಳನಿಗೆ ಖಾಸಗಿ ಶಿಕ್ಷಕನಾಗಿದ್ದ. ತನ್ನ ಸಹೋದರನಿಂದ ವಿದ್ಯಾಚಕ್ರವರ್ತಿನ್ ಎಲ್ಲ ಶಾಸ್ತ್ರಗಳನ್ನೂ ಕಲಿತ. 3ನೇ ವೀರಬಲ್ಲಾಳನಿಗೆ ಈತನೆಂದರೆ ಅಚ್ಚುಮೆಚ್ಚು. ಈ ಶ್ರೇಷ್ಠ ಕವಿಯಿಂದ ಬಹಳಷ್ಟು ಶಾಸನಗಳು ರೂಪುಗೊಂಡಿವೆ.

ಈತನ ಪೂರ್ವಜರು ಶ್ರೇಷ್ಠ ಪಂಡಿತರು ಹೊಯ್ಸಳರಿಗೆ ತಮ್ಮ ಸೇವೆ ಸಲ್ಲಿಸಿದ್ದಾರೆ. ಶ್ರೀ ವಿದ್ಯಾಚಕ್ರವರ್ತಿನ್ ಪೂರ್ವಜರಲ್ಲಿ ಅತೀ ಮುಖ್ಯರಾದವರು ಚಕ್ರವರ್ತಿನ್ ಈತ 3ನೇ ವೀರಬಲ್ಲಾಳನ ಆಸ್ಥಾನ ಕವಿಯಾಗಿದ್ದ.

3ನೇ ವೀರಬಲ್ಲಾಳನ ಆಸ್ಥಾನ ಕವಿ ಈ ಮಹಾಕಾವ್ಯ ರಚಿಸಿದ. ಈತ ಬಹಳ ಬುದ್ಧಿಶಾಲಿ, ದೂರ ದೃಷ್ಟಿ ಉಳ್ಳವ, ಧೀರ, ಆತನ ಜನಾಂಗಕ್ಕೇ ಭೂಷಣನಾಗಿದ್ದ. ಶ್ರೀಕೃಷ್ಣನ ಭದ್ರ ಬುನಾದಿಯಂತೆ ಹೊಯ್ಸಳರಿಗೂ ಭದ್ರ ತಳಹದಿ ಸ್ಥಾಪಿಸಿದ. ಕೇರಳದ ಕಂಕ (ಕೊಂಗ) ಕೊಂಕಣಿ ಹಾಗು ಕಾಂಚಿ ಇವರ ವಿರುದ್ಧ ಹಲವಾರು ಯುದ್ಧವಾಡಿ ವಿಜಯಿಯಾಗಿದ್ದಾನೆ.

ರುಕ್ಮಿಣಿ ಕಲ್ಯಾಣದ ಮೊದಲ ಆಧ್ಯಾದಲ್ಲಿ ವಿದ್ಯಾಚಕ್ರವರ್ತಿನ್ ಐತಿಹಾಸಿಕ ಮಹತ್ವವುಳ್ಳ ವಿಷಯವಗಳನ್ನು ತಿಳಿಸಿದ್ದಾನೆ ಎಂದು ಅನೇಕ ಶಾಸಗಳು ಆ ಹೇಳಿಕೆಯನ್ನು ಬೆಂಬಲಿಸಿವೆ. ಬಹಳಷ್ಟು ಹೇಳಿಕೆಗಳನ್ನು ಶಾಸನಗಳು ಧೃಡಪಡಿಸಿವೆ. ಕೆಲವು ಮಾತ್ರ ಅತಿಶಯೋಕ್ತಿಯಾಗಿದೆ.

18ನೇ ಶತಮಾನದ ಮೊದಲ ಭಾಗದಲ್ಲಿ ಪ್ರವರ್ಧವಾನಕ್ಕೆ ಬಂದ ಲಕ್ಷ್ಮಣ ಶಾಸ್ತ್ರಿಯ "ಗುರುವಂಷ ಮಹಾಕಾವ್ಯ"ದಲ್ಲಿ ಅನೇಕ ಐತಿಹಾಸಿಕ ಆಸಕ್ತಿಯುಳ್ಳ ವಿಷಯಗಳು ಹೊರಬಂದಿವೆ. ಅಂತೆಯೇ ಒಂದನೇ ಹರಿಹರ ಹಗುನುಕ್ಕ ಮತ್ತು ಹೊಯ್ಸಳರ ಅರಸ 3ನೇ ವೀರಬಲ್ಲಾಳನ ನಡುವೆ ನಡೆದ ಸಂಘರ್ಷಗಳ ಕುರಿತೂ ಈ ಕಾವ್ಯದಲ್ಲಿ ಹೇಳಲಾಗಿದೆ.

ಕನ್ನಡ ಸಾಹಿತ್ಯದಲ್ಲೂ ೩ನೆಯ ವೀರಬಲ್ಲಾಳನ ಇತಿಹಾಸ ಕುರಿತ ಮಾಹಿತಿ ದೊರೆಯುತ್ತದೆ. ಕುಮ್ಮಟದ ಕಪಿಲದೇವನ ಯೋಗ್ಯ ಪುತ್ರ ಕುಮಾರರಾಮನ ಕಥೆಯಲ್ಲಿ ಹೊಯ್ಸಳ ರಾಜರ ವಿರುದ್ಧ ತನ್ನ ಘರ್ಷಣೆಯನ್ನು ಉಲ್ಲೇಖಿಸಲಾಗಿದೆ. ಮೂರನೆ ವೀರಬಲ್ಲಾಳನ ಚಟುವಟಿಕೆಗಳ ಕುರಿತಂತೆ ನೇರವಾಗಿ ಅಲ್ಲದಿದ್ದರೂ ಈರೀತಿಯಲ್ಲಿ ಆಧಾರಗಳು ದೊರಕುತ್ತವೆ, ಅವನು ಪರನಾರಿಯರಿಗೆ ಸಹೋದರನೆಂಬತಹ ಕಥೆ–ರಚನೆ–ನಾಗಸಂಗಯ್ಯ, ಪರದಾರಾ ಸೋದರ ರಮಣಕಾಂತ ಹಾಗೂ ಗಂಗನ ಕುಮಾರ ಸಾಂಗತ್ಯ.

ಈ ಮೂರು ಸಾಹಿತ್ಯಗಳಲ್ಲಿ ಕುಮಾರರಾಮ ಹಾಗೂ ಮೂರನೆಯ ವೀರಬಲ್ಲಾಳನ ನಡುವೆ ನಡೆದ ಕದನಗಳ ಬಗ್ಗೆ ಮಾಹಿತಿಯು ದೊರಕುತ್ತದೆ. ಒಂದು ಯುದ್ಧವನ್ನು ಕುರಿತಂತೆ ವಿವರವಿದೆ. ಅದರಂತೆ ಕುಮಾರರಾಮನ ಸೈನಿಕರು ಮೇಲುಗೈಯನ್ನು ಪಡೆದಾಗ ಎರಡೂ ಕಡೆಯ ಸೈನ್ಯಗಳು ಒಪ್ಪಂದಕ್ಕೆ ಬಂದು ಯುದ್ಧವನ್ನು ಅಂತ್ಯಗೊಳಿಸಿದವು. ಕಂಪಿಲನ ಮಗ ಕುಮಾರರಾಮನು ಹೊಯ್ಸಳ ರಾಜನಿಗಿಂತ ಒಂದು ಕೈ ಮೇಲಾಗಿದ್ದನೆಂದು ಈ ಎಲ್ಲಾ ಸಾಹಿತ್ಯಗಳೂ ಹೇಳುತ್ತವೆ. ಕುಮಾರರಾಮನು ಎರಡು ಬಾರಿ ಮಹಮದೀಯರ ವಿರುದ್ಧ ಹೋರಾಡಿ ಜಯಗಳಿಸಿದ್ದನು ಆದರೆ ಮೂರನೆಯ ಬಾರಿ ಮಹಮದೀಯರ ಕೀಳು ನೈತಿಕತೆಯ ಕಾರಣವಾಗಿ ಕುಮಾರರಾಮನು ಬಲಿಪಶುವಾಗಬೇಕಾಯಿತು.

ತಿರುವಣ್ಣಾಮಲೈನ "ಅರುಣಾಚಲ ಪುರಾಣಮ್" ಎಂಬ ಸ್ಥಳೀಯ ಪುರಾಣದಲ್ಲಿ (ದಂತಕಥೆ) ಮೂರನೇ ವೀರಬಲ್ಲಾಳನ ಕುರಿತಂತೆ ಕೆಲವು ಐತಿಹಾಸಿಕ ಮಾಹಿತಿಗಳು ದೊರೆಯುತ್ತವೆ. ಆದರೆ ಅದರಲ್ಲಿರುವ ಕೆಲವು ವಿಷಯಗಳನ್ನು ನಂಬಲು ಸಾಧ್ಯವಿಲ್ಲ. ಉದಾಹರಣೆಗಾಗಿ ಮೂರನೆ ವೀರಬಲ್ಲಾಳನಿಗೆ ಮಕ್ಕಳಿರಲಿಲ್ಲ, ದೇವರಲ್ಲಿ ಪ್ರಾರ್ಥಿಸಿದ ನಂತರ ಮಗನ ಜನನವಾಯಿತು ಮತ್ತು ಆ ಮಗುವೇ ನಾಲ್ಕನೆಯ ಬಲ್ಲಾಳನ ನಂತರ ವಿರೂಪಾಕ್ಷನಾಗಿ ಹೊಯ್ಸಳ ಸಾಮ್ರಾಜ್ಯವನ್ನು ಮುಂದುವರೆಸಿದನು ಎಂದಿದೆ. ಆದರೆ ಶಾಸನಗಳಲ್ಲಿರುವ ದಾಖಲೆಯ ಪ್ರಕಾರ ಮೂರನೆಯ ವೀರಬಲ್ಲಾಳನಿಗೆ ಅರುಣ ಸಮುದ್ರನೊಂದಿಗೆ ಸಂಪರ್ಕವಾದದ್ದು ಕ್ರಿ.ಶ.1316–17ರ ಸುಮಾರಿನಲ್ಲಿ. ಅದು ಹೊಯ್ಸಳರ ರಾಜಧಾನಿಯ ಪುನರ್‌ನಿರ್ಮಾಣವಾದ ನಂತರ. ಸಹಜವಾಗಿ ಅದರ ನಂತರವೇ ಅವನು ಮಗನಿಗಾಗಿ ಪ್ರಾರ್ಥಿಸಿರಬೇಕು. ಆದರೆ ಶಾಸನಗಳು ಉಲ್ಲೇಖಿಸುವಂತೆ ಮತ್ತು ಮಹಮದೀಯರ ಆಧಾರದಂತೆ ಅವನಿಗೆ ನಾಲ್ಕನೆಯ ವಿರೂಪಾಕ್ಷ ಬಲ್ಲಾಳ ಎಂಬ ಮಗನಿದ್ದನು. ಆತನನ್ನು ತನ್ನ

ಅಧೀನತೆಯ ಕುರುಹಾಗಿ ದೆಹಲಿಯ ಆಸ್ಥಾನಕ್ಕೆ ಕಳುಹಿಸಿದ್ದನು. ಆದ್ದರಿಂದ "ಅರುಣಾಚಲ ಪುರಾಣ"ವೂ ಐತಿಹಾಸಿಕ ನೆಲೆಗಟ್ಟಿನಲ್ಲಿ ಯಾವುದೇ ಉಪಯೋಗಕ್ಕೂ ಬರುವುದಿಲ್ಲ.

ಕೆಲವು ಪರ್ಶಿಯನ್ ಪ್ರಯಾಣಿಕರ ಬರವಣಿಗೆಗಳು ಹೊಯ್ಸಳ ಮಹಮದೀಯರ ಘರ್ಷಣೆಗಳ ಕುರಿತಂತೆ ತಿಳಿಸಿವೆ. ಮಹಮದೀಯರ ಇತಿಹಾಸದಲ್ಲಿ ತಿಳಿಸಿರುವಂತೆ ಆ ಬರಹಗಾರರು ಯಾವಾಗಲೂ ಮಹಮದೀಯರು ಹಾಗು ಇಬ್ನಬತೂತು ಇವರ ಕುರಿತು ಪಕ್ಷಪಾತ ದೋರಣೆಯನ್ನು ತೋರುತಿದ್ದರು. ಸಮಕಾಲೀನರಾಗಿದ್ದ ಅಮೀರ್ ಖುಸ್ರು, ಇಸ್ಸಾಮಿ, ಬರಾನಿ ಮುಂತಾದವರು ರಾಜರುಗಳ ಹಾಗೂ ರಾಜಾಸ್ಥಾನದೊಂದಿಗೆ ಸ್ನೇಹಪೂರ್ವಕವಾದ ಸಂಬಂಧವನ್ನು ಹೊಂದಿದ್ದರು. ಹಾಗಾಗಿ ಸಹಜವಾಗಿಯೇ ಆ ಬರಹಗಾರರಿಗಿಂತ ಉತ್ತಮವಾಗಿ ಅಲ್ಲಿನ ಯುದ್ಧ ಮತ್ತು ಒಳಸಂಚುಗಳನ್ನು ಅರ್ಥಮಾಡಿಕೊಂಡಿದ್ದರು. ಆದರೆ ಮಾನವ ಸಹಜಗುಣದಂತೆ ಮಹಮ್ಮದೀಯರ ಕೈ ಮೇಲಾಯಿತೆಂಬಂತೆಯೂ ದೇಶೀಯ ರಾಜರನ್ನು ಅತ್ಯಂತ ದುಃಖತಪ್ತ ಸ್ಥಿತಿಯಲ್ಲೂ ಬಿಂಬಿಸಿದ್ದರೆ, ಇದು ನಿಜವಾದ ಇತಿಹಾಸಕಾರರಿಂದ ನಿರೀಕ್ಷಿಸುವಂತಹದ್ದಲ್ಲ.

ವಿದೇಶೀ ಬಹರಗಾರರಲ್ಲಿ ಪ್ರಮುಖವಾದವನು ಅಮೀರ್ ಖುಸ್ರು ದಿಲ್ಹವಿ. ಸೇವುಣರ ರಾಜಧಾನಿ ದೇವಗಿರಿ ಹಾಗೂ ಹೊಯ್ಸಳರ ರಾಜಧಾನಿ ಬರಹಗಳು ಐತಿಹಾಸಿಕ ಮಹತ್ವವನ್ನು ಹೊಂದಿದೆ.

ದಂಡಯಾತ್ರೆ ಕುರಿತಂತೆ ವಿವರವಾದ ಮಾಹಿತಿ ನೀಡಿ ಇವನು ಗಮನವನ್ನು ಸೆಳೆದಿದ್ದಾನೆ. ತೈಯ್ಕ್-ಇ-ಅಲೈ ಅಥವ ಖಜೈನ್ ಉಲ್ ಫುತ್‌ನಲ್ಲಿ ದಾಖಲಾಗಿರುವಂತೆ ಅಲ್ಲಾವುದ್ದೀನನ ಮೊದಲ ಹದಿನಾರು ವರ್ಷಗಳ ಆಳ್ವಿಕೆಯ ಕಾಲದಲ್ಲಿ ದೇವಗಿರಿಗೆ ಮಹಮದೀಯರ ಸೈನ್ಯವನ್ನು ತಾನೇ ಮುನ್ನಡೆಸಿಕೊಂಡು ಹೋಗಿ ಸೇವಣರ ರಾಜನಾದ ರಾಮಚಂದ್ರನನ್ನು ಸೋಲಿಸಿದನು. ಮಹಮದೀಯರ ಸೈನ್ಯವು ವಾಪಸಾಗುವಾಗ ಅವನ ಮಗ ಸಿಂಗಳನು ಆ ಸೈನ್ಯದ ಮೇಲೆ ಆಕ್ರಮಣವನ್ನು ನಡೆಸಿದನು. ಆದರೆ ಅದರಲ್ಲಿ ವಿಫಲನಾಗಿ ಅದಕ್ಕೆ ತಕ್ಕ ಶಿಕ್ಷೆಯಾಗಿ ಕಪ್ಪ ಕಾಣಿಕೆಯನ್ನು ನೀಡಬೇಕಾಯಿತು. ದಕ್ಷಿಣದ ಮೊದಲ ದಂಡಯಾತ್ರೆ-ಯಾದ ಕೆಲವೇ ವರ್ಷಗಳಲ್ಲಿ ಸೈನ್ಯಾಧಿಪತಿ ಮಲ್ಲಿಕಾಫ಼ರನ ನೇತ್ರತ್ವದಲ್ಲಿ ಅಲ್ಲಾವುದ್ದೀನನು ಒಂದು ಸೈನ್ಯವನ್ನು ಹೊಯ್ಸಳರ ರಾಜಧಾನಿಯಾದ ದೋರಸಮುದ್ರದತ್ತ ಕಳುಹಿಸಿದನು. ಮಹಮದೀಯರ ಸೈನ್ಯಕ್ಕೆ ದೇವಗಿರಿಯಲ್ಲಿ ಶಸ್ತ್ರಾಸ್ತ್ರ ಹಾಗು ಮದ್ದುಗುಂಡುಗಳನ್ನು

ಪೂರೈಸಲಾಯಿತು. ಕೇವಲ ಇಪ್ಪತ್ತೆರಡು ದಿನಗಳಲ್ಲಿ ಅವನು ದೋರಸಮುದ್ರವನ್ನು ವೇಗವಾಗಿ ತಲುಪಿದನು. ಮೂರನೆಯ ವೀರಬಲ್ಲಾಳನು ಆಸಮಯದಲ್ಲಿ ಪಾಂಡ್ಯ ದೇಶದಲ್ಲಿ ಕಾರ್ಯ ನಿರತನಾಗಿದ್ದನು ಹಾಗು ಅವನು ಬಹಳ ವೇಗವಾಗಿ ರಾಜಧಾನಿಗೆ ಹಿಂತಿರುಗಬೇಕಾಯಿತು. ಅಮೀರ್ ಖುಸ್ರುವು ತಿಳಿಸಿರುವಂತೆ ಯಾವುದೇ ಪ್ರತಿಭಟನೆ ಇಲ್ಲದೆ ಹೊಯ್ಸಳ ರಾಜನು ಅವರ ವಶಕ್ಕೊಳಪಟ್ಟನು. ಹೊಯ್ಸಳ ರಾಜನು ಜನರಲ್‌ನನ್ನು ತಾನು ತನ್ನ ಕೋಟೆಯಿಂದ ನಾಲ್ಕಾರು ಕಲ್ಲುಗಳನ್ನು ಎಸೆದುದಕ್ಕೆ ಕ್ಷಮೆಯಾಚಿಸಿದನು ಎಂದು ಅಮೀರ್ ಖುಸ್ರು ಚಿತ್ರಿಸಿದ್ದಾನೆ. ಅಂತ್ರೆ ಮೊದಲಿಗೆ ಪ್ರತಿಭಟಿಸಿ ವರ ಸೈನ್ಯವು ತನ್ನ ಸೈನ್ಯಕ್ಕಿಂತ ಬಲಿಷ್ಟವಾದುದು ಎಂಬುದನ್ನು ಮನಗಂಡು ಮೂರನೆ ವೀರಬಲ್ಲಾಳನು ಶಾಂತಿಯಿಂದಿದ್ದು ಧನಧಾನ್ಯಗಳನ್ನು ನೀಡಿದನು ಎಂದು ಬರೆದ ಲೇಖಕ ಹೊಯ್ಸಳ ರಾಜನು ತನ್ನ ಮೈಮೇಲಿದ್ದ ಎಲ್ಲಾ ಒಡವೆಗಳನ್ನೂ ಜನಿವಾರವನ್ನು ಹೊರತುಪಡಿಸಿ ಮಲ್ಲಿಕಾಫ಼ರನಿಗೆ ಒಪ್ಪಿಸಿದ ಎಂದು ವಿವರಿಸಿದ್ದಾನೆ. ತನ್ನ ವಶವಾಗುವಿಕೆಯ ಪ್ರತೀಕವಾಗಿ ತನ್ನ ಮಗ ನಾಲ್ಕನೆಯ ವಿರೂಪಾಕ್ಷ ಬಲ್ಲಾಳನನ್ನು ದೆಹಲಿ ಸುಲ್ತಾನನ ಆಸ್ಥಾನಕ್ಕೆ ಒತೀಯಾಳಾಗಿ ಕಳುವಿಸಿದನು ಎಂದು ಶಿವಮೊಗ್ಗ ಜಿಲ್ಲೆಯ ಕೂಡಲಿ ಶಾಸನವು ಈ ಹೇಳಿಕೆಯನ್ನು ಖಾತ್ರಿ ಪಡಿಸಿದೆ.

ಧನ ಧಾನ್ಯ ಐಶ್ವರ್ಯವನ್ನು ದೆಹಲಿ ಸುಲ್ತಾನರಿಗೆ ಕಳುಹಿಸಿದ ನಂತರ ಮಲ್ಲಿಕಾಫ಼ರನು ಪಾಂಡ್ಯ ಸಹೋದರರು ಆಳುತ್ತಿದ್ದ ಮಬಾರ್ ದೇಶದ ಕಡೆಗೆ ತೆರಳಿದನು. ವೀರ ಪಾಂಡ್ಯ ಹಾಗು ಸುಂದರ ಪಾಂಡ್ಯ ಸಹೋದರರು ಗೆರಿಲ್ಲಾ ತಂತ್ರಗಾರಿಕೆಯನ್ನು ಅಳವಡಿಸಿಕೊಂಡಿದ್ದರು. ಮಹಮದೀಯರು ಬಹಳಷ್ಟು ತೊಂದರೆ ನೀಡಿದರು. ಆದರೆ, ತಮ್ಮ ಐಶ್ವರ್ಯವನ್ನು ತುಂಬಿಸಿಕೊಂಡು ಹೋಗಿ ದೆಹಲಿಗೆ ಸಾಗಿಸುತ್ತಿದ್ದ ಮಹಮದೀಯರನ್ನು ತಡೆಯುವಲ್ಲಿ ವಿಫಲಾರಾದರು.

ಸೇವುಣರ ವಿರುದ್ಧ ಮೊದಲ ವಿಜಯ ಸಾಧಿಸಿದ ಅಲ್ಲಾವುದ್ದೀನನ ನಂತರ ಜಿಯಾ–ಉದ್ದೀನ್ ಬರಾನಿ ಬರುತ್ತಾನೆ. ಅಲ್ಲಾ–ಉದ್ದೀನನು ಸೇವುಣ ಹಾಗು ಹೊಯ್ಸಳರ ವಿರುದ್ಧ ಸಾಧಿಸಿದ ವಿಜಯವನ್ನು ತಾರಿಕ್–ಇ–ಶಾಹಿ ಉಲ್ಲೇಖಿಸಿದ್ದಾನೆ. ಇದು ಅತ್ಯಂತ ಮಹತ್ವವುಳ್ಳ ಮಾಹಿತಿಯಾಗಿದೆ. ಆತನ ಪ್ರಕಾರ ಮಹಮದೀಯರ ಸೈನ್ಯವು ಇಬ್ಬರು ಜನರಲ್ ಗಳನ್ನೊಳಗೊಂಡಿತ್ತು ಖಾಜಾ ಹಜಿ ಹಾಗು ಮಲ್ಲಿಕಾಫ಼ರ್ ಮೂರನೆ ವೀರಬಲ್ಲಾಳನು ಭೀಕರ ಆಕ್ರಮಣಕ್ಕೆ ಬಲಿಪಶುವಾದನು. ಮುವತ್ತಾರು ಆನೆಗಳೊಂದಿಗೆ ಬಹಳಷ್ಟು ಐಶ್ವರ್ಯವನ್ನು (ಊಹಿಸಲೂ ಸಾಧ್ಯವಾಗದಷ್ಟು) ನೀಡಬೇಕಾಯಿತು. ದೆಹಲಿಗೆ ವರದಿ ಕಳುಹಿಸ್, ಮಲ್ಲಿಕಾಫ಼ರನು ಮಬಾರ್ ಕಡೆಗೆ ಪ್ರಯಾಣ ಬೆಳಸಿದನು.

ಕ್ರಿ.ಶ.1358ರಲ್ಲಿ ಜಿಯಾವುದ್ದೀನ್ ಬರಾನಿಯ ಸಮಕಾಲೀನನಾಗಿದ್ದ ಇಸಾಮಿಯು ಬರೆದ ಫುತು-ಉಸ್-ಸಲಾಟಿನ್ ಇದರಲ್ಲಿ ಇದಕ್ಕೆ ಹಿಂದೆ ನಡೆದ ಘಟನೆಗಳ ಬಗ್ಗೆ ಉಲ್ಲೇಖವಿದೆ. ಅವನು ಅಲ್ಲಾವುದ್ದೀನನ ದಂಡಯಾತ್ರೆಗಳ ಬಗ್ಗೆ ವಿವರಗಳನ್ನು ಕೊಟ್ಟಿದ್ದಾನೆ. ಹೊಯ್ಸಳ ಸಾಮ್ರಾಜ್ಯದ ಮೇಲಿನ ಮಲ್ಲಿಕಾಫರನ ಧಾಳಿಯ ಬಗ್ಗೆ ಅವನು ಹೊಯ್ಸಳ ಸಾಮ್ರಾಟನು ಅವರಿಬ್ಬರ ನಡುವೆ ನಡೆದ ಮಾತುಕತೆಯ ನಂತರವೇ ಶರಣಾಗತನಾದನೆಂದು ಅಭಿಪ್ರಾಯ ಪಟ್ಟಿದ್ದಾನೆ. ಇದಕ್ಕಾಗಿ ಅವನು ಅವರಿವರ ಹೇಳಿಕೆಗಳು ಕಥೆಗಳು ಮತ್ತು ಅಮೀರ್ ಖುಸ್ರುವಿನಂತಹ ಚರಿತ್ರೆಕಾರರ ನೈಜ ವರದಿಗಳನ್ನು ಸಂಗ್ರಹಿಸಿದ್ದಾನೆ.

ವೀರಬಲ್ಲಾಳನ ಆಳ್ವಿಕೆಯ ಕೊನೆಯ ಬಾಗಕ್ಕೆ ಬಹುಶಃ ಇಬ್ನಬತೂತುವು ಬಹಳ ಉಪಯೋಗಕ್ಕೆ ಬರುತ್ತಾನೆ. ಅವನು ಮದುರಾನಗರವನ್ನು ಪ್ರವೇಶಿಸಿದಾಗ ಮೂರನೆ ಬಲ್ಲಾಳನು ಮೃತ ಪಟ್ಟಿದ್ದು ಅವನ ಶರೀರವನ್ನು ಮದುರೆಯ ಗೋಡೆಗಳಿಗೆ ನೇತುಹಾಕಲಾಗಿತ್ತು ಆದರೆ ಅವನು ತನ್ನ ಆಶ್ರಯದಾತನಾದ ಘಿಯಾಸುದ್ದೀನ್ ದಂಘಾನಿಯ ಕ್ರೂರ ಕೃತ್ಯಗಳಿಗೆ ಪ್ರತ್ಯಕ್ಷ ಸಾಕ್ಷಿಯಾಗಿದ್ದನು. ದಂಘಾನಿಯ ಹಿಂದುಗಳ ಬಗ್ಗೆ ಇದ್ದ ಹೊರನೋಟವನ್ನು ಅವನು ವರ್ಣಿಸಿದ ರೀತಿಯು ಹೃದಯಸ್ಪರ್ಶಿಯಾಗಿದ್ದು ಘಿಯಾಸುದ್ದೀನ್ ದಂಘಾನಿಯ ಕೃತ್ಯಗಳು ಭೀಕರವಾಗಿದ್ದು ಅವನು ಅದರಿಂದ ಜಿಗುಪ್ಸ ಹೊಂದಿದ್ದನು. ಮದುರಾದ ಕ್ರೂರ ಸುಲ್ತಾನರು ಇದಕ್ಕಾಗಿ ಅಲ್ಪಕಾಲದಲ್ಲಿ ತನ್ನ ಹೆಂಡತಿ ಮತ್ತು ಮಗನ ರೂಪದಲ್ಲಿ ಬೆಲೆಯನ್ನು ತೆರಬೇಕಾಯಿತಲ್ಲದೆ ಒಬ್ಬ ವೈದ್ಯನು ಕೊಟ್ಟ ಔಷಧಿಯ ಪ್ರಮಾಣವು ಅಧಿಕವಾಗಿ ಅದಕ್ಕೆ ಬಲಿಪಶು ಆಗಬೇಕಾಯಿತು. ಅಬ್ದ್ ಅಲ್ಲಾ ಶಿರಾಜಿಯು ತನ್ನ ತಜ್ಜಿಯಾತು-ಐ ಅಂಸರ್-ವ ತಜ್ರಿಯಾತು-ಐ ಅಸರನ್ನು ಪರ್ಶಿಯಾದಲ್ಲಿ ಪರ್ಶಿಯನ್ ಭಾಷೆಯಲ್ಲಿ ಬರೆದನು. ಅವನು ದಕ್ಷಿಣ ಪರ್ಯಾಯ ದ್ವೀಪದಲ್ಲಿದ್ದ ಒಬ್ಬ ಸುದ್ದಿಗಾರನ ಮೇಲೆ ಅವಲಂಬಿತನಾಗಿದ್ದು ಅದು ಬಹಳ ಉಪಯುಕ್ತ ಮಾಹಿತಿಗಳನ್ನು ಒದಗಿಸಿದೆ. ವಾಸಫನ ಅಭಿಪ್ರಾಯದಂತೆ ಮೂರನೆಯ ವೀರಬಲ್ಲಾಳನು ಮಹಮದೀಯ ಸೈನ್ಯಕ್ಕೆ ಶರಣಾಗಲಿಲ್ಲ. ಅದಕ್ಕೆ ಬದಲಾಗಿ ಅವನು ವೀರಪಾಂಡ್ಯನನ್ನು ಸಹಾಯಕ್ಕಾಗಿ ಕೇಳಿದನು ಮತ್ತು ಅವನು ತನ್ನ ಸೈನ್ಯವನ್ನು ಸಹಾಯಕ್ಕಾಗಿ ಕಳುಹಿಸಿದನು. ಆದರೆ ಶಕ್ತಿಶಾಲೀ ಮಹಮದೀಯರನ್ನು ಎದುರಿಸಲು ಸಾದ್ಯವಿಲ್ಲ ಎಂದು ಅರ್ಥಮಾಡಿಕೊಂಡು ಅವನು ಅವರಿಗೆ ಶರಣಾದನು. ಇದರ ಪರಿಣಾಮವಾಗಿ ಅರಕಣ್ಣನ ದೇಶವನ್ನು ಅವನ ಶರಣಾಗತಿಯ ಪ್ರತೀಕವಾಗಿ, ಅವನೂ ಊಹಿಸಲಾರದಷ್ಟು ಹಣದ ಜೊತೆಗೆ ಕೊಡಲಾಯಿತು.

## 7.2 ಮೂರನೇ ವೀರಬಲ್ಲಾಳನ ರಾಜಕೀಯ ಇತಿಹಾಸ

ಇವೆರಡರ ಸೂಕ್ತ ಹೊಂದಾಣಿಕೆಯಿಂದ ಮೂರನೆ ವೀರಬಲ್ಲಾಳನ ಸಂಪೂರ್ಣ ರಾಜಕೀಯ ಚರಿತ್ರೆಯನ್ನು ಬೆಳಕಿಗೆ ತರಬಹುದು. ಹೊಯ್ಸಳರ ಕಾಲದ ಕೊನೆಯ ದೊರೆಯಾದ ಮೂರನೆ ವೀರಬಲ್ಲಾಳನ ಚರಿತ್ರೆಯನ್ನು ಪುನರ್ರಚನೆಯನ್ನು ಮಾಡಿಕೊಡಲು ಮೇಲಿನ ಆಧಾರಗಳನ್ನು ಬಳಸಿ ಒಂದು ಪ್ರಯತ್ನವನ್ನು ಮಾಡಲಾಗಿದೆ.

ಹೊಯ್ಸಳ ವಂಶದ ಕೊನೆಯ ಪ್ರಕಾಶಮಾನವಾದ ಕುಡಿಯು ಮೂರನೆಯ ವೀರಬಲ್ಲಾಳನಾಗಿದ್ದು ಅವನು ಮೂರನೆಯ ನರಸಿಂಹ ಮತ್ತು ಅವನ ರಾಣಿ ಪಟ್ಟಮಹಾದೇವಿಯ ಮಗನಾಗಿದ್ದು ಅವನು ಕ್ರಿ.ಶ.1291ರಲ್ಲಿ ಸಿಂಹಾಸನವನ್ನೇರಿದನು ಮತ್ತು ಪಟ್ಟಾಭಿಷೇಕ ಮಹೋತ್ಸವವು ಸ್ವಲ್ಪ ಕಾಲದ ನಂತರ ನೆರವೇರಿರಬೇಕು. ಕ್ರಿ.ಶ.1292ರ ಇಂದುವರ ಎಂಬ ಹಳ್ಳಿಯಲ್ಲಿ ದೊರಕಿದ ಒಂದು ಶಾಸನದ ಪ್ರಕಾರ ಪಟ್ಟಾಭಿಷೇಕದ ನಂತರ ಮೂರನೆಯ ವೀರಬಲ್ಲಾಳನು ದೋರಸಮುದ್ರದಿಂದ ಆಳುತ್ತಿದ್ದನು ಎಂದು ಉಲ್ಲೇಖಿಸಿದೆ.

ಮೂರನೆಯ ಬಲ್ಲಾಳನು ಚಕ್ರವರ್ತಿಯಾಗುವುದಕ್ಕೆ ಮುಂಚಿನಿಂದಲೇ ಬಹಳ ಕ್ರಿಯಾಶೀಲನಾಗಿದ್ದನು. ಅನೇಕ ಶಾಸನಗಳ ಪ್ರಕಾರ ಅವನು ತನ್ನ ತಂದೆಯ ರಾಜ್ಯಪಾಲನಾಗಿ ಕ್ರಿಯಾಶೀಲನಾಗಿದ್ದನು. ಈ ಕಾಲಕ್ಕೆ ಸಂಬಂಧಿಸಿದ್ದೆಂದು ಒಂದು ಶಾಸನವನ್ನು ಡಾ॥ಬಿ.ಎ.ಸಾಲತೋರೆ ಮತ್ತು ಡಾ॥ಡೆರ್ರೆಟ್‌ರವರು ಸೇರಿಸಿದ್ದಾರೆ. ಈ ಸಂಬಂಧದಲ್ಲಿ ಮಲ್ಲಿದೇವ ದಣನಾಯಕನೆಂಬ ಒಬ್ಬನನ್ನು ಮೂರನೆಯ ವೀರಬಲ್ಲಾಳನೊಡನೆ ಗುರುತಿಸಲಾಗಿದ್ದು ಮೂರನೆಯ ವೀರಬಲ್ಲಾಳನು ಹೊಯ್ಸಳ ಸಾಮ್ರಾಜ್ಯಕ್ಕೆ ಕುತ್ತು ತಂದಿದ್ದ ಯಾದವ ಸೈನ್ಯವನ್ನು ಓಡಿಸಿದನೆಂದು ಹೇಳುವ ಪ್ರಯತ್ನವನ್ನು ಡಾ। ಸೆವೆಲ್‌ನಂತಹ ವಿದ್ವಾಂಸರುಗಳು ಮಾಡಿದ್ದಾರೆ.

### 7.2.1 ದಕ್ಷಿಣ ಭಾರತದ ಪರಿಸ್ಥಿತಿ

ಮೂರನೆಯ ವೀರಬಲ್ಲಾಳನು ಅಧಿಕಾರಕ್ಕೆ ಬರುವ ವೇಳೆಗೆ ಅವನಿಗೆ ಬಹುಶಃ 30 ವರ್ಷ ವಯಸ್ಸಾಗಿತ್ತು. ಇದು ಇಬ್ನಬತೂತುವಿನ ಬರವಣಿಗೆಯಿಂದ ಅವನು ಮದುರಾದ ಗೋಡೆಗಳಲ್ಲಿ ಕೊಲೆಯಾಗಿ ನೇತುಹಾಕಿಸಿಕೊಂಡಾಗ ಅವನಿಗೆ 80ವರ್ಷ ವಯಸ್ಸಾಗಿತ್ತು ಎಂಬುದರಿಂದ ತಿಳಿಯುತ್ತದೆ.

ಮೂರನೆಯ ವೀರಬಲ್ಲಾಳನಿಗೆ ಹೊಯ್ಸಳ ಸಾಮ್ರಾಜ್ಯದ ಮತ್ತು ದಕ್ಷಿಣ ಭಾರತದ ಪರಿಸ್ಥಿತಿಯು ಅನುಕೂಲವಾಗಿರಲಿಲ್ಲ. ಅದು ಹೊಯ್ಸಳರು ತಮ್ಮ ಇರುವಿಕೆಗಾಗಿ ಸಾಹಸಪಡುತ್ತಿದ್ದ ಕಾಲವಾಗಿತ್ತು. ಯಾದವರು, ಕಾಕತೀಯರು, ಪಾಂಡ್ಯರು ಮತ್ತು ಇತರ ಸಣ್ಣಪುಟ್ಟದಾದ ನೆರೆಯವರ ಶಕ್ತಿಯ ವಿರುದ್ಧ ಹೋರಾಡಿ ಅವರು ದುರ್ಬಲರಾಗಿದ್ದು ಆರ್ಥಿಕವಾಗಿಯೂ ತೊಂದರೆಯಲ್ಲಿದ್ದರು. ಇನ್ನೂ ಹೇಳುವುದಾದರೆ ಅದು ಪಾತಾಳದಲ್ಲಿತ್ತು. ಈ ಸಾಮ್ರಾಜ್ಯವು ಒಳ ಮತ್ತು ಹೊರಗಿನವರ, ಅದೂ ವಿಶೇಷವಾಗಿ ಅವನ ಚಿಕ್ಕಪ್ಪನಾದ ರಾಮನಾಥನಿಂದ ಅಪಾಯದಲ್ಲಿತ್ತು. ಅವನ ಐವತ್ತು ವರ್ಷಗಳ ಕಾಲದ ಆಳ್ವಿಕೆಯಲ್ಲಿ ಅವನ ಯೌವನದ, ಮಧ್ಯ ವಯಸ್ಸಿನ, ಮುಪ್ಪಿನ ಕೊನೆಗೆ ಮದುರಾದ ಸುಲ್ತಾನನನ್ನು ಓಡಿಸುವ ಮತ್ತು ಅವನು ಕೊಲೆಯಾದ ರೀತಿಯು ಸ್ಮರಣಾರ್ಥವಾದುದು.

ಮೂರನೆಯ ನರಸಿಂಹನ ಮಲಸಹೋದರನಾದ ರಾಮನಾಥನು ಮೂರನೆಯ ವೀರಬಲ್ಲಾಳನ ಸಾಮ್ರಾಜ್ಯವನ್ನು ಒಂದುಗೂಡಿಸುವ ಮತ್ತು ಅದನ್ನು ಬೆಳೆಸುವ ಶ್ಲಾಘನೀಯ ಪ್ರಯತ್ನಕ್ಕೆ ಅಡ್ಡ ಬರುತ್ತಿದ್ದನು. ರಾಮನಾಥನ ಮರಣದವರೆಗೂ ಅವನಿಗೆ ಮತ್ತು ಹೊಯ್ಸಳ ಸಾಮ್ರಾಜ್ಯದ ಶತೃಗಳಿಗೆ ಮೂರನೆಯ  ವೀರಬಲ್ಲಾಳನು ಹೆಚ್ಚಿನ ಗಮನವನ್ನು ಕೊಡಲಾಗಲಿಲ್ಲ.

ಮೂರನೆಯ  ವೀರಬಲ್ಲಾಳನ ಶಕ್ತಿಯನ್ನು ಗಮನಕ್ಕೆ ತೆಗೆದುಕೊಳ್ಳದೇ ರಾಮನಾಥನು ತನ್ನ ಸಹೋದರರ ಮಕ್ಕಳ ಮೇಲೆ ಶತೃತ್ವದ ಭಾವವನ್ನು ಅವನ ಮೊದಲ ದಿನಗಳಲ್ಲಿ ಬೆಳೆಸಿಕೊಂಡಿದ್ದನು. ಆ ಬಯಲು ಪ್ರದೇಶದಲ್ಲಿ ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳ-ಬಹುದೆಂಬ ಭಾವನೆಯು ಅವನಲ್ಲಿದ್ದರಬೇಕು. ಅವನ ಹಕ್ಕಿನಿಂದಲೇ ಅವನು ಚಕ್ರವರ್ತಿಯಾಗ-ಬೇಕೆಂದು ಆಶಿಸಿದ್ದನು. ಹೊಯ್ಸಳರ ಎರಡು ಸೈನ್ಯಗಳ ನಡುವೆ ನಡೆದ ಯುದ್ಧದಲ್ಲಿ ರಾಮನಾಥನ ಇಬ್ಬರು ಅಧಿಕಾರಿಗಳು ಭಾಗವಹಿಸಿದ್ದರೆಂದು ಸಹಪುರದಲ್ಲಿ ಸಿಕ್ಕಿದ ಶಾಸನವು ಹೇಳುತ್ತದೆ. ಇದರಿಂದ ಅವನು ಮೂರನೆಯ  ವೀರಬಲ್ಲಾಳನು ಪಟ್ಟಕ್ಕೇರಿದ ನಂತರವೂ ಅವನ ಮೇಲೆ ಆಕ್ರಮಣವನ್ನು ಮಾಡಲು ಹಿಂಜರಿಯಲಿಲ್ಲ ಎಂಬುದು ತಿಳಿಯುತ್ತದೆ. ಆದರೆ ಅನೇಕ ಘಟನೆಗಳಿಂದ ಮೂರನೆಯ  ವೀರಬಲ್ಲಾಳನು ರಾಮನಾಥನಿಗಿಂತ ಹೆಚ್ಚು ಶಕ್ತಿಯುತ-ನಾಗಿದ್ದನೆಂದು ತಿಳಿಯುತ್ತದೆ ಮತ್ತು ಅದು ಅವನಿಗೂ ಗೊತ್ತಿತ್ತು. ಹೀಗೆ ರಾಮನಾಥನ ಈ ಉಪಟಳವನ್ನು ಮೂರನೆಯ ವೀರಬಲ್ಲಾಳನು ಯಶಸ್ವಿಯಾಗಿ ಎದುರಿಸಿದನಲ್ಲದೇ ಪ್ರದೇಶಗಳನ್ನು ಗೆಲ್ಲುವ ಅವನ ಆಸೆಗೂ ತಣ್ಣೀರೆರೆಚಿದನು.

ಮೂರನೆಯ ವೀರಬಲ್ಲಾಳನು ಹೊಯ್ಸಳ ಸಿಂಹಾಸನವನ್ನು ಏರಿದ ಸಮಯದಲ್ಲಿ ದಕ್ಷಿಣ ಭಾರತದ ರಾಜಕೀಯ ವಲಯದಲ್ಲಿ ಅನೇಕ ಬದಲಾವಣೆಗಳಾದವು. ಹೊಯ್ಸಳ ಸಾಮ್ರಾಜ್ಯಕ್ಕೆ ಅನೇಕ ಹೊರಗಿನ ಶತೃಗಳಿದ್ದು ಅದು ಅವರಿಗೆ ನಿರಂತರವಾಗಿ ಅಪಾಯ ಮತ್ತು ಆತಂಕಕ್ಕೆ ಕಾರಣವಾಗಿತ್ತು. ಅಂತಹವರಲ್ಲಿ ಸೇವುಣರು ಅತ್ಯಂತ ಶಕ್ತಿಶಾಲಿಗಳಾಗಿದ್ದು ಅವರ ಚಟುವಟಿಕೆಗಳ ಮೇಲೆ ನಿರಂತರವಾಗಿ ಗಮನ ಇಡಬೇಕಾಗಿತ್ತು. ಕೇವಲ ಒಂದು ದಶಕದ ಹಿಂದೆ ಸೇವುಣ ರಾಜ ಸಾಳುವ ಚಿಕ್ಕಮನು ತನ್ನ ಸೈನ್ಯವನ್ನು ತೆಗೆದುಕೊಂಡು ದೋರಸಮುದ್ರದ ಹತ್ತಿರಕ್ಕೇ ಬಂದು ಹೊಯ್ಸಳರಿಗೆ ಮಾರಣಾಂತಿಕವಾದ ಹೊಡೆತವನ್ನು ಕೊಡುವುದರಲ್ಲಿದ್ದರು.

ಕಾಕತೀಯರು ಇನ್ನೂ ಹೊಯ್ಸಳರಿಗೆ ಶತೃಗಳಾಗಿದ್ದರು. ಕಾಯಸ್ಥ ಮುಖ್ಯಸ್ಥನಾದ ಅಂಬದೇವನು ಹೊಯ್ಸಳರ ಪ್ರದೇಶಗಳನ್ನು ಆಕ್ರಮಿಸಲು ಪ್ರಯತ್ನಿಸಿದನು. ಮೂರನೆಯ ವೀರಬಲ್ಲಾಳನು ಪಟ್ಟಕ್ಕೇರುವ ವೇಳೆಗೆ ಅವರ ಕೆಲವು ಸಾಮಂತರು ತಮ್ಮ ನಿಷ್ಠೆಯನ್ನು ಬದಲಿಸಿದ್ದರು. ಕೇವಲ ಒಂದು ತಲೆಮಾರಿನ ಹಿಂದಷ್ಟೇ ಹೊಯ್ಸಳರಿಗೆ ಸಾಮಂತರಾಗಿದ್ದ ಹೊಸಗುಂದದ ಸಂತಾರರು ಹೊಯ್ಸಳರ ವಿರುದ್ಧವಾಗಿದ್ದು ಅವರ ವಿರುದ್ಧ ಚಟುವಟಿಕೆಗಳನ್ನು ನಡೆಸುತಿದ್ದರು. ಕೋಟಿ ನಾಯಕನು ಅಧಿಕಾರಕ್ಕೆ ಬಂದಮೇಲೆ ಆವರು ಹೊಯ್ಸಳರ ವುರುದ್ಧದ ಚಟುವಟಿಕೆಗಳನ್ನು ತಾರಕಕ್ಕೇರಿಸಿದರು ಮತ್ತು ಅವರಿಗೆ ಗೌರವವನ್ನೂ ಕೊಡುವುದನ್ನು ನಿಲ್ಲಿಸಿದರು.

ಮೂರನೆಯ ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಕಾಂಪ್ಲಿಯ ರಾಜರು ಹೊಯ್ಸಳರೊಂದಿಗೆ ಉತ್ತಮವಾದ ಸಂಬಂಧವನ್ನು ಹೊಂದಿರಲಿಲ್ಲ. ಮತ್ತು ಕ್ರಿ.ಶ.1327ರಲ್ಲಿ ಕಂಪಿಲನ ಮರಣದವರೆಗೂ ಅನೇಕ ಪ್ರಯತ್ನಗಳನ್ನು ಮಾಡಿದರೂ ಪ್ರಬಲವಾದ ಶತೃಗಳಾದ ಅವರನ್ನು ಸೋಲಿಸಲು ಮೂರನೆಯ ವೀರಬಲ್ಲಾಳನಿಗೆ ಆಗಲಿಲ್ಲ.

### 7.2.2 ಮೂರನೆಯ ವೀರಬಲ್ಲಾಳನ ಪಟ್ಟಾಭಿಷೇಕ

ಮೂರನೆಯ ವೀರಬಲ್ಲಾಳನು ಪಟ್ಟಕ್ಕೇರಿದ ದಿನಾಂಕದ ಬಗ್ಗೆ ವಿದ್ವಾಂಸರು ಒಮ್ಮತಕ್ಕೆ ಬಂದಿದ್ದಾರೆ. ಅವನು ಕ್ರಿ.ಶ.1292ರ ಜನವರಿ 31ರಂದು ಪಟ್ಟಕ್ಕೆ ಬಂದ ಎಂದು ಕೊಲ್ಹೋನಂತಹ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಸಾವಿರಾರು ಶಾಸನಗಳು ಅವನು ಕ್ರಿ.ಶ.1290ಕ್ಕೆ ಮುಂಚಿನಿಂದಲೇ ಸಾಮ್ರಾಜ್ಯವನ್ನು ಆಳುತ್ತಿದ್ದನೆಂದು ಉಲ್ಲೇಖಿಸುತ್ತವೆ.

ಕಾಯಸ್ಥನಾದ ಅಂಬದೇವನು ಗಂಡಿಕೋಟದಿಂದ ಆಳುತ್ತಿದ್ದನು. ಅವನು ಸೇವುಣರು ಮತ್ತು ಹೊಯ್ಸಳ ಸಹಾಯದಿಂದ ಕಾಕತೀಯರನ್ನು ಸೋಲಿಸಿದನು. ಆದರೆ ಯಾವುದೋ ಒಂದು ಕಾರಣದಿಂದ ಅವನು ಹೊಯ್ಸಳರ ವಿರುದ್ಧ ಕತ್ತಿಯನ್ನು ಎತ್ತಿದನು. ಮಲ್ಲಿಕಾರ್ಜುನನೂ ಸೇರೆ ಅನೇಕ ರಾಜರನ್ನು ಈ ಕಾಯಸ್ಥ ಸೇನಾ ಮುಖ್ಯಸ್ಥನು ಸೋಲಿಸಿದನೆಂದು ಕ್ರಿ.ಶ.1290ರ ಶಾಸನವು ಉಲ್ಲೇಖಿಸುತ್ತದೆ. ಈ ಎಲ್ಲ ಸಾಧ್ಯತೆಗಳ ಪ್ರಕಾರ ಅದು ಪಟ್ಟಾಭಿಷಿಕ್ತನಾದ ನಂತರದ ಮೂರನೆಯ ವೀರಬಲ್ಲಾಳನಲ್ಲದೇ ಬೇರೆ ಯಾರೂ ಅಲ್ಲ.

ಅವನಿಗೆ ದೊರಕಿದ ಅನುವಂಶಿಕವಾದ ಸಾಮ್ರಾಜ್ಯವು ಅತೀ ದುರ್ಬಲವಾಗಿದ್ದುಈ ವಿಷಯದಲ್ಲಿ ಎಲ್ಲ ಹೊಯ್ಸಳ ರಾಜರಿಗಿಂತಲೂ ಇವನು ಅತಿ ದುರಾದೃಷ್ಟವಂತ. ಇವನ ತಮ್ಮ ಆಳ್ವಿಕೆಯ ಮೊದಲ ಹತ್ತು ವರ್ಷದ ಕಾಲ ಯಾವುದೇ ಮುಖ್ಯ ಘಟನೆಗಳೂ ನಡೆಯಲಿಲ್ಲ ಮತ್ತು ಆ ಸಮಯದಲ್ಲಿ ಇವನು ತನ್ನ ಸಾಮ್ರಾಜ್ಯವನ್ನು ಒಂದುಗೂಡಿಸುವ ಕಾರ್ಯದಲ್ಲಿ ತೊಡಗಿದ್ದನು. ಅವನಿಗೆ ಬಲವಾದ ಪ್ರತಿಸ್ಪರ್ಧಿಯಾಗಿ ರಾಮನಾಥನಿದ್ದು ಅವನು ಮೂರನೆಯ ವೀರಬಲ್ಲಾಳ ಮತ್ತು ರಾಜ್ಯದ ಒಂದುಗೂಡಿಸುವಿಕೆ ಅಡ್ಡ ಗೋಡೆಯಾಗಿದ್ದನು. ಅವನು ಮೂರನೆಯ ವೀರಬಲ್ಲಾಳನು ಅಧಿಕಾರಕ್ಕೇರಿದಾಗ ಅವನ ಶಕ್ತಿಯನ್ನು ನಿಷ್ಫಲಗೊಳಿಸಲು ಅನೇಕ ಪ್ರಯತ್ನಗಳನ್ನು ಮಾಡಿದ್ದರೂ ಬಲ್ಲಾಳನು ಅದನ್ನೂ ಮೀರಿ ನಿಂತವನು ಎಂಬುದು ಬೆಳಕಿಗೆ ಬಂದಿತು. ಕ್ರಿ.ಶ.1292-95ರ ನಡುವೆ ರಾಮನಾಥನು ಈ ಬಗೆಯ ಪ್ರಯತ್ನಗಳನ್ನು ಮಾಡಿದ್ದು ವ್ಯರ್ಥವಾಯಿತು.

ಈ ಹತ್ತು ವರ್ಷದ ಅವಧಿಯಲ್ಲಿ ದೊರೆವಾಡಿಯ ಮುಮ್ಮಡಿ ಸಿಂಗಯನಾಯಕನ ಮಗ ಖಂಡೆಯ ರಾಯನು ತನ್ನ ನಿಷ್ಠೆಯನ್ನು ಸೇವುಣರಿಗೆ ಬದಲಿಸಿಕೊಂಡನು. ಬೊಮ್ಮರಸರ ಪರವಾಗಿ ಹೊಸಗುಂದದಿಂದ ಆಳುತ್ತಿದ್ದ ಸಂತಾರ ದೊರೆಯಾದ ಕೋಟಿ ನಾಯಕನು ಹೊಯ್ಸಳ ಮತ್ತು ಸೇವುಣರಿಗಿಬ್ಬರಿಗೂ ಶತ್ರುವಾಗಿದ್ದನು. ಮೂರನೆಯ ವೀರಬಲ್ಲಾಳನು ಅವನನ್ನು 14ನೆಯ ಶತಮಾನದ ಮೊದಲ ದಶಕದಲ್ಲಿ ಮಾತ್ರ ಸೋಲಿಸಲು ಸಾಧ್ಯವಾಯಿತು. ಕ್ರಿ.ಶ.1300-01ರಲ್ಲಿ ತನ್ನ ಸಾಮ್ರಾಜ್ಯವನ್ನು ಒಂದುಗೂಡಿಸಿದ ನಂತರವೇ ಅವನಿಗೆ ಹೊರ ಶಕ್ತಿಗಳ ಕಡೆಗೆ ಗಮನವನ್ನು ಕೊಡಲು ಸಾಧ್ಯವಾಯಿತು. ಕಳಸದ ರಾಜಕುಟುಂಬದವರು ಮತ್ತೆ ಹೊಯ್ಸಳರಿಗೆ ಸಾಮಂತರಾಗಿದ್ದರು. ಆದರೆ ಮೂರನೆಯ ವೀರಬಲ್ಲಾಳನು ಪಟ್ಟಾಕ್ಕೇರಿದ ದಿನವೇ ಅವರು ರಾಜ್ಯದ ಮುಖ್ಯಸ್ಥನ ಬದಲಾವಣೆಯಿಂದ ಸ್ಫೂರ್ತಿಗೊಂಡು ಹೊಯ್ಸಳರ ರಾಜಧಾನಿಯ ಮೇಲೆ ಧಾಳಿಯನ್ನು ಮಾಡಿದರು.

ಪಟ್ಟಾಭಿಷೇಕದ ನಂತರ ಹೊಯ್ಸಳ ದೊರೆಯ ಮೊದಲ ಕಾರ್ಯವೆಂದರೆ ತನ್ನ ರಾಜ್ಯವನ್ನು ಒಂದುಗೂಡಿಸುವುದಾಗಿತ್ತು. ಸೋಮೇಶ್ವರನಿಂದ ಸಾಮ್ರಾಜ್ಯದ ವಿಭಜನೆಯು ಅದರ ಹಿತದೃಷ್ಟಿಯಿಂದಲೇ ಆಗಿದ್ದರೂ ಅದು ತನ್ನ ಉದ್ದೇಶದಲ್ಲಿ ಸಫಲವಾಗಿರಲಿಲ್ಲ. ಮೂರನೆಯ ವೀರಬಲ್ಲಾಳನಿಗೆ ಇದು ತನ್ನ ಹೊಯ್ಸಳರನ್ನು ಎಲ್ಲಿಗೆ ಕೊಂಡೊಯ್ಯುತ್ತದೆ ಎಂಬುದು ತಿಳಿದಿತ್ತು. ಸಾಮ್ರಾಜ್ಯದ ಪತನವನ್ನು ತಡೆಯಲು ಇದ್ದ ಒಂದೇ ಮಾರ್ಗವೆಂದರೆ ಅದನ್ನು ಒಗ್ಗೂಡಿಸುವುದಾಗಿತ್ತು. ರಾಮನಾಥನು ಇದಕ್ಕೆ ಅಡ್ಡಿಯಾಗಿರುವಷ್ಟು ಕಾಲವೂ ಇದೊಂದು ಕಷ್ಟಕರವಾದ ಕಾರ್ಯವಾಗಿತ್ತು. ಆದರೆ ರಾಮನಾಥನ ಕಣ್ಮರೆಯ ನಂತರ ಇದು ವೇಗವಾಗಿ ಅಂದರೆ ಕ್ರಿ.ಶ.1300–01ರ ಆರಂಭದ ವೇಳೆಗೆ ಸಂಪೂರ್ಣವಾಗಿತ್ತು. ರಾಮನಾಥನ ಪ್ರದೇಶಾಗಳಾದ ಕೋಲಾರ ಮತ್ತು ಬೆಂಗಳೂರು ಜಿಲ್ಲೆ, ಹವಂಜಿನಾಡು, ಕೈವಾರನಾಡು ಇವುಗಳು ಸೇರಿರಲಿಲ್ಲ. ರಾಮನಾಥನು ತನ್ನ ನಂತರ ಅಧಿಕಾರವನ್ನು ತನ್ನ ಭಾವಮೈದುನನಿಗೆ ಹಸ್ತಾಂತರಿಸಲು ಕ್ರಿ.ಶ.1292–95ರ ನಡುವೆ ಪ್ರಯತ್ನವನ್ನು ಮಾಡಿದ್ದರೂ ಅದು ಸಫಲವಾಗಲಿಲ್ಲ.

ಮೂರನೆಯ ವೀರಬಲ್ಲಾಳನು ರಾಮನಾಥನ ಮರಣಾನಂತರ ಅವನ ಪ್ರದೇಶಗಳನ್ನು ಆಕ್ರಮಿಸಿದನೆಂಬುದಕ್ಕೆ ಯಾವುದೇ ಆಧಾರವಿಲ್ಲ ಮತ್ತು ವಿಶ್ವನಾಥ ಮತ್ತು ಮೂರನೆಯ ವೀರಬಲ್ಲಾಳರ ನಡುವೆ ಯುದ್ಧವು ನಡೆಯಿತು ಎಂಬುದಕ್ಕೂ ಆಧಾರವಿಲ್ಲ.

ಕ್ರಿ.ಶ.1301–02ರ ವೇಳೆಗೆ ಮೂರನೆಯ ವೀರಬಲ್ಲಾಳನು ಸಂಪೂರ್ಣ ಸಾಮ್ರಾಜ್ಯದ ಒಡೆಯನಾಗಿದ್ದು ಈ ಶುಭ ಸಂದರ್ಭದಲ್ಲಿ ಅವನು ಮಠಗಳಿಗೆ ಮತ್ತು ತಮಿಳುನಾಡಿನ ಜಿಲ್ಲೆಗಳ ದೇವಾಲಯದ ಅರ್ಚಕರಿಗೆ ಕಂದಾಯಗಳಲ್ಲಿ ವಿನಾಯಿತಿಯನ್ನು ನೀಡಿದನು ಮತ್ತು ಹಳೆಯವರನ್ನು ಖಾಯಂಗೊಳಿಸಿದನು. ಹೀಗಾಗಿ ಆ ಸಮಯದಲ್ಲಿ ಹೊಯ್ಸಳ ಸಾಮ್ರಾಜ್ಯವು ಬಹಳ ದೊಡ್ಡದಾಗಿದ್ದು ಅದು ಮೈಸೂರಿನ ಒಂದು ಭಾಗವನ್ನು ಒಳಗೊಂಡಿತ್ತು. ತ್ರಿಚ್ನೊಪೊಲಿ ಮತ್ತು ತಂಜಾವೂರು ಜಿಲ್ಲೆಗಳ ದಕ್ಷಿಣ ಭಾಗಗಳನ್ನುಳಿದು ಹೊಯ್ಸಳ ಸಾಮ್ರಾಜ್ಯವು ಹೆಚ್ಚಿನ ಭಾಗಗಳನ್ನು ಕಳೆದುಕೊಂಡಿರಲಿಲ್ಲ.

ಸಂತಾರರು ಕೋಟಿನಾಯಕನ ನೇತೃತ್ವದಲ್ಲಿ ರಾಜಕೀಯ ಜೀವನದಲ್ಲಿ ತಮ್ಮ ಮೇರು ಮಟ್ಟವನ್ನು ತಲುಪಿದ್ದರು. ಸಂತಾರರು ಹೊಯ್ಸಳರೊಂದಿಗೆ ಉತ್ತಮವಾದ ಸಂಬಂಧವನ್ನು ಹೊಂದಿರಲಿಲ್ಲ. ಅವರು ಸೇವುಣರೊಂದಿಗೂ ಚೆನ್ನಾಗಿರಲಿಲ್ಲ; ಸೇವುಣರ ಸೈನ್ಯಾಧಿಪತಿಯಾದ

ಯಬರಪ್ಪನು ಕ್ರಿ.ಶ.1296ರಲ್ಲಿ ಅವರ ಮೇಲೆ ಆಕ್ರಮಣವನ್ನು ಮಾಡಿದ್ದನು. ಚುರುಕಾದ ಮತ್ತು ಸಮಯಕ್ಕಾಗಿ ಕಾಯುತ್ತಿದ್ದ ಮೂರನೆಯ ಬಲ್ಲಾಳನು ಸಮಯವನ್ನು ಕಳೆಯಲಿಲ್ಲ. ಅವನು ಕೋಟಿನಾಯಕನ ಮೇಲೆ ಅನೇಕ ಧಾಳಿಗಳನ್ನು ಮಾಡಿದರೂ ಅವನ ಶೌರ್ಯ ಪರಾಕ್ರಮಗಳ ಎದುರಿನಲ್ಲಿ ಗೆಲುವನ್ನು ಪಡೆಯಲಾಗಲಿಲ್ಲ.

### 7.2.3 ಮೂರನೆಯ ಬಲ್ಲಾಳನ ಯುದ್ಧಗಳು

ಮೂರನೆಯ ವೀರಬಲ್ಲಾಳನು ನಂತರ ಪ್ರಬಲರಾಗಿದ್ದ ಕದಂಬರ ಕಾವದೇವನ ಕಡೆ ತನ್ನ ಗಮನವನ್ನು ಹರಿಸಿದನು. ಅವನು ಕ್ರಿ.ಶ.1300ರಲ್ಲಿ ಒಂದು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಹೋಗಿ ಉತ್ತರಕನ್ನಡ ಜಿಲ್ಲೆಯಸಿರ್ಸಿಯಲ್ಲಿ ಬಿಡಾರವನ್ನು ಹೂಡಿದನು. ಅಲ್ಲಿ ಅವನು ಕಡಾಬಹಲು ಅಂದರೆ ಈಗಿನ ಕಡಬಾಲುವಿನಲ್ಲಿ ಧಾಳಿಯನ್ನು ಮಾಡಿ ಕಾವದೇವನ ಮಹಾಪ್ರಧಾನಿ ಗಾಂಗೇಯ ಸಹಾನಿಯಿಂದ ಕಪ್ಪ ಕಾಣಿಕೆಯನ್ನು ಕೇಳಿದನು. ಆದರೆ ಅವನು ಕಪ್ಪ ಕಾಣಿಕೆಗಳನ್ನು ಕೊಡಲು ನಿರಾಕರಿಸಿದ್ದರಿಂದ ಅವನು ಬನವಾಸಿ 12000ದ ಮೇಲೆ ಧಾಳಿಯನ್ನು ಮಾಡಿದನು. ಆದರೆ ಕಾಮದೇವನು ಸುಮ್ಮನೆ ಕೂರಲಿಲ್ಲ, ಅವನು ಚಾಲುಕ್ಯರ ಬೆಂಬಲವನ್ನು ತೆಗೆದುಕೊಂಡು ಬಲವಾದ ಪ್ರತಿರೋಧವನ್ನು ಒಡ್ಡಿದನು. ಅವನಿಗೆ ಸಹಾಯವನ್ನು ಮಾಡಿದವನು ಚಾಳುಕ್ಯರ ವೆಟುಗಿದೇವ ಅಥವ ಬಹಳ ಮಟ್ಟಿಗೆ ಅವನ ಮಗನಾದ ಸೋಮದೇವನಾಗಿರಬೇಕು. ಈ ಘರ್ಷಣೆಯ ಪರಿಣಾಮವನ್ನು ತಿಳಿಸಲು ಯಾವುದೇ ಶಾಸನಗಳಿಲ್ಲ. ಸಾಗರ ತಾಲ್ಲೂಕಿನ ಒಂದು ಶಾಸನವು ಇದೇ ಘರ್ಷಣೆಯ ಬಗ್ಗೆ ಉಲ್ಲೇಖಿಸುತ್ತದೆ.[2]

ಮೂರನೆಯ ವೀರಬಲ್ಲಾಳನು ಕದಂಬರನ್ನು ಸೋಲಿಸುವ ತನ್ನ ಪ್ರಯತ್ನದಲ್ಲಿ ಸೋತನು; ಕದಂಬರು ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅನೇಕ ಮಹತ್ವದ ಬಿರುದುಗಳನ್ನು ಇಟ್ಟುಕೊಂಡು ಆಳುತ್ತಲೇ ಇದ್ದರು. ಆದರೆ ಕಾವದೇವನು ದೀರ್ಘಕಾಲ ಆಳದೇ 14ನೆಯ ಶತಮಾನದ ಮೊದಲ ದಶಕದ ವೇಳೆಗೆ ಕಣ್ಮರೆಯಾದನು. ಫೆರಿಶ್ತಾಹನ ಪ್ರಕಾರ ಮಲಿಕಾಫುರನು ದೇವಗಿರಿಯಿಂದ ಕಡಲತೀರಕ್ಕೆ ಬರುವಾಗ ಅವನನ್ನು ತಾನು ಹಾಯುತ್ತಿದ್ದ ಪ್ರದೇಶದ ಹಿಂದೂಗಳು ವಿರೋಧಿಸಿದರು. ಬಹುಶಃ ಕಾವದೇವನು ಮೊಹಮದರ ಸೈನ್ಯಕ್ಕೆ ಈ ಸಮಯದಲ್ಲಿ ತುತ್ತಾಗಿರಬೇಕು.

ಭಾರತೀಯ ರಾಜಕೀಯ ವಲಯದಲ್ಲಿ ಸೇವುಣ ಮೇಲಿನ ಮೊಹಮದೀಯರ ಧಾಳಿಯು ಒಂದು ಮುಖ್ಯವಾದ ಘಟ್ಟವಾಗಿದೆ. ಅವರು ಒಂದೂವರೆ ಶತಮಾನಕ್ಕೂ ಹೆಚ್ಚಿನ

ಕಾಲ ಅವರು ದಕ್ಷಿಣ ಪರ್ಯಾಯ ದ್ವೀಪವನ್ನು ಆಳಿದರು. ಅವರನ್ನು ಯಾವ ಶಕ್ತಿಯೂ ಅಲುಗಾಡಿಸಲಾಗಲಿಲ್ಲ. ಈ ಅಲೆಯಲ್ಲಿ ಮಹಾ ಶಕ್ತಿಗಳೆನಿಸಿದ ಹೊಯ್ಸಳರು, ಕಾಕತೀಯರು, ಸೇವುಣರು ಎಲ್ಲರೂ ಕೊಚ್ಚಿಹೋದರು. ಇವರಲ್ಲಿ ಯಾರೂ ಅವರ ಶಕ್ತಿಗೆ ಸಮರೆನಿಸಲಿಲ್ಲ. ಕೇವಲ ಮೂರನೆಯ  ವೀರಬಲ್ಲಾಳನು ಮಾತ್ರ ತನ್ನ ಸಾವಿನವರೆಗೂ ಹೊಯ್ಸಳ ಸಾಮ್ರಾಜ್ಯವನ್ನು ಅವರಿಗೆ ಗೆಲ್ಲಲು ಬಿಡಲಿಲ್ಲ. ಆದರೆ ಅವನು ಅವರ ಕುತಂತ್ರಗಳಿಗೆ ಬಲಿಯಾದನು ಮತ್ತು ಅವನ ಸಾವಿನ ನಂತರ ನಿಜವಾದ ಅರ್ಥದಲ್ಲಿ ಹೊಯ್ಸಳ ಸಾಮ್ರಾಜ್ಯದ ಅಂತ್ಯವಾಯಿತು. ಆಂತರಿಕ ಭಿನ್ನಾಭಿಪ್ರಾಯ, ಅಸೂಯೆಗಳು ಎಲ್ಲ ದಕ್ಷಿಣದ ಶಕ್ತಿಗಳನ್ನು ನಾಶಮಾಡಿತು. ಸಣ್ಣವರಾದ ಕದಂಬರು, ಕಪಿಲಿಯ ರಾಜರೂ ಕೂಡಾ ಇದಕ್ಕೆ ಹೊರತಾಗಿರಲಿಲ್ಲ.

ಖರ ಜಿಲ್ಲೆಯ ಆಡಳಿತಗಾರನಾದ ಅಲ್ಲವುದ್ದೀನ್ ಖಿಲ್ಜಿಯು ತನ್ನ ಚಿಕ್ಕಪ್ಪ ಜಲಾಲುದ್ದೀನ್ ಖಿಲ್ಜಿಯ ಪ್ರತಿನಿಧಿಯಾಗಿ ಹೇರಳವಾದ ಐಶ್ವರ್ಯಕ್ಕೆ ಪ್ರಸಿದ್ಧವಾಗಿದ್ದ ದಕ್ಷಿಣದ ರಾಜ್ಯಗಳ ಕಡೆಗೆ ತನ್ನ ದಂಡಿನ ಸಮೇತವಾಗಿ ಹೊರಟನು. ಅವನು ಕ್ರಿ.ಶ.1294[3]ರಲ್ಲಿ ದಕ್ಷಿಣದಲ್ಲಿ ಎಲ್ಲ ಮೂಲಗಳಂತೆ ಮೊದಲ ಸ್ಥಾನವಾಗಿ ರಾಮಚಂದ್ರನ ಮೇಲೆ ಆಕ್ರಮಣವನ್ನು ಮಾಡಿದನು. ಅವನು ಸೇವುಣರ ಮೇಲೆ ಧಾಳಿಯನ್ನು ಮಾಡಲು ಸರಿಯಾದ ಸಮಯಕ್ಕಾಗಿ ಕಾಯುವ ತಾಳ್ಮೆಯನ್ನು ತೋರಿಸಿದನು. ಅವನ ಸಾಮಾನ್ಯವಾದ ಸೈನ್ಯವು ಅಮೀರ್ ಖುಸ್ರುವು ಹೆಸರನ್ನು ಹೇಳದ ಶತೃವಿನ ಮೇಲೆ ಧಾಳಿ ಮಾಡಿದ ಸಮಯದಲ್ಲಿ ಅಲ್ಲಾವುದ್ದೀನನು ಆಕ್ರಮಣವನ್ನು ಮಾಡಿದನು. ಅವನು ಇದೊಂದು ಸಣ್ಣ ಸೈನ್ಯವಾಗಿದ್ದು ಇದಕ್ಕಿಂತ ದೊಡ್ಡದಾದ ಸೈನ್ಯವು ಹಿಂದಿನಿಂದ ಬರುತ್ತಿದೆ ಎಂಬ ಊಹಾಪೋಹಗಳನ್ನು ತೇಲಿಬಿಡುವ ಚಾಣಾಕ್ಷತೆಯನ್ನು ತೋರಿದನು. ರಾಮಚಂದ್ರನು ಇದರಿಂದ ಕಂಗೆಟ್ಟು ಅಪಾರವಾದ ಐಶ್ವರ್ಯದ ಕಾಣಿಕೆ–ಯೊಂದಿಗೆ ರಾಜಿ ಒಪ್ಪಂದಕ್ಕೆ ಸಿದ್ಧವಾದನು. ಸೇವುಣರ ದುರದೃಷ್ಟಕ್ಕೆ ದಕ್ಷಿಣದ ಯಾತ್ರೆಯಿಂದ ಹಿಂತಿರುಗಿದ ಸಿಂಘಣನು ತಂದೆಯಿಂದ ಅವಮಾನಕ್ಕೆ ಒಳಗಾಗಿ ಅದನ್ನು ತೀರಿಸಿಕೊಳ್ಳುವ ಸಲುವಾಗಿ ಮುಸ್ಲಿಮ್ ಸೈನ್ಯದ ಮೇಲೆ ಬಿದ್ದನು. ಆದರೆ ಅವನು ಶಿಸ್ತಿನ ಮತ್ತು ಚೆನ್ನಾಗಿ ತರಬೇತಿ ಹೊಂದಿದ ಅವರ ಸೈನ್ಯಕ್ಕೆ ಸರಿಸಾಟಿಯಾಗಿರಲಿಲ್ಲ. ಈ ಕದನದ ಪರಿಣಾಮವೆಂದರೆ ಅವನು ಸೋತು ಸೇವುಣರು ಇನ್ನೂ ಹೆಚ್ಚು ಧನವನ್ನು ಕೊಡಬೇಕಾಯಿತು. ಅಲ್ಲವುದ್ದೀನನು ಅಪಾರವಾದ ಕೊಳ್ಳೆಯೊಂದಿಗೆ ತನ್ನ ಸ್ಥಳಕ್ಕೆ ಹಿಂತಿರುಗಿದನು. ಅದು ಅವನ ದಾಹವನ್ನು ತಣಿಸದೆ ಒಂದು ಬಾರಿ ದಿಲ್ಲಿಯ ಸಿಂಹಾಸನದ ಮೇಲೆ ಕುಳಿತು ದಕ್ಷಿಣದ ಮೇಲೆ ಹಲವು ಬಾರಿ ಧಾಳಿ ಮಾಡಿ ಊಹೆಗೂ ಸಿಲುಕದಷ್ಟು ಐಶ್ವರ್ಯವನ್ನು ಕೊಳ್ಳೆಹೊಡೆಯಬಹುದು ಎಂಬ

ಕನಸನ್ನು ಕಟ್ಟಿಕೊಂಡನು. ರಾಮಚಂದ್ರನು ತನ್ನ ರಾಜ್ಯದ ಮೇಲೆ ನಡೆದ ಧಾಳಿಯ ಬಗ್ಗೆ ಏನನ್ನೂ ಅರ್ಥಮಾಡಿಕೊಳ್ಳಲು ಅಸಮರ್ಥನಾದನು. ಅವನು ತನ್ನ ಪ್ರದೇಶಗಳನ್ನು ಮೊಹಮ್ಮದೀಯರಿಂದ ರಕ್ಷಿಸಿಕೊಳ್ಳುವುದರ ಬದಲಾಗಿ ಅವನು ದಕ್ಷಿಣದ ಪರ್ಯಾಯ ದ್ವೀಪದ ತನ್ನ ಶತೃಗಳ ವಿರುದ್ಧ ಹೋರಾಡಿ ತನ್ನ ಸಾಮ್ರಾಜ್ಯವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವನ್ನು ಮಾಡಿದನು. ಅದರಲ್ಲಿ ಹೊಯ್ಸಳರು ಇವನಿಗೆ ಮುಖ್ಯವಾಗಿ ಗುರಿಯಾಗಿದ್ದರು. ಮಹಮ್ಮದೀಯರ ಧಾಳಿಯ ಎರಡು ವರ್ಷದ ನಂತರ ಅವನು ಹೊಸಗುಂದದ ಸಂತಾರರ ಮೇಲೆ ತನ್ನ ಸೈನ್ಯವನ್ನು ತಿರುಗಿಸಿದನು. ಕ್ರಿ.ಶ.1296[4]ರ ಶಾಸನವು ಅವನ ಸೈನ್ಯಧಿಕಾರಿಯಾದ ಯಬ್ಬಾರ ನಾಯಕನು ಸಂತಾರ ಮುಖ್ಯಸ್ಥ ಕೋಟಿ ನಾಯಕನನ್ನು ಎದುರಿಸಿದನು.

ರಾಮಚಂದ್ರನು ಹೊಯ್ಸಳರ ಕಡೆ ಸ್ವಲ್ಪ ಕಾಲದವರೆಗೆ ಗಮನ ನೀಡಲಿಲ್ಲ ಅಥವ ನೀಡಲಾಗಲಿಲ್ಲ. ಆದರೆ ಅಷ್ಟಕ್ಕೂ ಅವನು ಏಕಾಂಗಿಯಾಗಿರಲು ಸಾಧ್ಯವಿರಲಿಲ್ಲ. ಕ್ರಿ.ಶ.1302 ರ ವೇಳೆಗೆ ಅವನು ಹೊಯ್ಸಳರ ಮೇಲಿನ ತನ್ನ ಧಾಳಿಯನ್ನು ಮುಂದುವರೆಸಿದನು. ಕೆಲವು ವರ್ಷಗಳ ಹಿಂದೆ ಸಂತಾರಾ ಮುಖ್ಯಸ್ಥರ ಮೇಲೆ ಆಕ್ರಮಣವನ್ನು ಮಾಡಿದ ಯಬ್ಬಾರ ನಾಯಕನು ಹೊಯ್ಸಳರ ಪ್ರದೇಶಗಳ ಮೇಲೆ ಧಾಳಿಯನ್ನು ಮಾಡಿ ಅದನ್ನು ಅತಿಕ್ರಮಿಸಿ ರಟ್ಟಿಹಳ್ಳಿಯಲ್ಲಿ ನಿವಾಸ ಹೂಡಿದ ಸಮಯದಲ್ಲೇ ಈ ಧಾಳಿಯನ್ನು ಆಯೋಜಿಸಿದನು. ಯಬ್ಬರ ನಾಯಕನನ್ನು ಎದುರಿಸಲು ಬಂದ ಹೊಯ್ಸಳರ, ಸೊಡಲ ದೇವರಸ, ಸಂತಾರ ಮುಖ್ಯಸ್ಥ ಮತ್ತು ಬಹುಶಃ ಒಬ್ಬ ಹೊಯ್ಸಳರ ಸಾಮಂತ ಇವುಗಳ ಸಂಯುಕ್ತ ಸೇನೆಯು ಸಾಲೂರಿನಲ್ಲಿ ಭೀಕರವಾದ ಯುದ್ಧವನ್ನು ಮಾಡಿದವು. ಅನೇಕ ವೀರಗಲ್ಲುಗಳು[5] ಹೇಳುವಂತೆ ಅನೇಕ ಶೂರರು ಮಡಿದರು. ಸೇವುಣರ ಸೈನಾಧಿಪತಿಯು ವಸತಿ ಮಾಡಿದ್ದ ರಟ್ಟೀಹಳ್ಳಿಯು ಸಾಲೂರಿನ ರಣರಂಗದಿಂದ ಕೇವಲ 15 ಮೈಲು ದೂರವಿತ್ತು. ಈ ಯುದ್ಧದ ಪರಿಣಾಮವನ್ನು ಗೊತ್ತುಮಾಡಲಾಗಿಲ್ಲ. ಬಹುಶಃ ಮೂರನೆಯ ವೀರಬಲ್ಲಾಳನು ಸೋಲನ್ನು ಅನುಭವಿಸಿರ-ಬೇಕು. ಆವನು ಪರ್ಯಾಯವಾಗಿ ಸೇವುಣರ ಮೇಲೆ ವಿಜಯ ಯಾತ್ರೆಯನ್ನು ಮಾಡಲು ಸಿಧ್ಧತೆಗಳನ್ನು ಮಾಡಿಕೊಂಡನು. ಬಹುಶಃ ಇದು ಕ್ರಿ.ಶ.1303[6]ರ ಸಮಯದಲ್ಲಿ ಆಗಿರಬೇಕು, ಏಕೆಂದರೆ ಒಂದು ಶಾಸನವು ಈ ವಿಜಯಯಾತ್ರೆಯಲ್ಲಿ ಮೂರನೆಯ ವೀರಬಲ್ಲಾಳನು ವಿಜಯ ಗಳಿಸಿ ನಕ್ಕಿಗುಂಡಿ ಕೋಟೆಯನ್ನು ನಾಶಗೊಳಿಸಿ ಆಳ್ವಿಕೆಯನ್ನು ಮಾಡುತ್ತಿದ್ದನು ಎಂದು ಉಲ್ಲೇಖಿಸಿದೆ.

ರಾಮಚಂದ್ರನು ಏನಾದರೂ ಸುಮ್ಮನೆ ಕೂರಲಿಲ್ಲ. ಅವನು ಮೂರನೆಯ ವೀರಬಲ್ಲಾಳ ಮತ್ತು ಅವನ ಶತೃಗಳನ್ನು ಎದುರಿಸುವುದರಲ್ಲೇ ಇದ್ದುದರಿಂದ ಅವನು ತನ್ನ ಸಾಮ್ರಾಜ್ಯವನ್ನು

ಹೊಯ್ಸಳರ ನಷ್ಟದಲ್ಲಿ ತಾನು ವಿಸ್ತರಿಸಬೇಕು ಎಂದು ಆಶಿಸಿದನು. ಹಾಗಾಗಿ ರಾಮಚಂದ್ರನು ಆ ಸಂದರ್ಭವನ್ನು ಸರಿಯಾಗಿ ಬಳಸಿಕೊಂಡನು. ಕ್ರಿ.ಶ.1303[7]ರಲ್ಲಿ ಅವನು ತನ್ನ ದೊಡ್ಡದಾದ ಸೈನ್ಯವನ್ನು ತನ್ನ ಅಧೀನನಾದ ಕಂಪಿಲಿಯ ಕಂಪಿಲನ ನೇತೃತ್ವದಲ್ಲಿ ಕಳುಹಿಸಿದನು. ಈ ಸುದ್ದಿಯನ್ನು ಕೇಳಿದ ಚಿತ್ರದುರ್ಗದ ಸುತ್ತಮುತ್ತಲಿನ ಪ್ರದೇಶವನ್ನು ಆಳುತ್ತಿದ್ದ ಮೂರನೆಯ ವೀರಬಲ್ಲಾಳನ ನಂಬಿಕಸ್ಥ ಮಹಾಪ್ರಧಾನಿ ದಣನಾಯಕನು ತಮ್ಮ ಕೇಂದ್ರಸ್ಥಾನವಾದ ಚಿತ್ರದುರ್ಗದಿಂದ 20 ಮೈಲು ದೂರವಿರುವ ಹೊಳಲ್ಕೆರೆಯಲ್ಲಿ ಶತೃವಿನ ಸೈನ್ಯವನ್ನು ಎದುರಿಸಿದನು. ಈ ಕಾಳಗದಲ್ಲಿ ಸೋಮಯ್ಯ ದಣನಾಯಕನು ಮಡಿದನು. ಸಹಸ್ರಾರು ಶಾಸನಗಳ ಪ್ರಕಾರ ಈ ಯುದ್ಧವು ಬಹಳ ಭೀಕರವಾಗಿತ್ತೆಂದೂ ಅದರಲ್ಲಿ ಹೊಯ್ಸಳರ ಅನೇಕ ವೀರರು ಮಡಿದರೆಂದೂ ಉಲ್ಲೇಖವಿದೆ.[8] ಈ ಯುದ್ಧದಲ್ಲಿ ಭಾಗವಹಿಸಿದವರಲ್ಲಿ ಕೇವಲ ಪರಿಣಿತರಾದ ಸೈನಿಕರಲ್ಲದೇ ಅನೇಕ ಸಾಮಂತರಾಜರೂ ಇದ್ದರು. ಜೇನುಕಲ್ಲಿನ ಒಂದು ಶಾಸನದಲ್ಲಿ ಮೂರನೆಯ ವೀರಬಲ್ಲಾಳನ ಅಧೀನದಲ್ಲಿದ್ದ ಕಂದರಿ ದೇವರಸನ ಭಾವಮೈದುನನಾದ ಬಸವಪ್ಪನು ಕಂಪಿಲ ದೇವನ ಸೈನ್ಯದ ಜೊತೆ ಹೋರಾಡಿ ಮಡಿದನು ಎಂದು ಉಲ್ಲೇಖಿಸಿದೆ.[9]

ಹೊಳಲ್ಕೆರೆಯ ಯುದ್ದದಲ್ಲಿ ಮಡಿದ ಸೋಮಯ್ಯ ದಂಡನಾಯಕನು ಬೇರೆ ಯಾರೂ ಅಲ್ಲದೇ ಮೂರನೆಯ ವೀರಬಲ್ಲಾಳನ ಮಹಾಪ್ರಧಾನರ ಹೆಸರಾಗಿತ್ತು. ಮೂರನೆಯ ನರಸಿಂಹನ ಕಾಲದಲ್ಲಿಯೂ ಇವನು ಪ್ರಮುಖ ವ್ಯಕ್ತಿಯಾಗಿದ್ದು ಅವನು ಸೋಮನಾಥಪುರದಲ್ಲಿ ಕೇಶವ ದೇವಾಲಯವನ್ನೂ ಮತ್ತು ಒಂದು ಅಗ್ರಹಾರವನ್ನೂ ಕಟ್ಟಿಸಿದನು. ಹೊಯ್ಸಳರ ಮತ್ತು ಕಂಪ್ಲಿ ರಾಜರ ನಡುವಿನ ವೈರತ್ವವು ಸಾಹಿತ್ಯದಿಂದಲೂ ತಿಳಿದುಬಂದಿದೆ. ಕುಮಾರ ರಾಮನ ಶೌರ್ಯದ ಕತೆಗಳಲ್ಲಿ ಮೂರನೆಯ ವೀರಬಲ್ಲಾಳ ಮತ್ತು ಕಂಪ್ಲಿಯ ಸೈನ್ಯದ ನಡುವೆ ಮತ್ತೆ ಮತ್ತೆ ನಡೆಯುತ್ತಿದ್ದ ಗರ್ಷಣೆಗಳ ಬಗ್ಗೆ ಉಲ್ಲೇಖವಿದೆ. ಅಲ್ಲಿ ಈ ಎರಡೂ ಬಲಗಳ ನಡುವೆ ನಡೆಯುತ್ತಿದ್ದ ಭೀಕರ ಕಾಳಗದ ಬಗೆಗೆ ಉಲ್ಲೇಖವಿದೆ ಮತ್ತು ಹುಳಿಯಾರಿನಲ್ಲಿ ಅತ್ಯುತ್ತಮ ತಳಿಯ ಅನೇಕ ನಾಯಿಗಳಿದ್ದುವೆಂದೂ ಮತ್ತು ಅದನ್ನು ತರಲು ಕುಮಾರ ರಾಮನು ತನ್ನ ಜನರನ್ನು ಕಳುಹಿಸಿದನೆಂದೂ ಉಲ್ಲೇಖವಿದೆ.[10] ಆದರೆ ಹೊಯ್ಸಳರ ಅಧೀನದಲ್ಲಿದ್ದ ಹುಳಿಯಾರಿನ ಅಧಿಕಾರಿಯು ಅದನ್ನು ಕೊಡಲು ನಿರಾಕರಿಸಿದ್ದು ಅದಕ್ಕಾಗಿ ಕಂಪಿಲ ಶಿಸ್ತಿನ ಸೈನ್ಯವು ಧಾಳಿ ಮಾಡಿ ಆ ಅಧಿಕಾರಿಯನ್ನು ಸೆರೆಹಿಡಿದನು.

ಹುಳಿಯಾರಿನ ಮುಖ್ಯಸ್ಥನ ಈ ಸೋಲಿನ ಸುದ್ದಿಯು ಹೊಯ್ಸಳ ಚಕ್ರವರ್ತಿಯ ಕಿವಿಗೆ ಬಿದ್ದೊಡನೆ ಅವನು ಕೇರಳ ಕೊಂಗು, ಕೊಡಗು ಮಲೆಯಾಳ ಮತ್ತು ತಿಗುಳರ ಸೈನ್ಯವೂ

ಸೇರಿದಂತೆ ತನ್ನ ಬಹಳ ದೊಡ್ಡದಾದ ಸೈನ್ಯವನ್ನು ಸೇರಿಸಿದನು. ಈ ಸಂಯುಕ್ತ ಸೇನೆಯು ಕಂಪಿಲದ ಕಡೆ ಹೊರಟಿತು. ಕಂಪಿಲನೂ ಸಹ ಸುಮ್ಮನಿರಲಿಲ್ಲ. ಅವನ ಕಡೆಯಿಂದಲೂ ಸಿದ್ಧತೆಗಳು ನಡೆದವು. ಅವನ ಸೈನ್ಯವು ಲಾಲರು, ಅರುಯರು, ಗೌಳರು, ಗುರ್ಜರರು, ಕನ್ನೋಜಿಗಳೂ ಸೇರಿದ ಪದಾತಿಗಳ, ಬಲವಾದ ಆನೆಗಳ ಬಲವು ಯುದ್ಧಕ್ಕೆ ಸಿದ್ಧವಾಯಿತು. ಇವರ ಜೊತೆಗೆ ತುಳುವರು ಮತ್ತು ಪರುಕರು ಸಿದ್ಧವಾದರು. ಅನೇಮ ಶೂರರಾಡ ಕಾಳಂಜಿ ಕಂಪ, ವಕ್ಕಲಿಗ ನಾಗಣ್ಣ, ಅಕ್ಕಸಾಲಿಗ ಟಿಕ್ಕ, ಬೆಂಕಿ ತರುವ ನಾಗ, ಮಾಯಿದೇವ, ಸೋಯಿದೇವ, ಹಡಪದ ಬಲ್ಲುಗ, ಗಿಂಡಿಯ ಲಕ್ಕ, ಭಂಡಾರಿ ಸೋವಣ್ಣ ಮತ್ತು ಇತರರ ಒಂದು ದಳವು ಬಂದು ತಮ್ಮ ಸ್ಥಾನಗಳನ್ನು ಅಲಂಕರಿಸಿತು. ಕಂಪಿಲನೇ ಸ್ವತಹ ಕುಮಾರ ರಾಮನೊಂದಿಗೆ ಸೈನ್ಯವನ್ನು ಮುನ್ನಡೆಸಿದನು. ಈ ಯುದ್ಧವು ಇಡೀ ದಿನವು ನಡೆದು ಎರಡೂ ಕಡೆಯಲ್ಲಿಯೂ ಅನೇಕ ಸಂಖ್ಯೆಯ ಸೈನಿಕರು, ಆನೆಗಳು, ಕುದುರೆಗಳು ಮಡಿದವು. ಕುಮಾರ ರಾಮನು ಪ್ರದರ್ಶಿಸಿದ ಧೈರ್ಯದಿಂದ ನಿಜವಾಗಿಯೂ ಕಂಪಿಲನು ಮೇಲುಗೈಯನ್ನು ಪಡೆದನು. ಆಗ ಮೂರನೆಯ  ವೀರಬಲ್ಲಾಳನ ಸೇನಾಪತಿಯದ ಸೋಮಯ ದಂಡದೀಪ ಮತ್ತು ಬೈಚ ದಂಡನಾಯಕರು ಯುದ್ಧಕ್ಕೆ ಕೊನೆ ಹಾಡಲು ಸಮರ್ಥರಾದರು.[11]

ಸೋಮ ದಂಡದೀಪನೆಂದರೆ ಸೋಮಯ ದಣ್ಣಾಯಕನೆಂದು ತಿಳಿದುಕೊಳ್ಳಬಹುದು. ಸಹಜವಾಗಿಯೇ ಈ ಘರ್ಷಣೆಯು ಕ್ರಿ.ಶ.1303[12] ಕ್ಕಿಂತ ಸ್ವಲ್ಪ ಮುಂಚೆಯೇ ನಡೆದಿರಬೇಕು ಏಕೆಂದರೆ 1303ರಲ್ಲಿ ಕಂಪಿಲ ಸೈನ್ಯದೊಡನೆ ನಡೆದ ಯುದ್ಧದಲ್ಲಿ ಅವನು ಮಡಿದನು. ಈ ಮಾಹಿತಿಯು ಸರಿಯಾಗಿದ್ದರೆ ಕೊಂಗು, ಕೊಡಗು, ತಮಿಳುನಾಡು ಇವರುಗಳು ಹೊಯ್ಸಳರಿಗೆ ಅನುಕೂಲವಾಗಿದ್ದು ತುಳುವರು ಕಂಪಿಲನಿಗಾಗಿ ಹೋರಾಡಿದರು ಮತ್ತು ಶಾಸನಗಳೂ ಇದನ್ನು ಸಮರ್ಥಿಸುತ್ತವೆ.

ಮೂರನೆಯ ವೀರಬಲ್ಲಾಳನು ನಕ್ಕಿಗುಡಿ ಕೋಟೆಯನ್ನು ಕಂಪಿಲನ ವಿರುದ್ಧದ ಯುದ್ಧದ ನಂತರ ವಶಪಡಿಸಿಕೊಂಡನು. ಇದು ಸೇವುಣರೊಂದಿಗೆ ಇದ್ದು ಅದು ಕ್ರಿ.ಶ.1305ರವರೆಗೂ ಇತ್ತು ಮತ್ತು ಇದು ಹೊಯ್ಸಳ ಸೈನ್ಯವು ಅವರ ದೊರೆಯ ನೇರ ಮಾರ್ಗದರ್ಶನದಲ್ಲಿ ಸೇವುಣ ವಿರುದ್ಧ ಹೊರಟಾಗ ಇತ್ತು ಎಂದು ಶಾಸನಗಳು ಹೇಳಿವೆ. ಇದು ಕ್ರಿ.ಶ.1304ರಲ್ಲಿ ಹೊಯ್ಸಳ ಚಕ್ರವರ್ತಿಯು ನಕ್ಕಿಗುಡಿ ಕೋಟೆಯನ್ನು ವಶಪಡಿಸಿಕೊಂಡ ಮೇಲೆ ಸುಮ್ಮನಿರಲಿಲ್ಲ ಎಂದು ಸೂಚಿಸುತ್ತದೆ. ರಾಮಚಂದ್ರನು ಒಂದು ಸಮರ್ಥ ಸೇನೆಯನ್ನು ಮೂರನೆಯ ವೀರಬಲ್ಲಾಳನನ್ನು ವಶಪಡಿಸಿಕೊಳ್ಳಲು ಕಳುಹಿಸಿದನು. ಒಂದು ಶಾಸನವು ಸೇವುಣರ ರಾಜನು

ಅವನ ಜನಗಳಿಗೆ ವೀರಬಲ್ಲಾಳನನ್ನು ವಶಪಡಿಸಿಕೊಂಡು ಮತ್ತು "ಹುಲಿಮರಿಯನ್ನು ಅವನೆದುರಲ್ಲೇ ತರಲು" ಹೇಳಿದನು ಎಂದು ಉಲ್ಲೇಖಿಸಿದೆ. ಇದು ಸ್ಪಷ್ಟವಾಗಿ ರಾಮಚಂದ್ರನು ಅವನ ಶತೃವಿನ ಶೌರ್ಯದ ಬಗ್ಗೆ ಇದ್ದ ಗೌರವದ ಬಗ್ಗೆ ತಿಳಿಸುತ್ತದೆ. ಅವನು ಚಕ್ರವರ್ತಿಯನ್ನು ಸೋಲಿಸಲೇ ಅಲ್ಲದೇ ವಶಪಡಿಸಿಕೊಳ್ಳುವುದರಲ್ಲೂ ವಿಫಲನಾದನು.

ಮೂರನೆಯ ವೀರಬಲ್ಲಾಳನು ಪರ್ಯಾಯ ದ್ವೀಪದ ಉತ್ತರದ ಕಡೆಯ ಚಟುವಟಿಕೆ-ಗಳಿಂದ ತೃಪ್ತಿ ಹೊಂದದೇ ಅವನು ದಕ್ಷಿಣದ ಕಡೆಗೂ ತಿರುಗಿದನು. ಚೋಳರು ಒಂದು ದೊಡ್ಡ ಶಕ್ತಿಯಾಗಿದ್ದು ದಕ್ಷಿಣದಲ್ಲಿ ರಾಜಕೀಯವಾಗಿ ಮರೆಯಾಗಿದ್ದರಿಂದ ಅಲ್ಲಿ ಹೊಯ್ಸಳರು ಮತ್ತು ಪಾಂಡ್ಯರಿಬ್ಬರೇ ರಾಜಕೀಯವಾಗಿ ದಕ್ಷಿಣದ ಪರ್ಯಾದ್ವೀಪದ ಕೆಳಭಾಗದಲ್ಲಿ ಉಳಿದರು. ಅವರ ದುರಾದೃಷ್ಟದಿಂದ ಅವ ಮತ್ತು ಇನ್ನುಳಿದ ಅಲ್ಲಿನ ಶಕ್ತಿಗಳ ನಡುವೆ ಉತ್ತಮವಾದ ಸಂಬಂಧವಿರಲಿಲ್ಲ ಮತ್ತು ಮಹಮ್ಮದೀಯರು ಅನಿರೀಕ್ಷಿತವಾಗಿ ಅವರ ಮೇಲೆ ಧಾಳಿಯನ್ನು ನಡೆಸುವವರೆಗೂ ಅದು ಹಾಗೇ ಇತ್ತು. ಹೀಗೆ ಮಹಮ್ಮದೀಯರಿಂದ ಇಡೀ ದಕ್ಷಿಣ ಪರ್ಯಾಯ ದ್ವೀಪದ ಸರ್ವನಾಶಕ್ಕೆ ಅವರದೂ ಕಾಣಿಕೆ ಇದ್ದು ಅಲ್ಲಿದ್ದ ದೊಡ್ಡ ವಂಶಗಳಾದ ಕಾಕತೀಯ, ಸೇವುಣರು, ಪಾಂಡ್ಯರು ಮತ್ತು ಹೊಯ್ಸಳರು ಅಲ್ಲಿಂದ ಮಾಯವಾಗುವುದಕ್ಕೂ ಕಾರಣೀಭೂತರಾದರು.

ಮಾರವರ್ಮನ್ ಕುಲಶೇಖರನ ನೇತೃತ್ವದಲ್ಲಿ ಅವರು ಬಹಳ ಬಲವಾಗಿದ್ದು ಹೊಯ್ಸಳರಿಗೆ ತೊಂದರೆಯನ್ನು ಕೊಡುತಿದ್ದರು. ಈ ಪಾಂಡ್ಯ ದೊರೆಯು ಕಣ್ಣಾನೂರು ಕೋಟೆಯನ್ನು ರಾಮನಾಥನಿಂದ ಕಿತ್ತುಕೊಂಡಿದ್ದು ಕೊನೆಯವರೆಗೂ ಈ ಫಲವತ್ತಾದ ಮತ್ತು ಕಾರ್ಯದೃಷ್ಟಿಯಿಂದ ಮುಖ್ಯವಾದ ಪ್ರದೇಶವನ್ನು ಪುನಃ ವಶಪಡಿಸಿಕೊಳ್ಳುವುದು ಮೂರನೆಯ ವೀರಬಲ್ಲಾಳನ ಕನಸಾಗಿತ್ತು. ಅವನು ಪಾಂಡ್ಯರ ಮೇಲೆ ಬೀಳಲು ಕೇವಲ ಸಮಯಕ್ಕಾಗಿ ಕಾಯುತ್ತಿದ್ದನು. ಈ ಸಂದರ್ಭವು ಮಾರವರ್ಮನ್ ಕುಲಶೇಖರನ ಇಬ್ಬರು ಮಕ್ಕಳಾದ ವೀರ ಪಾಂಡ್ಯ ಮತು ಸುಂದರ ಪಾಂಡ್ಯರ ನಡುವಿನ ಸಿಂಹಾಸನಕ್ಕಾಗಿ ಉಂಟಾದ ವೈಮನಸ್ಸಿನ ಮೂಲಕವಾಗಿ ದೊರೆಯಿತು.

ಕ್ರಿ.ಶ.1295[13]ರ ವೇಳೆಗೆ ಮಾರವರ್ಮನ್ ಕುಲಶೇಖರನು ತನ್ನ ಕಾನೀನ ಪುತ್ರನೊಡನೆ ಸೇರಿಕೊಂಡು ತನ್ನ ಕುಲಪುತ್ರ ಸುಂದರ ಪಾಂಡ್ಯನ ತನ್ನ ರಾಜ್ಯದ ಆಡಳಿತಕ್ಕೆ ಸಂಬಂಧಪಟ್ಟ ಬೇಡಿಕೆಗಳನ್ನು ಸಂಪೂರ್ಣವಾಗಿ ಉಪೇಕ್ಷೆ ಮಾಡಿದನು. ಇದು ಇಬ್ಬರು ಸಹೋದರರ ನಡುವೆ

ತೀವ್ರವಾದ ವೈರತ್ವಕ್ಕೆ ಕಾರಣವಾಗಿ ಇವರಿಬ್ಬರ ನಡುವೆ ಅನೇಕ ಯುದ್ಧಗಳು ಸಿಂಹಾಸನಕ್ಕಾಗಿ ನಡೆದು ಅದು ಕ್ರಿ.ಶ.1310–11[14]ರವರೆಗೂ ಮುಂದುವರೆಯಿತು. ಇದೇ ಸಮಯದಲ್ಲಿ ಮಹಮಾದೀಯರಿಂದ ವೀರ ಪಾಂಡ್ಯನ ಮೇಲೆ ಅನಿರೀಕ್ಷಿತವಾಗಿ ಧಾಳಿಯು ನಡೆದರೂ ಅದರ ಪರಿಣಾಮವು ನಿರೀಕ್ಷಿತ ಪ್ರಮಾಣದಲ್ಲಿ ಆಗದೇ ಇದ್ದುದರಿಂದ ಇವರಿಬ್ಬರ ನಡುವಿನ ಘರ್ಷಣೆಯು ಮುಂದುವರೆಯಿತು. ಕ್ರಿ.ಶ.1310[15]ರ ವೇಳೆಗೆ ಸುಂದರ ಪಾಂಡ್ಯನು ಧರ್ಮಬಾಹಿರ ಮಗನೊಂದಿಗೆ ಇಟ್ಟುಕೊಂಡ ಸಂಬಂಧದಿಂದ ರೋಸಿಹೋಗಿ ತನ್ನ ತಂದೆಯ ವರ್ತನೆಗೆ ಕೆರಳಿದನು.

ತನ್ನ ನ್ಯಾಯಯುತವಾದ ಬೇಡಿಕೆಗಳನ್ನು ಮನ್ನಿಸದ ತನ್ನ ಸೋದರನನ್ನು ಕೊಲ್ಲಲೂ ಅವನು ತನ್ನ ಕೋಪದ ಘಳಿಗೆಯಲ್ಲಿ ಹಿಂಜರಿಯಲಿಲ್ಲ. ಆದರೆ ಅದು ಅವನಿಗೆ ಪಾಂಡ್ಯ ಸಿಂಹಾಸನವನ್ನೇರಲು ಯಾವ ಪ್ರಯೋಜನವನ್ನೂ ಮಾಡಲಿಲ್ಲವೇಕೆಂದರೆ ಪ್ರಾರಂಭದಲ್ಲಿ ವೀರ ಪಾಂಡ್ಯನು ಸೋತರೂ ಸುಂದರ ಪಾಂಡ್ಯನ ಪ್ರಯತ್ನವನ್ನು ತಡೆಯಲು ಸಮರ್ಥನಾಗಿ ಕೊನೆಗೆ ಮೇಲುಗೈಯನ್ನು ಪಡೆದನು. ಹೀಗೆ ಸುಂದರಪಾಂಡ್ಯನ ಏಳ್ಗೆಯು ಅವನ ಮಲ ಸಹೋದರನಿಂದ ತಡೆಹಿಡಿಯಲ್ಪಟ್ಟಿದ್ದರಿಂದ ಅವನು ಮಹಮ್ಮದೀಯರಿಗೆ ಸಹಾಯವನ್ನು ಮಾಡಿದನು.

ಹೊಯ್ಸಳರ ವಿರುದ್ಧ ಯುದ್ಧವನ್ನು ಮಾಡಲು ದೊಡ್ಡದಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ ದೇವಗಿರಿಯಲ್ಲಿ ವಸತಿಯನ್ನು ಹೂಡಿದ್ದ ಮಹಮ್ಮದೀಯ ಸೇನಾಪತಿ ಮಲ್ಲಿಕಾಫ಼ರನ್ನು ಸುಂದರಪಾಂಡ್ಯನು ಸಂಪರ್ಕಿಸಿರಬೇಕು. ಸುಂದರಪಾಂಡ್ಯನು ಮಲ್ಲಿಕಾಫರ–ನನ್ನು ಪಾಂಡ್ಯರಾಜ್ಯಕ್ಕೆ ಅಲ್ಲಿನ ಪರಿಸ್ಥಿತಿಯನ್ನು ತನ್ನ ವಶಕ್ಕೆ ತೆಗೆಕೊಳ್ಳಲು ಸಹಾಯ ಮಾಡುವಂತೆ ಆಹ್ವಾನಿಸಿರಬೇಕು. ಮಾರ್ಕೋಪೋಲೋನು ಸುಂದರಪಾಂಡ್ಯನು ದೆಹಲಿಯಲ್ಲಿ ಅಲ್ಲಾವಿದ್ದೀನನನ್ನು ಭೇಟಿಯಗಿರಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಇದನ್ನು ಒಪ್ಪುವುದು ಬಹಳ ಕಷ್ಟ.

ಪಾಂಡ್ಯದೇಶದಲ್ಲಿ ಸೋದರರ ನಡುವೆ ಅಂತಃಕಲಹವು ಪ್ರಾರಂಭವಾದ ಮೇಲೆ ಮೂರನೆಯ ವೀರಬಲ್ಲಾಳನು ಸಮಯವನ್ನು ವ್ಯರ್ಥ ಮಾಡಲಿಲ್ಲ. ಅವನು ಅಲ್ಲಿ ನಡೆಯುತ್ತಿದ್ದ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದು ಅವನು ಸೂಕ್ತವಾದ ಸಮಯದಲ್ಲಿ ತಮಿಳುನಾಡಿನ ವ್ಯವಹಾರಗಳಲ್ಲಿ ಕೈ ಹಾಕಿದನು. ಅವನ ಮುಖ್ಯವಾದ ಉದ್ದೇಶವು ಸೋದರರ

ಕಲಹದ ಮಧ್ಯೆ ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳುವುದಾಗಿತ್ತು. ಇದರ ಪರಿಣಾಮವಾಗಿ ಅವನು ಕಣ್ಣಾನೂರು ಕೋಟೆಯನ್ನು ವಶಪಡಿಸಿಕೊಂಡನು. ಆದರೆ ಅವನು ಸಾಕಷ್ಟು ಅದೃಷ್ಟವಂತನಾಗಿರಲಿಲ್ಲ ಏಕೆಂದರೆ ಅದೇ ಸಮಯಕ್ಕೆ ಸರಿಯಾಗಿ ಅವನ ರಾಜಧಾನಿಯು ಮಹಮದ್ದೀಯ ಸೈನ್ಯದಿಂದ ಸುತ್ತುವರಿಯಲ್ಪಟ್ಟದ್ದರಿಂದ ಅವನು ಹಿಂತಿರುಗಿ ಹೋಗ-ಬೇಕಾಯಿತು.

ಅಮೀರ್ ಖುಸ್ರುವು ತನ್ನ ಖಾಇನ್-ಉಲ್-ಫುತುಹ್ ನಲ್ಲಿ ದೋರಸಮುದ್ರದ ದೊರೆಯ ಪಾಂಡ್ಯದೇಶದಲ್ಲಿ ಅಂತಃಕಲಹವು ಪ್ರಾರಂಭವಾದಕೂಡಲೇ ಆ ಎರಡು ನಗರಗಳನ್ನು ಮತ್ತು ಅಲ್ಲಿನ ವರ್ತಕರನ್ನು ಲೂಟಿ ಹೊಡೆಯುವ ಉದ್ದೇಶವಿತ್ತೆಂದು ಬರೆದಿದ್ದಾನೆ. ಅಂದಿನ ಕಾಲದಲ್ಲಿ ಒಂದು ಸೈನ್ಯವು ಬಂದಿತೆಂದರೆ ಅಲ್ಲಿ ನಗರವನ್ನು ಲೂಟಿ ಮಾದುವುದು ಸಾಮಾನ್ಯವಾದದ್ದರಿಂದ ಇದಕ್ಕೆ ಹೆಚ್ಚಿನ ಮಹತ್ವವೇನಿಲ್ಲ. ಆದರೆ  ವೀರಬಲ್ಲಾಳನಿಗೆ ಖಂಡಿತವಾಗಿಯೂ ಈ ಯುದ್ಧದ ಸಮಯದಲ್ಲಿ ಹೆಚ್ಚಿನ ಪರಿಶ್ರಮವಿಲ್ಲದೆ ತಾನೇ ಅಲ್ಲಿ ಹೋಗಿ ಕಣ್ಣಾನೂರು ಕೋಟೆಯನ್ನು ವಶಪಡಿಸಿಕೊಳ್ಳುವುದಾಗಿತ್ತು.

ಹೀಗೆ ಮೂರನೆಯ  ವೀರಬಲ್ಲಾಳನು ತನ್ನ ಸಮರ್ಥರಾದ ಮಂತ್ರಿಗಳ ಮತ್ತು ಸೈನ್ಯಾಧಿಕಾರಿಗಳ ಸಹಾಯದಿಂದ ಮಹಮ್ಮದೀಯರು ತನ್ನ ರಾಜ್ಯದ ಮೇಲೆ ಧಾಳಿಯನ್ನು ನಡೆಸುವವರೆಗೂ ಅವನು ವಿಜಯಗಳ ಮೇಲೆ ವಿಜಯವನ್ನು ಪಡೆಯುತ್ತಲೇ ಹೋದನು. ಅಲ್ಲದೆ ಅವನು ಸಾವಿರಾರು ಶಾಸನಗಳನ್ನು ಬರೆಯಿಸಿದನು, ಅನೇಕ ಪಟ್ಟಣಗಳನ್ನು, ನಗರಗಳನ್ನು ಕಟ್ಟಿಸಿದನು. ಕೊಯಂಬತೂರು ಜಿಲ್ಲೆಯ ಪೆರೂರಿನಲ್ಲಿ ಸಿಕ್ಕಿದ ಶಾಸನ ಒಂದರಲ್ಲಿ ದೊರೆಯು ಮತ್ತು ಅವನ ಅಧಿಕಾರಿಯಾದ ಕೇತಯ್ಯ ದಣ್ಣಾಯಕನು ಮಾಡಿದ ಸಾಧನೆಗಳು, ಶಾಸನಗಳು ಇವುಗಳ ಬಗ್ಗೆ ವಿವರವಾಗಿ ನಮೂದಿಸಿದೆ. ಅವನ ಇನ್ನೊಬ್ಬ ಅಧಿಕಾರಿಯಾದ ಕೇತಯ್ಯ ದಣ್ಣಾಯಕನು ತನ್ನನ್ನೇ ಕೊಂಗುಗಳ ಮತು ಪಾಂಡ್ಯರ ವಿನಾಶಕ, ಎಂದು ಕರೆದುಕೊಂಡಿದ್ದಾನೆ.

ಮುಸ್ಲಿಮರ ಮಹಾನ್ ಸೈನ್ಯವು ದೆಹಲಿಯಿಂದ ಹೊರಟು ಯಮುನೆಯ ಬಲದಂಡೆಯ ಮೂಲಕ ತಂಕು, ಖನೂಮ್, ಗುರ್ಗಾಂವ್, ದೇವಗಿರಿಯ ಮೂಲಕ ಹೊಯ್ಸಳರ ರಾಜಧಾನಿ ದೋರಸಮುದ್ರಕ್ಕೆ ಬಂದಿತು. ಮಲ್ಲಿಕಾಫುರನು ರಂಜಾನಿನ 13ನೆಯ ದಿವಸ ಸೇವುಣರ ರಾಜಧಾನಿಯಲ್ಲಿ ತಂಗಿದನು. ಅಮೀರ್ ಖುಸ್ರುವು ಹೊಯ್ಸಳ ರಾಜಧಾನಿಯ ಸ್ಥೂಲ

ಚಿತ್ರಣವನ್ನು ಕೊಡುತ್ತಾನೆ. ಅವನು ತುರ್ಕಿಯ ಸೈನ್ಯವು ರಾಯರಾಯ (ರಾಮಚಂದ್ರ)ನು ಕೊಟ್ಟಿರುವ ಹಾರಿಸುವ ನಕ್ಷತ್ರಗಳನ್ನು (ಗೋಳಗಳು ಮತ್ತು ನಾಲ್ಕು ಗರಿಗಳುಳ್ಳ ಬಾಣಗಳು) ಹೊಯ್ಸಳ ಚಕ್ರವರ್ತಿಯನ್ನು ಮತ್ತು ಇತರ ದಕ್ಷಿಣ ಭಾರತದ ಶಕ್ತಿಯನ್ನು ಉರುಳಿಸಲು ತೆಗೆದುಕೊಳ್ಳುತ್ತದೆ ಎಂದು ಅವನು ಹೇಳಿದ್ದಾನೆ. ಅವನು ಅದಕ್ಕೆ ಬೇಕಾದ ಆಯುಧಗಳನ್ನು ಸರಬರಾಜು ಮಾಡಿದ ನಂತರ ಬೀರ್ ಮತ್ತೆ ದೋರಸಮುದ್ರವನ್ನು ಗೆಲ್ಲಲು ನಿರ್ದೇಶಿಸುತ್ತಾನೆ. ಅಮೀರ್ ಖುಸ್ರುವಿನ ಪ್ರಕಾರ ಸೇವುಣ ದೊರೆಯಿಂದ ಬಂದ ಈ ನಿರ್ದೇಶನವು ದೋರಸಮುದ್ರದ ದೊಡ್ಡ ದೆವ್ವವನ್ನು ಮುಗಿಸಲು ಎಂದರೆ ಮತ್ತೆ ಹೊಯ್ಸಳರನ್ನು ಶಕ್ತಿಶಾಲೀ ಶತೃವೆಂದು ಒಪ್ಪಿಕೊಂಡಂತಾಗಿದೆ. ಈ ಪರ್ಷಿಯನ್ ಚರಿತ್ರಕಾರನ ಮಾತುಗಳು ನಂಬಲರ್ಹವಾಗಿವೆ ಏಕೆಂದರೆ ರಾಮಚಂದ್ರನು ಇವರನ್ನು ಸೋಲಿಸಲು ಮಾಡಿದ ಪ್ರಯತ್ನವು ವಿಫಲವಾಗಿ ತನ್ನ ಆಕಾಂಕ್ಷೆಯನ್ನು ತೀರಿಸಿಕೊಳ್ಳಲು ಭಯಂಕರವಾದ ಮಹಮ್ಮದೀಯ ಸೈನ್ಯದ ಉಪಯೋಗವನ್ನು ಮಾಡಿಕೊಂಡನು.

ಮಹಮ್ಮದೀಯ ಸೈನ್ಯಾಧಿಪತಿಯ ಕಣ್ಣುಗಳನ್ನು ಹೊಯ್ಸಳ ಸಾಮ್ರಾಜ್ಯದ ಮೇಲೆ ಬೀಳಿಸಿದ ಮೇಲೆ ರಾಮಚಂದ್ರನು ಸುಮ್ಮನಿರಲಿಲ್ಲ. ಅವನು ಖುದ್ದಾಗಿ ತನ್ನ ಮುಖ್ಯ ದಳಪತಿ ಪರಶುರಾಮ ದೇವನನ್ನು ಹೊಯ್ಸಳರ ರಾಜಧಾನಿಯ ಕಡೆಗೆ ಮಹಮ್ಮದೀಯ ಸೈನ್ಯವನ್ನು ತಿರುಗಿಸುತ್ತಾನೆ. ಅಮೀರ್ ಖುಸ್ರುವು ಮಹಮಮದೀಯ ಸೈನ್ಯವು ಮಲ್ಲಿಕಾಫರನ ನೇತೃತ್ವದಲ್ಲಿ ಪಾರಸ್ ದೇವನ ಮುಖ್ಯ ಸ್ಥಾನಕ್ಕೆ ನಡೆದು ಬಂದ ದಾರಿಯನ್ನು ಮತ್ತು ಇಂತಹ ಕಠಿಣವಾದ ಹಾದಿಯನ್ನು ಸವೆಸಲು ಅವರು ಐದು ದೊಡ್ಡ ನದಿಗಳನ್ನು ದಾಟಬೇಕಾಯಿತು. ಅನಂತರ ಮಹಮ್ಮದೀಯ ಸೈನ್ಯವು ಪಾರಸ್ ದೇವನ ಕೇಂದ್ರವನ್ನು ತಲುಪಲು ಐದು ದಿನಗಳನ್ನು ತೆಗೆದುಕೊಂಡಿತು ಮತ್ತು ಇದಕ್ಕೆ ಬೇಕಾದ ಎಲ್ಲ ಸಹಾಯಗಳನ್ನೂ ಅವನು ಮಾಡಿಕೊಟ್ಟನು.[16] ಈ ಸ್ಥಳದಿಂದಲೇ ಮಲ್ಲಿಕಾಫ಼ರನು ಹೊಯ್ಸಳ ರಾಜ್ಯದ ಎಲ್ಲ ಸ್ಥಿತಿಗತಿಗಳನ್ನೂ ಸಂಗ್ರಹಿಸಲು ತನ್ನ ಪದಾತೀ ಜನರನ್ನು ಕಳುಹಿಸಿಕೊಟ್ಟನು ಮತ್ತು ಎಲ್ಲಕಡೆಯಿಂದಲೂ ಮಾಹಿತಿಯನ್ನು ಸಂಗ್ರಹಿಸಿದನು. ಮುಂದೆ ಅವರ ಮಿತ್ರರಾದ ಮಾಬಾರ್ ದೇಶದ ವಿಚಾರಗಳನ್ನೂ ಸಂಗ್ರಹಿಸಲು ಅವರಿಗೆ ಆಜ್ಞೆ ಮಾಡಿದನು. ಆದರೆ ಅವರು ಪಾಂಡ್ಯರ ಸಿಂಹಾಸನಕ್ಕಾಗಿ ನಡೆಯುತ್ತಿರುವ ಹೋರಾಟದ ವಿಚಾರದಲ್ಲಿ ಮಲಬಾರ ದೊರೆಗಳ ಮನಸ್ಸನ್ನು ಬದಲಿಸಿದರು ಮತ್ತು ಅದೇ ಸಮಯದಲ್ಲಿ ಹೊಯ್ಸಳರು ಈ ಖಾಲಿಯಾದ ನಗರಗಳನ್ನು ವಶಪಡಿಸಿಕೊಳ್ಳುವ ವಿಚಾರದಲ್ಲಿದ್ದರು.

ಬೇಕಾದ ಮಾಹಿತಿಗಳೆಲ್ಲಾ ದೊರಕಿದ ಮೇಲೆ ಮಲಿಕಾಫ಼ರನು ಯುದ್ಧದ ನಕ್ಷೆಯನ್ನು ಸಿದ್ಧಪಡಿಸಿ ಅದರಂತೆ ಅಶ್ವದಳವು ಎಲ್ಲಕ್ಕಿಂತ ಮುಂದೆ ಇರಬೇಕೆಂದೂ ಅದು ಹೊಯ್ಸಳರ ಮೇಲೆ ಅವರಿಗೆ ಯಾವುದೇ ಸಿದ್ಧತೆಯನ್ನು ಮಾಡಿಕೊಳ್ಳಲು ಅವಕಾಶ ಕೊಡದಂತೆ ತಕ್ಷಣವೇ ಆಕ್ರಮಣವನ್ನು ಮಾಡಬೇಕೆಂದೂ ಸೂಚಿಸಿದನು. ಅದರಂತೆ ಮಲ್ಲಿಕಾಫ಼ರನು ಒಂದು 'ತುಮನ್' (ಅಂದರೆ 10,000 ಜನ ಸೈನಿಕರು) ದಳದ ಜೊತೆ ದೋರಸಮುದ್ರದೆಡೆಗೆ ಹೊರಟನು. ಮಲ್ಲಿಕಾಫ಼ರನು ಬಂದ ಹಾದಿಯನ್ನು ಡಾ॥ಎಸ್.ಕೃಷ್ಣಸ್ವಾಮಿ ಐಯ್ಯಂಗಾರ್[17] ರವರು ತಮ್ಮ ದಕ್ಷಿಣ ಭಾರತ ಮತ್ತು ಇಲ್ಲಿ ಮಹಮ್ಮದೀಯ ಧಾಳಿಕೋರರುದಲ್ಲಿ ತಿಳಿಸಿದ್ದಾರೆ. ಅವರು ತಿಳಿಸಿದಂತೆ ಮಲ್ಲಿಕಾಫ಼ರನು ಬಂಡ್ರಿಯನ್ನು ಅಂದರೆ ಪಂಡ್ರಾಪುರ ಬಿಟ್ಟು ಬಿಜಾಪುರವನ್ನು ತಲುಪಿ ಅಲ್ಲಿಂದ ಹರಿಹರ, ಹಿರಿಯೂರು ದಾಟಿ ಅರಸೀಕೆರೆ ಮುಖ್ಯರಸ್ತೆಯನ್ನು ದಾಟಿ ಬಾಣಾವರಕ್ಕೆ ಬಂದು ಹೊಯ್ಸಳ ರಾಜಧಾನಿಯ ಮೇಲೆ ಧಾಳಿಯನ್ನು ಮಾಡಿದರು. ಅಮೀರ್ ಖುಸ್ರುವು ಸೈನ್ಯದ ಬಹುಭಾಗ ಆ ದೂರವನ್ನು ಕ್ರಮಿಸಿತು ಎಂದಿದ್ದಾನೆ ಅಂದರೆ ಸೈನ್ಯದ ಕೆಲ ಮಂದಿ ದಾರಿಯನ್ನು ಕ್ರಮಿಸುವಾಗ ಸತ್ತಿರಬೇಕು. ಮಲ್ಲಿಕಾಫ಼ರನು ದೋರಸಮುದ್ರವನ್ನು ಸೈನ್ಯದ ಒಂದು ಭಾಗದೊಂದಿಗೆ ಅಲ್ಲಿ ಕೆಲ ಕಾಲ ತಂಗಿದನು ಏಕೆಂದರೆ ಹೊಯ್ಸಳರನ್ನು ಸೋಲಿಸಿದ ಮೇಲೆ ಹಿಂದೆ ಬಿದ್ದ ಸೈನ್ಯವನ್ನು ಕೂಡಿಕೊಳ್ಳಲು ಸಹಾಯವಾಗುತ್ತದೆ ಎಂಬ ವಿಚಾರದಿಂದ ಅವನು ಅಲ್ಲೇ ಇದ್ದನು.

ಇದರಿಂದ ಮಲ್ಲಿಕಾಫ಼ರನು ಎರಡು ಕಾರಣಗಳಿಗಾಗಿ ಶೀಘ್ರವಾಗಿ ಚಲಿಸುವ ದಳಗಳ ಸಹಿತ ನಡೆದಿದ್ದನು ಎಂಬುದು ಸ್ಪಷ್ಟವಾಗುತ್ತದೆ. ಒಂದನೆಯದು ಹೊಯ್ಸಳರ ಮೇಲೆ ಅನಿರೀಕ್ಷಿತ ಧಾಳಿಯನ್ನು ಮಾಡುವುದು ಮತ್ತು ಎರಡನೆಯದು ಮತ್ತು ಮುಖ್ಯವಾದುದೆಂದರೆ ಸಾಧ್ಯವಾದರೆ ಹೊಯ್ಸಳರು ತಮ್ಮ ಸೈನ್ಯಸಹಿತವಾಗಿ ಮಾಬರಿನಿಂದ ಹಿಂತಿರುಗಿ ಬರುವ ಮುಂಚೆಯೇ ಕೋಟೆಯನ್ನು ವಶಪಡಿಸಿಕೊಳ್ಳುವುದು. ಮೂರನೆಯ ವೀರಬಲ್ಲಾಳನು ಮೊಹಮ್ಮದೀಯರ ಸೈನ್ಯವು ತನ್ನ ರಾಜಧಾನಿಯ ಮೇಲೆ ಆಕ್ರಮಣವನ್ನು ಮಾಡಿದೆ ಎಂಬ ಸುದ್ದಿಯನ್ನು ತಿಳಿಯುವ ವೇಳೆಗಾಗಲೇ ಪಾಂಡ್ಯರ ಗಡಿಯಲ್ಲಿರುವ ಕೊಂಗು ದೇಶದಲ್ಲಿ ಇದ್ದನು. ಮಲ್ಲಿಕಾಫ಼ರನು ಹೊಯ್ಸಳರ ಪ್ರದೇಶಗಳನ್ನು ಪ್ರವೇಶ ಮಾಡಿದ ಮೇಲೆ ದಾರಿಯಲ್ಲಿ ಸಿಕ್ಕಿದ ಅನೇಕ ಹಳ್ಳಿಗಳನ್ನು ಮತ್ತು ಪಟ್ಟಣಗಳನ್ನು ಧ್ವಂಸ ಮಾಡಿ ಅವನು ಮುಂದೆ ಹೋದಂತೆಲ್ಲಾ ಜನರಲ್ಲಿ ಗೊಂದಲವನ್ನು ಉಂಟು ಮಾಡಿದನು. ಬಲ್ಲಾಳನು ಸಮಯವನು ವ್ಯರ್ಥ ಮಾಡಲಿಲ್ಲ. ಅವನು ತನ್ನೆಲ್ಲಾ ವೇಗವಾಗಿ ಸಾಗುವ ಸೈನ್ಯದಳವನ್ನು ಒಟ್ಟುಮಾಡಿ, ನಿಧಾನವಾಗಿ ಸಾಗುವ ಆನೆದಳವನ್ನು ಮತ್ತು ಪದಾತಿದಳವನ್ನು ಹಿಂದೆ ಬಿಟ್ಟು ತನ್ನ ರಾಜಧಾನಿಗೆ ಅವಸರವಾಗಿ

ಬಂದನು. ಆದರೂ ಅವನ ಎಲ್ಲ ವೇಗಗಳಿಂದ ವೀರಬಲ್ಲಾಳನು ತನ್ನ ಕೋಟೆಯನ್ನು ನಾಲ್ಕೂ ದಿಕ್ಕುಗಳಿಂದ ಸುತ್ತುವರೆದಿದ್ದ ಶತ್ರು ಸೈನಿಕರಿಂದ ರಕ್ಷಿಸಿಕೊಳ್ಳಲಾಗಲಿಲ್ಲ.[18]

ನಿಜವಾಗಿ ಹೊಯ್ಸಳ ರಾಜಧಾನಿಯೆಡೆಗೆ ಮಲ್ಲಿಕಾಫರನ ವೇಗವಾದ ನಡಿಗೆಯು ನಿರೀಕ್ಷಿತ ಫಲವನ್ನು ಕೊಟ್ಟಿತು. ವಸಾಫನ ಹೇಳಿಕೆಗಳಂತೆ ಹೊಯ್ಸಳ ಚಕ್ರವರ್ತಿಯು ಮೊದಲು ಪ್ರತಿಭಟಿಸಲು ಇಚ್ಚಿಸಿದನು. ವಸಾಫನು ಹೇಳುವಂತೆ ಮೂರನೆಯ ವೀರಬಲ್ಲಾಳನು ವೀರ ಪಾಂಡ್ಯರಿಗೆ ತನ್ನ ಸಹಾಯಕ್ಕಾಗಿ ಸೈನ್ಯವನ್ನು ಕಳುಹಿಸುವಂತೆ ಕೇಳಿಕೊಂಡನು. ಆಶ್ಚರ್ಯ-ಕರವಾಗಿ ಈ ಹಿಂದೆ ಹೊಯ್ಸಳರು ತಮ್ಮೊಡನೆ ಶತೃತ್ವದ ಭಾವನೆಯನ್ನು ಹೊಂದಿದ್ದರೂ ಕೂಡಾ ವೀರ ಪಾಂಡ್ಯನು ತನ್ನ ಅಶ್ವದಳ ಮತ್ತು ಪದಾತಿಗಳಿಂದ ಕೂಡಿದ ಸೈನ್ಯವನ್ನು ಕಳುಹಿಸಿಕೊಟ್ಟನು. ಆಮಿರ್ ಖುಸ್ರುವಿನಿಂದ ತಿಳಿಯುವುದೇನೆಂದರೆ ವೀರಬಲ್ಲಾಳನು ದೇವ ನಾಯಕನನ್ನು ಹಿಂದಕ್ಕೆ ಕಳುಹಿಸಿದನು. ವೀರಬಲ್ಲಾಳನು ಒಂದು ವೇಳೆ ಶತೃವಿನ ಸೈನ್ಯವು ದುರ್ಬಲವಾಗಿದರೆ ಅವನು ಧಾಳಿಯನ್ನು ಮಾಡುತ್ತಿದ್ದನು. ಅವನು ಕೋಟೆಯ ಮೇಲಿಂದ ದೊಡ್ಡ ಕಲ್ಲುಗಳನ್ನು ಎತ್ತಿಹಾಕಿದನಾದರೂ ಏನೂ ಪ್ರಯೋಜನವಾಗಲಿಲ್ಲ. ಹಾಗಾಗಿ ಅವನು ಮುಂದೆ ಮಹಮ್ಮದೀಯರನ್ನು ಕೋಟೆಯಿಂದ ಕಲ್ಲುಗಳನ್ನು ಎತ್ತಿಹಾಕಿದ್ದಕ್ಕಾಗಿ ಅವನನ್ನು ಕ್ಷಮಿಸಬೇಕಾಗಿ ಕೇಳಿಕೊಂಡನು. ಅವನು ಕೂಡಲೇ ಬಹಳ ಶಿಸ್ತಿನಿಂದ ಕೂಡಿದ ಸೈನ್ಯವನ್ನು ತಂದಿರುವ ಮಲ್ಲಿಕಾಫುರನೊಂದಿಗೆ ಯುದ್ಧವನ್ನು ಮಾಡುವುದೆಂದರೆ ಅವನ ಮತ್ತು ಅವನ ರಾಜ್ಯವನ್ನು ಪೂರ್ತಿಯಾಗಿ ನಾಶಮಾಡಿದಂತೆಯೇ ಎಂದು ತಿಳಿದುಕೊಂಡನು.

ಏನೇ ಆದರೂ ಸಹ ಹೊಯ್ಸಳ ಚಕ್ರವರ್ತಿಯು ಕೂಡಲೇ ಶರಣಾಗತನಾಗಲಿಲ್ಲ. ಅವನು ತನ್ನ ಖಾಸಾ ವ್ಯಕ್ತಿಯಾದ ಕಿಸುಮಲ್‌ನನ್ನು ಮಹಮ್ಮದೀಯರ ಬಲಾಬಲಗಳನ್ನು ಅರಿಯಲು ಕಳುಹಿಸಿಕೊಟ್ಟನು. ಅವನು ಮಹಮ್ಮದೀಯರ ಸೈನಿಕರನ್ನು ನೋಡಿದಾಗ ಕೋಟೆಯ ಕಡೆ ಸೂಕ್ಷ್ಮವಾಗಿ ಗಮನಿಸಲು ನಿಂತಿದ್ದ ಸಾಲುಸಾಲು ಅಶ್ವಾರೋಹಿಗಳನ್ನು ನೋಡಿ ಆಶ್ಚರ್ಯಭರಿತನಾದನು. ಅವನು ಅಲ್ಲಿಯವರೆಗೆ ಮೂರ್ತಿಪೂಜೆಯು ನಡೆದಿದ್ದ ಸ್ಥಳದಲ್ಲಿ ಖುತ್ಬಾನ್ ಮತ್ತು ಪ್ರಾರ್ಥನೆಯನ್ನು ಸಲ್ಲಿಸುವ ಸಲುವಾಗಿ ಸಂಪೂರ್ಣ ಬಲದೊಂದಿಗೆ ಮರುದಿನವೇ ಹೋರಾಟವನ್ನು ಪ್ರಾರಂಭಿಸುವ ಸೂಚನೆಯನ್ನು ಕಂಡು ಅವನು ಬೆರಗಾದನು.

ಇದನ್ನು ಕೇಳಿದ ಮೂರನೆಯ ವೀರಬಲ್ಲಾಳನು ಇನ್ನೂ ಯುದ್ಧವು ಮುಂದುವರೆದರೆ ತಾನು, ತನ್ನ ಜನ, ದೇವಾಲಯಗಳು ಮತ್ತು ದೇಶವೆಲ್ಲವೂ ಸರ್ವನಾಶವಾಗುವುದೆಂದು

ಅರಿತನು. ಈಗ ಶರಣಾಗತನಾದರೆ ಕೇವಲ ಧನವು ಮಾತ್ರ ನಷ್ಟವಾಗಿ ಅದನ್ನು ಸಾಧ್ಯವಾದರೆ ಮತ್ತೆ ಮರಳಿ ಪಡೆಯಬಹುದಲ್ಲದೆ ಅವನು ಕೂಡಾ ಗೌರವಾನ್ವಿತನಾಗಿಯೂ ಇರಬಹುದು ಎಂದು ಯೋಚಿಸಿದನು. ಅದು ಅವನನ್ನು ದುಃಖ ಮತ್ತು ತೊಂದರೆಗಳಿಂದ ಉಳಿಯಬಹುದು.

ಈಗ ಯಾವ ಹೆಜ್ಜೆಯನ್ನು ಇಡಬೇಕು, ಯಾವ ಉತ್ತರವನ್ನು ಮೊಹಮ್ಮದೀಯ ಸೈನ್ಯಾಧಿಪತಿಗೆ ಕಳುಹಿಸಬೇಕು ಎಂಬ ಬಗ್ಗೆ ಅನೇಕ ಸಭೆ, ಚರ್ಚೆಗಳು ನಡೆದವು. ಅನೇಕ ಅಧಿಕಾರಿಗಳು ಮತ್ತು ಹಿರಿಯರು ಅವನು ಹೇಡಿ ನಿರ್ಣಯವನ್ನು ತೆಗೆದುಕೊಂಡಿದ್ದರ ಬಗ್ಗೆ ಆಕ್ಷೇಪಿಸಿದರು. ಅವರು ವೀರರಂತೆ ಹೋರಾಡಿ ಸಾಯುವುದೇ ಅವಮಾನಕರವಾದ ಮುಖವನ್ನು ಹೊತ್ತುಕೊಂಡಿರುವುದಕ್ಕಿಂತ ಲೇಸು ಎಂದು ಅಭಿಪ್ರಾಯ ಪಟ್ಟರು. ಅಲ್ಲದೇ ಈ ಶರಣಾಗತಿಯು ರಾಜವಂಶದ ಘನತೆಯನ್ನು ಕುಗ್ಗಿಸುತ್ತದೆ ಎಂದೂ ಅಭಿಪ್ರಾಯಪಟ್ಟರು. ಅಲ್ಲದೇ ಎಲ್ಲರೂ ಒಂದಲ್ಲಾ ಒಂದು ದಿವಸ ಸಾಯಲೇಬೇಕು, ಈಗ ಸಾವನ್ನು ಮುಂದೂಡುವುದರಿಂದ ಅವನು ಚಿರಕಾಲ ಬದುಕುವುದಕ್ಕಾಗುವುದಿಲ್ಲ, ಹಾಗಾಗಿ ಈ ನಿರ್ಧಾರ ಬೇಡ ಎಂದು ಸಲಹೆ ಇತ್ತರು. ಆದರೆ ದೊರೆಯು ಅಚಲನಾಗಿದ್ದನು.[19] ಅವನು ಹೊಯ್ಸಳರು ಮಹಮ್ಮದೀಯರೊಡನೆ ಯುದ್ಧವನ್ನು ಮಾಡಿದರೆ ಕಾಕತೀಯ ಪ್ರತಾಪರುದ್ರ ಸೇವುಣರು ಮೊದಲಾದ ದೊಡ್ಡ ಶಕ್ತಿಗಳಿಗಾದ ಗತಿಯೇ ನಮಗೂ ಬರುತ್ತದೆಯಾದ್ದರಿಂದ ಈಗ ತೆಗೆದುಕೊಂಡಿರುವ ನಿರ್ಣಯವೇ ಸರಿ ಎಂದು ಘೋಷಿಸಿದನು. ಅವನು ತನ್ನ ಪ್ರಜೆಗಳ ಯೋಗಕ್ಷೇಮವನ್ನು ಮೊದಲು ನೋಡಬೇಕು ಮತ್ತು ಉಳಿದಿದ್ದವೆಲ್ಲಾ ಗೌಣವೆಂದು ಅವರೆಗೆಲ್ಲಾ ತಿಳಿಸಿ ಹೇಳಿದನು. ಶರಣಾಗತಿಯು ಅವಮಾನಕರವಾದರೂ ಅವನನ್ನು ಮತ್ತು ಅವನ ರಾಜ್ಯದ ಅಧಿಕಾರ ಮತ್ತು ಅವನ ಪ್ರಜೆಗಳು ಮಹಮ್ಮದೀಯರ ಕತ್ತಿ ಏಟಿನಿಂದ ಪಾರಾಗಬಹುದೆಂಬ ಕಾರಣದಿಂದ ಉತ್ತಮವಾದುದು. ಈ ವಾದವು ಅಲ್ಲಿ ನೆರೆದಿದ್ದ ಎಲ್ಲ ಹಿರಿಯರಿಗೆ ಒಪ್ಪಿಗೆ ಎನಿಸಿ ಅವರ ಎಲ್ಲಾ ಧನವು ಹೋದರೂ ಪರವಾಗಿಲ್ಲವೆಂದು ಹೇಳಿ ಶರಣಾಗತಿಗೆ ಒಪ್ಪಿದರು.

ಈ ಒಪ್ಪಿಗೆ ಬಂದಮೇಲೆ ಅವನು ಒಬ್ಬ ಚತುರ ರಾಯಭಾರಿಯಾದ ಬಲಕ್ ದೇವ ನಾಯಕನನ್ನು ಮಹಮ್ಮದೀಯರ ಡೇರೆಗೆ ಕಳುಹಿಸಿ ಅವನೂ ಸಹ ಕಾಕತೀಯ, ಸೇವುಣರಂತೆ ಆನೆ, ಕುದುರೆಗಳೂ ಸೇರಿ ಅವರು ಏನು ಕೇಳಿದರೂ ಅದನ್ನು ಒಪ್ಪಿಕೊಳ್ಳುತ್ತೇನೆಂಬ ಸಂದೇಶವನ್ನು ಕಳುಹಿಸಿದನು.[20] ಅಮೀರ್ ಖುಸ್ರುವು[21] ಹೇಳುವ ಪ್ರಕಾರ ಹೊಯ್ಸಳ ದೊರೆಯು ಮಹ್ಮದೀಯ ಸೈನ್ಯಾಧಿಪತಿಯು ಕೇಳಿದ್ದಕ್ಕೆಲ್ಲಾ ಒಪ್ಪಿ ದೀನನಾಗಿ ತನ್ನ ವೈಯುಕ್ತಿಕ ಮತ್ತು ವಂಶದ ಗೌರವವನ್ನು ಕೆಳಮಟ್ಟಕ್ಕೆ ಇಳಿಸಿದನು. ಮಲ್ಲಿಕಾಫ಼ರನು ಬಲಾಕ್ ದೇವ

ನಾಯಕನೊಡನೆ ತನ್ನ ಸುಲ್ತಾನನು ಹಿಂದುಗಳಿಗೆ ರಕ್ಷಣೆಯನ್ನು ಕೊಡಬೇಕಾದರೆ ಹಾಕಿದ ಶರತ್ತುಗಳನ್ನು ಹೇಳಿಕಳುಹಿಸಿದನು. ದೆಹಲಿಯ ಸುಲ್ತಾನನಾದ ಅಲ್ಲಾವುದ್ದೀನನು ಮಲ್ಲಿಕಾಫರ–ನೊಡನೆ ಶರಣಾಗತರಾದ ಹಿಂದೂ ರಾಜರನ್ನು ರಕ್ಷಿಸಬೇಕಾದರೆ ಅವರು ಸತ್ಯವಾಕ್ಯಕ್ಕೆ ವಿರುದ್ಧವಾದ, ಬುದ್ಧಿವಂತಿಕೆ ಮತ್ತು ನ್ಯಾಯದ ಉಲ್ಲೇಖವನ್ನು ಕೊಡಬೇಕು, ಅವರು ಇದನ್ನು ಅರಿಯದೆ ತೋಳನ್ನು ಎತ್ತಿದರಾದರೆ ಅವರ ಕುತ್ತಿಗೆಯನ್ನು ಕಪ್ಪಕಾಣಿಕೆಯ ನೊಗಕ್ಕೆ ಹಾಕಬೇಕು, ಇದೂ ಒಪ್ಪದಿದ್ದಲ್ಲಿ ಅವರ ಕುತ್ತಿಗೆಯನ್ನು ಅವರ ಶರೀರದಿಂದ ಬೇರೆ ಮಾಡಬೇಕು ಎಂದು ಅಪ್ಪಣೆಯನ್ನು ಕೊಟ್ಟಿದ್ದನು.[22]

ಈ ಸುದ್ದಿಯನ್ನು ಹೊಯ್ಸಳ ರಾಜನಿಗೆ ಮುಟ್ಟಿಸಲಾಯಿತು ಮತ್ತು ಈ ಮೊದಲೇ ತೀರ್ಮಾನವಾದಂತೆ ಅವನು ತನ್ನ ಶರೀರದ ಮೇಲಿನ ಜನಿವಾರ ಮತ್ತು ಹಿಂದುತ್ವದಲ್ಲಿ ನಂಬಿಕೆ ಇವೆರಡನ್ನು ಉಳಿಸಿಕೊಂಡು ತನ್ನೆಲ್ಲಾ ಬಂಗಾರ, ಆನೆ, ಕುದುರೆ ಮತ್ತು ಇನ್ನುಳಿದುದನ್ನೆಲ್ಲಾ ಕೊಟ್ಟುಬಿಟ್ಟನು.[23]

ಆರನೆಯ ಶವ್ವಾಲ್‌ನಂದು ಶುಕ್ರವಾರ ಮೂರನೆಯ ವೀರಬಲ್ಲಾಳನು ಬಲಾಕ್ ದೇವ ನಾಯಕನೂ ಸೇರಿ ತನ್ನ ಕೆಲವು ಸೇವಕರು ಮತ್ತು ಕೆಲವು ಆನೆಗಳನ್ನು ಮಹಮ್ಮದೀಯರ ಬಿಡಾರಕ್ಕೆ ಕಳುಹಿಸಿ ಅವನು ಅವರ ವಿರುದ್ಧ ತನ್ನ ಕೋಟೆಯನ್ನು ರಕ್ಷಿಸುವ ಸಲುವಾಗಿ ಮಹಮ್ಮದೀಯರ ಸೈನ್ಯದ ಧಾಳಿಯ ವಿರುದ್ಧವಾಗಿ ಯುದ್ಧವನ್ನು ಮಾಡುವುದಿಲ್ಲವೆಂದು ಹೇಳಿಕಳುಹಿಸಿದನು.[24] ಮರುದಿನ ಮಂಗಳವಾರ ಅವನು ತನ್ನ ಕುದುರೆಗಳನ್ನು ಸಾಲುಸಾಲಿನಲ್ಲಿ ಸುಲ್ತಾನನ ಅಶ್ವಶಾಲೆಗೆ ಕಳುಹಿಸಿದನು. ಮುಂದಿನ ಭಾನುವಾರ ಅವನು ವೈಯುಕ್ತಿಕವಾಗಿ ಮಹಮ್ಮದೀಯರ ಬಿಡಾರಕ್ಕೆ ಹೋಗಿ ಆ ಸೈನ್ಯಾಧಿಕಾರಿಯ ಬಳಿ ಶರಣಾಗತನಾದನು. ಅಲ್ಲಿಂದ ಹಿಂತಿರುಗಿದನಂತರ ಅವನ ಬಹಳ ಸಮಯವನ್ನು ಅವನ ಬೆಲೆಬಾಳುವ ಎಲ್ಲ ವಸ್ತುಗಳನ್ನು ತೆಗೆದುಕೊಂಡು ಮಹಮ್ಮದೀಯರ ತಿಜೋರಿಗೆ ಮರುದಿನ ತಲುಪಿಸಿದನು. ಮಲ್ಲಿಕಾಫುರನು ಅಲ್ಲಿ ದೋರಸಮುದ್ರದಲ್ಲಿ ಹನ್ನೆರಡು ದಿನಗಳ ಕಾಲ ಮಹಮ್ಮದೀಯ, ಶವ್ವಾಲ್ ಸೈನ್ಯವು ದೋರಸಮುದ್ರವನ್ನು ಬಿಟ್ಟು ಮಾಬಾಲ್‌ಗೆ ಅಲ್ಲಿ ವಶಪಡಿಸಿಕೊಂಡ ಎಲ್ಲ ವಸ್ತುಗಳನ್ನೂ ದೆಹಲಿಗೆ ಕಳುಹಿಸಿ ತೆರಳಿದನು. ಫೆರಿಸ್ಥಾನು ದೋರಸಮುದ್ರದ ಪತನವನ್ನು ಸ್ವಲ್ಪ ಬೇರೆಯೇ ಆಗಿ ವರ್ಣಿಸುತ್ತಾನೆ. ಅವನಂತೆ ಮಲ್ಲಿಕಾಫುರ್ ಮತ್ತು ಕ್ವಾಜಾ ಹಾಜಿಯು ತಮ್ಮ ಸೈನ್ಯದೊಂದಿಗೆ ಅಲ್ಲಾವುದ್ದೀನನ ಅಪ್ಪಣೆಯಂತೆ ಅವನು ಕೇಳಿದಂತೆ ಅಲ್ಲಿನ ದೇವಾಲಯಗಳಲ್ಲಿ ಅಪಾರವಾದ ಧನ ಮತ್ತು ಆಭರಣಗಳು ಮತ್ತು ಬಂಗಾರವಿದ್ದು ಅದನ್ನು ವಶಪಡಿಸಿಕೊಳ್ಳಲು ದೋರಸಮುದ್ರ ಮತ್ತು ಮಾಬಾರಿಗೆ ತೆರಳುತ್ತಾರೆ.

ಫೆರಿಸ್ಥಾನಂತೆ ರಾಮಚಂದ್ರನು[25] ತನ್ನ ರಾಜಧಾನಿಯ ಮೇಲೆ ಮಹಮ್ಮದೀಯರ ಧಾಳಿಯು ನಡೆಯುತ್ತಿರಬೇಕಾದರೇ ಮರಣವನ್ನು ಹೊಂದಿದನು, ಅದರೆ ಅಮೀರ್ ಖುಸ್ರುವು ಹೇಳುವಂತೆ ಅವನು ಯುದ್ಧವು ನಡೆಯುತ್ತಿರುವಾಗ ಜೀವಂತವಾಗಿ ಇದುದಲ್ಲದೇ ಕ್ರಿಯಾಶೀಲನಾಗಿದ್ದನು ಎಂದು ಹೇಳುತ್ತಾನೆ. ಶಂಕುಲದೇವನು (ಶಂಕರ ದೇವ) ರಾಮಚಂದ್ರನ ನಂತರ ಅಧಿಕಾರಕ್ಕೆ ಬಂದನು ಎಂದು ಫೆರಿಸ್ಥಾ ಅಭಿಪ್ರಾಯಪಟ್ಟಿದ್ದಾನೆ.[26] ಈ ರಾಜನು ಮಹಮ್ಮದೀಯರ ಬಗ್ಗೆ ಯಾವ ಕಾಳಜಿಯನ್ನೂ ಹೊಂದಿರಲಿಲ್ಲ. ಹಾಗಾಗಿ ಅವನು ತನ್ನ ಕೆಲವು ಅಧಿಕಾರಿಗಳನ್ನು ಗೋದಾವರಿಯ ದಡದ ಬಳಿ ಬಿಟ್ಟು ಮಲ್ಲಿಕಾಫರನು ಇದನ್ನು ಇನ್ನುಳಿದ ಸೈನ್ಯದೊಂದಿಗೆ ದಾಟಿ ಸೇವುಣ ಪ್ರದೇಶಕ್ಕೆ ಬಂದು ಅಲ್ಲಿ ಕುಳಿತನು; ಅಲ್ಲದೇ ಅವನು ಸಮುದ್ರತೀರವನ್ನು ಮೂರು ತಿಂಗಳ ನಂತರ ತಲುಪಿದನು, ಇದೇ ಸಮಯದಲ್ಲಿ ಅವನು ಪ್ರಯಾಣ ಮಾಡುತ್ತಿದ್ದ ಪರದೇಶದಲ್ಲಿ ಆಳುತ್ತಿದ್ದ ಸಾವಿರಾರು ಹಿಂದೂ ರಾಜರು ಅವನನು ವಿರೋಧಿಸಿದರು.[27] ಅವರಲ್ಲಿ ಮೂರನೆಯ ಬಲ್ಲಾಳನೂ ಒಬ್ಬನಾಗಿದ್ದು ಅವನನ್ನು ಅವರು ಸೋಲಿಸಿ ಸೆರೆ ಹಿಡಿದು ಅವನ ರಾಜ್ಯವನ್ನು ಸೂರೆ ಮಾಡಿದರು. ಅಪಾರ ಪ್ರಮಾಣದ ಬೆಲೆಬಾಳುವ ಮತ್ತು ಹಿಂದೂಗಳು ಭಕ್ತಿಯಿಂದ ಪ್ರಶಸ್ತವಾದ ಮಣಿ, ಮುತ್ತುರತ್ನಗಳಿಂದ ಅಲಂಕಾರ ಮಾಡಿದ ಚಿನ್ನದ ವಿಗ್ರಹಗಳನ್ನು ನಾಶಮಾಡಿ ಸೂರೆ ಹೊಡೆದನು.

ಆ ಕಾಲದ ಇನ್ನೊಬ್ಬ ಚರಿತ್ರಕಾರನಾದ ಇಸಾಮಿಯು ಮೂರನೆಯ ವೀರಬಲ್ಲಾಳನ ಶರಣಾಗತಿಯು ಅವನ ಮತ್ತು ಮಲ್ಲಿಕಾಫರನ[28] ನಡುವೆ ಆದ ಒಪ್ಪಂದದ ಪ್ರಕಾರವೇ ಇದ್ದು, ಇದರಿಂದ ಬಲ್ಲಾಳನಿಗೆ ಅಪಾರವಾದ ಅನುಕೂಲವಾಗಲಿದ್ದು ಅವನು ಮಹಮ್ಮದೀಯರ ಸೈನ್ಯವನ್ನು ಪಾಂಡ್ಯರ ರಾಜ್ಯಕ್ಕೆ ಯರೂ ಸಾಮಾನ್ಯವಾಗಿ ಬಳಸದ ದಾರಿಯಲ್ಲಿ ಕೊಂಡೊಯ್ದು ಆ ಪಾಂಡ್ಯ ಸೋದರಿಬ್ಬರೂ ಆಶ್ಚರ್ಯಪಡುವ ರೀತಿಯಲ್ಲಿರಬೇಕು ಎಂಬಂತೆ ಇತ್ತು ಎಂದಿದ್ದಾನೆ. ಅವನು ವೀರಬಲ್ಲಾಳನನ್ನು ದುಭಾಷಿಗಳು ಮತ್ತು ಮಾರ್ಗದರ್ಶಿಗಳನ್ನು ಕೊಡಬೇಕೆಂದೂ ಕೇಳಿದ್ದನು.

ಇಸಾಮಿಯ ಮಾತುಗಳನ್ನು ನೇರವಾಗಿ ತೆಗೆದುಕೊಳ್ಳುವುದಾದರೆ ವೀರಬಲ್ಲಾಳನು ಮಬಾರ್[29] ಯಾತ್ರೆಯಲ್ಲಿ ಮಹಮ್ಮದೀಯ ಸೈನ್ಯದೊಂದಿಗೆ ತನ್ನ ಇಚ್ಛೆಯಿಂದಲೇ ಭಾಗವಹಿಸಿದ್ದನೆಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಇದರಿಂದ ಅವನ ಮನದಲ್ಲಿದ್ದ ಆಶೆಯಾದ ಕಣ್ಣಾನೂರು ಕೋಟೆಯನ್ನು ಮತ್ತೆ ಪಡೆಯಬಹುದೆಂಬ ಆಲೋಚನೆಯು ಅವನಲ್ಲಿತು. ಇದಲ್ಲದೇ ಹೀಗೆ ಅವನಿಗೆ ಸಹಾಯ ಮಾಡುವುದರಿಂದ ತನ್ನ ದೇಶವನ್ನು

ಉಳಿಸಬಹುದು ಅಲ್ಲದೆ ದಕ್ಷಿಣ ಪರ್ಯಾಯ ದ್ವೀಪದಲ್ಲಿ ಮಹಮ್ಮದೀಯರಿಂದ ಮುಂದೇನಾದರೂ ಮಿಂಚಿನ ಧಾಳಿಯು ನಡೆದರೆ ಅದು ಅವನ ಶೀಘ್ರ ಪತನದತ್ತ ಹೋಗಬಹುದಷ್ಟೇ ವಿನಹ ಹೆಚ್ಚೇನನ್ನೂ ಸಾಧಿಸಲಾಗುವುದಿಲ್ಲ.[30]

ನಾವು ಚರ್ಚಿಸುತ್ತಿರುವ ವಿಷಯದ ಬಗ್ಗೆ ಆ ಸಮಯದಲ್ಲಿ ನಡೆದ ಘಟನೆಗಳ ವಿವರಗಳು ಜಿಯಾಉದ್ದೀನ ಬರನಿಯು ತನ್ನ ತಾರೀಕ್–ಎ ಫಿರೋಜ್ ಶಾಹೀಯಲ್ಲಿ[31] ಬರೆದಿರುವುದು ಬಹಳ ಮಟ್ಟಿಗೆ ಫೆರಿಶ್ತಾನ ವಿವರಗಳನ್ನೇ ಹೋಲುತ್ತದೆ. ಅವನು ಮಲ್ಲಿಕಾಫುರನು ಕ್ವಾಜಾ ಹಾಜಿಯೊಂದಿಗೆ ದಕ್ಷಿಣಕ್ಕೆ ನಡೆದು ಅಲ್ಲಿ ಸೇವುಣರ ರಾಮಚಂದ್ರನು ಸತ್ತಿರುವುದನ್ನು ನೋಡಿ ಅಲ್ಲಿಂದ ಮುಂದೆ ಅವನು ಇನ್ನೂ ದಕ್ಷಿಣಕ್ಕೆ ನಡೆದನು. ಅಲ್ಲಿ ಮೊದಲ ಹೊಡೆತಕ್ಕೇ ವೀರಬಲ್ಲಾಳನು ಸೋಲಿಸಲ್ಪಟ್ಟು ಬಲಿಪಶುವಾದನು. ಅವನ ರಾಜಧಾನಿಯು ವಶಪಡಿಸಿ–ಕೊಳ್ಳಲ್ಪಟ್ಟು 36 ಆನೆಗಳು ಮತ್ತು ಅಪಾರವಾದ ಧನ ರಾಶಿಯು ಮಹಮ್ಮದೀಯರ ವಶಕ್ಕೆ ಬಂದಿತು.

ಆ ಕಾಲದ ಇನ್ನೊಬ್ಬ ಚರಿತ್ರಕಾರನಾದ ಅಬ್ದುಲ್ ವಸಾಫ್‌ನಂತೆ ಹೊಯ್ಸಳ ಚಕ್ರವರ್ತಿಯು ಪ್ರಾರಂಭದ ಹಂತದಲ್ಲಿ ಪಾಂಡ್ಯರ ಸಹಾಯವನ್ನು ಕೇಳಿ ಯುದ್ಧಕ್ಕೆ ಪ್ರಯತ್ನಿಸಿದನಾದರೂ ಕೊನೆಯಲ್ಲಿ ಮಹಮ್ಮದೀಯ ಸೈನ್ಯಾಧಿಪತಿಗೆ ಶರಣಾದನು ಎಂದು ಹೇಳುತ್ತಾನೆ. ಮಹಮ್ಮದೀಯ ಸೈನ್ಯದ ಹೆಚ್ಚುಗಾರಿಕೆಯನ್ನು ಒಪ್ಪಿದ್ದನ್ನು ತೋರಿಸಲು ಅರಕಣ್ಣ ನಾಯಕ (ಯಾರೆಂದು ಇನ್ನೂ ಗೊತ್ತಿಲ್ಲ) ನ ರಾಜ್ಯವನ್ನೇ ಮಲ್ಲಿಕಾಫುರನಿಗೆ ಕೊಟ್ಟು ಅದರಿಂದ ಜನರನ್ನು ವಿಗ್ರಹರಾಧನೆ, ಅಗ್ನಿಪೂಜೆ ಮೊದಲಾದವುಗಳಿಂದ ರಕ್ಷಿಸಿದನು.[32]

ಫೆರಿಸ್ತನ[33] ಹೇಳಿಕೆಗಳನ್ನು ವಿರೋಧಿಸುವ ತುರ್ಕಿಶ್ ಕೊಲೆಗಾರರ ಮೇಲುಗೈಯನ್ನು ನಿಲ್ಲಿಸಲು ಮತ್ತು ಮಹಮ್ಮದೀಯ ಮತ್ತು ವೀರಬಲ್ಲಾಳನ ಸೈನ್ಯದ ನಡುವೆ ನಡೆದ ಘರ್ಷಣೆಗಳು ಸತ್ಯವೆಂದು ನಿರೂಪಿಸುವ ಕೆಲವು ಮಹಮ್ಮದೀಯ ಚಾರಿತ್ರಿಕರ ಹೇಳಿಕೆಗಳನ್ನು ಬೆಂಬಲಿಸುವ ಕೆಲ ಶಾಸನಗಳು ದೊರಕಿವೆ.[34] ಹಾಸನ ಜಿಲ್ಲೆಯ ದುದ್ದ ಬಳಿ ಸಿಕ್ಕಿದ ಒಂದು ಶಾಸನದಲ್ಲಿ ತುರುಕರು ಮತ್ತು ಹೊಯ್ಸಳ ನಡುವೆ ನಡೆದ ಯುದ್ಧದಲ್ಲಿ ನಾಡಗೋವೆಯ ಮಾಚಯ್ಯನ ಮಗನಾದ ಬೈಚಯ್ಯ ನಾಯಕನೆಂದು ಉಲ್ಲೇಖಿಸಿದೆ.

ಡಾ॥ಡೆರ್ರೆಟ್‌ರವರು[35] ದೋರಸಮುದ್ರದ ಉತ್ತರಕ್ಕೆ ಸುಮಾರು 70 ಮೈಲು ದೂರವಿರುವ ಮಲ್ಲಿಕಾಫುರನ ಹಾದಿಯಲ್ಲಿ ಬರುವ ಹೊಸಹಳ್ಳಿಯಲ್ಲಿ ದೊರಕಿದ ಶಾಸನವೊಂದನ್ನು

ಉದಾಹರಿಸುತ್ತಾರೆ. ಅದು ಕ್ರಿ.ಶ.1311ರ ಫೆಬ್ರವರಿಯಲ್ಲಿದ್ದು ಅದು ಬೊಮ್ಮಯ್ಯ ನಾಯಕನು ತುರುಕರೊಡನೆ ಹೋರಾಡುವಾಗ ಮೃತಪಟ್ಟನೆಂದು ತಿಳಸುತ್ತದೆ. ಆದರೆ ಇದು ತೀರಾ ಅಸ್ಪಷ್ಟವಾಗಿದ್ದು ಇದು ಯಾವ ವಿಚಾರಕ್ಕೆ ಸಂಬಂಧಪಟ್ಟಿದ್ದು ಎಂಬುದು ಗೊತ್ತಾಗುತ್ತಿಲ್ಲ.

ಅವರು ಬೇಲೂರಿನ ಮಾರ್ಚ 4ನೆಯ ದಿನಾಂಕದ ಇನ್ನೊಂದು ಶಾಸನವನ್ನು ಉದಾಹರಿಸುತ್ತಾರೆ. ಅದರಲ್ಲಿ ತುರುಕರೊಡನೆ ಹೋರಾಡುವಾಗ ಒಬ್ಬ ರಸಿಕನು ಪ್ರಾಣ ಬಿಟ್ಟನೆಂದು ಉಲ್ಲೇಖಿಸಿದೆ.[36] ಬಲ್ಲಾಳನ ಇನ್ನೊಬ್ಬ ಅಧಿಕಾರಿಯಾದ ಸಾಳುವ ರಾಚೆಯ ನಾಯಕನು ತುರುಕಾಯನ್ ವಿಭಾಳ ಎಂದರೆ ತುರುಕರ ವಿನಾಶಕ ಎಂಬ ಹೆಸರನ್ನಿಟ್ಟು ಕೊಂಡಿದ್ದನು ಎಂದು ಕೆಲವು ಶಾಸನಗಳು ಉಲ್ಲೇಖಿಸಿವೆ. ಈ ಎಲ್ಲಾ ದಾಖಲೆಗಳೂ ಮಹಮ್ಮದೀಯ ಸೈನ್ಯದ ಎದಿರು ಹೋರಾಡುವ ಕೆಲ ಪ್ರಯತ್ನವನ್ನು ಮಾಡಿದರೂ ಅದು ವಿಫಲವಾಗಿ ಕೊನೆಗೆ ಶರಣಾಗತರಾದರು ಎಂದು ತಿಳಸುತ್ತವೆ. ಮಹಮ್ಮದೀಯ ಚರಿತ್ರಕಾರರ[37] ಮೂಲಕ ವೀರಬಲ್ಲಾಳನು ಅವನ ವಂಶಗೌರವ ಮತ್ತು ಅಪಾರವಾದ ಧನ ಇವುಗಳನ್ನು ಕೊಟ್ಟು ಶಾಂತಿಯನ್ನು ಪಡೆಯಬೇಕಾಯಿತು ಎಂಬುದಕ್ಕೆ ಸಾಕ್ಷಿಯಾಗುತ್ತವೆ. ಮಾಬಾರ್ ಇದು ಮಲ್ಲಿಕಾಫುರನ ಮುಂದಿನ ಧಾಳಿಯ ಗುರಿಯಾಗಿತ್ತು. ಇಸಾಮಿಯ ವಿವರಗಳಿಂದ ವೀರಬಲ್ಲಾಳನು ಮಹಮ್ಮದೀಯ ಸೈನ್ಯದ ಜೊತೆಗೆ ಮಾರ್ಗದರ್ಶಿಯಾಗಿ ಪಾಂಡ್ಯ ದೇಶಕ್ಕೆ ಮುನ್ನಡೆದನು ಎಂದು ತಿಳಿಯುತ್ತದೆ. ಮಾಬಾರಿಗೆ ಇದ್ದ ದಾರಿಯು ಪರ್ವತಮಯವಾಗಿದ್ದು ಮುಂದಿನ ಹಾದಿಗಾಗಿ ಮಲ್ಲಿಕಾಫುರನು ಅಲ್ಲಿನ ರಾಜ್ಯವು ಚಿರಪರಿಚಿತನಾದ ಹೊಯ್ಸಳ ರಾಜನ ಮೇಲೇ ಅವಲಂಬಿತನಾಗಿದ್ದನು. ಮೊಹಮ್ಮದೀಯರು ತಮ್ಮ ಜೊತೆಗೆ ಇರುವವರೆಗೆ ತಮ್ಮ ಮೇಲೆ ಧಾಳಿಯಾಗುವುದಿಲ್ಲ ಎಂಬುದು ವೀರಬಲ್ಲಾಳನ ಉದ್ದೇಶವಾಗಿತ್ತು.

ಪಾಂಡ್ಯ ದೇಶದಲ್ಲಿ ವೀರಬಲ್ಲಾಳನ ಚಟುವಟಿಕೆಗಳ ಬಗ್ಗೆ ಯಾವ ಮಾಹಿತಿಯೂ ಸಿಕ್ಕಿಲ್ಲ. ಇಸಾಮಿಯ ಹೇಳಿಕೆಗಳು ಮತ್ತು ಶಾಸನಗಳು ಈ ವಿಚಾರದಲ್ಲಿ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಮಹಮ್ಮದೀಯ ಚರಿತ್ರಕಾರರು ಮಲ್ಲಿಕಾಫುರನ ಚಟುವಟಿಕೆ–ಗಳನ್ನು ಮಾತ್ರ ಉಲ್ಲೇಖಿಸಿದ್ದಾರೆ.[38] ಪಾಂಡ್ಯರು ಗುಡ್ಡಗಾಡು ಪ್ರದೇಶಕ್ಕೆ ಸೂಕ್ತವಾದ ಗೆರಿಲ್ಲಾ ಮಾದರಿಯ ಯುದ್ಧವನ್ನು ಅನುಸರಿಸಿದ್ದರಿಂದ ಮಲ್ಲಿಕಾಫುರನು ನೇರವಾಗಿ ಅವರ ಸೈನ್ಯವನ್ನು ಎದುರಿಸಲಿಲ್ಲವಾದರೂ ಅವನು ಮಾಬಾರಿನಲ್ಲಿ ಏನನ್ನೂ ಉಳಿಸಲಿಲ್ಲ ಆದರೆ ಅಲ್ಲಿ ಬಹಳವಾದ ಸುಲಿಗೆಯನ್ನು ವಶಪಡಿಸಿಕೊಳ್ಳಲು ಸಮರ್ಥನಾದನು. ಮಹಮ್ಮದೀಯರ ಕೈಯಲ್ಲಿ ಮೂರನೆಯ ಬಲ್ಲಾಳನು ಬೇಲೂರಿಗೆ ವರ್ಗಾಯಿಸಿದನು ಮತ್ತು ಅವನು ಸ್ವತಹ ಶ್ರೀರಂಗ–

ಪಟ್ಟಣದ ಸಮೀಪವಿರುವ ತೊಂಡಾನೂರು ಅಥವ ತೊಣ್ಣೂರಿನಲ್ಲಿ ಸಂಪ್ರದಾಯದಂತೆ ತನ್ನ ವಾಸಸ್ಥಾನವನ್ನು ಬದಲಾಯಿಸಿಕೊಂಡನು.[39]

ಕ್ರಿ.ಶ.1312ರಲ್ಲಿ ಮಲ್ಲಿಕಾಫುರನು ಎರಡನೆಯ ಧಾಳಿಯನ್ನು ದಕ್ಷಿಣದ ಪರ್ಯಾಯ ದ್ವೀಪದಲ್ಲಿ ಆಯೋಜಿಸಿಕೊಂಡನು.[40] ಅವನು ಸಂಕರಕದೇವ ದೇವನನ್ನು ಕೊಂದನು ಮತ್ತು ತೆಲಂಗಾಣ ಮತ್ತು ಕರ್ನಾಟಕದ ರಾಜರುಗಳಿಂದ ಕಪ್ಪ ಕಾಣಿಕೆಗಳನ್ನು ವಸೂಲು ಮಾಡಿಕೊಂಡನು. ಕೊಎಹ್ಲೋನು ಸ್ಪಷ್ಟವಾಗಿ ಹೊಯ್ಸಳ ರಾಜರು ಕಪ್ಪ ಕಾಣಿಕೆಗಳನ್ನು ಕೊಡಲು ಯಾವ ರೀತಿಯಲ್ಲೂ ಉದಾಸೀನವನ್ನು ತೋರಲಿಲ್ಲ ಏಕೆಂದರೆ ಅವರು ಅವರ ಪ್ರದೇಶಗಳನ್ನು ಮಹಮ್ಮದೀಯರಿಂದ ಬಿಡುಗಡೆ ಹೊಂದಲು ಕಾತುರದಿಂದಿದ್ದರು. ಅವನು ದೆಹಲಿ ಸುಲ್ತಾನರ ಸಾಮಂತತೆಯನ್ನು ಒಪ್ಪಿಕೊಂಡನು. ಅವನ ಒಂದು ಶಾಸನದಂತೆ ಸ್ವತ: ಮಹಮದಾಳೇಶ್ವರ ಎಂದುಕೊಂಡು ಬಹುಶ; ಒಂದು ಮುಖ್ಯ ಸಮಸ್ಯೆಯ ಬಗ್ಗೆ ಚರ್ಚಿಸಲು ಅವನ ಅಧಿಕಾರಿಗಳೆಲ್ಲ ಒಂದೆಡೆ ಸೇರಿದ್ದರು. ಹೀಗಾಗಿ ಅವನು ಮಹಮದೀಯರ ಧಾಳಿಗಳು ಎಂದರೆ ಏನು ಎಂದು ಅರಿತುಕೊಂಡಿದ್ದರಿಂದ ಅವನು ಅವಶ್ಯಕತೆ ಇರುವತನಕವೂ ಸುಲ್ತಾನರೊಡನೆ ಚೆನ್ನಾಗಿರಲು ತೀರ್ಮಾನಿಸಿದನು.

ದೋರಸಮುದ್ರದ ಮೇಲೆ ಆದ ಮಹಮದೀಯರ ಧಾಳಿಯು ಹೊಯ್ಸಳರ ಗೌರವವನ್ನು ಖಂಡಿತವಾಗಿ ಕೆಳಗಿಳಿಸಿತು. ಕ್ರಿ.ಶ.1311[41] ರಿಂದ 1313 ರವರೆಗಿನ ಕಾಲದಲ್ಲಿ ಆ ರಾಜರಿಂದ ಯಾವುದೇ ಶಾಸನಗಳು ಬರಲಿಲ್ಲ. ಸಿಕ್ಕಿರುವ ಯಾವುದೇ ಶಾಸನಗಳಲ್ಲೂ ಅವರ ಉಚ್ಚವಾದ ಬಿರುದುಗಳು ದಾಖಲಾಗಿಲ್ಲ. ಹಿರಿಯೂರು ತಾಲ್ಲೂಕಿನ ಒಂದು ಶಾಸನದಲ್ಲಿ ಅವನನ್ನು ಮಹಾಮಂಡಲೇಶ್ವರ ಎಂದು ಉಲ್ಲೇಖಿಸಿದೆ. ನಂಜನಗೂಡು ತಾಲ್ಲೂಕಿನ ಮೊಟ್ಟದ ಒಂದು ವೀರಗಲ್ಲಿನಲ್ಲೂ ಸಹ ಮೂರನೆ ವೀರಬಲ್ಲಾಳನಿಗೆ ಅದೇ ಬಿರುದನ್ನು ಉಲ್ಲೇಖಿಸಲಾಗಿದೆ.

ತನ್ನ ರಾಜಧಾನಿಯ ಮೇಲೆ ಮಹಮದೀಯರ ಮೊದಲ ಧಾಳಿಯ ನಂತರ ಮೂರನೆ ವೀರಬಲ್ಲಾಳನ ಬಹು ಮುಖ್ಯವಾದ ಕಾರ್ಯವೆಂದರೆ ತನ್ನ ಕುಟುಂಬದ ಕಳೆದುಹೋದ ಗೌರವವನ್ನು ಹೆಚ್ಚಿಸಿಕೊಳ್ಳುವುದಾಗಿತ್ತು. ವೀರಪಾಂಡ್ಯ ಮತ್ತು ಸುಂದರ ಪಾಂಡ್ಯ ಇವರಿಬ್ಬರ ನಡುವೆ ವೈರತ್ವ ಮತ್ತು ಕಾದಾಟಗಳು ನಡೆಯುತ್ತಲೇ ಇದ್ದವು ಮತ್ತು  ವೀರಬಲ್ಲಾಳನು ಅದರ ಲಾಭವನ್ನು ಕೆಲಮಟ್ಟಿಗೆ ತೆಗೆದುಕೊಂಡನು. ಅವನ ಸಮರ್ಥನಾದ ಮಹಾಪ್ರಧಾನ ಮತ್ತು ದಣ್ಣನಾಯಕನು "ಪಾಂಡ್ಯ ದೇಶದ ರಾಜ" ಎಂಬ ಬಿರುದನ್ನು ಹೆಮ್ಮೆಯಿಂದ ಇಟ್ಟು–

ಕೊಂಡಿದ್ದನು. ಇದು ಸ್ಪಷ್ಟವಾಗಿ ಪಾಂಡ್ಯರು ಹೊಯ್ಸಳರಿಂದ ಸೋಲನ್ನು ಅನುಭವಿಸಿದ್ದ–ರೆಂಬುದಕ್ಕೆ ಸಾಕ್ಷಿಯಾಗಿದೆ.

ಮೂರನೆ ವೀರಬಲ್ಲಾಳನು ಕೊಂಗು ದೇಶದಲ್ಲಿದ್ದ ಗೊಂದಲವನ್ನು ಪರಿಹಾರ ಮಾಡುವಲ್ಲಿ ಸಮರ್ಥನಾಗಿದ್ದು ಅವರನ್ನು ಸೋಲಿಸಿ ವಂಶದ ಇತಿಹಾಸದಲ್ಲೇ ಬೇರೆ ಯಾವ ಕಾಲದಲ್ಲಿಯೂ ಇಲ್ಲದಂತೆ ಪ್ರಬಲವಾಗಿದ್ದನು. ಕೊಯಂಬತೂರು, ನೀಲಗಿರಿ ಜಿಲ್ಲೆಗಳು ಮತ್ತು ಪಳನಿ ತಾಲ್ಲೂಕಿನ ಎಲ್ಲೆಡೆಗಳಲ್ಲಿ ಅವನ ಶಾಸನಗಳು ಸಿಕ್ಕಿವೆ.

ಈ ಮಧ್ಯೆ ಮುಖ್ಯ ಕೇಂದ್ರವಾದ ದೆಹಲಿಯಲ್ಲಿ ಪರಿಸ್ಥಿತಿಯು ತಾರುಮಾರಾಗಿ ಮಲ್ಲಿಕಾಫುರನು ಪ್ರಬಲವಾಗಿದ್ದಿ ಧೂರ್ತನೂ ಆಗಿದ್ದು ಅಲ್ಲಾವುದ್ದೀನನನ್ನು ಕೊಲೆ ಮಾಡಿಸಿದನು. ಆಗ ಎಲ್ಲೆಲ್ಲೂ ಗೊಂದಲವಿತ್ತು. ಗುಜರಾತಿನಲ್ಲಿ ದಂಗೆ ಎದ್ದಿತು, ದೇವಗಿರಿಯ ಅವಶೇಷಗಳನ್ನು ಪುನಹ ಸ್ಥಾಪಿಸಿದ ಹರಿಹರ ದೇವನು ಅನೇಕ ಮಹಮ್ಮದೀಯ ಕಾವಲು ದಂಡನ್ನು ಹೊರಹಾಕಿದನು. ಚಿತ್ತೂರು ಸ್ವತಂತ್ರವಾಯಿತು, ಕಾಕತೀಯ ಪ್ರತಾಪರುದ್ರನು ವಾರ್ಷಿಕ ಕಪ್ಪಕಾಣಿಕೆಗಳನ್ನು ಕೊಡುವುದನ್ನು ನಿಲ್ಲಿಸಿದನು. ಕ್ರಿ.ಶ.1318ರಲ್ಲಿ ಮುಬಾರಕ್ ಶಾನು ಸಿಂಹಾಸನಕ್ಕೇರಿ ಅಧಿಕಾರವನ್ನು ಕೈಗೆತ್ತಿಕೊಳ್ಳುವವರೆಗೂ ಪರಿಸ್ಥಿತಿಯು ಹಾಗೇ ಇತ್ತು.

ಕ್ರಿ.ಶ.1311[42]ರಲ್ಲಿ ಮಹಮ್ಮದೀಯರ ಧಾಳಿಯಲ್ಲಿ ನಾಶವಾದ ತನ್ನ ರಾಜಧಾನಿಯನ್ನು ಪುನರ್ನಿರ್ಮಿಸುವುದು ಮೂರನೆ ವೀರಬಲ್ಲಾಳನ ಆದ್ಯ ಕರ್ತವ್ಯವಾಗಿತ್ತು. ಕ್ರಿ.ಶ.1316ರ ಒಂದು ಶಾಸನವು ಹೊಯ್ಸಳನು ಪುನರ್ನಿರ್ಮಿಸಿದ ದೋರಸಮುದ್ರದಿಂದಲೇ ಆನಂದದಿಂದ ರಾಜ್ಯವನ್ನು ಆಳುತ್ತಿದ್ದನು ಎಂದು ಉಲ್ಲೇಖಿಸಿದೆ.

ಎಸ್.ಕೃಷ್ಣಸ್ವಾಮಿ ಐಯ್ಯಂಗಾರ್[43]ರವರಂತೆ ದೋರಸಮುದ್ರದ ಪುನರ್ನಿರ್ಮಾಣವು ಹೊಯ್ಸಳರ ರಕ್ಷಣೆಯ ಪುನರುತ್ಥಾನ ಮತ್ತು ಮತ್ತೆ ಬರಬಹುದಾದ ಮಹಮ್ಮದೀಯರ ಧಾಳಿಗಳನ್ನು ಎದುರಿಸುವ ಧೈರ್ಯವನ್ನು ಕೊಡುವ ಸೂಚನೆಯಾಗಿತ್ತು.

ಮೂರನೆಯ ವೀರಬಲ್ಲಾಳನು ತನ್ನ ರಾಜಧಾನಿಯನ್ನು ಪುನರ್ನಿರ್ಮಿಸಿದ ಮೇಲೆಯೇ ತನ್ನ ರಾಜ್ಯದ ನಿರ್ವಹಣೆ ಮತ್ತು ವಿಸ್ತರಣೆಯ ಕಡೆ ಗಮನವನ್ನು ಕೊಟ್ಟನು. ಈ ಮೊದಲೇ ತಿಳಿಸಿದಂತೆ ಅರುಣಸಮುದ್ರದ ಸುತ್ತಮುತ್ತಲಿನ ಕೆಲವು ಪ್ರದೇಶಗಳನ್ನು ಕೊಡಲಾಗಿದ್ದು ಬಹುಶಃ ಇದು ತಿರುವಣ್ಣಾಮಲೈನಂತೆಯೇ ಇರಬೇಕು. ಅದರ ನಂತರ ಈ ಸ್ಥಳವು ಅವನ ರಾಜಧಾನಿ–ಗಳಲ್ಲೊಂದಾಗಿತ್ತು.[44]

ಮೂರನೆಯ ವೀರಬಲ್ಲಾಳನಿಗೆ ಮಹಮ್ಮದೀಯರ ಧಾಳಿಯು ಅನೇಕ ತೊಂದರೆಗಳನ್ನೊಡ್ಡಿತ್ತು. ಅವನು ದೋರಸಮುದ್ರವು ಇನ್ನು ಸುರಕ್ಷಿತವಾದ ಸ್ಥಳವಲ್ಲವೆಂದು ಅರ್ಥ ಮಾಡಿಕೊಂಡು ಅವನು ಇನ್ನೂ ದಕ್ಷಿಣದ ಕಡೆ ಹೋದನು ಮತ್ತು ಮುಬಾರಕ್ ಖಿಲ್ಜಿಯು ದೇವಗಿರಿಯಲ್ಲಿ ಮತ್ತೆ ಪ್ರತಿಷ್ಠಾಪಿತನಾಗಿದ್ದು ಅದು ಹೊಯ್ಸಳರ ಇರುವಿಕೆಗೆ ಅಪಾಯದ ಸೂಚನೆಯಾಗಿತ್ತು.[45]

ತಮಿಳುನಾಡಿನ ಪರಿಸ್ಥಿತಿಯು ಹೊಯ್ಸಳರಿಗೆ ಅನುಕೂಲಕರವಾಗಿದ್ದು ಅವರು ತಮ್ಮ ರಾಜಧಾನಿಯನ್ನು ಅಲ್ಲಿಗೆ ಬದಲಾವಣೆ ಮಾಡಿಕೊಂಡರು. ಪಾಂಡ್ಯರು ಕೇರಳದ ಕುಲಶೇಖರನ ಧಾಳಿಗೆ ಒಳಗಾದರು ಮತ್ತು ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ಮೂರನೆಯ ವೀರಬಲ್ಲಾಳನು ಹಿಂಜರಿಯಲಿಲ್ಲ. ನಿಜವಾಗಿ ಈಗ ಅವನು ತಿರುಪತಿಯ ಪ್ರದೇಶಕ್ಕೆ ಬಂದನು. ಈ ಪ್ರದೇಶವು ಯಾದವರಾಯರ ವಶದಲ್ಲಿತ್ತು ಮತ್ತು ಅವರು ಮುಂದೆ ಹೊಯ್ಸಳರಿಗೆ ಸಾಮಂತರಾದರು.[46]

ಮೂರನೆ ವೀರಬಲ್ಲಾಳನು ತನ್ನ ರಾಜ್ಯವನ್ನು ಒಂದು ಮಟ್ಟಕ್ಕೆ ತರುವುದರಲ್ಲಿ ಕಾರ್ಯಶೀಲನಾಗಿರಬೇಕಾದರೆ ದೆಹಲಿಯಲ್ಲಿ ಪರಿಸ್ಥಿತಿಯು ಬೇರೆಯದೇ ರೂಪವನ್ನು ತಾಳುತ್ತಿತ್ತು. ಅಲ್ಲಾವುದ್ದೀನನ ಮಗನಾದ ಮುಬಾರಕ್ ಶಾನು ಪರಿಸ್ಥಿತಿಯನ್ನು ತನ್ನ ವಶಕ್ಕೆ ತೆಗೆದುಕೊಂಡನು.ಅವನು ತನ್ನ ಪ್ರಜೆಗಳೊಂದಿಗೆ ಬಹಳ ಸಲುಗೆಯಿಂದ ಇದ್ದು ಅವರ ಹೃದಯಗಳನ್ನು ಗೆದ್ದನು.

ಮುಬಾರಕನ ಮೊದಲನೆಯ ಧಾಳಿಯು ಕಾಕತೀಯನ ದೊರೆ ಪ್ರತಾಪರುದ್ರನ ಮೇಲಾಗಿತ್ತು. ಅವನು ತನ್ನ ನಂಬಿಕಸ್ಥ ಸೇನಾಪತಿಗಳಲ್ಲೊಬ್ಬನಾದ ಖುಸ್ರಾವುವನ್ನು ಕಪ್ಪಕಾಣಿಕೆಗಳನ್ನು ಕೊಡುವುದನ್ನು ನಿಲ್ಲಿಸಿದ ಪ್ರತಾಪರುದ್ರನಿಗೆ ಶಿಕ್ಷೆಯನ್ನು ಕೊಡಲು ಆಜ್ಞಾಪಿಸಿದನು.[47] ಮುಬಾರಕರ ಸೈನ್ಯವು ಸೇವಣರ ವಿರುದ್ಧ ಹೊರಟು ಹರಪಾಲದೇವನನ್ನು ಕೊಂದಿತು ಅಲ್ಲಿಂದ ಮಲ್ಲಿಕ್ ಖುಸ್ರಾವುನನ್ನು ಮಾಬಾರಿನ ದೊರೆಗಳಿಂದ ಕಪ್ಪಕಾಣಿಕೆಗಳನ್ನು ವಸೂಲಿಮಾಡಲು ಕಳುಹಿಸಿದನು. ಈ ಸಮಯದಲ್ಲಿ ಹೋಯ್ಸಳರ ಆಳ್ವಿಕೆಯಲ್ಲಿದ್ದ ಕೊಡಗನ್ನು ತನ್ನ ಜನರ ಮೂಲಕ ವಶಪಡಿಸಿಕೊಂಡನು. ಈ ವಿಜಯಗಳು ಮಲ್ಲಿಕ್ ಖುಸ್ರುವಿನ ಪಿತ್ತವನ್ನು ನೆತ್ತಿಗೇರಿಸಿ ಮುಬಾರಕ್ ಶಾನನ್ನು ಕ್ರೂರವಾಗಿ ಕೊಲ್ಲಿಸಿ ನಾಸಿರುದ್ದೀನ್ ಎಂಬ ಹೆಸರಿನೊಂದಿಗೆ ಕ್ರಿ.ಶ.1320-21[48]ರಲ್ಲಿ ಸಿಂಹಾಸನವನ್ನು ಏರಿದನು ಆದರೆ ಅಲ್ಪಸಮಯದಲ್ಲೇ ಘಿಯಾಸುದೀನ್

ತುಘಲಕ್ ನಿಂದ ಹೊರ ದಬ್ಬಲ್ಪಟ್ಟನು. ಘಿಯಾಸುದ್ದೀನ್ ತುಘಲಕನು ದೆಹಲಿಯ ಸಿಂಹಾಸನದ ಮೇಲೆ ಕುಳಿತನಂತರ ವ್ಯವಸ್ಥಿತ ಆಡಳಿತದ ಕಾಲವು ಪ್ರಾರಂಭವಾಗಿ ದಕ್ಷಿಣ ಭಾರತದ ಶಕ್ತಿಯ ಮೇಲೆ ಮಹಮದೀಯರ ಆಡಳಿತದ ಶಕೆಯು ಪ್ರಾರಂಭವಾಯ್ತು. ಅವನು ನಾಗರಿಕ ಆಡಳಿತದಲ್ಲಿ ಬಹಳ ಬುದ್ಧಿವಂತನಾಗಿದ್ದು ಅಮೀರ್ ಖುಸ್ರುವಿನಿಂದ ಪ್ರಶಂಸೆಯ ಮಾತುಗಳನ್ನು ಪಡೆದಿದ್ದಾನೆ.

ಕಾಕತೀಯ ಕೇಂದ್ರ ಸ್ಥಾನದಲ್ಲಿ ಉಂಟಾದ ಗೊಂದಲವು ಘಿಯಾಸುದ್ದೀನನ ಗಮನವನ್ನು ಮೊದಲು ಸೆಳೆಯಿತು. ಅವನು ತನ್ನ ಮಗ ಉಲುಘ್ ಖಾನನ ಅಡಿಯಲ್ಲಿ ಒಂದು ಶಿಸ್ತಿನ ಸೈನ್ಯವನ್ನು ಆ ಪರಿಸ್ಥಿತಿಯ ಲಾಭವನ್ನು ಪಡೆಯಲು ಕಳುಹಿಸಿದನು.[49] ಆದರೆ ಈ ಪ್ರಯತ್ನದಲ್ಲಿ ಉಲುಘ್ ಖಾನನು ನಿಸ್ಸಂಶಯನಾಗಿ ಸೋತನು ಹಾಗೂ ಅವನ ಸೈನ್ಯವು ದೇವಗಿರಿಯಲ್ಲಿ ಹಿಮ್ಮೆಟ್ಟಿ, ದೆಹಲಿಯಿಂದ ಹೆಚ್ಚಿನ ಬಲಕ್ಕಾಗಿ ಸಂದೇಶವನ್ನು ಕಳುಹಿಸಿದನು. ಒಂದು ಬಹಳ ದೊಡ್ಡ ಸೈನ್ಯವು ವಾರಂಗಲ್ಲಿನ ಕೋಟೆಯ ವಿರುದ್ಧ ದಂಡೆತ್ತಿ ಹೊರಟಿತು. ಪ್ರತಾಪ ರುದ್ರನು ಮಹಮದೀಯರಿಂದ ಇಷ್ಟು ಶೀಘ್ರವಾದ ಧಾಳಿಯನ್ನು ನಿರೀಕ್ಷಿಸಿರಲಿಲ್ಲ. ಸಹಜವಾಗಿಯೇ ಈ ಮುಸ್ಲೀಮರ ಧಾಳಿಯನ್ನು ಎದುರಿಸಲಾಗಲಿಲ್ಲ. ಅದರೆ ಉಲುಘ್ ಖಾನನಿಗೆ[50] ಕೋಟೆಯನ್ನು ಭೇದಿಸುವುದು ಸುಲಭವಾದ ಕೆಲಸವಾಗಿರಲಿಲ್ಲ. ಪ್ರತಾಪರುದ್ರ ಮತ್ತು ಅವನ ಜನಗಳಿಗೆ ಅನ್ನ ಆಹಾರ ಹಾಗು ನೀರಿನ ಕೊರತೆಯುಂಟಾಗಿ ಅವರು ಉಲುಘ್ ಖಾನನಿಗೆ ಅನಿವಾರ್ಯವಾಗಿ ಶರಣಾಗಬೇಕಾಯಿತು. ಪ್ರತಾಪರುದ್ರನನ್ನು ಖೈದಿಯನ್ನಾಗಿ ಮಾಡಿ ಉನ್ನತ ನ್ಯಾಯಾಲಯಕ್ಕೆ ಕಳುಹಿಸಲಾಯಿತು. ತೆಲಿನಾಗಣಕ್ಕೆ ಒಬ್ಬರಾಜ್ಯಪಾಲನನ್ನು ನೇಮಿಸಲಾಯ್ತು.

ಕ್ರಿ.ಶ.1325[51]ರ ಸುಮಾರಿಗೆ ಒಂದು ಸಂಚಿನ ಫಲವಾಗಿ ಘಿಯಾಸುದ್ದೀನನು ಕೊಲೆಯಾಗಿ ಉಲುಘ್ ಖಾನನು ಮೊಹಮದ್-ಬಿನ್-ತುಘಲಕ್ ಎಂಬ ಹೆಸರಿನಲ್ಲಿ ಸಿಂಹಾಸನಕ್ಕೇರಿದನು.

ಮಹಮ್ಮದೀಯರಿಂದ ವೀರಬಲ್ಲಾಳನು ಅನುಭವಿಸಿದ ಹೀನಾಯವಾದ ಆತಿಥ್ಯದಿಂದ ಧೈರ್ಯ ವಹಿಸಿದ ಅವನ ಅನೇಕ ಸಣ್ಣಪುಟ್ಟ ಮುಖ್ಯಸ್ಥರು ಅವನ ವಿರುದ್ಧ ಕೈ ಎತ್ತಿದರು. ಹೊಸಗುಂದವು ಅವನ ವಶದಲ್ಲಿದ್ದರೂ ಮತ್ತು ಕೋಟಿನಾಯಕನು ಅವನಿಗೆ ನಿಷ್ಠನಾಗಿದ್ದರೂ ಅವನು ಘಟ್ಟದ್ ಅಕೆಳಗಿನ ಅಳುವಖೇಡದಿಂದ ಅವಮಾನವನ್ನು ಅನುಭವಿಸಬೇಕಾಯಿತು.

ಮೂರನೆಯ ವೀರಬಲ್ಲಾಳನು ಬೈಚಯದಣ್ಣಾಯಕನ ಭಾವಮೈದುನನಾದ ಸನಿಯ ಸಹಾನಿಯನ್ನು ಒಂದು ತುಕಡಿಯೊಂದಿಗೆ ಕಳುಹಿಸಿದನು. ಅದು ನಾಶವಾಗಿ ತುಳುವರು ಹೀನಾಯವಾಗಿ ಸೋಲನ್ನು ಅನುಭವಿಸಿದರು. ಇದು ನಮಗೆ ತಿಳಿದಿರುವ ಹೊಯ್ಸಳರ ಮತ್ತು ಅಳುಪರ ನಡುವೆ ನಡೆದ ಮೊದಲ ಘರ್ಷಣೆಯಾಗಿದೆ.

ವೀರಬಲ್ಲಾಳನು ಇದರಿಂದ ಯಾವುದೇ ಲಾಭವನ್ನು ಪಡೆದಂತೆ ಕಾಣಲಿಲ್ಲವೇಕೆಂದರೆ ಅಳುಪರು ಯವ ಪ್ರದೇಶವನ್ನೂ ಕಳೆದುಕೊಳ್ಳಲಿಲ್ಲ ಅಥವ ಹೊಯ್ಸಳ ದೊರೆಗಳ ಸಾಮಂತರೂ ಆಗಲಿಲ್ಲ. 14ನೆಯ ಶತಮಾನದ ಆರಂಭದಲ್ಲಿ ಮಾತ್ರ ಅವನು ಅಳುಪರ ಮೇಲೆ ಸಂಪೂರ್ಣ ಹಿಡಿತವನ್ನು ಸಾಧಿಸಿದನು.

ಇದು ವೀರಬಲ್ಲಾಳನ ಕಾರ್ಯದ ಸಮಾಪ್ತಿಯಾಗಿರಲಿಲ್ಲ ಮತ್ತು ಇದು ತುಂಗಭದ್ರಾದ ದಕ್ಷಿಣದ ಪ್ರಾಂತ್ಯಗಳನ್ನು ವಶಕ್ಕೆ ತೆಗೆದುಕೊಳ್ಳುವುದರ ಸೂಚನೆಯಾಗಿತ್ತು ಅಲ್ಲದೇ ಇದು ಅವಶ್ಯವೂ ಆಗಿತ್ತು. ಅಲ್ಲಿ 14ನೇ ಶತಮಾನದ ಮೊದಲನೆಯ ದಶಕದಲ್ಲಿ ಹೊಯ್ಸಳರ ಸೇನೆಯ ವಿರುದ್ಧ ಹೋರಾಡಿ ಗೆದ್ದ ಕಂಪಿಲದೇವನಿದ್ದನು. ಸೇವುಣರು[52] ಮರೆಯಾದನಂತರ ಅವನು ಸ್ವತಂತ್ರನಾಗಿದ್ದು ಅವನನ್ನು ಎದುರಿಸುವುದು ಕಷ್ಟಕರವಾಗಿತ್ತು. ಅವನು ಕಂಪಿಲ, ಕುಮ್ಮಟ ಮತ್ತು ದೊರೆವಾಡಿ ಪ್ರದೇಶಗಳನ್ನು ಆಳುತ್ತಿದ್ದನು.

ಕಂಪಿಲಿಯನ್ನು ಉತ್ತರದ ಕಡೆಯಿಂದ ಆಕ್ರಮಣವನ್ನು ಮಾಡುವುದು ಕಷ್ಟವಾಗಿತ್ತು ಏಕೆಂದರೆ ಅಲ್ಲಿ ನದಿಯ ಪಾತ್ರವು ಬಹಳ ವಿಶಾಲವಾಗಿದು ಅದನ್ನು ದಾಟುವುದು ಸುಲಭವಾಗಿರಲಿಲ್ಲ. ಈಶಾನ್ಯಭಾಗವು ಗುಡ್ಡಗಾಡಿನಿಂದ ಕೂಡಿದ್ದು ಅಲ್ಲಿ ಅಗಾಧವಾದ ಗುಡ್ಡಗಳಿದ್ದವು. ಹೀಗೆ ಕಂಪಿಲಿಯು ಗೆಲ್ಲಲು ಅಸಾಧ್ಯವಾದ ಕೋಟೆಯನ್ನು ಹೊಂದಿತ್ತು. ಈ ಕೋಟೆಯನ್ನು ಗೆದ್ದು ವಶಪಡಿಸಿಕೊಂಡಿದ್ದರೆ ಹೊಯ್ಸಳರಿಗೆ ಮಹಮ್ಮದೀಯ ಮುಂದಿನ ಯವುದಾದರೂ ಧಾಳಿಯ ವಿರುದ್ಧ ರಕ್ಷಣೆಯು ದೊರಕಬಹುದಿತ್ತು.[53]

ಬಹುಶಃ ಕಂಪಿಲಿ ರಾಜ್ಯವನ್ನು ಮುಗಿಸುವ ಉದ್ದೇಶದಿಂದ ಮೂರನೆಯ ಬಲ್ಲಾಳನು ಬೃಹತ್ತಾದ ಸೈನ್ಯದೊಂದಿಗೆ ಹೊರಟನು. ಅವನ ಸೈನ್ಯವು ಅವನ ಸಾಮಂತರಾದ ಕೋಟಿ ನಾಯಕರಂತಹವರ ಸೈನ್ಯದ ಜೊತೆಯಾಗಿತ್ತು. ಹೊಯ್ಸಳ ಸೈನ್ಯವು ಮೊದಲು ಬಲ್ಲಾಳದಲ್ಲಿ ವಸತಿಯನ್ನು ಮಾಡಿತು ಅನಂತರ ಅದು ದೊರೆವಾಡಿಯ ಕಡೆಗೆ ಹೊರಟು ಅಲ್ಲಿ ಎರಡೂ

ಸೈನ್ಯಗಳ ನಡುವೆ ಭೀಕರವಾದ ಯುದ್ಧವು ನಡೆದು ಅದರಲ್ಲಿ ಕೋಳಿನಾಯಕ ಕುರುಕ ನಾಯಕನು ಧೈರ್ಯದಿಂದ ಹೋರಾಡಿ ಮರಣವನ್ನಪ್ಪಿದನು. ಹೊಯ್ಸಳರು ಈ ಯುದ್ಧವನ್ನು ಗೆದ್ದರು ಮತ್ತು ಅದರ ಪರಿಣಾಮವಾಗಿ ಪೆನುಕೊಂಡವನ್ನು ಪಡೆದನು; ಅಲ್ಲಿ ಮಹಾಪ್ರಧಾನ ಮಾಚಯ ದಣ್ಣಾಯಕನು ಅಲ್ಲಿ ಆ ವರ್ಷ ಸೆಪ್ಟೆಂಬರ್‌ನಿಂದ ಆಳತೊಡಗಿದನು.ಅವನು ಆ ಪ್ರದೇಶವನ್ನು ಆಮರಣಾಂತವಾಗಿ ಆಳಿದನು ಮತ್ತು ಅವನ ನಂತರ ಗಂಗದೇವ ದಣ್ಣಾಯಕನು ಆಳಿದನು. ಪೆನುಕೊಂಡವು ಆ ಕಾಲದಲ್ಲಿ ಹೊಯ್ಸಳರ ವ್ಯೂಹರಚನೆಯ ಮುಖ್ಯವಾದ ಕೇಂದ್ರವಾಗಿ ಕೊನೆಯವರೆಗೂ ಉಳಿದಿತ್ತು ಮತ್ತು ವಿಜಯನಗರದ ರಾಜರು ವಶಪಡಿಸಿ–ಕೊಂಡರು. ಬುಕ್ಕರಾಯನು ದೋರಸಮುದ್ರ ಮತ್ತು ಪೆನುಕೊಂಡಾದಿಂದ ಏಕಕಾಲದಲ್ಲಿ ಆಳುತ್ತಿದ್ದನು ಎಂದು ಒಂದು ಶಾಸನವು ಉಲ್ಲೇಖಿಸುತ್ತದೆ. ಇಲ್ಲಿಂದ ಉತ್ತರದ ಮತ್ತು ಈಶಾನ್ಯ ಭಾಗಗಳನ್ನು ಹತ್ತಿರದಿಂದ ಗಮನಿಸಬಹುದು.

ಕದಂಬರು ಮತ್ತೆ ತಮ್ಮ ಶಕ್ತಿಯನ್ನು ಬೆಳಸಿಕೊಳ್ಳಲು ತೊಡಗಿದರಾದರೂ ಅವರು ಹೊಯ್ಸಳರ ವಿರುದ್ಧ ಕತ್ತಿ ಎತ್ತುವಷ್ಟು ಶಕ್ತಿಯುತರಾಗಿರಲಿಲ್ಲ. ಹೊಯ್ಸಳರ ಮೂರನೆ ವೀರಬಲ್ಲಾಳನು ಸಾಗರವನ್ನು ಮತ್ತೆ ಕ್ರಿ.ಶ.1320[54]ರಲ್ಲಿ ವಶಪಡಿಸಿಕೊಂಡನು ಎಂದು ಒಂದು ಶಾಸನದಲ್ಲಿ ಕಾಣಬಹುದು. ಅವನು ಕ್ರಿ.ಶ.1324ರಲ್ಲಿ ಗುತ್ತಿಯನ್ನು ಕೂಡ ವಶಪಡಿಸಿಕೊಂಡರು. ಆದರೆ ಅವನ ಈ ದಿಕ್ಕಿನಲ್ಲಿನ ಚಟುವಟಿಕೆಗಳು ದೆಹಲಿಯಿಂದ ಉಂಟಾದ ಹೊಸ ಧಾಳಿಗಳ ಕಾರಣವಾಗಿ ನಿಂತಿತು.

ಮೂರನೆಯ ಬಲ್ಲಾಳನು ಬಹಳ ಕಾಲದಿಂದ ಹೊಯ್ಸಳರಿಗೆ ಶತ್ರುಗಳಾಗಿದ್ದ ನಿಡುಗಲ್ ರಾಜರನ್ನು ಸೋಲಿಸಿದನೆಂದು ಕಾಣುತ್ತದೆ. ಅವನ ಒಬ್ಬ ಅಧಿಕಾರಿಯಾದ ಹೊಳಕಲ್ ಗಂಗನಾಯಕನು ನಿಡುಗಲ್‌ನಿಂದ ಆಳುತಿದ್ದನು. ಸೆರೆ ಜಮ್ಮನಹಳ್ಳಿಯ ಒಂದು ಶಾಸನವು ನಿಡುಗಲ್ ರಾಜ್ಯದ ಯಾವುದೋ ಒಂದು ಸ್ಥಳದಲ್ಲಿ ಭೂಮಿದಾನ ಮಾಡಿದನು ಎಂದು ಉಲ್ಲೇಖಿಸುತ್ತದೆ. ಮಾಹಾಪ್ರಧಾನಿಯಾದ ದಣ್ಣಾಯಕನು ಉತ್ತರದ ಗಡಿಯನ್ನು ರಕ್ಷಿಸುತ್ತಿರ–ಬೇಕಾದರೆ ದಕ್ಷಿಣದ ಭಾಗವನ್ನು ಪಾಂಡ್ಯ ಸೋದರರ ದಾಳಿಯಿಂದ ರಕ್ಷಿಸಲು ಮತ್ತು ಬಲ ಪಡಿಸುವುದರಲ್ಲಿ ಸ್ವತಃ ಮೂರನೇ ವೀರಬಲ್ಲಾಳನು ಕಾರ್ಯಶೀಲನಾಗಿದ್ದನು. ವೀರ ಪಾಂಡ್ಯನು ಮೂರನೆ ವೀರಬಲ್ಲಾಳನ ಸಹಾಯವನ್ನು ಕೋರಿದರೆ ಇನ್ನೊಂದು ಕಡೆಯಿಂದ ಸುಂದರ ಪಾಂಡ್ಯನನ್ನು ಬೆಂಬಲಿಸುತ್ತಿದ್ದ ಆಗಿನ ಕೇರಳದರಾಜ ರವಿವರ್ಮನ್ ಕುಲಶೇಖರನ ಕೇರಳ ಸಿಂಹಾಸನವನ್ನು ವಶಪಡಿಸಿಕೊಳ್ಳುವ ಸಲುವಾಗಿ ಉದಯ ಮಾರ್ತಾಂಡವರ್ಮನು

ಸಹಾಯಮಾಡಿದನು. ಈ ಎರಡೂ ಸೈನ್ಯಗಳು ಕ್ರಿ.ಶ.1318[55]ರ ಸುಮಾರಿಗೆ ಶ್ರೀರಂಗಂ ಬಳಿ ಸಂಧಿಸಿದವು.

ಕ್ರಿ.ಶ.1322[56]ರ ಕೊನೆಗೆ ಮೂರನೆಯ ಬಲ್ಲಾಳನು ತಿರುವಣ್ಣಾಮಲೈಯಿಂದ ಆಳುತ್ತಿದ್ದನು ಮತ್ತು ಅಲ್ಲಿ ಸ್ವಲ್ಪ ಜಾಸ್ತಿ ಕಾಲ ತಂಗಿದ್ದನು. ಇಲ್ಲಿ ಉಳಿಯುವುದರಿಂದ ಅವನು ಪಾಂಡ್ಯರ ಚಟುವಟಿಕೆಗಳನ್ನು ಸುಲಭವಾಗಿ ಗಮನಿಸಿ ಅದಕ್ಕೆ ಸೂಕ್ತವಾದ ಕ್ರಮವನ್ನು ತೆಗೆದುಕೊಳ್ಳುವುದಕ್ಕೆ ಅನುಕೂಲವಾಗಿತ್ತು. ಇಲ್ಲಿಂದ ಅವನು ಕಣ್ಣಾನೂರಿನ ಮೇಲಿನ ಧಾಳಿಯನ್ನು ಸುರಕ್ಷಿತವಾಗಿ ಮಾಡಬಹುದಿತ್ತು.

ಹೀಗೆ ಮೂರನೆಯ ಬಲ್ಲಾಳನು ದಕ್ಷಿಣದಲ್ಲಿ ಕಾರ್ಯಶೀಲನಾಗಿರಬೇಕಾದರೆ ಕಂಪಿಲನು ಧಾಳಿಯನ್ನು ಹೊಯ್ಸಳರ ಮೇಲೆ ಮಾಡಿಸಿದನು. ಹೊಯ್ಸಳರ ಒಂದು ಸೈನ್ಯವನ್ನು ತಕ್ಷಣವೇ ಆ ಸ್ಥಳಕ್ಕೆ ಕಳುಹಿಸಲಾಯಿತು ಮತ್ತು ಈ ಘರ್ಷಣೆಯಲ್ಲಿ ಕಂಪಿಲನ ಅಶ್ವದಳವನ್ನು ನಡೆಸುತ್ತಿದ್ದ ಬೈಚಯ್ಯ ದಣ್ಣಾಯಕನು ಮೃತನಾದನು. ಇದಕ್ಕೆ ಸಂಬಂಧಪಟ್ಟ ವೀರಗಲ್ಲಿನ ಶಾಸನವೊಂದು ಹೊಯ್ಸಳ ಸೇನೆಯನ್ನು ಸ್ವತಹ ಮೂರನೆಯ  ವೀರಬಲ್ಲಾಳನೇ ಮುನ್ನಡೆಸುತ್ತಿದ್ದನು ಎಂದು ಉಲ್ಲೇಖಿಸಿದೆ. ಈ ಕದನದ ಫಲವಾಗಿ ಹೊಯ್ಸಳರು ಏನನ್ನೂ ಲಾಭವಾಗಿ ಪಡೆಯಲಾಗಲಿಲ್ಲ.

ಕಂಪಿಲನು ಏನೇ ಆದರೂ ಸುಮ್ಮನೆ ಕೂರಲಿಲ್ಲ. ಅವನು ಹೊಯ್ಸಳರ ಮೇಲೆ ಆಕ್ರಮಣವನ್ನು ಮಾಡಲು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದನು. ಶಿವಮೊಗ್ಗ ಜಿಲ್ಲೆಯ ದಿನಾಂಕವಿಲ್ಲದ ಕೂಡಲಿಯ ಶಾಸನವೊಂದು ಕಂಪಿಲನ ಹಮ್ಮನ್ನು ನಾಶಮಾಡಲು ವೀರಬಲ್ಲಾಳನೇ ಸ್ವತಹ ಸೈನ್ಯವನ್ನು ಮುನ್ನಡೆಸಿಕೊಂಡು ಅವನು ಕಂಪಿಲದ ಕೇಂದ್ರಸ್ಥಾನವಾದ ಸಿರಗುಪ್ಪೆಯಲ್ಲಿ ಡೇರೆಯನ್ನು ಹಾಕಿದ್ದನು. ಕಂಪಿಲಿಯ ಸೈನ್ಯವು ಶತೃವಿನ ಸೈನ್ಯವನ್ನು ಪ್ರಪಂಚವೇ ಹೊಗಳುವಂತೆ ಯುದ್ಧವನ್ನು ಮಾಡಿತು. ಬಲ್ಲಾಳನು ಬಹುಮಟ್ಟಿಗೆ ಸೋಲಿನ ರುಚಿಯನ್ನು ಕಂಡನು. ಕ್ರಿ.ಶ.1325[57]ರಲ್ಲಿ ಇನ್ನೊಂಡು ಪ್ರಯತ್ನವನ್ನು ಕಂಪಿಲ ದೇಶವನ್ನು ಸಂಪೂರ್ಣವಾಗಿ ಮುಗಿಸಲು ಮಾಡಿದನು. ಈ ಕೊನೆಯ ಯುದ್ಧವು ಈಎರಡು ಬಲಗಳ ನಡುವೆ ನಡೆಯಿತಲ್ಲದೆ ಈ ಯುದ್ಧದಲ್ಲಿ ಮೂರನೆಯ ಬಲ್ಲಾಳನ ಅಧಿಕಾರಿಗಳಾದ ಬೈಚಯ ದಣ್ಣನಾಯಕ ಮತ್ತು ಸಿಂಗಯ್ಯ ದಣ್ಣನಾಯಕರುಗಳು ಭಾಗವಹಿಸಿದ್ದರು.

ಹೊಯ್ಸಳರು ಹೀಗೆ ತಮ್ಮ ಸಾಮ್ರಾಜ್ಯದ ವಿಸ್ತರಣೆಯಲ್ಲಿ ತೊಡಗಿರುವಾಗ ಮಹಮ್ಮದೀಯರು ಮತ್ತೆ ಹೊಯ್ಸಳ ಸಾಮ್ರಾಜ್ಯದ ಮೇಲೆ ತಮ್ಮ ನೆರಳನ್ನು ಚಾಚ–

ತೊಡಗಿದ್ದರು. ಇದು ಹೊಯ್ಸಳರಿಗೆ ಮತ್ತೆ ಅನಿರೀಕ್ಷಿತವಾದದ್ದಾಗಿದ್ದು ಅದು ಭಾವುದ್ದೀನ ಗುರ್ಶಾಸ್ಪ್‌ನ ರೂಪದಲ್ಲಿ ಬಂದಿತು.

ಬಹ–ಉದ್–ದೀನ್‌ನು[58] ದೊರೆ ಘಿಯಾಸುದ್ದೀನ್ ತುಘಲಕನ ಭಾವಮೈದುನನಾಗಿದ್ದು ದಕ್ಷಿಣದಲ್ಲಿ ಗುಲ್ಬರ್ಗ ಪ್ರಾಂತ್ಯದ ಪಕ್ಕದಲ್ಲಿರುವ ಸಾಗರ ಪ್ರಾಂತ್ಯವನ್ನು ಆಳುತ್ತಿದ್ದನು. ಅವನು ತನ್ನ ಸೋದರನು ನೀಡಿದ ಸ್ನೇಹಹಸ್ತವನ್ನು ನಿರಾಕರಿಸಿದನು ಮತ್ತು ಇದರ ಪರಿಣಾಮವಾಗಿ ಇವರಿಬ್ಬರ ನಡುವೆ ಯುದ್ಧವಾಯಿತು. ಇದರಲ್ಲಿ ಬಹಾ–ಉದ್–ದೀನನು ಸೋತು ಕಂಪಿಲದೇವನ ರಕ್ಷಣೆಯನ್ನು ಬೇಡಿದನು. ಯಾವಾಗ ಕಂಪಿಲದೇವನನ್ನು ಅವನು ರಕ್ಷಣೆ ಮಾಡಲಾಗಲಿಲ್ಲವೋ ಆಗ ಅವನನ್ನು ಮೂರನೆಯ  ವೀರಬಲ್ಲಾಳನ ಬಳಿ ಕಳುಹಿಸಲಾಯಿತು ಮತ್ತು ಯಾವುದೋ ಒಂದು ಕಾರಣಕ್ಕಾಗಿ ಅವನನ್ನು ಮಹಮ್ಮದೀಯರ ಸೈನ್ಯಾಧಿಪತಿಗೆ ಒಪ್ಪಿಸಲಾಯಿತು.

ಕ್ರಿ.ಶ.1326–27[59]ರಲ್ಲಿ ಮಹಮ್ಮದೀಯರ ಧಾಳಿಯು ಹೊಯ್ಸಳ ಮೇಲೆ ನಡೆದಾಗ ವೀರಬಲ್ಲಾಳನು ತಕ್ಷಣವೇ ಶರಣಾಗಲಿಲ್ಲ. ಹಾಗಾಗಿ ಅವನ ರಾಜಧಾನಿಯು ನಾಶಪಡಿಸಲ್ಪಟ್ಟಿತು ಎಂದು ರೈಸ್‌ರವರು ಅಭಿಪ್ರಾಯಪಡುತ್ತಾರೆ. ವೀರಬಲ್ಲಾಳನು ಕ್ರಿ.ಶ.1338 ರವರೆಗೂ ದೋರಸಮುದ್ರದಿಂದಲೇ ಆಳುತ್ತಿದ್ದನು ಎಂದು ಶಾಸನಗಳು ಉಲ್ಲೇಖಿಸಿವೆ.

ಇದರ ನಂತರ ಕೆಲವೇ ಶಾಸನಗಳು  ವೀರಬಲ್ಲಾಳನು ದೋರಸಮುದ್ರದಿಂದ ಆಳುತ್ತಿದ್ದನು ಎಂದು ಉಲ್ಲೇಖವನ್ನು ಮಾಡಿವೆ. ಇದಕ್ಕೆ ಕಾರಣವೆಂದರೆ ದೋರಸಮುದ್ರವು ಕೇಂದ್ರಸ್ಥಾನವಾಗಿ ಅದರ ಪ್ರಾಮುಖ್ಯತೆಯನ್ನು ಕಳೆದುಕೊಂಡು ಕೇವಲ ವೀರಬಲ್ಲಾಳನ ಓಡಾಟದ ಸಮಯದ ತಂಗುದಾಣವಾಗಿತ್ತು. ಅವನು ಉತ್ತರ ಹಾಗೂ ದಕ್ಷಿಣದ ಗಡಿಗಳ ಬಗ್ಗೆ ಜಾಗರೂಕನಾಗಿರಬೇಕಿತ್ತು. ಹಾಗಾಗಿ ವಿರುಪಾಕ್ಷ ಪಟ್ಟಣ ಮತ್ತು ತಿರುವಣ್ಣಾಮಲೈ ಇವುಗಳು ವ್ಯೂಹರಚನೆಯ ಸ್ಥಳಗಳಾಗಿದ್ದವು.

ಮೂರನೆಯ  ವೀರಬಲ್ಲಾಳನು ಹೆಚ್ಚು ಕಾಲ ತಿರುವಣ್ಣಾಮಲೈನಲ್ಲೇ ಇದ್ದರೂ ಈ ಪಟ್ಟಣದ ದಕ್ಷಿಣದಿಕ್ಕಿನ ಅವನ ರಾಜಕೀಯವ ಚಟುವಟಿಕೆಗಳು ಅದು ತಿರುವಣ್ಣಾಮಲೈಗಿಂದ ದೂರಕ್ಕೇನಿರಲಿಲ್ಲ. ಮೂರನೆಯ ಬಲ್ಲಾಳನ ಯಾವುದೇ ಶಾಸನಗಳೂ ತಿರುವಣ್ಣಾಮಲೈನ ಪೂರ್ವಕ್ಕಾಗಲೀ ದಕ್ಷಿಣಕ್ಕಾಗಲೀ ದೊರೆತಿಲ್ಲ.

ಮಹಮದ್ ಬಿನ್ ತುಘಲಕನ ನೇತೃತ್ವದಲ್ಲಿನ ಮಹಮ್ಮದೀಯರ ಧಾಳಿಗಳು, ಕಂಪಿಲಿ ರಾಜನಿಂದಾದ ಸಮಸ್ಯೆಗಳು, ಅವನ ಕಣ್ಣಾನೂರು ಕೋಟೆಯನ್ನು ವಶಪಡಿಸಿಕೊಳ್ಳುವ ಆಸೆ ಮತ್ತಿತರ ಅನೇಕ ಸಮಸ್ಯೆಗಳು ಅವನನು ತುಳುವ ದೇಶದ ರಾಜಕೀಯದಿಂದ ದೂರವೇ ಇಟ್ಟಿತು. ಕಂಪಿಲದೇವ ಮತ್ತು ಮಹಮ್ಮದೀಯರ ಸಮಸ್ಯೆಗಳಿಂದ ಒಮ್ಮೆ ಅವನು ದೂರಾದೊಡನೆ ತನ್ನ ಗಮನವನ್ನು ತುಳುವ ದೇಶಕ್ಕೆ ಹರಿಸ ಅಲ್ಲಿ ನೆಲೆ ನಿಂತು ಅವನು ಅಳುಪರ ಸ್ವಾತಂತ್ರವನ್ನು ಕೊನೆಗೊಳಿಸುವುದರಲ್ಲಿ ಮುಕ್ತಾಯವಾಯಿತು. ಅಳುಪರು ಕೊನೆಯವರೆಗೂ ಇವರ ಸಾಮಂತರಾಗೇ ಉಳಿದರು.

ಹೇಗೇ ಇದ್ದರೂ ಕ್ರಿ.ಶ.1333[60] ರ ವೇಳೆಗೆ ಅವನು ತುಳುವ ದೇಶದಲ್ಲಿ ಕನಿಷ್ಠ ಕೆಲವು ಪ್ರದೇಶಗಳಿಗಾದರೂ ದೊರೆಯೆಂದು ಗುರುತಿಸಿಕೊಂಡಿದ್ದ ಎಂದು ಸಾಧಿಸಲು ಮೂರನೆಯ ವೀರಬಲ್ಲಾಳನ ಶಾಸನವು ದೊರಕಿದೆ. ಅವನು "ಪಾಂಡ್ಯ ಚಕ್ರವರ್ತಿ, ಅರಿರಾಯ ಬಸವ ಶಂಕರ" ಮೊದಲಾದ ತುಳುವರ ರಾಜ ಬಿರುದುಗಳನ್ನು ಇಟ್ಟುಕೊಂಡಿದ್ದನು. ಮತ್ತು ತುಳುವ ದೇಶದಲ್ಲಿ ತನ್ನ ಪ್ರತಿನಿಧಿಯಾಗಿ ತನ್ನ ಮುಖ್ಯ ರಾಣಿಯಾದ ಕಿಕ್ಕಯಿ, ಬಿಕ್ಕಯಿ, ಕ್ರಿಶ್ನಯಿ ತಾಯಿ ಮೊದಲಾದ ಹೆಸರುಗಳಿಂದ ಕರೆಸಿಕೊಳ್ಳುವ ಚಿಕ್ಕಾಯಿ ತಾಯಿಯನ್ನು ನೇಮಿಸಿದನು.

ಮೂರನೆಯ ವೀರಬಲ್ಲಾಳನ ಮೂಡಬಿದರೆಯಲ್ಲಿನ ಶಾಸನವು ಇವನ ಪ್ರಾಚೀನವಾದ-ದ್ದೆಂದು ಡೆರ್ರೆಟ್ ಮತ್ತು ಸಾಲೆತೋರ್ ಇವರ ಅಭಿಪ್ರಾಯವಾಗಿದೆ. ಆದರೆ ಡಾ॥ಕೆ.ವಿ.ರಮೇಶ್-ರವರು ಉಡುಪಿ ತಾಲ್ಲೂಕಿನ ಕ್ರಿ.ಶ.1333[61]ರ ನಿಲವಾನದ ಶಾಸನವೇ ಅತ್ಯಂತ ಹಳೆಯದೆಂದು ಖಚಿತಪಡಿಸಿದ್ದಾರೆ. ನಿರುವಾನ ಸಮಿತಿಯ 14 ಜನ ಸದಸ್ಯರು ಒಂದು ಭೂಮಿಯನ್ನು ದುರ್ಗಾ ಭಗವತಿಗೆ ಮಹಾರಾಣಿ ಟಿಕ್ಕಯಿ ತಾಯಿಯಲ್ಲದೇ ವಾಯಿಜಪ್ಪ ದಣ್ಣಾಯಕ ಮತ್ತು ಇತರ ಅಧಿಕಾರಿಗಳ ಸಮ್ಮುಖದಲ್ಲಿ ನೀಡಿದ ಭೂಮಿಯ ದತ್ತಿಯ ಬಗ್ಗೆ ಎಂದು ಈ ಶಾಸನವು ಉಲ್ಲೇಖಿಸುತ್ತದೆ

ಅಳುಪರು ಹೊಯ್ಸಳರ ಸಾಮಂತಿಕೆ ಎಂದರೆ ತಮ್ಮ ಸರ್ವನಾಶ ಎಂದು ಅರ್ಥ ಮಾಡಿಕೊಂಡರು. ಹಾಗಾಗಿ ಅವರು ಹೊಯ್ಸಳರೊಡನೆ ಬಹುಶಃ ರಾಜಿ ಒಪ್ಪಂದವನ್ನು ಮಾಡಿಕೊಂಡಿದ್ದು ಇದನ್ನು ಅಳುಪರು ಒಪ್ಪಿಕೊಂಡಿದ್ದರು ಮತ್ತು ಚಿಕ್ಕಾಯಿ ತಾಯಿಯು ಆ ಸಮಯಗಳಲ್ಲಿ ಆ ಹಳ್ಳಿಯಲ್ಲಿ ಇರುತ್ತಿದ್ದರು.

ಅಳುಪರ ಸೋಯಿದೇವನ ಅಳ್ವಿಕೆಯು ಕ್ರಿ.ಶ.1335ರ ಸುಮಾರಿಗೆ ಕೊನೆಗೊಂಡು ಅಲ್ಲಿಗೆ ಬರಹ ಕನ್ಯಾಪುರದಿಂದ ಆಳುತಿದ್ದ ಕುಲಶೇಖರನು ಅಧಿಕಾರಕ್ಕೆ ಬಂದನು. ಚಿಕ್ಕಾಯಿ ತಾಯಿಯು ಕೂಡ ಅದೇ ಸ್ಥಳದಿಂದ ಆಳ್ವಿಕೆಯನ್ನು ಮಾಡುತಿದ್ದಳು. ಹಾಗಾಗಿ ಅಳುಪರು ಹಾಗು ಚಿಕ್ಕತಾಯಿಯರ ನಡುವೆ ಒಂದು ಒಪ್ಪಂದವು ಏರ್ಪಟ್ಟಿತ್ತು ಎಂದು ಊಹಿಸಬಹುದು.

14ನೇ ಶತಮಾನದ ಮೂರನೆ ದಶಕದ ಸುಮಾರಿಗೆ ಕಾಂಚಿಯು ಹೊಯ್ಸಳ ಸಾಮ್ರಾಜ್ಯದ ಒಂದು ಭಾಗವಾಯಿತು. ವಿದ್ಯಾಚಕ್ರವರ್ತಿಯನ್ ತನ್ನ ರುಕ್ಮಿಣಿ ಕಲ್ಯಾಣದಲ್ಲಿ ಪಾಂಡ್ಯರ, ಕೊಂಗು(ಕಂಕ) ದೊರೆಗಳ, ಕೇರಳ, ಕೊಂಕಣ ಮತ್ತು ಕಾಂಚಿಯ ಮೇಲೆ ಮೂರನೆಯ  ವೀರಬಲ್ಲಾಳನ ಯಶಸ್ಸಿನ ಬಗ್ಗೆ ಬರೆದಿದ್ದಾನೆ. ಮೂರನೆಯ  ವೀರಬಲ್ಲಾಳನ ಶಾಸನಗಳಿಂದ ಮೂರನೆಯ  ವೀರಬಲ್ಲಾಳನು ಕ್ರಿ.ಶ.1295[62] ಮತ್ತು 1335ರಲ್ಲಿ ಕನಿಷ್ಠ ಒಂದು ಬಾರಿಯಾದರು ಕಂಚಿಯಲ್ಲಿದ್ದನೆಂದು ತಿಳಿದರೂ, ಅದು ಆಳ್ವಿಕೆಯ ಪೂರ್ಣ ಕಾಲದಲ್ಲಿಯೂ ಅವನ ವಶದಲ್ಲಿ ಇರಲಿಲ್ಲ. ಕ್ರಿ.ಶ.1315[63]ರವರೆಗೆ ಕೇರಳದ ದೊರೆ ರವಿವರ್ಮನ್ ಕುಲಶೇಖರನು ಅದನ್ನು ವಶಪಡಿಸಿಕೊಂಡಿದ್ದನು. ಆಗ ಅದನ್ನು ವಶ ಪಡಿಸಿಕೊಂಡಿದ್ದ ವೀರ ಪಾಂಡ್ಯನಿಂದ ಉಂಟಾಗುತಿದ್ದ  ನಿರಂತರ ತೊಂದರೆಗಳಿಂದಾಗಿ ಅವನು ಕಾಂಚಿಯಿಂದ ಹಿಂದೆ ಸರಿದನು. ಆದರೆ ಮೂರನೆಯ ವೀರಬಲ್ಲಾಳನ ಅಧಿಕಾರವನ್ನು ಖಂಡಿತವಾಗಿಯೂ ಕಾಂಚಿಯ ಸುತ್ತಮುತ್ತಲೂ ಗುರುತಿಸಿದ್ದು ಮತ್ತು ಸ್ಥಳೀಯ ಮುಖ್ಯಸ್ಥರು ಅವನ ಆಧಿಪತ್ಯವನ್ನು ಒಪ್ಪಿಕೊಂಡಿದ್ದರು. ಮಧುರಾದ ಸುಲ್ತಾನರು ಅಲ್ಲಿಗೆ ಬಂದನಂತರ ಮೂರನೆಯ ವೀರಬಲ್ಲಾಳನು ಹೆಚ್ಚಿನ ಕಾಲ ತಿರುವಣ್ಣಾಮಲೈನಲ್ಲೇ ಇದ್ದನು ಮತ್ತು ಮಹಮದೀಯರ ವಿರುದ್ಧದ ಕಾರ್ಯಾಚರಣೆಗಳಿಗೆ ಕೇಂದ್ರಸ್ಥಾನವಾಗಿತ್ತು. ಬಹುಶಃ ಈ ಸಮಯದಲ್ಲಿ ಅವನು ಕಾಂಚಿಯೊಂದಿಗೆ ಹೆಚ್ಚು ಪರಿಚಿತನಾಗಿದ್ದನು. ಬಹುಶಃ ಪೂರ್ವದಿಕ್ಕಿನಲ್ಲಿ ಉಂಟಾದ ತೊಂದರೆಯು ಅವನನ್ನು ಕಾಂಚಿಗೆ ಬರುವಂತೆ ಮಾಡಿತ್ತು. ಕ್ರಿ.ಶ.1335[64]ರ ಅರುಳಾಲ ಪೆರುಮಾಳ್ ದೇವಾಲಯದ ಒಂದು ಶಾಸನವು ಹೊಯ್ಸಳ ಚಕ್ರವರ್ತಿಯು ವಿದ್ಯಾಂಸರಿಗೆ ಮತ್ತುಕವಿಗಳಿಗೆ ಧಾರಾಳವಾಗಿ ದಾನಗಳನ್ನು ಮಾಡಿದನೆಂದು ಉಲ್ಲೇಖಿಸುತ್ತದೆ.

ಟಿಕ್ಕ ಕೊಂಜಿವರಂನಲ್ಲಿ ಹೊಯ್ಸಳ ದೊರೆಗಳ ಇನ್ನು ಕೆಲವು ಶಾಸನಗಳಿವೆ.[65] ಈ ಎಲ್ಲಾ ಶಾಸನಗಳೂ ಅವನ ವೈಷ್ಣವ ಭಕ್ತಿಯ ಬಗ್ಗೆ ತಿಳಿಸುತ್ತದೆ. ಅವನ ಹಿಂದಿನವರಂತೆ ಮೂರನೆಯ ವೀರಬಲ್ಲಾಳನೂ ವೈಷ್ಣವ ಧರ್ಮದ ದೊಡ್ಡ ಅನುಯಾಯಿಯಾಗಿದ್ದನು.

ಚಿತ್ತೂರು ಜಿಲ್ಲೆಯ ಕಾಂಚಿಪುರಂನ ಕಾಮಾಕ್ಷಿದೇವಾಲಯದ ರಾಶಿಗೋಪುರದ ಎಡ ಗೋಡೆಯ ಮೇಲೆ ಒಂದು ಶಾಸನವಿದ್ದು ಪ್ರಶಸ್ತಿಗಳಾಗಿ ಅದನ್ನು ವಿಂಗಡಿಸಿದ್ದು ಅದು ವೀರಬಲ್ಲಾಳ ಪ್ರಶಸ್ತಿ ಎಂದು ಪ್ರಸಿದ್ಧವಾಗಿದೆ. ಅದು ಮೂರನೆಯ ವೀರಬಲ್ಲಾಳನ ಆಸ್ಥಾನ ಕವಿಯಾದ ವಿದ್ಯಾ ಚಕ್ರವರ್ತಿನ್‌ನಿಂದ ರಚಿಸಲ್ಪಟ್ಟಿದ್ದಾಗಿದೆ. ಅವನು ತನ್ನ ರಚನೆಯನ್ನು ವಲ್ಲಾಳ ಗುಣಾಷ್ಟವ ಎಂದು ಕರೆದಿದ್ದಾನೆ. ಇದು ಎರಡನೆ ವೀರಬಲ್ಲಾಳ ಮತ್ತು ದಕ್ಷಿಣ ಪರ್ಯಾಯ ದ್ವೀಪದ ಇತರ ಸಮಕಾಲೀನ ರಾಜರ ನಡುವೆ ಇದ್ದ ಸಂಬಂಧಗಳ ಬಗ್ಗೆ ಬರೆದಿದೆ.

ಮಳವಳ್ಳಿ ತಾಲ್ಲೂಕಿನ ಕ್ರಿ.ಶ.1334[66]ರ ಶಾಸನದಲ್ಲಿ ವೀರಬಲ್ಲಾಳನು ಕಾಂಚಿ ಕಾಂಚನವು ಕಂದಿ ಊರಿಗೆ, ಕಾಡವ ಕುಟುಂಬಕ್ಕೆ ಕಣ್ಣು ಕೋರೈಸುವ ಕನ್ನಡಿಯೆಂದು ವರ್ಣಿಸಿ ಎಂದು ಹೇಳಿದ್ದಾನೆ. ಅವನ ಪ್ರದೇಶಗಳ ಅಕ್ಕಪಕ್ಕದಲ್ಲಿದ್ದ ಕೊಂಗು ಮಂಡಲಂನ ಭಾಗಗಳು ನಿಜವಾಗಿ ಮೃತ್ಯುದೇವರಾಗಿದ್ದವು. ಕೊಯಂಬತ್ತೂರು ಜಿಲ್ಲೆಯ ಧರ್ಮಪುರಂ ತಾಲ್ಲೂಕಿನಲ್ಲೂ ಸಹ ಅವನ ಕೆಲವು ಶಾಸನಗಳನ್ನು ಕಾಣಬಹುದು. ದಕ್ಷಿಣದಿಂದ ಮಹಮದೀಯರನ್ನು ಓಡಿಸುವ ಅವನ ಮುಂದಿನ ಯೋಜನೆಗಳಿಗೆ ಈ ಪ್ರದೇಶಗಳ ಮೇಲೆ ಅವನು ಹೊಂದಿದ್ದ ಹಿಡಿತವು ನಿಜಕ್ಕೂ ಮುಖ್ಯ ಪಾತ್ರವನ್ನು ವಹಿಸಲು ಕಾರಣವಾಗಿತ್ತು.

ಮೂರನೆಯ ವೀರಬಲ್ಲಾಳನು ದಕ್ಷಿಣದಲ್ಲಿ ಕಾರ್ಯಪ್ರವೃತ್ತನಾಗಿದ್ದಾಗ ಸಂತಾರ ದೇಶದಲ್ಲಿ ಒಂದು ಗೊಂದಲವು ಉಂಟಾಯಿತು ಮತ್ತು ಅವನು ಸೈನ್ಯಾಧಿಪತಿ ಕಾಮೆಯ ನಾಯಕನ ಮುಂದಾಳತ್ವದಲ್ಲಿ ಒಂದು ಸೈನ್ಯವನ್ನು ಕಳುಹಿಸಿದನು. ಈ ಸೈನ್ಯವು ಕುಪ್ಪೆಗೆ ಹೋಗಿ ಸಂತಾರರ ಮೇಲೆ ಆಕ್ರಮಣವನ್ನು ಮಾಡಿತು. ಜಿಡುವಳಿಗೆ ನಾಡಿನಲ್ಲಿ ಒಂದು ಯುದ್ಧವು ಜರುಗಿತು ಮತ್ತು ಅದರಲ್ಲಿ ಹಲವರು ಮಡಿದರು.

ಹೀಗೆ ವೀರಬಲ್ಲಾಳನು ದಕ್ಷಿಣದ ಗಡಿಗಳನ್ನು ಸುರಕ್ಷಿತವಾಗಿಸಿಕೊಳ್ಳುತ್ತಿರುವಾಗ ಮತ್ತು ಆಂತರಿಕ ಕಲಹವನ್ನು ನಿವಾರಿಸಿಕೊಳ್ಳುತ್ತಿರುವಾಗ ಆವನಿಗೆ ಇನ್ನೂ ಹೆಚ್ಚಿನ ಜವಾಬ್ದಾರಿಯು ವಿನಾಶಕಾರೀ ಪ್ರವೃತ್ತಿಯುಳ್ಳ ಮಹಮ್ಮದೀಯರ ಧಾಳಿಯಿಂದ ಉತ್ತರದ ಗಡಿಗಳನ್ನು ರಕ್ಷಿಸಿಕೊಳ್ಳುವುದಾಗಿತ್ತು. ಈ ನಿಟ್ಟಿನಲ್ಲಿ ಅವನು ಆ ಸಂದರ್ಭಕ್ಕೆ ಸರಿಯಾಗಿ ಹೊಂದಿಕೊಂಡು ಅತ್ಯುತ್ತಮವಾಗಿ ಪರಿಸ್ಥಿತಿಯನ್ನು ನಿಭಾಯಿಸಿದನು. ಮಹಮ್ಮದೀಯರು ಮುಬಾರಕ್ ಖಿಲ್ಜಿಯ ಮುಂದಾಳತ್ವದಲ್ಲಿ ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ಅಂದರೆ ದೇವಗಿರಿ, ಮಧ್ವನ, ಕಣ್ಣಾನೂರು ಇತ್ಯಾದಿಗಳಲ್ಲಿ ತಮ್ಮ ದಂಡಾನ್ನು ಇರಿಸಿದರು. ಪಾಂಡ್ಯರು ಮಹಮ್ಮದೀಯರ

ಧಾಳಿಯನ್ನು ನಿಲ್ಲಿಸಲು ಅಸಮರ್ಥರಾಗಿದ್ದರು ಮತ್ತು ಹಾಗಾಗಿ ತಮ್ಮ ವಿನಾಶವನ್ನು ಅವರೇ ತಂದುಕೊಂಡರು.

ಘಿಯಾಸುದ್ದೀನನ ಮರಣಾನಂತರ ಸಿಂಹಾಸನವನ್ನೇರಿದ ಮೊಹಮ್ಮದ್ ಬಿನ್ ತೊಘಲಕನು ತನ್ನ ಸುತ್ತಲಿನ ತೊಂದರೆಗಳಿಂದ ದೂರದೇಶದ ಕಡೆ ಹೆಚ್ಚಿನ ಗಮನವನ್ನು ಕೊಡಲಾಗಲಿಲ್ಲ. ದಂಗೆಕೋರನಾದ ಬಹ-ಉದ್-ದೀನ್‌ಗುರ್‌ಶಾಸ್ಪನು ಅನೇಕ ಸಮಸ್ಯೆಗಳನ್ನು ತಂದೊಡ್ಡಿದನು. ಇದರ ಜೊತೆಗೆ ಮೊಘಲರು ಅವನಿಗೆ ನಿರಂತರ ಸಮಸ್ಯೆಯ ಮೂಲ-ವಾಗಿದ್ದರು. ಇನ್ನೊಂದು ಕಡೆಯಿಂದ ಮೂರನೆಯ ವೀರಬಲ್ಲಾಳನು ತನ್ನ ತಿರುವಣ್ಣಾಮಲೈ-ನಲ್ಲಿನ ಇರುವಿಕೆಯಿಂದ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಮದುರ ಮತ್ತು ದೇವಗಿರಿಯಲ್ಲಿರುವ ದೆಹಲಿಯ ಪ್ರತಿನಿಧಿಗಳ ನಡುವೆ ಅಡ್ಡಗೋಡೆಯಂತಿದ್ದನು.

ದಂಗೆಕೋರನಾದ ಜಲಾಲುದ್ದೀನನ ಕಾರಣವಾಗಿ ಮದುರಾದ ಸುಲ್ತಾನನು ಕ್ರಿ.ಶ.೧೩೩೫[67] ನೆಲೆಯಾದನು. ಹೊಯ್ಸಳ ರಾಜನು ಮೊಹಮ್ಮದೀಯರ ಶಕ್ತಿಯ ಬಗ್ಗೆ ಗಮನವನ್ನು ಕೊಡದೇ ಇದ್ದಲ್ಲಿ ಅವರಿಗೆ ಇದು ಪ್ರಾಣಾಂತಿಕವದ ಅಪಾಯವನ್ನು ತರುತ್ತಿತ್ತು. ಅವನು ಮದುರಾದ ಸುಲ್ತಾನರ ವಿರುದ್ಧ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಳ್ಳ ತೊಡಗಿದನು. ಅವನು ತೆಲಗು ಸಾಮ್ರಾಜ್ಯದ ಪ್ರತಾಪರುದ್ರನ ಕಪಯನಾಯಕ ನೊಡನೆ ಕೈಜೋಡಿಸಿ ದೇವಗಿರಿಯ ಕೋಟೆಯ ಮೇಲೆ ಧಾಳಿ ಮಾಡಿದನು. ಈಗಾಗಲೇ ತಿಳಿಸಿದಂತೆ ಮಹದೀಯರು ಮಲ್ಲಿಕ್ ಮಕಬೂಲನ ಅಡಿಯಲ್ಲಿ ಒಂದು ಸೈನ್ಯವನ್ನು ಇರಿಸಿದ್ದು ಹೊಯ್ಸಳ ಮತ್ತು ಕಪಯನಾಯಕರ ಜಂಟಿ ಸೈನ್ಯವು ಅಲ್ಲಿಂದ ಹೊಡೆದೋಡಿಸಿತು. ಅಲ್ಲಿಂದ ಅವರು ಜೊತೆಯಾಗಿ ಮುಂದೆ ನಡೆದು ತೊಂಡೈಮಂಡಲಕ್ಕೆ ತಲುಪಿ ಅಲ್ಲಿದ್ದ ಮಹಮದೀಯ ಸೈನ್ಯವನ್ನು ಸೋಲಿಸಿ ಓಡಿಸಿದರು. ಅದನ್ನು ಸಾಂಬುವರಾಯಸನ ಆಳ್ವಿಕೆಯಲ್ಲಿ ಇರಿಸಲಾಯಿತು.

ತಿರುವಮುತ್ತಯ್ಯ ಒಂದು ಶಾಸನದಂತೆ ಬಹುಶ; ಸಕಲಲೋಕ ಚಕ್ರವರ್ತಿನ್ ವೆನ್ರು ಮನ್ ಕೊಂಡ ಸಾಂಬವರಾಯರ್‌ನು ಮಹಮದೀಯರಿಂದ ಧಾಳಿಗೆ ಒಳಗಾದಾಗ ವೀರಬಲ್ಲಾಳ ಮತ್ತು ಕಪಯ ದಣ್ಣಾಯಕರು ಅವನ ಸಹಾಯಕ್ಕೆ ಹೋಗಿದ್ದರು. ಆಗ ಸಾಂಬುವರಾಯನು ತನ್ನ ಕೆಲವು ಪ್ರದೇಶಗಳನ್ನು ಕಳೆದು ಕೊಂಡಿದ್ದನು ಎನಿಸುತ್ತದೆ ಮತ್ತು ಹೊಯ್ಸಳರ ಸಹಾಯದಿಂದ ಅವುಗಳನ್ನು ಮತ್ತೆ ವಶಪಡಿಸಿ ಕೊಂಡನು. ಸಾಂಬುವರಾಯನನ್ನು

ಅಧಿಕಾರದಲ್ಲಿ ಸ್ಥಾಪಿಸುವ ಕಾರ್ಯದ ಬಲ್ಲಾಳನ ಪಾತ್ರಕ್ಕಾಗಿ ಅವನು ಮದುರಾದ ಮಹಮದೀಯರಿಂದ ತೊಂದರೆಗಳ ಸರಮಾಲೆಯನ್ನೇ ಎದುರಿಸಬೇಕಾಯಿತು.

ಎರಡು ಪ್ರಬಲ ಶಕ್ತಿಗಳ ವಿರುದ್ಧ ಸಿಕ್ಕಿಬಿದ್ದ ವೀರಬಲ್ಲಾಳನು ತನ್ನ ವಿನಾಶವನ್ನು ತಪ್ಪಿಸಿಕೊಳ್ಳಲು ದಕ್ಷಿಣದ ಎಲ್ಲಾ ಶಕ್ತಿಗಳನ್ನು ಒಗ್ಗೂಡಿಸಿ ಒಂದೇ ವೇದಿಕೆಯಲ್ಲಿ ತರಬೇಕಾಗಿತ್ತು. ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯು ಒಂದು ಮುಖ್ಯವಾದ ಘಟ್ಟವೆಂದು ಗುರುತಿಸಿಕೊಂಡಿದೆ. ಈ ಸಾಮ್ರಾಜ್ಯವು ದಕ್ಷಿಣ ಭಾರತವನ್ನು ಮಹಮದೀಯರ ಹಿಡಿತದಿಂದ ತಪ್ಪಿಸಲು ಮೊದಲೇ ನಿರ್ಧರಿಸಿದಂತೆ ಒಂದು ಮುಖ್ಯ ಪಾತ್ರವನ್ನು ವಹಿಸ-ಬೇಕಾಯಿತು. ಈ ಸಾಮ್ರಾಜ್ಯದ ದೊರೆಗಳು ವೀರಬಲ್ಲಾಳನು ಪ್ರಾರಂಭಿಸಿದ ಕಾರ್ಯವನ್ನು ಮುಗಿಸಿದರು. ವಿಜಯನಗರದ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವು ವಿದ್ಯಾಂಸರಿಗೆ ಒಂದು ಪಂಥಾಹ್ವಾನವಾಗಿದ್ದು ಈ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವಾದವರು ಯಾರು ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ. ಹೇಗೆ ಆದರೂ ವಿಜಯನಗರ ಸಾಮ್ರಾಜ್ಯವು ಒಂದು ಕಡೆಯಿಂದ ಹೊಯ್ಸಳರ ಜೊತೆ ಸೇರಿದ್ದರೆ ಇನ್ನೊಂದು ಕಡೆಯಿಂದ ಮಹಮದೀಯರ ಜೊತೆಯಲ್ಲಿತ್ತು. ದಕ್ಷಿಣ ಭಾರತದ ರಾಜಕೀಯ ಸ್ತರದಲ್ಲಿ ಹರಿಹರನ ಪ್ರವೇಶದ ಸರಿಯಾದ ಸಮಯವನ್ನು ಗುರುತಿಸುವುದು ಬಹಳ ಕಷ್ಟ. ಕ್ರಿ.ಶ.1328[68]ರ ಚಿತ್ರದುರ್ಗದ ಒಂದು ಶಾಸನವು ಅಧಿಕಾರಿಗಳ ಒಂದು ಪಟ್ಟಿಗೆ ಸಂಬಂದಿಸಿದ್ದು ಅದರಲ್ಲಿ ಕುಥೋರ ಹೀರ ಎಂಬ ಒಂದು ಹೆಸರಿದ್ದು ಅದನ್ನು ವಿಜಯನಗರ ಸಾಮ್ರಾಜ್ಯದ ಹರಿಹರನೊಂದಿಗೆ ಕೆಲವರು ಗುರುತಿಸಿದ್ದಾರೆ. ಈ ಶಾಸನದಲ್ಲಿ ಉಲ್ಲೇಖವಾದ ಇತರ ಅಧಿಕಾರಿಗಳೆಂದರೆ ಭೀಮರಾಯ, ಸಿಂಹ ರಘುನಾಥ, ಕಾಳಮೇಘ, ಬಳ್ಳಪ್ಪ, ಮತ್ತು ಸಿಂಗಯ್ಯ ದಣ್ಣಾಯಕ.

ಫೆರಿಸ್ತನ್‌ನು ಕೃಷ್ಣನಾಯಕ್ ಮತ್ತು ಬಲ್ಲಾಳ ದೇವರು ಒಟ್ಟಾಗಿ ಶತ್ರುವನ್ನು ಎದುರಿಸಲು ತೀರ್ಮಾನಿಸಿದರು ಮತ್ತು ಇದರ ಪರಿಣಾಮವಾಗಿ ತನ್ನ ಮಗ ಬೀಜನ ಹೆಸರಿನಲ್ಲಿ ಉತ್ತರದಲ್ಲಿ ಬೀಜನುಗ್ಗೂರನ್ನು ಕಟ್ಟಿದನು. ಇದು ಸಾಮಾನ್ಯವಾಗಿ ಹಂಪಿಯೊಂದಿಗೆ ಗುರುತಿಸಿಕೊಳ್ಳುತ್ತದೆ.

ಕ್ರಿ.ಶ.1336[69]ರಲ್ಲಿ ಬೌರಿಂಗ್ ಪೇಟೆ ತಾಲೂಕಿನಲ್ಲಿ ವಿಜಯನಗರ ದೊರೆಗಳ ಮೊದಲಿನ ಶಾಸನಗಳು ದೊರೆಯುತ್ತವೆ. ಹರಿಹರನು ತನ್ನ ಪಟ್ಟಾಭಿಷೇಕವಾದ ಕೂಡಲೆ ಅನೇಕ ದಾನಗಳನ್ನು ನೀಡಿದ್ದಾನೆ ಎನಿಸುತ್ತದೆ. ಹೊಯ್ಸಳ ಸಾಮ್ರಾಜ್ಯದ ಉತ್ತರದ ಪ್ರದೇಶಗಳನ್ನು ಬಲಪಡಿಸುವ ಪ್ರಯತ್ನದ ಪರಿಣಾಮವಾಗಿ ವಿಜಯನಗರ ಸಾಮ್ರಾಜ್ಯದ ಜನನವಾಯಿತು.

ಉತ್ತರದಲ್ಲಿ ಒಂದು ನಗರದ ಸ್ಥಾಪನೆಯಾದ ನಂತರ ಬಲ್ಲಾಳನು ದಕ್ಷಿಣಕ್ಕೆ ತನ್ನ ಚಟುವಟಿಕೆಯನ್ನು ಸುರಕ್ಷಿತವಾಗಿ ನಡೆಸಲು ಅನುಕೂಲವಾಯಿತು. ಅವನು ಈಗಾಗಲೇ ತಿರುವಣ್ಣಾಮಲೈನ ಪೂರ್ವ ಭಾಗಗಳನ್ನು ವಶ ಪಡಿಸಿಕೊಂಡಿದ್ದನು. ಇದು ಅವನು ಕ್ರಿ.ಶ.1337ರ ಜನವರಿಯ ಮೊದಲ ಭಾಗದಲ್ಲಿ ಅವನ ಕೆಲವು ದಣ್ಣಾಯಕರೊಡನೆ ಸೇರಿ ಮಾಡಿದ ದಂಡಯಾತ್ರೆಯನ್ನು ಒಂದು ಶಾಸನವು ತಿಳಿಸುತ್ತದೆ. ಬಹುಶಃ ಇದು ಅವನು ತಿರುವಣ್ಣಾಮಲೈಗೆ ಹಿಂತಿರುಗಿದ ನಂತರ ಆಗಿರಬೇಕು.

ಕೊಯಮತ್ತೂರು ಜಿಲ್ಲೆಯ ಧರ್ಮಪುರಂ ತಾಲ್ಲೂಕಿನ ಕೆಲವು ಭಾಗಗಳು ವೀರಬಲ್ಲಾಳನ ವಶದಲ್ಲಿದ್ದವು ಎಂದು ಅವನ ಮೂಲ ಶಾಸನಗಳಿಂದ ಮತ್ತು ಅದೇ ಜಿಲ್ಲೆಯ ಪೊಲ್ಲಾಚಿ ತಾಲ್ಲೂಕಿನ ಭಾಗವು ಮೂರನೆ ವೀರಬಲ್ಲಾಳನ ಸಾಮಂತತನಕ್ಕೆ ಒಳಗಾಗಿತ್ತು ಎಂಬುದು ಕ್ರಿ.ಶ.1338ರ ಒಂದು ಶಾಸನದಿಂದ ವಿದಿತವಾಗಿದೆ.

ಕ್ರಿ.ಶ.1338[70]ರಲ್ಲಿ ಮೂರನೆ ವೀರಬಲ್ಲಾಳನು ಬಾರಕೂರಿಗೆ ಭೇಟಿ ನೀಡಿ ಅಲ್ಲಿ ತನ್ನ ಒಂದು ಸೈನ್ಯವನ್ನು ನಿಲ್ಲಿಸಿದನು. ಇದು ಅವನ ಸೈನ್ಯವನ್ನು ಪರೀಕ್ಷೆ ಮಾಡಲು ಆಗಿತ್ತು ಮತ್ತು ಅಂಕಯ್ಯನಾಯಕನು ಅಲ್ಲಿ ಇರಲು ಒಪ್ಪಿದಾಗ ಅವನು ಸಂತೋಷದಿಂದ ಅಂಕಯ್ಯನಾಯಕನಿಗೆ ದಾನದತ್ತಿಗಳನ್ನು ನೀಡಿದನು. ಇದು ಸ್ವಲ್ಪ ಮುಂದಿನ ಶಾಸನದಿಂದ ಗೊತ್ತಾಗಿದ್ದು ಅದು ಮೂರನೆ ವೀರಬಲ್ಲಾಳನು ಕೋಟೇಶ್ವರ ದೇವರಿಗೆ ಕೆಲವು ದಾನಗಳನ್ನು ನೀಡಿದ್ದ ಬಗ್ಗೆ ಉಲ್ಲೇಖವಿದೆ.

ಮೂರನೆ ವೀರಬಲ್ಲಾಳನು ವಿಜಯವಿರೂಪಾಕ್ಷದೆಡೆಗೆ ದೋರಸಮುದ್ರದ ಮೂಲಕ ಪ್ರಯಾಣಿಸಿದನು. ಅವನು ಬಹುಶಃ ಮರುವರುಷ ಮಾಡಬೇಕಾದ ತನ್ನ ಮಗ ನಾಲ್ಕನೇಯ ವಿರುಪಾಕ್ಷ ಬಲ್ಲಾಳನ ಪಟ್ಟಾಭಿಷೇಕ ಮಹೋತ್ಸವದ ಉದ್ದೇಶದಿಂದ ಹೋದನು. ಅದೇ ವರ್ಷದ ಅಂದರೆ ಕ್ರಿ.ಶ.1339ರಲ್ಲಿ ಅವನು ಸಾಮ್ರಾಜ್ಯವನ್ನು ಹೊಸನಾಡಿನಿಂದ ಅಂದರೆ ಉತ್ತರದಲ್ಲಿ ಹೊಸದಾಗಿ ಸ್ಥಾಪಿತವಾದ ರಾಜಧಾನಿಯಿಂದ ಆಳುತಿದ್ದನು ಎಂದು ಇನ್ನೊಂದು ಶಾಸನದಲ್ಲಿ ಉಲ್ಲೇಖಿಸಿದೆ. ಕ್ರಿ.ಶ.1340ರ ವೇಳೆಗೆ ಅವನು ಮತ್ತೆ ದೋರಸಮುದ್ರದಲ್ಲಿ ಇರುತ್ತಿದ್ದ. ಆಶ್ಚರ್ಯಕರ ಸಂಗತಿ ಎಂದರೆ ಮೂರನೆಯ ವೀರಬಲ್ಲಾಳನು ಯಾವುದೇ ಒಂದು ಸ್ಥಳ ದಲ್ಲಿ ದೀರ್ಘಕಾಲ ಅದರಲ್ಲೂ ವಿಶೇಷವಾಗಿ ತನ್ನ ರಾಜಧಾನಿಯ ಮೇಲೆ ಮಹಮದೀಯರ ಧಾಳಿಯಾದ ನಂತರ ಇರುತ್ತಿರಲಿಲ್ಲ. ದಾವಣಗೆರೆ ತಾಲ್ಲೂಕಿನ ಕ್ರಿ.ಶ.1340ರ ಒಂದು

ಶಾಸನದಂತೆ ಅವನು ಕೇವಲ ಕೆಲವೇ ತಿಂಗಳ ನಂತರ ಮಲ್ಲಪಟ್ಟಣ ಎಂಬ ಊರಲ್ಲಿ ಇರುತ್ತಿದ್ದನು.

ಪಟ್ಟಾಭಿಷೇಕ ಮಹೋತ್ಸವವು ಮೂರನೇ ವಿರಬಲ್ಲಾಳನ ಮೇಲೆ ಹೇಳಿದ ಕೆಲಸ ಕಾರ್ಯಗಳ ನಂತರ ನಡೆದಿರಬೇಕು. ಆ ವರ್ಷದ ಕೊನೆಯ ಭಾಗದಲ್ಲಿ ಪಟ್ಟಾಭಿಷೇಕ ಮಹೋತ್ಸವವನ್ನು ನಡೆಸಲಾಯಿತು. ಆ ಶಾಸನವು 'ರಾಜ್ಯಂಗೈಯ್ಯುತ್ತವಿರೆ ರಾಜ್ಯಾಭಿಷೇಕವಂ' ಮಾಡಿ ಎಂದು ಉಲ್ಲೇಖಿಸುತ್ತದೆ. ಕೆಲವು ವಿದ್ವಾಂಸರು ಹೇಳುವಂತೆ ಹಂಪಿಯಲ್ಲಿ ಪಟ್ಟಾಭಿಷೇಕ ಮಹೋತ್ಸವವು ನೆರೆವೇರಿತು ಎಂಬುದಕ್ಕೆ ಯಾವುದೆ ಆಧಾರವಿಲ್ಲ ಎಂದು ಶ್ರೀ ಎಂ.ವಿ.ಕೃಷ್ಣರಾವ್‌ರವರು ಅಭಿಪ್ರಾಯ ಪಡುತ್ತಾರೆ. ಆದರೆ ಡೆರೆಟ್‌ರವರು ಈ ಉತ್ಸವವು ತಿರುವಣ್ಣಾಮಲೈನಲ್ಲಿ ನಡೆಯಿತು ಎಂದು ನಂಬುತ್ತಾರೆ.

ಪರಿಸ್ಥಿತಿಗಳು ವೀರಬಲ್ಲಾಳನ ಹಿಡಿತಕ್ಕೆ ನಿಧಾನವಾಗಿ ಬರುತ್ತಿರುವಾಗ ಸಿಂಹಾಸನಕ್ಕಾಗಿ ಮದುರಾನಲ್ಲಿ ತಳಮಳಗಳು ಉಂಟಾದವು. ಮದುರಾದ ದೊರೆಯಾದ ಜಲಾಲುದ್ದಿನ್ ಅಹಸಾನ್ ಶಾನು ಅವನ ಒಬ್ಬ ಅಧಿಕಾರಿಯಿಂದ ಕ್ರಿ. ಶ.1340ರಲ್ಲಿ ಕೊಲೆಯಾದನು ಮತ್ತು ಅಲ್ಲಾವುದ್ದೀನ್ ಉದಯ್‌ಜಿಯು ಶ್ರೇಷ್ಠ ಬಿರುದುಗಳನ್ನು ಇಟ್ಟುಕೊಂಡು ಅಧಿಕಾರಕ್ಕೆ ಬಂದನು. ಕ್ರಿ.ಶ.1341ರಲ್ಲಿ ಅವನು ರಾಜದ್ರೋಹಿಗಳ ವಿರುದ್ಧ ಸತತವಾಗಿ ಯುದ್ಧವನ್ನು ಮಾಡುತ್ತಿರುವಾಗ ಒಬ್ಬ ಅಪರಿಚಿತನ ಬಾಣಕ್ಕೆ ಸಿಕ್ಕಿಕೊಂಡನು.

ಕೆ.ಎ.ನೀಲಕಂಠ ಶಾಸ್ತ್ರಿಗಳ ಅಭಿಪ್ರಾಯದಂತೆ ಮದುರಾದ ಸುಲ್ತಾನರ ಪ್ರಜೆಗಳು ಎಂದಿಗೂ ತುರ್ಕಿಗಳ ಜೊತೆಗೆ ಸಹಕರಿಸಲಿಲ್ಲ. ಅವರು ಹೊಯ್ಸಳರಂತಹ ನೆರೆಯ ಶಕ್ತಿಗಳು ಮಹಮ್ಮದೀಯರನ್ನು ಅಧಿಕಾರದಿಂದ ಕೆಳಗಿಳಿಸಲು ಸತತ ಪ್ರಯತ್ನವನ್ನು ಮಾಡುತ್ತಿದ್ದರು. ಹೊಯ್ಸಳರಿಗೂ ಮತ್ತು ಮದುರಾದ ಸುಲ್ತಾನರಿಗೂ ಸತತವಾಗಿ ಈ ಹಿಂದೆ ಪಾಂಡ್ಯರಿಗೂ ಹೊಯ್ಸಳರ ಸೈನ್ಯಕ್ಕೂ ನಡೆದ ಯುದ್ಧದ ಸ್ಥಳವಾದ ಕಾವೇರಿ–ಕೊಲೆರೋನ್‌ನ ಉದ್ದಕ್ಕೂ, ಘರ್ಷಣೆಗಳಾಗುತ್ತಿದ್ದವು. ಪಾಂಡ್ಯರು ಬೃಹತ್ತಾದ ಶಕ್ತಿಯಾಗಿದ್ದು ಅದರಿಂದ ಕ್ರಮೇಣ ಬಲಹೀನರಾದ ನಂತರ ಮಹಮ್ಮದೀಯರು ಮದುರಾ, ಕಣ್ಣಾನೂರು ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡ ನಂತರ ಹೊಯ್ಸಳರ ವೀರಬಲ್ಲಾಳನು ಮದುರಾಕ್ಕೆ ದಾರಿಯಾಗಿರುವ ಕಣ್ಣಾನೂರು ಕೋಟೆಯನ್ನು ಪುನಃ ವಶಪಡಿಸಿಕೊಳ್ಳುವುದಕ್ಕೆ ಎಲ್ಲ ಒತ್ತಡಗಳನ್ನು ಹಾಕುತ್ತಲೇ ಇದ್ದನು.

1340–43ರ ಅವಧಿಯು ದಕ್ಷಿಣ ಭಾರತದ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಘಟ್ಟವಾಗಿದೆ. ಈಗ ಅನೇಕ ಬದಲಾವಣೆಗಳು ಆ ಸ್ಥಳದಲ್ಲಿ ನಡೆಯಲು ಆಯೋಜನೆಯಾಗಿತ್ತು. ಮೂರನೆಯ ವೀರಬಲ್ಲಾಳನು ಒಂದು ಮಹತ್ವದ ಕಾರ್ಯದಲ್ಲಿದ್ದು ಮದುರಾದ ಸುಲ್ತಾನರಿಗೆ ಮರಣಾಂತಿಕವಾದ ಹೊಡೆತವನ್ನು ಕೊಡಲು ಎಲ್ಲ ಸಿದ್ಧತೆಗಳನ್ನೂ ಮಾಡುತ್ತಿದ್ದನು. ಅವನು ತಿರುವಣ್ಣಾಮಲೈನಲ್ಲೇ ಇದ್ದನು. ಅವನು ಈ ಯೋಜನೆಯಲ್ಲಿ ಏನಾದರೂ ಲೋಪವಾದರೆ ಅದು ಹೊಯ್ಸಳ ಸಾಮ್ರಾಜ್ಯಕ್ಕೆ ವಿನಾಶಕರ ಎಂಬುದನ್ನು ಅರಿತಿದ್ದ ಅವನು ಯಾವುದೇ ತೊಂದರೆಯನ್ನು ಎದುರಿಸಲು ಸಿದ್ಧನಾಗಿರಲಿಲ್ಲ. ಅವನು ಬಹುಶಃ ಈ ಎಲ್ಲ ಕಾಲವನ್ನೂ ಸಿದ್ಧತೆಗಾಗಿ ಬಳಸಿದ್ದನು.

ಕ್ರಿ.ಶ.1341ರಲ್ಲಿನ ಮಾಲೂರಿನ ಶಾಸನವೊಂದರಲ್ಲಿ ಉಲ್ಲೇಖವಾಗಿರುವುದರ ಪ್ರಕಾರ ಮೂರನೆಯ ವೀರಬಲ್ಲಾಳನ ಹೊರಬಿರುದಾದ "ಸೇತುಮೂಲಜಯಸ್ಥಂಭ" ಎಂಬುದು ಹೊಯ್ಸಳ ಚಕ್ರವರ್ತಿಯು ಸೇತುವಿನಲ್ಲಿ ಸ್ಥಾಪಿಸಿದ ವಿಜಯ ಸ್ಥಂಭದ ಬಗ್ಗೆ ಆಗಿದೆ, ಮತ್ತು ಇದನು ವಿದ್ವಾಂಸರು ಗೋವಾ ಅಥವ ರಾಮೇಶ್ವರ ಎವೆರಡಾರಲ್ಲಿ ಒಂದು ಎಂದಿದ್ದಾರೆ.

ಅಲಾವುದ್ದೀನ್‌ನ ಮರಣಾನಂತರ ಅವನ ಅಳಿಯ ಕುತುದ್ದೀನ್‌ನು ಅಧಿಕಾರಕ್ಕೆ ಬಂದನು. ಆದರೆ ಅವನು ಒಬ್ಬ ಅಸಮರ್ಥ ದೊರೆಯಾಗಿದ್ದು ಕೇವಲ ನಾಲ್ಕು ದಿನ ರಾಜ್ಯವಾಳಿದನು. ಅವನ ನಂತರ ಘಿಯಾಸುದ್ದೀನ್ ಧಮ್ಗಾನಿಯು ಮದುರ ಸಿಂಹಾಸನಕ್ಕೆ ಬಂದನು. ಅವನು ಜಲಾಲುದ್ದೀನ್ ಅಹ್ಸಾನ್ ಶಾನ ಅಳಿಯನಾಗಿದ್ದನು. ಇವನ ಕಾಲದಲ್ಲಿಯೇ ಹೊಯ್ಸಳ ಚಕ್ರವರ್ತಿಯು ಕಣ್ಣಾನೂರಿನ ಕೋಟೆಯ ಮೇಲೆ ಧಾಳಿಯನ್ನು ಮಾಡಿದ್ದು. ಒಬ್ಬ ಮೂರ್ ಪ್ರಯಾಣಿಕನಾದ ಇಬ್ನಬತೂತನು ಘಿಯಾಸುದ್ದೀನ್ ಧಮ್ಗಾನಿಯ ದರ್ಬಾರಿನಲ್ಲಿಯೇ ಇದ್ದನು ಮತ್ತು ಅವನ ಕಾಲದಲ್ಲಿ ನಡೆದ ಘಟನೆಗಳನ್ನು ಚಿತ್ರಿಸಿದ್ದಾನೆ. ಅವನು ಸಣ್ಣ ಘಟನೆಗಳಿಗೂ ಮಹತ್ವವನ್ನು ಕೊಟ್ಟಿದ್ದಾನೆ. ಅವನು ನಗರಕ್ಕೆ ಬರುವ ವೇಳೆಗೆ ಇವರಿಬ್ಬರ ಯುದ್ಧವು ಆಗ ತಾನೇ ಮುಗಿದಿತ್ತು. ಮತ್ತು ಅವನು ಹೇಳುವಂತೆ ಅವನ ವ್ಯಂಗ್ಯ ಚಿತ್ರವನ್ನು ಮದುರಾದ ಗೋಡೆಗಳಿಗೆ ನೇತು ಹಾಕಲಾಗಿತ್ತು.

ಇಬ್ನಬತೂತುವಿನ ಹೇಳಿಕೆಗಳಿಂದ ಘಿಯಾಸುದ್ದೀ ಧಂಘಾನಿಯು ಬಹಳ ಕ್ರೂರವಾದ ದೊರೆಯಾಗಿದ್ದು ಅನೇಕ ಅಮಾಯಕ ಹಿಂದೂ ಗಂಡಸರು ಮತ್ತು ಹೆಂಗಸರನ್ನು ಒಂದೇ ರೀತಿಯಾಗಿ ದಯಾರಹಿತವಾಗಿ ಕೊಲ್ಲಿಸಿದನು ಎಂಬುದು ತಿಳಿಯುತ್ತದೆ. ಸ್ವತಃ

ಇಬ್ನುಬತೂತನನೇ ದಿಗ್ಭ್ರಮೆಗೊಂಡನು ಮತ್ತು ಅವನು ಈ ಕೃತ್ಯಕ್ಕಾಗಿ ದಂಡವನ್ನೆ ತೆರಬೇಕಾಗುತ್ತದೆ ಎಂದು ಹೇಳದನಲ್ಲದೇ ಶೀಘ್ರದಲ್ಲೇ ಅವನು ಆ ದಂಡವನ್ನು ತೆತ್ತನು. ಅವನು ಯಾವುದೋ ಒಂದು ಹೆಸರಿಲ್ಲದ ರೋಗಕ್ಕೆ ಬಲಿಯಾಗಿ ತನ್ನ ಏಕೈಕ ಪುತ್ರ ಮತ್ತು ಹೆಂಡತಿಯನ್ನು ಕಳೆದುಕೊಂಡನು. ಸ್ವಲ್ಪವೇ ಕಾಲದ ಅನಂತರ ಅವನೂ ಮರಣ ನೊಂದಿದನು.

ಸ್ವತಃ ಹಿಂದೂವಾದ ಮೂರನೆಯ ವೀರಬಲ್ಲಾಳನು ಆ ಕಾಲದ ಅತ್ಯಂತ ಬಲಿಷ್ಠವಾದ ಹಿಂದೂ ಚಕ್ರವರ್ತಿಯಾಗಿದ್ದು ಹಿಂದೂಗಳ ಮೇಲಾದ ಕ್ರೂರ ಅಪರಾಧಗಳನ್ನು ಅವನಿಂದ ಸಹಿಸಲಾಗಲಿಲ್ಲ. ಅವನ ಒಳ ಆಸೆಗಳೊಂದಿಗೆ ಇದೂ ಕೂಡಾ ದಕ್ಷಿಣ ಪರ್ಯಾಯ ದ್ವೀಪದಿಂದ ಮಹಮ್ಮದೀಯರನ್ನು ಓಡಿಸಬೇಕೆಂಬ ಮಹದಾಸೆಗೆ ನೀರೆರೆಯಿತು.

ಹೊಯ್ಸಳ ಚಕ್ರವರ್ತಿಯು ಮದುರಾದ ಪರಿಸ್ಥಿತಿಯನ್ನು ಕಳೆದ ಒಂದು ದಶಕದಿಂದ ಗಮನಿಸುತ್ತಿದ್ದನು ಮತ್ತು ಮಹಮ್ಮದೀಯರ ಸಿದ್ಧತಾ ಚಟವಟಿಕೆಗಳನ್ನು ಸಹ ಗಮನಿಸುತ್ತಿದ್ದನು. ಇದು ತನ್ನ ಗಡಿಗಳನ್ನು ರಕ್ಷಿಸುವ ಸಲುವಾಗಿ ಅವಶ್ಯವಾಗಿತ್ತು. ಇಬ್ನುಬತೂತುವು ಘಿಯಾಸುದ್ದೀನ್‌ನ ಪಕ್ಕದ ರಾಜ್ಯವು ರಾಜದ್ರೋಹಿಯಾದ ಚಕ್ರವರ್ತಿಯಾದ ಬಲ್ಲಾಳ ದೇವನದಾಗಿದ್ದು ಅವನ್ನು ದಕ್ಷಿಣದ ಪ್ರಮುಖದೊರೆಗಳಲ್ಲೊಬ್ಬನಾಗಿದ್ದನು ಎಂದು ಹೇಳುತ್ತಾನೆ. ಈ ಹಿಂದೂ ಸಾಮ್ರಾಟನು 2000 ಮುಸ್ಲಿಮ್ ಸೈನಿಕರಲ್ಲದೇ ಒಂದು ಲಕ್ಷ ಸೈನಿಕರ ದಳವನ್ನು ತೆಗೆದುಕೊಂಡು 6 ಸಾವಿರದಲ್ಲಿ ಅರ್ಧಕ್ಕೂ ಹೆಚ್ಚಿನವರು ನಿರುಪಯೋಗಿಯಾಗಿದ್ದ ಮಹಮ್ಮದೀಯ ಸೈನ್ಯವನ್ನು ಎದುರಿಸಲು ದಂಡಯಾತ್ರೆ ಹೊರಟಿತು ಎಂದು ಅವನು ಹೇಳದ್ದಾನೆ. ಎರಡೂ ಸೈನ್ಯಗಳೂ ಶ್ರೀರಂಗಂ ಹತ್ತಿರವಿರುವ ಕಣ್ಣಾನೂರು ಕೊಪ್ಪಂ ಬಳಿಯ ಕೊಬ್ಬನ್ ಎಂದು ಗುರುತಿಸಲಾಗಿದೆ.

ಇಲ್ಲಿ ನಡೆದ ಯುದ್ಧದಲ್ಲಿ ಮಹಮದೀಯರು ಸುಲಭವಾಗಿ ಸೋತಾಗ ಬಲ್ಲಾಳನು ಅವರಿಗೆ ಹದಿನೈದು ದಿನಗಳೊಳಗಾಗಿ ಕಣ್ಣಾನೂರು ಕೋಟೆಯನ್ನು ಖಾಲಿ ಮಾಡಲು ಅಪ್ಪಣೆ ಕೊಟ್ಟನು ಮತ್ತು ಅನಿರೀಕ್ಷಿತವಾಗಿ ಸಿದ್ಧವಾಗಿರದ ಹೊಯ್ಸಳ ಸೇನೆಯ ಮೇಲೆ ಬಿದ್ದು ಬಲ್ಲಾಳನನ್ನು ಸೆರೆಹಿಡಿದರು. ಅವನಲ್ಲಿದ್ದ ಧನವನ್ನೆಲ್ಲ ಕಿತ್ತುಕೊಂಡ ಬಳಿಕ ಅವನನ್ನು ಬಿಡುಗಡೆ ಮಾಡುವುದಾಗಿ ಹೇಳಿ ಅವನನ್ನು ಕೊಂದು ಹಾಕಿದರು. ಅವನ ಶರೀರವು ನೇತಾಡುತ್ತಿರುವುದನ್ನು ಇಬ್ನುಬತೂತುವು ಮದುರಾನಗರವನ್ನು ಪ್ರವೇಶಿಸಿದಾಗ ನೋಡಿದನು. ಹೊಯ್ಸಳ ವಂಶದ ಮತ್ತು ಸಮಕಾಲೀನ ರಾಜರುಗಳಲ್ಲಿ ಅತ್ಯಂತ ಪ್ರಮುಖವಾಗಿದ್ದ ಮೂರನೆಯ ವೀರಬಲ್ಲಾಳನ ಅಂತ್ಯವು ಹೀಗಾಯಿತು. ಅವನು ಹೀನಾಯವಾಗಿ

ಕೊಲೆಯಾದುದ್ದನ್ನು ಬಿಟ್ಟರೆ ಅವನು ಮಹಮದೀಯರನ್ನು ದಕ್ಷಿಣ ಭಾರತದಿಂದ ಹೊಡೆದೋಡಿಸುವ ಕಾರ್ಯದಲ್ಲಿ ಬಹುಮಟ್ಟಿಗೆ ಯಶಸ್ವಿಯಾಗಿದ್ದನು. ಅವನ ಈ ಕಾರ್ಯವನ್ನು ವಿಜಯನಗರದ ದೊರೆಗಳು ಮುಂದುವರೆಸಿದರು ಮತ್ತು ವಿಜಯನಗರದ ವೀರ ಕಂಪಣರಾಯನು ಕೇವಲ ಮೂರು ದಶಕಗಳಲ್ಲಿ ಮುಗಿಸಿದನು.

ಹೊಯ್ಸಳರ ಮತ್ತು ಮಹಮದೀಯರ ನಡುವೆ ನಡೆದ ಘರ್ಷಣೆಯ ಬಗ್ಗೆಯೂ ಶಾಸನಗಳೂ ಉಲ್ಲೇಖಿಸುತ್ತದೆ. ಕ್ರಿ.ಶ.1342[71]ರ ಕಡೂರು ತಾಲ್ಲೂಕಿನ ಒಂದು ಶಾಸನವು ಚಿರಿಚಿನಾಪಳ್ಳಿಯಲ್ಲಿ ನಡೆದ ಯುದ್ಧದಲ್ಲಿ ವೀರಬಲ್ಲಾಳ ರಾಯನು ಕಂಕಯ ಎಂಬ ಇನ್ನೊಬ್ಬನೊಂದಿಗೆ ಮರಣಿಸಿದನೆಂದೂ ಅವನಿಗಾಗಿ ಒಂದು ವೀರಗಲ್ಲನ್ನು ನಿಲ್ಲಿಸಿದರೆಂದು ಶಾಸನವು ಹೇಳುತ್ತದೆ.

ಮೂರನೇ ವೀರಬಲ್ಲಾಳನ ಮರಣದ ನಂತರ ಅವನ ಮಗ ನಾಲ್ಕನೆಯ ವಿರೂಪಾಕ್ಷ ಬಲ್ಲಾಳನು ಪಟ್ಟಕ್ಕೆ ಬಂದು ಕೆಲವು ಕಾಲ ಆಳಿದರೂ ಹೊಯ್ಸಳ ಸಾಮ್ರಾಜ್ಯವು ಬಹುಮಟ್ಟಿಗೆ ಕೊನೆಯನ್ನು ಕಂಡಿತ್ತು. ಮೂರನೆ ವೀರಬಲ್ಲಾಳನ ಮರಣವು ಹೊಯ್ಸಳ ಸಾಮ್ರಾಜ್ಯಕ್ಕೆ ಸರಿಪಡಿಸಲಾಗದ ನಷ್ಟವನ್ನು ಮತ್ತು ತುಂಬಲಾರದ ಹಾನಿಯನ್ನು ಉಂಟುಮಾಡಿದ್ದು ಅವರಿಗೆ ಇದರಿಂದ ಹೊರಬರಲಾಗಲೇ ಇಲ್ಲ.

ಈಗಾಗಲೆ ನಲವತ್ತೈದು-ಐವತ್ತು ವರ್ಷ ವಯಸ್ಸಾಗಿದ್ದ ನಾಲ್ಕನೆಯ ವಿರೂಪಾಕ್ಷ ಬಲ್ಲಾಳನು ತನ್ನ ತಂದೆಯ ನಂತರ ಪಟ್ಟಕ್ಕೇರಿದನು. ಅವನ ಕೊನೆಯ ಶಾಸನವು ಕ್ರಿ.ಶ.1346ರರಲ್ಲಿದೆ, ಅವನ ಆಳ್ವಿಕೆಯ ಕಾಲದಲ್ಲಿ ಯಾವುದೇ ಮುಖ್ಯವಾದ ಘಟನೆಗಳು ನಡೆಯಲಿಲ್ಲ. ಹೊಯ್ಸಳರು ಈಗಾಗಲೆ ದೊಡ್ಡ ಶಕ್ತಿ ಎಂಬ ಸ್ಥಾನವನ್ನು ಕಳೆದು ಕೊಂಡಿದ್ದು ಮುಂದೆ ಅತ್ಯಂತ ಶಕ್ತಿಶಾಲಿ ಸಾಮ್ರಾಜ್ಯವಾದ ವಿಜಯನಗರಕ್ಕೆ ಹಾದಿಯನ್ನು ಮಾಡಿಕೊಟ್ಟಿತ್ತು.

ಮೂರನೆ ವೀರಬಲ್ಲಾಳನ ಮರಣದ ನಂತರ ಅವನ ಅನೇಕ ಅಧಿಕಾರಿಗಳು ಸ್ವತಂತ್ರರಾಗಿ ಕೇತಯ್ಯ ದಣ್ಣಾಯಕ, ಸಿಂಗಯ ದಣ್ಣಾಯಕನಂತಹ ಕೆಲವರು ವಿಜಯನಗರದ ದೊರೆಗಳ ಜೊತೆ ಸೇರಿದರು. ಮೂರನೆ ವೀರಬಲ್ಲಾಳನ ಕಾಲದ ಹೆಚ್ಚು ಪ್ರಭಾವಶಾಲಿ ಮತ್ತು ಶಕ್ತಿಶಾಲಿ ಅಧಿಕಾರಿಯಾಗಿದ್ದ ಬಳ್ಳಪ್ಪದಣ್ಣಾಯಕನು ಪೂರ್ಣವಾಗಿ ರಾಜರನ್ನು ಮಾಡುವ ಶಕ್ತಿಯನ್ನು ಹೊಂದಿದ್ದು ಸಹಜವಾಗಿಯೇ ಅವನು ವಿಜಯನಗರ ಸಾಮ್ರಾಜ್ಯದ ಮೊದಲನೆ ದೊರೆಯಾದ ಮೊದಲನೆ ಹರಿಹರನ ಗಮನವನ್ನು ಸೆಳೆದನು. ಕ್ರಿ.ಶ.1349ರ ಶ್ರಿಂಗೇರಿಯ

ಒಂದು ಶಾಸನವು ಬಳ್ಳಪ್ಪ ದಣ್ಣಾಯಕನನ್ನು ಅಳಿಯ ಬಳ್ಳಪ್ಪ ದಣ್ಣಾಯಕ ಎಂದು ಕರೆದು ಅವನು ಮೊದಲನೆಯ ಹರಿಹರನ ಮಗಳನ್ನು ಮದುವೆಯಾಗಿರಬೇಕು ಎಂಬ ಸೂಚನೆಯನ್ನು ನೀಡುತ್ತದೆ. ಎರಡನೆ ಹರಿಹರನ ಕಾಲದ ಕ್ರಿ.ಶ.1380[72]ರ ಇನ್ನೊಂದು ಶಾಸನವು ಕೂಡ ಇದನ್ನೇ ಉಲ್ಲೇಖಿಸುತ್ತದೆ. ಹರಿಹರ ಮತ್ತು ಅವನ ಸೋದರರೊಂದಿಗೆ ಇವನ ಹೆಸರನ್ನು ಅಧಿಕೃತವಾಗಿ ಉಲ್ಲೇಖಿಸಲಾಗಿದೆ. ಬಳ್ಳಪ್ಪ ದಣ್ಣಾಯಕನು ವಿರುಪಾಕ್ಷ ಬಲ್ಲಾಳನ ಮರಣದ ನಂತರವೇ ಬಹುಶಃ ಸಂಗಮ ಸೋದರರನ್ನು ಸೇರಿಕೊಂಡಿರಬೇಕು. ಈ ಶ್ರಿಂಗೇರಿ ಶಾಸನದ ನಂತರ ತ್ರಿಣಿಸಿಯಲ್ಲಿ ದೊರಕಿದ ಇನ್ನೊಂದು ಶಾಸನದ ಪ್ರಕಾರ ಅಳಿಯ ಬಳ್ಳಪ್ಪ ದಣ್ಣಾಯಕನು ಕೆಲವು ದಾನಗಳನ್ನು ಮಾಡಿದ ಎಂಬ ಉಲ್ಲೇಖವಿದೆ. ಈ ಶಾಸನದ ಸಮಯದಲ್ಲಿ ಅವನು ಮಹಾಮಂಡಲೇಶ್ವರ ಸ್ಥಾನಕ್ಕೆ ಬಡ್ತಿಯನ್ನು ಪಡೆದಿದ್ದನು.

ಹೊಯ್ಸಳ ಸಾಮ್ರಾಜ್ಯವು ನಿಧಾನವಾಗಿ ಬಹಳ ಸ್ವಲ್ಪವೇ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯದೊಂದಿಗೆ ಸೇರಿ ಹೋಯಿತು. ಈ ಅಧಿಕಾರದ ಹಸ್ತಾಂತರವು ರಕ್ತ ರಹಿತವಾಗಿ ನಡೆದಿದ್ದು ವಿಜಯನಗರದ ದೊರೆಗಳು ಹೊಯ್ಸಳರು ಮತ್ತು ಅವರ ಪ್ರಜೆಗಳೊಂದಿಗೆ ಸ್ನೇಹ ಭಾವದಿಂದ ಇದ್ದರು ಎಂಬುದಕ್ಕೆ ಸಾಕ್ಷೀಭೂತವಾಗಿದೆ. ಬೆಂಗಳೂರು ಜಿಲ್ಲೆಯ ಇನ್ನೊಂದು ಶಾಸನವು ವಿಜಯನಗರದ ಮೊದಲನೆಯ ಹರಿಹರನ ಆಳ್ವಿಕೆ ಬಗ್ಗೆ ಉಲ್ಲೇಖವಿದೆ. ಅದು ಆ ಶಾಸನದ ಕೇವಲ ಒಂದು ವರ್ಷದ ಹಿಂದೆ ಹೊಯ್ಸಳ ಸಾಮ್ರಾಜ್ಯದ ಭಾಗವಾಗಿತ್ತು ಎಂದು ಬಿ.ಎನ್ 120ರಲ್ಲಿ ಉಲ್ಲೇಖವಿದೆ. ಅದೇ ವರ್ಷದ ಮಾಲೂರು ತಾಲ್ಲೂಕಿನ ತಮಿಳಿನ ಇನ್ನೊಂದು ಶಾಸನದಲ್ಲಿ ಹರಿಹರನು ತನ್ನ ರಾಜಮುದ್ರೆಯೊಂದಿಗೆ ತೆರಿಗೆ ವಿನಾಯಿತಿ ಕೊಟ್ಟಿದ್ದರ ಬಗ್ಗೆ ಉಲ್ಲೇಖವಿದೆ. ಹೊಯ್ಸಳ ಸಾಮ್ರಾಜ್ಯವು ವಿಜಯನಗರದ ಸಾಮ್ರಾಜ್ಯದೊಂದಿಗೆ ಸಂಪೂರ್ಣವಾಗಿ ಬಹಳ ವೇಗವಾಗಿ ಐಕ್ಯವಾಯಿತು ಎಂಬುದನ್ನು ಇನ್ನೂ ಖಚಿತ ಪಡಿಸುತ್ತದೆ.

ಮೂರನೇ ವೀರಬಲ್ಲಾಳನ ಮರಣದ ನಂತರ ಹೊಯ್ಸಳರ ಆಳ್ವಿಕೆಯು ಬಯಲು ಪ್ರದೇಶದಲ್ಲಿ ಅಂತ್ಯವನ್ನು ಕಂಡರೂ ತುಳುವ ನಾಡಿನಲ್ಲಿ ಅವನ ಮುಖ್ಯ ರಾಣಿಯಾದ ಚಿಕ್ಕಾತಾಯಿಯ ಆಳ್ವಿಕೆಯು ಮುಂದುವರೆದಿತ್ತು. ಅವಳು ಎಲ್ಲಾ ರಾಜಬಿರುದುಗಳನ್ನು ಹೊಂದಿದ್ದು ಅವಳ ಆಳ್ವಿಕೆ ಕಾಲದಲ್ಲಿ ಯಾವುದೇ ವಿಶೇಷ ಘಟನೆಗಳು ಸಂಭವಿಸಲಿಲ್ಲ, ಅವಳ ನಂತರ ಅವಳ ಮಗ ಕುಲಶೇಖರನು ಕ್ರಿ.ಶ.1348[73]ರಲ್ಲಿ ಅಧಿಕಾರಕ್ಕೆ ಬಂದನು ಎಂಬುದು ಅವನಿಂದ ಬರೆಸಲ್ಪಟ್ಟ ಮೂರು ಶಾಸನಗಳಿಂದ ತಿಳಿದು ಬಂದಿದೆ. ಬಾರಕೂರು ಅಳುಪ ಹೊಯ್ಸಳರ ರಾಜಧಾನಿಯಾಗಿ ಉಳಿಯಿತೆಂಬುದು ಈ ಶಾಸನಗಳಿಂದ ತಿಳಿದುಬಂದಿದೆ.

**ಮೂರನೇ ವೀರಬಲ್ಲಾಳ ಹಾಗೂ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ**

ಮೂರನೇ ವೀರಬಲ್ಲಾಳನ ಉತ್ತರಭಾರತದ ಶತೃಗಳ ವಿರುದ್ಧ ದಂಡಯಾತ್ರೆಯನ್ನು ಮತ್ತು ಅವರ ಆಕ್ರೋಶಗಳನ್ನು ಹತ್ತಿಕ್ಕುವುದರಲ್ಲಿ ಅವನ ವೈಫಲ್ಯವನ್ನು ಈ ಬರಹವು ದಾಖಲಿಸುತ್ತದೆ. ಅವನ ಜೀವನವು ಒಬ್ಬರಲ್ಲಿ ಒಬ್ಬೊರೊಡನೆ ಯುದ್ಧ ನಡೆಸುವ ಹಾಗೂ ದರ್ಮ ಹಾಗೂ ಸಂಸ್ಕೃತಿಗಳ ಕೋಟೆಯನ್ನು ನಾಶಮಾಡಲೆಂದು ಬರುತ್ತಿರುವ ಮುಸ್ಲಿಂ ಆಕ್ರಮಣಗಳ ವಿರುದ್ಧ ಸತ್ಯಸಮರವೇ ಆಗಿತ್ತು. ಉನ್ನತ ದೇಶಭಕ್ತಿಯ ಪ್ರಜ್ಞೆಯಿಂದ ಸನಾತನ ಸಂಸ್ಕೃತಿಯ ಅಖಂಡತೆ ಮತ್ತು ಏಕ್ಯತೆಗಳಿಗಾಗಿ ಮಾಡಿದ ಹೋರಾಟ ಇತರರಿಗೆ ಮಾದರಿ. ಪ್ರಾಚೀನತೆ–ಯನ್ನು ಉಳಿಸಲು ಮತ್ತು ಇತರರಲ್ಲಿ ಸ್ಪೂರ್ತಿ ತುಂಬಿದವು. ಈ ಮೂರನೇ ವೀರಬಲ್ಲಾಳನ ಅವಧಿಯನ್ನು ಬದಲಾವಣೆ ಯುಗ ಎಂದೇ ಕರೆಯುಬಹುದು. ಉತ್ತರದಿಂದ ಬರುವ ಆತಂಕಗಳನ್ನು ತಡೆಗಟ್ಟಲು ಕರ್ನಾಟಕದ ತುಂಬಾ ಹೊಸ ರಕ್ಷಣೆ ನೀಡಲು ಮನಸ್ಸಿಗೆ ಹೊಸ ಆಯಾಮ ಅನಿಸಿಕದೊರೆತು ಹೊಸ ಪ್ರಜ್ಞೆ ಮೂಡಿತ್ತು. ಹಂಪಿ ಹಾಗೂ ದಕ್ಷಿಣ ಭಾರತದ ವಿವಿಧೆಡೆ ಸಾರವರ್ಧನೆಯಾಗಿತ್ತು. ಮುಮ್ಮಡಿ ಬಲ್ಲಾಳನ ಮಗ ವೀರ ವಿರೂಪಾಕ್ಷ ಬಲ್ಲಾಳ ಹಂಪಿಯಲ್ಲಿ ಚಕ್ರವರ್ತಿಯಾಗಿ ಪಟ್ಟಾಭಿಷೇಕಗೊಂಡು ದೇಶದಾದ್ಯಂತ ಶಾಂತಿ ಮೂಡಿಸುವುದರಲ್ಲಿ ನಿರತನಾದ.

'ಫರಿಸ್ತಾ'ನ ಅಭಿಪ್ರಾಯದಂತೆ ಬಲ್ಲಾಳ ದೇವ ಒಂದು ಸದೃಢನಗರವನ್ನು ಸ್ಥಾಪಿಸಿ ತನ್ನ ಮಗ ಬೀಜನ ಹೆಸರಿಟ್ಟು ಆದತ್ತ ನಗರ ಎಂದು ಸೇರಿಸಿದ ಆದ್ದರಿಂದ ಅದು ಬೀಜನಗರವಾಯಿತು. ಹಳೇಬೀಡಿನ ಸ್ಮಾರಕದಂತೆ ಇರುವ ಇದು ಹೊಸವೀಡು ಅಥವಾ ಹೊಸಪೇಟೆ ಬಳಿಇದ್ದ ಮಲ್ಲಿಕಾಫರ್‌ನಿಂದ ನಾಶವಾಯಿತು.

ಕ್ರಿ.ಶ.1339[74]ರಲ್ಲಿ ಮೂರನೇ ವೀರಬಲ್ಲಾಳ ತನ್ನ ಮಗ ವೀರಬಲ್ಲಾಳ ದೇವನನ್ನು ಹಂಪೆಯಲ್ಲಿ ಯುವರಾಜನಾಗಿ ಮಾಡಿದ. ಮೂರನೇಬಲ್ಲಾಳ ಹಾಗೂ ಅವನ ಮಗ 4ನೇ ಬಲ್ಲಾಳನ ಸಾಮ್ರಾಜ್ಯದಲ್ಲಿ 1ನೇ ಹರಿಹರ ಮುಖಂಡನಾಗಿದ್ದ. 1388 ರವರೆಗೆ ಹಾಗೂ ನಾಲ್ಕನೇ ಬಲ್ಲಾಳನ ಮರಣದ ನಂತರವೂ ಬಹಳ ಕಾಲದವರೆಗೂ ಅವನ ಸಹೋದರ 1ನೇ ಬುಕ್ಕ ಮುಖಂಡನಾಗಿದ್ದ. ಅವನು ನಗರವನ್ನು ರಾಜಧಾನಿಯಾಗಿ ವಿಸ್ತರಿಸಿದ. ಹಾಗೂ ಇ.ಸಿ.7, ಎಸ್.ಕ.ಎ. 81ರಲ್ಲಿ ತಿಳಿಸಿರುವಂತೆ ಅದನ್ನೇ ವಿಜಯನಗರ ಸಾಮ್ರಾಜ್ಯವೆಂದೆ ಘೋಷಿಸಿ ಸ್ವತಂತ್ರ ಚಕ್ರವರ್ತಿಯಾದ. ಡಾ॥ ಎಂ.ಹೆಚ್.ಕೃಷ್ಣ 1932[75] ಪುಟ 79 ರಲ್ಲಿ ತಿಳಿಸಿರುವಂತೆ ವಿಜಯನಗರ ಸ್ಥಾಪನೆಗೆ ಬೇರೆಲ್ಲರಿಗಿಂತಲೂ ಬುಕ್ಕನೇ ನಾಯಕನಾಗಿ ಜವಾಬ್ದಾರಿ–

ಯಾಗಿರುತ್ತಾನೆ. ಇ.ಸಿ. 6, ಕೊಪ್ಪ 25[76]ರಲ್ಲಿ ಬಕ್ಕನನ್ನು ಪಾಂಡವರಿಲ್ಲಿನ ಅರ್ಜುನನಂತೆ ಸರಿಯಾಗಿ ಹೋಲಿಸಲಾಗಿದೆ. ಬುಕ್ಕ ಭೂಪತಿ ಪ್ರಚಂಡ ವಿಕ್ರಮಾ ಪಾಂಡವ ನಮಿವರ್ಜುನಾಯ ಈ ಕಾರಣಕ್ಕಾಗಿ 1ನೇ ಹರಿಹರ ಎಂದೂ ಸ್ವತಂತ್ರ್ಯ ರಾಜ್ಯದ ಸ್ವತಂತ್ರ್ಯ ರಾಜನಾಗಿರಲಿಲ್ಲ-ವೆಂದೂ, ಸಂಗಮ ವಂಶದ ವಂಶಾವಳಿಯಲ್ಲಿ ಅವನ ಹೆಸರಿಸಲಾಗಿದೆಯೆಂದು ಬಾಂಬೇ ಚರಿತ್ರೆ ಸೊಸೈಟಿ ಜನರಲ್ VOl. I ಭಾಗ II ಪುಟ ಸಂಖ್ಯೆ 2 ರಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ನಂಬಲಾಗಿರುವಂತೆ 1336 ರಲ್ಲಿ ಅಲ್ಲದೆ 1368 ರಲ್ಲಿ ಬುಕ್ಕನು ಸಾಮ್ರಾಜ್ಯ ಸ್ಥಾಪಿಸಿದ. ಭಾರತದ ಇತಿಹಾಸದಲ್ಲಿ ಮೂರನೇ ಬಲ್ಲಾಳನದು ಒಂದು ಶ್ರೇಷ್ಠ ಮತ್ತು ವರ್ಣರಂಜಿತ ವ್ಯಕ್ತಿತ್ವ. ಅರ್ಧ ಶತಮಾನಕ್ಕೂ ಹೆಚ್ಚಿನ ಅವನ ಆಡಳಿತ (ಕ್ರಿ.ಶ.1291-1342)[77] ಅನೇಕ ರೀತಿಯಲ್ಲಿ ದಾಖಲಾರ್ಹ. ಅವನ ಕಾಲದಲ್ಲೇ ಪ್ರಪಂಚ ಪ್ರಸಿದ್ಧ ಮಹಾನ್ ಸಾಮ್ರಾಜ್ಯ ವಿಜಯನಗರ ಜನ್ಮ ತಾಳಿದ್ದು ಈ ಲೇಖನದಲ್ಲಿ ನಾನು ವಿಜಯನಗರದ ಸಂಸ್ಥಾಪಕ ಒಂದನೇಹರಿಹರ ಜೊತೆಗೆ ಇವನ ಸಂಬಂಧ ಮತ್ತು ಅದರ ಸ್ಥಾಪನೆಯಲ್ಲಿ ಅವನ ಪಾತ್ರದ ವಿವರಣೆ ನೀಡುತ್ತಿದ್ದೇನೆ.

## ತಪ್ಪು ಸುಳಿವು

ಕಳೆದ ನಾಲ್ಕು ದಶಕಗಳಿಂದ ನಮ್ಮ ಕೆಲವು ಇತಿಹಾಸಕಾರರು ನೀಡಿದ ತಪ್ಪು ಮಾಹಿತಿಗಳಿಂದಾಗೆ ವಿಜಯನಗರದ ಸಂಸ್ಥಾಪಕ ಯಾರೆಂಬ ಪ್ರಶ್ನೆ. ಇನ್ನಷ್ಟು ಜಟಿಲ ಹಾಗೂ ಗೊಂದಲ ಪೂರಿತವಾಗಿದೆ. ಸತತವಾಗಿ ಮತ್ತು ಒತ್ತಾಯ ಪೂರ್ವಕವಾಗಿ ಸುಳ್ಳು ಮಾಹಿತಿಗಳು ಪ್ರಸಾರವಾಗಿರುವುದರಿಂದ ಮುಗ್ಧ ಓದುಗರು ಸುಳ್ಳನ್ನು ಸತ್ಯವೆಂದು ಕಲ್ಪನೆಯನ್ನು ಇತಿಹಾಸವೆಂದು ನಂಬಿ ಈ ಜಟಿಲತೆ ಮತ್ತು ಗೊಂದಲ ಇನ್ನಷ್ಟು ಆಳವಾಗಿದೆ.

## ಹೊಸ ಆಯಾಮ

ಇತಿಹಾಸ ಸಂಶೋದನೆ ಮತ್ತ ವಿಶ್ಲೇಷಣೆಗಳ ಸಮ್ಮತವಾದ ನಿಯಮಗಳಿಗೆ ಅನುಸಾರವಾಗಿ ಈ ಸಮಸ್ಯೆಯನ್ನು ವಿಷಯಾಧಾರಿತವಾಗಿ ಹೊಸದಾಗಿ ಅಭ್ಯಾಸಮಾಡುವ ಅಗತ್ಯವಿದೆ. ಈ ಸಮಸ್ಯೆಯ ಮೂರು ಅಂಶಗಳು ಕೆಳಗಿನಂತಿವೆ. ಒಂದು ಸಂಸ್ಥಾಪಕನ ಮೂಲ ಹಾಗೂ ದೇಶ, ಎರಡು, ನಿಯಂತ್ರಣ ಹಾಗೂ ಕುಡಿತಗಳ ವಿರುದ್ಧ ನಿಂತ ಸ್ವತಂತ್ರ್ಯ ಚಳುವಳಿಯ ನಾಯಕತ್ವ ವಹಿಸಿದ ರೀತಿ ಹಾಗೂ ಬೆಳವಣಿಗೆ, ಮೂರು ವಿದೇಶಿಯರಿಂದ ದೇಶವನ್ನು ಪಾರುಮಾಡಲು ಹೊಯ್ಸಳರ ಬಲ್ಲಾಳ ಉತ್ಸಾಹದಿಂದ ಪಾಲುಗೊಳ್ಳಲು ಕಾರಣವಾದ ಅವನ ಜೊತೆಗಿನ ಸಂಬಂಧ.

## ಇತ್ತೀಚಿನ ಶೋಧನೆಗಳು

ಕಳೆದ ನವೆಂಬರ್‌ನಲ್ಲಿ ವಿಜಯನಗರದಲ್ಲಿ ನಡೆದ ಸೆಮಿನಾರನಲ್ಲಿ ನಾನು ಪಾಲುಗೊಂಡಿದೆ. ಈ ಪ್ರಶೆಗಳನ್ನೆತ್ತಿ ಕೆಳಗಿನ ನಿರ್ಧಾರಕ್ಕೆ ಬಂದಿದ್ದೇನೆ. ವಿಜಯನಗರದ ಸಂಸ್ಥಾಪಕ ಅಂದೆ ಮೊದಲನೇಹರಿಹರ ಅಥವಾ ಬುಕ್ಕನಿಗೆ ವಾರಂಗಲ್ ಜೊತೆ ಸಂಬಂಧ ವಿರಲೇ ಇಲ್ಲ. ಅವರು ಕಾಕತೇಯರ ಪ್ರತಾಪರುದ್ರನ ಬಳ ಎಂದೂ ಸೇವೆ ಮಾಡಿರಲಿಲ್ಲ. ಈ ಕಥೆಯ ಮುಂದಿನ ಭಾಗಂದರೆ ಕಂಪಿಲಿ ರಾಜರ ಬಳ ಇದ್ದದ್ದು, ಅವರ ಆಕ್ರಮಣ, ದೆಹಲಿಯ ಸುಲ್ತಾನರಡಿಯ ನಿಷ್ಠಾವಂತ ಸೇವೆ, ಅವರ ಅಜ್ಞಾವರ್ತಿಗಳಾಗಿ ಬಂದಿದ್ದು, ಹಂಪಿಯ ಮೇಲ್ವಿಚಾರಣೆ ಮಾಡಿದ್ದು, ಅವರ ಧರ್ಮ ಭ್ರಷ್ಟತೆ, ಮತ್ತು ಹಿಂದೂ ಧರ್ಮ ಸೇರಿದ್ದು ಇವೆಲ್ಲಾ ಕಟ್ಟು ಕಥೆ.

## ದಂತ ಕಥೆಗಳ ಮೂಲ

ಕೆಲವು ಆಧುನಿಕ ಇತಿಹಾಸಕಾರರ ಹೇಳಿಕೆ ಅಧಿಕೃತ ಶಾಸನಗಳಿಂದ ಬೆಂಬಲಿತವಾಗಿಲ್ಲ. ಬದಲಾಗಿ ಅವು ಇತ್ತೀಚಿನ ಕೆಲವು ಕಟ್ಟು ಕಥೆಗಳ ಮೇಲೆ ನಿಂತಿವೆ. ಅದರಲ್ಲಿ ಮುಖ್ಯವಾದ ವಿದ್ಯಾರಣ್ಯ ಕಲಾಜ್ಞಾನ ಬಹುಶ: ಹದಿನೈದನೇಶತಮಾನ ಅಥವಾ ಅದಕ್ಕೂ ಈಚಿನದು. ವಿದ್ಯಾರಣ್ಯರ ವ್ಯಕ್ತಿತ್ವವನ್ನು ದಂತ ಕಥೆಯನ್ನಾಗಿಸಿದೆ. ರೇವಣಸಿದ್ದರ ಮುಖಾಂತರ ಜೈವಿಕ ಅಂಶಗಳನ್ನು ಪರಿಚಯಿಸಿದ ಇದರಲ್ಲಿ ಇತಿಹಾಸವಲ್ಲದ ಮತ್ತು ಕ್ರಮ ಬದ್ಧವಲ್ಲದ ವಿಷಯಗಳಿವೆ.

## ಅಧ್ಯಯನದ ಅಂಶಗಳು

ಇಲ್ಲಿ ಸಂಸ್ಥಾಪಕರ ಮೂಲಸ್ಥಾನ ಕುರಿತು ಹಾಗೂ ವಿಜಯನಗರದ ಸಂಸ್ಥಾಪನೆಗೆ ಕಾರಣವಾದ ಘಟನೆಗಳ ಅಧ್ಯಯನವಿದೆ. ಇದರಲ್ಲಿ ಹೊಸರಾಜ್ಯ ಪ್ರಾರಂಭಿಸಿದವರ ಹಾಗೂ ಹೊಯ್ಸಲಾಧಿಶರ ನಡುವಿನ ಸಂಬಂಧವಿದೆ.

## ಸಂಸ್ಥಾಪಕರ ಮೂಲಸ್ಥಾನ

ಶಾಸಗಳ ಪ್ರಕಾರ ಸಂಸ್ಥಾಪಕರ ಮೂಲಸ್ಥಾನ ಕರ್ನಾಟಕ. ಹರಿಹರನ ತಂದೆ ಸರಿಗಮ ಒಬ್ಬ ಸಾಧಾರಣ ಸ್ಥಳೀಯ ಮುಖಂಡ. ಅವನಿಗೆ ವಿಶೇಷ ಸ್ಥಾನಮಾನಗಳಾವುದೂ ಇರಲಿಲ್ಲ. ಅವನ ಬಗೆಗೆ ಯಾವುದೇ ದಾಖಲೆಗಳು ಲಭ್ಯವಿಲ್ಲದಿರುವುದು ಈ ತೀರ್ಮಾನಕ್ಕೆ ಕಾರಣವಾಗಿದೆ. ವಿಜಯನಗರ ಸ್ಥಾಪನೆಗೆ ಮೊದಲು ಅವನ ಬಗೆಗೆ ಎಲ್ಲೂ ಉಲ್ಲೇಖಗಳು ಲಭ್ಯವಿಲ್ಲ.

ಸಹಜವಾಗಿ ಮತ್ತು ಸಕಾರಾತ್ಮಕವಾಗಿ ಸಂಗಮನ ಬಗ್ಗೆ ದಾಖಲೆಗಳಿವೆ. ಅವನ ವಂಶದ ಉತ್ತರಾಧಿಕಾರಿಗಳು ಸ್ಥಾಪಿಸಿರುವ ಶಾಸಗಳಲ್ಲಿ ಅವನ ಬಗ್ಗೆ ಹಲವಾರು ಉಲ್ಲೇಖಗಳಿವೆ. ಅವುಗಳಲ್ಲಿ ಅವನ ಬಗ್ಗೆ ಹೊಗಳಿಕೆ ಗಳಿವೆ ಹಾಗೂ ಅಷ್ಟಾಗಿ ಮಹತ್ವವಿರದ ಕೆಲವು ದಂಡಯಾತ್ರೆಗಳ ಉಲ್ಲೇಖವಿದೆ.

## ಕರ್ನಾಟಕ ರಾಜ್ಯ

ಆದರೆ, ಐತಿಹಾಸಿಕ ದೃಷ್ಟಿಯಿಂದ ಅದರಲ್ಲಿ ಪದೇ ಪದೇ ಪ್ರತಪಾದಿಸಲಾಗಿರುವ ಒಂದು ಮುಖ್ಯ ವಿಷಯವಿದೆ. ಅದೆಂದರೆ ಅವನು ಕರ್ನಾಟಕ ರಾಜ್ಯದವನೆಂಬುದು. ಅದರಲ್ಲಿರುವ ಸಂಸ್ಕೃತ ಶ್ಲೋಕದ ಪ್ರಕಾರ

ತತ್ರಾಸಿತ್ ಸಂಗಮೋ ನಾಮ

ಭೂಮಿಪಾಲೋ ಗುಣೋತ್ರಾರ:

ಯೇನ ಕರ್ನಾಟ ದೇಶಸ್ರಿ

ಹಸ್ತಿತ: ತತಾನ್ ಕವಾಭ್ಯ ಭೂತ್

ಅಂದರೆ ಅಲ್ಲಿ ಸಂಗಮನೆಂಬ ಹೆಸರಿನ ಉತ್ತಮ ಗುಣಗಳುಳ್ಳ ಒಬ್ಬ ಮುಖ್ಯಸ್ಥನಿದ್ದನು. ಅವನಿಂದಾಗಿಯೇ ಕರ್ನಾಟಕ ರಾಜ್ಯ ದೇವತೆ ಸತತವಾಗಿ ಕಿವಿ ಆಭರಣಗಳನ್ನು ಧರಿಸುವ ಭಾಗ್ಯ ಪಡೆದಿದ್ದಳು.

## ಹಂಪಿ ಪ್ರದೇಶ

ಇದರ ಮೇಲೆ ಇನ್ನೊಂದು ಪ್ರಶ್ನೆ ಉದ್ಭವಿಸಬಹುದು. ಕರ್ನಾಟಕದ ಯಾವ ಭಾಗ ಸಂಗಮನ ಮೂಲ ಸ್ಥಳ. ಇದಕ್ಕೆ ಉತ್ತರ ಸಹಾ ಶಾಸನಗಳಲ್ಲಿ ಲಭ್ಯವಿದೆ. ಒಂದು ಕಡೆ ತುಂಗಾಭದ್ರ ಪ್ರದೇಶವೆಂದೂ ಹೇಳಲ್ಪಟ್ಟಿದೆ. ಇನ್ನೊಂದು ಕಡೆ ಸಂಗಮನ ಜನ್ಮ ಪಂಪಾಪುರಿ ಅಂದರೆ ಹಂಪೆಯ ಸುತ್ತ ಮುತ್ತಲಿನ ಪ್ರದೇಶವೆಂದು ಹೇಳಲಾಗಿದೆ. ಮೂಲ ಶಾಸನದಂತೆ ಪಂಪಾಪುರಿ ಪರಿಸರ ಭವ ಸಂಗಮ: 1376 ರ ಹೊತ್ತಿನ ಕೆಲವೂ ದಾಖಲೆಗಳೂ ಲಭ್ಯವಿದೆ. ಹೀಗಾಗಿ ಇವನ್ನು ಅಧಿಕೃತ ಮತ್ತು ಐತಿಹಾಸಿಕ ಎಂದು ನಂಬಬಹುದಾಗಿದೆ.

## ಹರಿಹರ-ಬಲ್ಲಾಳರ ನಡುವಿನ ವೈರತ್ವ

ಆಧುನಿಕ ವಿದ್ವಾಂಸರು ವಿದ್ಯಾರಣ್ಯ ಕಲಾಂಜನದ ದಂತಕಥೆಗಳಿಂದ ತಪ್ಪುಗ್ರಹಿಕೆ-ಗೊಳಗಾಗಿ ಮೂರನೇಬಲ್ಲಾಳ ಮತ್ತು ಹರಿಹರ ಮತ್ತು ಬುಕ್ಕರಿಗೆ ವೈರತ್ವವಿತ್ತು. ಮತ್ತು ಅವರ

ವಿಜಯನಗರದ ಹೊಸ ಸಾಮ್ರಾಜ್ಯ ಕಟ್ಟಲು ಅವನೊಡನೆ ಹೋರಾಡಿದರೆಂದು ಪ್ರತಿಪಾದಿಸುತ್ತಾರೆ. ರಾಮನಾಥನ ರಾಜ್ಯವನ್ನು ವಿನಾಶಮಾಡಿದ ಮೇಲೆ ಅವನಲ್ಲಿ ಕೆಲಸ ಮಾಡುತ್ತಿದ್ದ ಇಬ್ಬರು ಅಣ್ಣ ತಮ್ಮಂದಿರು ಹಕ್ಕ ಬುಕ್ಕರನ್ನು ಖೈದಿಗಳನ್ನಾಗಿ ತಂದ ದೆಹಲಿಯ ಸುಲ್ತಾನರು ಅವರ ನಿಷ್ಠೆ ಮತ್ತು ದೃಡತೆಯನ್ನು ಮೆಚ್ಚಿ ಅವರಿಬ್ಬರನ್ನು ಕರ್ನಾಟಕ ರಾಜ್ಯವನ್ನು ನೋಡಿಕೊಳ್ಳಲೆಂದು ನಂಬಿಕಸ್ಥ ಅಧಿಕಾರಿಗಳನ್ನಾಗಿ ಕಳಿಸಿಕೊಟ್ಟರು. ಕೃಷ್ಣಾ ನದಿಯನ್ನು ದಾಟಿ ಅವರು ತಲುಪಿದರು. ಅಲ್ಲಿ ಬಲ್ಲಾಳನ ಜೊತೆ ಹೋರಾಡಿ ಸೋತರು. ಈ ನಿರಾಶೆಯಲ್ಲಿದ್ದಾಗ ಸಂತ ರೇವಣಸಿದ್ದರು ಹರಿಹರನ ಕನಸಿನಲ್ಲಿ ಒಂದು ಚಂದ್ರಮೌಳೇಶ್ವರ ಲಿಂಗವನ್ನು ಅನುಗ್ರಹಿಸಿ ಅವರ ಮುಂದಿನ ಯಶಸ್ಸಿನ ಭರವಸೆ ನೀಡಿ ವಿದ್ಯಾರಣ್ಯರ ಆಶೀರ್ವಾದ ದೊಡನೆ ರಾಜತ್ವವನ್ನು ದಯಪಾಲಿಸಿದರು. ನಂತರ ಅವರ ಅವರೋದುರಿದ ಸೈನ್ಯವನ್ನು ಒಗ್ಗೂಡಿಸಿ ಬಲ್ಲಾಳನೊಂದಿಗೆ ಹೋರಾಡಿ ಅವನ ಪ್ರದೇಶಗಳನ್ನು ಗೆದ್ದರು.

## ಕಲ್ಪನೆಯ ಪುಷ್ಟೀಕರಣ

ಡಾ|| ಎನ್. ವೆಂಕಟರಮಣಯ್ಯನವರು ವಿಜಯನಗರ ಸ್ಥಾಪನೆಯ ಈ ವಿಚಿತ್ರ ಕಥೆಯ ಮೇಲೆ ನಂಬಿಕೆ ಇರಿಸಿ ಅವರ ವಿಜಯನಗರದ ಮೂಲ ಮತ್ತು ಸಾಮ್ರಾಜ್ಯ (5ನೇ ಪಾಠ 129–247) ಪುಸ್ತಕದಲ್ಲಿ ಇಂದಿನ ಪಾಠವನ್ನು ಅದಕ್ಕೇ ಮೀಸಲಾಗಿಟ್ಟಿದ್ದಾರೆ. ಇದನ್ನು ಅಧಾರ ರಹಿತ ಎಂದು ಈಗಾಗಲೇ ಸಾಬೀತು ಪಡಿಸಿದೆ. ಹೊಯ್ಸಳರ ಆಳ್ವಿಕೆ ಮತ್ತು ಅಧಿಕಾರದ ವಿರುದ್ಧವಾಗಿ ಒಂದನೇ ಹರಿಹರ ತನ್ನ ರಾಜ್ಯವನ್ನು ಸ್ಥಾಪಿಸಿ ವಿಸ್ತರಿಸಲು ಪ್ರಯತ್ನಿಸಿದನು ಎಂದು ಸಾಬೀತು ಪಡಿಸಲು ಪ್ರಯತ್ನಿಸಿದ್ದಾನೆ. ಅವನ ವಾದವನ್ನು ಟೀಕಾತ್ಮಕವಾಗಿ ವಿಶ್ಲೇಷಿಸಿದಾಗ ಮತ್ತ ಆಳವಾಗಿ ಶೋಧಿಸಿದಾಗ ಶಾಸನಗಳು ಉಲ್ಲೇಖಗಳ ಆಧಾರದ ಮೇಲೆ ಹೇಳಿರುವ ಅಂಶಗಳು ಕೇವಲ ತೋರಿಕೆ ಗಪ್ಪೆ ಮತ್ತು ಅವನ ವಾದ ಕೇವಲ ವಿಚಿತ್ರ ಕಲ್ಪನೆಯಷ್ಟೆ. ಈ ವಿದ್ವಾಂಸರ ಸ್ವಂತ ಅಭಿಪ್ರಾಯಗಳ ಬಗ್ಗೆ ಅವರಿಗೇ ಖಚಿತತೆ ಇಲ್ಲ ಅವರ ವಾದದಲ್ಲಿ ಸಾಕಷ್ಟು ಬಾರಿ ಉಪಯೋಗಿಸಿರುವ ಪದಗಳು ಬಹುಶ: ಹಾಗೇ) ಅನಿಸುತ್ತದೆ.

## ಉಲ್ಲೇಖಗಳ ತಪ್ಪು ಗ್ರಹಿಕೆ

ಲೇಖಕರು ತಮ್ಮ ಸಂಶೋಧನಾ ಗ್ರಂಥದಲ್ಲಿ ಉಲ್ಲೇಖಿಸಿರುವ ಶಾಸನಗಳು ಅವರ ವಾದವನ್ನು ಪುಷ್ಟೀಕರಿಸುವುದಿಲ್ಲ ಉದಾಹರಣೆ (ಎಪಿಗ್ರಾಫಿಯ ಕರ್ನಾಟಕದ 10ನೇ ಭಾಗದಲ್ಲಿ) ಕೋಲಾರದ ಜಿಲ್ಲೆಯಲ್ಲಿರುವ ಚಿಂತಾಮಣಿ 53, ಕೋಲಾರ 54, ಬೌರಿಂಗ್‌ಪೇಟ್ 28 ಮತ್ತು ಮಾಲೂರ 16 ಗಳಲ್ಲಿ ಮೂರನೇ ಬಲ್ಲಾಳ ಹಾಗೂ ಒಂದನೇ ಹರಿಹರನ ನಡುವೆ ಯುದ್ದನಡೆದ

ಬಗ್ಗೆ ಯಾವುದೇ ಉಲ್ಲೇಖವಿಲ್ಲ. ಅವೆಲ್ಲಾ ಬಾಳಪ್ಪ ದಂಡನಾಯಕನ ಹಿರಿಮೆಗೆ ಧಾರ್ಮಿಕ ಉದ್ದೇಶಕ್ಕಾಗಿ ನೀಡಿದ ಕೊಡುಗೆಗಳು. ಅದರಲ್ಲಿ ಉಲ್ಲೇಖಿಸಿದಂತೆ ತೋಳು ಮತ್ತು ಕತ್ತಿಗಳ ಜಯಕ್ಕಾಗಿ (ವಾಲುಕ್ಕಂ ತೋಲುಕ್ಕಂ ಜಯಮಹ) ಅನ್ನುವ ಮಾತು ಸಥೃತ್ವ ಎಂಬ ಅರ್ಥ ನೀಡಿರುವುದು ಸರಿಯಾಗಿಲ್ಲ. ಈ ಯಾವ ದಾಖಲೆಗಳಲ್ಲೂ ಹರಿಹರನ ಹೆಸರಿಲ್ಲ.

ಈ ಬಲ್ಲಪ್ಪ ಒಬ್ಬ ಪ್ರಸಿದ್ಧ ಸೇನಾನಾಯಕ ಮತ್ತು ಮೂರನೇ ಬಲ್ಲಾಳನ ನಂಬಿಕಸ್ಥ ಮೇಲಾಧಿಕಾರಿ. ಶಾಂತಿ ಮತ್ತು ಕಾನೂನು ಪಾಲನೆ ಮತ್ತು ಅಸಹಕಾರಗಳ ದಮನ ಮಾಡಿ ಅವನ ಸಾಮ್ರಾಜ್ಯನಿಗೆ ಸಾಮ್ರಾಜ್ಯ ಪಾಲನೆಯಲ್ಲಿ ಸಹಾಯ ಮಾಡಿದ್ದಾನೆ. ಅಲ್ಲದೇ ಅವನು ಮೂರನೇ ಬಲ್ಲಾಳನಿಗೂ ಮತ್ತು ಒಂದನೇ ಹರಿಹರನ ಸಂಬಂಧಿ ಬಲ್ಲಾಳನ ಸೋದರಿ ಮಗ ಹಾಗೂ ಹರಿಹರನ ಅಳಿಯ. ಇವರಿಬ್ಬರ ಸಂಬಂಧ ಎಂದೂ ಹಳಸಿರಲಿಲ್ಲ. ಇದಕ್ಕೆ ಅಧಿಕೃತ ಸಾಕ್ಷಿ ಎಂದರೆ 1346ರ ಪ್ರಸಿದ್ಧ ಶೃಂಗೇರಿ ಉಲ್ಲೇಖ.[78] ಇದರಲ್ಲಿ ವಿಜಯನಗರದ ಸ್ಥಾಪನೆಯ ನಂತರ ಹರಿಹರ ಮತ್ತು ಅವನ ನಾಲ್ಕು ಸಹೋದರರ ಐತಿಹಾಸಿಕ ವಿಜಯಾಚರಣೆಯಲ್ಲಿ ಪಾಲ್ಗೊಂಡ ಪ್ರಮುಖರಲ್ಲಿ ಬಿಲ್ಲಪ್ಪನೊ ಮುಖ್ಯವಾಗಿ ಕಾಣಿಸಿಕೊಂಡಿದ್ದಾನೆ.

## ತಪ್ಪು ದಾರಿಗೆಳೆವ ವಾದಗಳು

ಮುಂದುವರಿದು ಮೇಲೆ ಹೇಳಿದ ಲೇಖಕರ ತಮ್ಮ ಆಧಾರರಹಿತ ಬಲ್ಲಾಳ ಹರಿಹರ ಶತೃತ್ವದ ಸಿದ್ಧಾಂತವನ್ನು ಸಮರ್ಥಿಸಲು ಉದ್ಧವಾದ ಚರ್ಚೆಯಲ್ಲಿ ಪಾಲ್ಗೊಂಡ ಕಡೆಯಲ್ಲಿ ಹರಿಹರ ಬಹುಶ: ಬಲ್ಲಪ್ಪ ದಂಡನಾಯಕನ ಜೊತೆ ಕೋಲಾರ ಜಿಲ್ಲೆಯ ನೀಲಗಿರಿ ಚೋಳ ಮಂಡಳದಲ್ಲಿ ಹೋರಾಡಿರಬೇಕೆಂದು ತೀರ್ಮಾನಿಸಿದ್ದಾರೆ. ಇನ್ನೊಂದು ವಿಷಯ ಇಲ್ಲಿ ಗಮನಿಸಬೇಕು. ಮೈಸೂರು ಜಿಲ್ಲೆ ಹುಣಸೂರಿನ 114 ಲೇಖದಂತೆ (ಎಪಿಗ್ರಾಫಿಯಾ ಕರ್ನಾಟಕ 4ನೇ ಭಾಗ) ಕಲ್ಲಿನ ಮೇಲೆ ಕೆತ್ತಿದೆ. ಅದು ವಿರೂಪಗೊಂಡಿದೆ ಹಾಗೂ ಅದರ ಉದ್ದೇಶ ಸ್ಪಷ್ಟವಾಗಿಲ್ಲ. ಕ್ರಿ.ಶ.1344[79] ಇದು ಕೇವಲ ಹರಿಯಪ್ಪ ಒಡೆಯ ಮತ್ತು ಕೆಲವು ಗೌಡರ ಹೆಸರು ಹೇಳುತ್ತದೆ. ಯುದ್ಧದ ವಿವರಗಳು ತಿಳಿದಿಲ್ಲ ಆದರೂ ಇದನ್ನು ಒಂದನೇ ಹರಿಹರ ಹಾಗೂ ಮೂರನೇ ಬಲ್ಲಾಳ ನಡುವಿನ ಯುದ್ಧದ ಸಿದ್ದಾಂತ ಸಾಬೀತು ಪಡಿಸಲು ಉಪಯೋಗಿಸಲಾಗಿದೆ. ನಿಜವಾಗಿ ಇದು ಕೇವಲ ಮಾಮೂಲಿ ಪ್ರಾಣಿಗಳಿಗಾಗಿ ಸ್ಥಳೀಯರ ಹಗೆತನ ಸಂಬಂಧಿಸಿದ್ದಿರ–ಬೇಕು.

## ಆಧುನಿಕ ಕಥೆಗಳು

ಇದು ಇತಿಹಾಸವನ್ನು ಹೇಗೆ ತಿರುಚಬಹುದು ಹಾಗೂ ನಗೆ ಪಾಟಲಿಗೀಡು ಮಾಡಬಹುದು ಎನ್ನುವುದನ್ನು ಅತ್ಯುತ್ತಮ ಉದಾಹರಣೆ. ತಮ್ಮ ಹುಚ್ಚು ಕಲ್ಪನೆಗಳಗನು– ಗುಣವಾಗಿ ಅತ್ಯಮೂಲ್ಯ ಸಾಕ್ಷಿಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಇದೆಲ್ಲವೂ ಪೂರ್ವಾಗ್ರಹ ಕಲ್ಪನೆ. ಇವೆಲ್ಲವೂ ವೈಜ್ಞಾನಿಕ ರೀತಿ ಎಂದು ಹೇಳಲಾದ ತಂತ್ರಗಳನ್ನು ಉಪಯೋಗಿಸಿ ಆಧುನಿಕ ಇತಿಹಾಸಕಾರರು ಕಟ್ಟಿರುವ ಆಧುನಿಕ ದಂತ ಕಥೆಗಳು ಇವು ನೈಜ ಇತಿಹಾಸ ಲೆಕ್ಕ ಹಾಕಲಾರದಷ್ಟು ಅನ್ಯಾಯ ಹಾಗೂ ತೊಂದರೆ ಮಾಡಿವೆ.

## ಬಲ್ಲಾಳನ ದೇಶ ಪ್ರೇಮ

ಹೀಗೆ ಹೊಯ್ಸಳರ ಹಾಗೂ ಒಂದನೇ ಸಂಗಮನ ನಡುವಿನ ಯುದ್ಧದ ಕಟ್ಟುಕಥೆಯನ್ನು ಸುಳ್ಳೆಂದು ಸಾಬೀತು ಪಡಿಸಿ ಈಗ ನನ್ನ ಗಮನವನ್ನು ನಿಜವಾದಯುದ್ಧದ ಕಡೆ ಹರಿಸಿತ್ತಿದ್ದೇನೆ. ಇದು ಮಾಡುವ ಶಕಕ್ಕೂ ಹೆಚ್ಚುಕಾಲ ಮೂರನೇ ಬಲ್ಲಾಳನಿಂದ ನಂತರ ಒಂದನೇ ಹರಿಹರನಿಂದ ನಡೆದ ರಾಷ್ಟ್ರೀಯ ಸ್ವಾತಂತ್ರ್ಯದ ಹೋರಾಟ. ದಕ್ಷಿಣದ ಮೇಲೆ ಮುಸ್ಲಿಂರ ದಾಳಿ ಒಂದು ಹಿಂದೆಂದೂ ನಡೆಯದ ವಿಶ್ವ ತೂಕದ ವಿನಾಶ. ಅದರವಿನಾಶಕಾರಿ ನೆರಳು ಬಲ್ಲಾಳನ ಆಳ್ವಿಕೆಯ ಮೊದಲ ದಶಕದಲ್ಲಿ ಹೊಯ್ಸಳ ಸಾಮ್ರಾಜ್ಯದ ಮೇಲೆ ಪಸರಿಸಿತ್ತು. ಎರಡೇ ದಶಕದ ಹೊತ್ತಿಗೆ ಹೊಯ್ಸಳ ಸಾಮ್ರಾಜ್ಯದ ತನ್ನ ಕರಾಳ ಹಸ್ತಚಾಚಿತು. ದಕ್ಷಿಣದ ಇತರ ರಾಜರಾದ ಯಾದವ, ಕಾಕೇತೇಯರಿಗಿಂತ ವಿಭಿನ್ನ ಸಾಮರ್ಥ್ಯ ಬಲ್ಲಾಳನದು. ಮುಸ್ಲಿಂ ಬೃಹತ್ ಶಕ್ತಿಯ ಮುಂದೆ ಬಲ್ಲಾಳ ಒಗ್ಗಿರಬಹುದ ಆದರೆ ಸೋಲಪ್ಪ ಕೊಂದಿಲ್ಲ. ಅವನ ದೂರದೃಷ್ಟಿ, ದೇಶಭಕ್ತಿ, ಸ್ವಾತಂತ್ರ್ಯದ ಸ್ಪೂರ್ತಿ, ಉತ್ಸಾಹ ಧೈರ್ಯ, ಜ್ಞಾನ, ಬುದ್ಧಿವಂತಿಕೆ, ಶೀಘ್ರ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯ ಎಲ್ಲವೂ ದೇಶಕ್ಕೆ ಮತ್ತು ಜನಗಳಗೂ ಸಹಾಯವಾಯಿತು.

## ಶತೃಗಳ ವಿಜಯ

ದಕ್ಷಿಣ ಭಾರತದ ಮೇಲಿನ ವಿಜಯದ ಹಾದಿಯ ಮೈಲಿಗಲ್ಲುಗಳನ್ನು ಇಲ್ಲಿ ನೋಡಬಹುದು. 1318 ರಲ್ಲಿ ಸತತ ಆಕ್ರಮಣದಿಂದ ಬಲಿಯಾಗಿ ದೇವಗಿರಿ ಸಾಮ್ರಾಜ್ಯ ನಾಶವಾಯಿತು. 1323 ರಲ್ಲಿ ವಾರಂಗಲ್ ಸಾಮ್ರಾಜ್ಯ ಪತನಗೊಂಡಿತು. 1327ರಲ್ಲಿ ಕಂಪಿಲಿ ಸಾಮ್ರಾಜ್ಯ ಚೂರುಚೂರಾಯ್ತು. 1310 ರಲ್ಲಿ ಹೊಯ್ಸಳರ ರಾಜಧಾನಿ ದ್ವಾರ ಸಮುದ್ರ ಶತೃಗಳ ಪಾಲಾಯ್ತು. ಪಾಂಡ್ಯರು ಸಾಮಂತರಾದರು. ಮತ್ತು 1333 ರಲ್ಲಿ ದೆಹಲಿಯ ಸುಲ್ತಾನನ ಅಧಿಕಾರಿಗಳು ಮದುರೈಗೆ ಬಂದಿಳಿದರು.

## ಬಲ್ಲಾಳನ ಅತ್ಯುನ್ನತ ಪ್ರಯತ್ನಗಳು

ಈ ರಾಜಕೀಯ ಹಿನ್ನೆಲೆಯಲ್ಲಿ ನಾವು ಮುಮ್ಮಡಿ ಬಲ್ಲಾಳದ ಚಟುವಟಿಕೆಗಳನ್ನು ಗಮನಿಸಬಹುದು. ಬಲ್ಲಾಳನ ಸಾಮ್ರಾಜ್ಯವು ಉತ್ತರದಲ್ಲಿ ಹಂಪಿ ತುಂಗಭದ್ರ ಪ್ರದೇಶದಿಂದ ದಕ್ಷಿಣದಲ್ಲಿ ರಾಮೇಶ್ವರಂ ತನಕ ದಾಟಿತ್ತು. ಪೂರ್ವದಿಂದ ಪಶ್ಚಿಮದವರಿಗೆ ಸಮುದ್ರವೇ ಸಾಮ್ರಾಜ್ಯದ ಸೀಮೆಯಾಗಿತ್ತು. ಇಷ್ಟು ದೊಡ್ಡ ಸೀಮೆಯನ್ನು ಉಲ್ಲಂಘಿಸಿ ತನ್ನ ಸೈನ್ಯವನ್ನು ಎಲ್ಲ ಆಯರಬ್ಬನ ಸ್ಥಳದಲ್ಲಿ ಸ್ಥಾಪಿಸಿ ಆಳವಾಗಿ ಬೇರೂರಿದರು ಶತೃಗಳು. ಅವರ ಹಿಡಿತದಿಂದ ತಪ್ಪಿಸಿಕೊಳ್ಳುವುದು ಸಾಧಾರಣ ಮಾತಾಗಿರಲಿಲ್ಲ. ಆದರೂ ಸಹ ಅದನ್ನು ಸಾಧಿಸುವುದಕ್ಕೆ ತನ್ನ ಅತೀವ ಉತ್ಸಾಹದಿಂದ ಮತ್ತು ಅಪರೂಪದ ಕುಶಾಗ್ರಮತಿಯಿಂದ ತನ್ನನ್ನು ತಾನು ತೊಡಗಿಸಿಕೊಂಡ. ಇವರ ಬಗ್ಗೆ ಲಭ್ಯವಿರುವ ಲೇಖನಗಳನ್ನು ಹೋಲಿಸಿದಾಗ, ಮುಸ್ಲಿಂ ಲೇಖಕರ ಬರಹಗಳನ್ನು ಎಚ್ಚರಿಕೆಯಿಂದ ಉಪಯೋಗಿಸಿ ಹೊಯ್ಸಳ ರಾಜರು ನಡೆಸಿದ ಹೋರಾಟ ಮತ್ತು ರಣತಂತ್ರಗಳ ಕ್ಲುಪ್ತ ವಿವರಣೆ ನೀಡಬಹುದು. ಸಾಕಷ್ಟು ಉಲ್ಲೇಖಗಳು ಲಭ್ಯವಿದ್ದರೂ ಅನೇಕ ಅಗತ್ಯ ಮಾಹಿತಿಗಳನ್ನು ಅವು ನೀಡುವುದಿಲ್ಲ. ಆದರೂ ಸಹ ಅವುಗಳಿಂದ ಕೆಲವು ಮಾಹಿತಿ ಲಭ್ಯವಿದೆ.

## ಉತ್ತರದ ರಕ್ಷಣೆ

ಹಂಪಿ ಪ್ರದೇಶ ಸಹಾ ಬಲ್ಲಾಳನ ಆಳ್ವಿಕೆಗೆ ಒಳಗೊಂಡಿತು ಎನ್ನುವುದು ಪ್ರಶ್ನಾತೀತ ಹಾಗೂ ಇದರ ಬಗ್ಗೆ ಸಾಕಷ್ಟು ಪುರಾವೆಗಳು ಇವೆ. ಹಂಪೆಗೆ ಬೇಟಿ ನೀಡುವ ಯಾವುದೇ ಆದುನಿಕ ಪ್ರವಾಸಿಗರು ಯಾರೇ ಆದರೂ ಅಷ್ಟೊಂದು ಬೆಟ್ಟಗಳಿರುವ ಪ್ರದೇಶವನ್ನು ರಾಜಧಾನಿಯಾಗಿ ಮಾಡಿಕೊಂಡ ರಾಜರ ಬುದ್ದಿವಂತಿಕೆಯನ್ನು ಪ್ರಶ್ನಿಸಬಹುದು. ಆದರೆ ಪ್ರದೇಶದ ಭೌಗೋಳಿಕತೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದವರಿಗೆ ಹಂಪೆಯ ಸುತ್ತ ಹರಿಯುವ ಎರಡು ನದಿಗಳು, ಉತ್ತರದ ಪ್ರದೇಶದಲ್ಲಿರುವ ರಾಜದಾನಿ, ಸುಲಭವಾಗಿ ತಲುಪಲಾರದ ಪ್ರದೇಶ ಎಲ್ಲ ಗಮಿಸಿದಾಗ ಸೈನ್ಯ ಹಾಗೂ ರಕ್ಷಣೆಯ ದೃಷ್ಟಿಯಿಂದ ಇದು ಅತ್ಯುತ್ತಮ ಜಾಗ ಎಂದು ವೇದ್ಯವಾಗುತ್ತದೆ. ಶತೃಗಳ ದಾಳಿಯಿಂದ ತಪ್ಪಿಸಿಕೊಳ್ಳಲು ಹಾಗೂ ಅವರ ಮೇಲೆ ಆಕ್ರಮಣಮಾಡಲು ಇದು ಎಲ್ಲಾ ರೀತಿಯಲ್ಲೂ ಸೂಕ್ತವಾಗಿದೆ ಎಂದು ಅರಿವಾಗುತ್ತದೆ.

ತನ್ನನ್ನು ರಕ್ಷಿಸಿಕೊಳ್ಳುವ ಸಲುವಾಗಿ ಮೂರನೇ ಬಲ್ಲಾಳ ನದಿಯ ಉತ್ತರಕ್ಕೆ ಪರ್ವತಗಳ ಸಾಲಿನಲ್ಲಿ ಈ ಕೋಟೆಯನ್ನು ಕಟ್ಟಿದಂತೆ ಕಾಣುತ್ತದೆ. ಬಹುಶ: ಇದತ್ತಾಗಿ ಇದನ್ನು

ಹೊಸದುರ್ಗ, ವಿರೂಪಾಕ್ಷ, ಹೊಸದುರ್ಗ, ಹೊಸಬೆಟ್ಟ ಹೊಸ ಪಟ್ಟಣ ಎಂದು ಕರೆಯಲಾಗುತ್ತಿದೆ.

ವಿರೂಪಾಕ್ಷಪುರ, ವಿರೂಪಾಕ್ಷ ಪಾದ, ವೀರ ವಿಜಯ ವಿರೂಪಾಕ್ಷಪುರ, ವಿರೂಪಾಕ್ಷ ಪಟ್ಟಣ ಇತ್ಯಾದಿ ಹೆಸರುಗಳು ಮೂರನೇ ಬಲ್ಲಾಳನಿಗೆ ಸಂಬಂಧಿಸಿದ ಉಲ್ಲೇಖಗಳಲ್ಲಿ ಕಾಣುತ್ತವೆ. ವಿರೂಪಾಕ್ಷ ದೇವಸ್ಥಾನ ತುಂಬಾ ಹತ್ತಿರದಲ್ಲೇ ಎದುರಿನ ಬಂಡಯ ಮೇಲೆ ಇರುವುದರಿಂದ ಊರಿಗೆ ಈ ಹೆಸರು ಬಂದಿದೆ ಎಂದು ಯಾರಾದರೂ ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ವಿಜಯ ಎನ್ನುವುದು ವೀರವಿಜಯ ಬಲ್ಲಾಳಪುರದಿಂದ ಗೌರವಯುತವಾಗಿ ತೆಗೆದುಕೊಳ್ಳ-ಲಾಗಿತೆಂದು ಹೊರತು ವಿಜಯನಗರದಿಂದಲ್ಲ.

## ಬಲ್ಲಾಳನ ತಂತ್ರಗಳು

ಉತ್ತರದ ದ್ವಾರಗಳನ್ನು ವಶಕ್ಕೆ ತೆಗೆದುಕೊಳ್ಳುವುದರ ಮೂಲಕ ಶತೃಗಳ ಒಳಬರುವುದನ್ನು ಬಲ್ಲಾಳ ನಿಯಂತ್ರಿಸಿದ ಆದರೆ ಕೆಲವು ಶತೃಗಳು ಈಗಾಗಲೇ ಒಳ ಪ್ರವೇಶಿಸಿ ತಮ್ಮ ಅದಿಪತ್ಯ ಸ್ಥಾಪಿಸಲಾರಂಭಿಸಿದ್ದರು. ಅವರ ವಸಾಹತುಗಳು ಪೂರ್ವ, ಪಶ್ಚಿಮ, ಉತ್ತರ ದಕ್ಷಿಣ ಎಲ್ಲೆಡೆ ಹಬ್ಬಿತ್ತು. ಇದಕ್ಕಾಗಿ ಬಲ್ಲಾಳ ತನ್ನ ಶತೃಗಳನ್ನು ತನ್ನ ಪ್ರದೇಶದಲ್ಲೆ ಎದುರಿಸುವ ಸಿದ್ದತೆ ಮಾಡಿಕೊಂಡಿದ್ದನು. ಇದರಿಂದಲೇ ಶತೃ ಸಂಹಾರ ಮಾಡಬಹುದಿತ್ತು. ಇದಕ್ಕಾಗಿ ಬಲ್ಲಾಳ ಸಾಕಷ್ಟು ಸಂಚರಿಸಿ ತನ್ನ ಬಲವನ್ನು ಒಟ್ಟುಗೂಡಿಸಿ ಯುದ್ದಕ್ಕಾಗಿ ತಯಾರುಗೊಳಿಸಿದ ನಂತರ ನಡೆದ ಘಟನೆಗಳು ಅವನ ತಂತ್ರಗಳನ್ನು ಯಶಸ್ವಿ ಎಂದು ನಿರೂಪಿಸಿದವು.

ಫೆರಿಸ್ತಾನ ಪ್ರಕಾರ ಬಲ್ಲಾಳ ಅವನ ಆತ್ಮೀಯರನ್ನು ಒಗ್ಗೂಡಿಸಿ ಆಂದ್ರ ಹಾಗೂ ತಮಿಳುನಾಡಿನ ಮುಖ್ಯಸ್ಥರು ಹಾಗೂ ನಾಯಕರನ್ನು ಒಗ್ಗೂಡಿಸಿ ದಕ್ಷಿಣ ಭಾರತವನ್ನು ವಿದೇಶಿ ಆಕ್ರಮಣದಿಂದ ಮತ್ತೆ ಗಳಿಸಲು ಪ್ರಯತ್ನಿಸಿದನು. ಈ ನಿಟ್ಟಿನಲ್ಲಿ ಬಲ್ಲಾಳ ನಡಿಸಿದ ಪರಿಶ್ರಮದ ಯತ್ನಗಳ ಮತ್ತು ದೀರ್ಘಕಾಲದ ಸತತ ಪ್ರಯತ್ನಗಳ ಚಿತ್ರಣ ಇಲ್ಲವೆ. ಕ್ರಿ.ಶ.1310[80]ರಲ್ಲಿ ದ್ವಾರಸಮುದ್ರವು ಮಲ್ಲಿಕಾಫರನ ದಾಳಿಗೆ ತುತ್ತಾದ ನಂತರ ಬಲ್ಲಾಳ ಬೈಲೂರಿನಲ್ಲಿ ಆಶ್ರಯ ಪಡೆದ. ಎರಡು ವರ್ಷದ ನಂತರ ದಕ್ಷಿಣ ಆರ್ಕಾಟ್ ಜಿಲ್ಲೆಯ ತಿರುವಣ್ಣಾ ಮಲೈಗೆ ವಲಸೆ ಹೋದ. ಈ ಪ್ರದೇಶವನ್ನು ಅರುಣ ಸಮುದ್ರ, ಉಣ್ಣಾ ಮಲೈ ಪಟ್ಟಣ ಮತ್ತು ಇದೇ ತರಹದ ಇನ್ನಿತರ ಹೆಸರುಗಳಿಂದಲೂ ಕರೆಯಲಾಗುತ್ತಿದೆ. ಕ್ರಿ.ಶ.1318ರಿಂದ ಅವನು ಈ ಪಟ್ಟಣಕ್ಕೆ ಆಗಾಗ ಬರುತ್ತಿದ್ದ 1340 ರಿಂದ 1343 ರವರೆಗೆ ಅವನು ಅಲ್ಲಿಯೇ ನೆಲೆಸಿದ್ದ 1334ರಲ್ಲಿ ಅವನು ಟಿಂಗಲೆ ಪುಟ್ ಜಿಲ್ಲೆಯ ಕಂಚಿಯನ್ನು ಸಂದರ್ಶಿಸಿದ್ದ.

ಇದನ್ನು ನೋಡಿದಾಗ ತಿರುವಣ್ಣಾಮಲೈ ಆಂಧ್ರ ಮತ್ತು ತಮಿಳುನಾಡಿನಲ್ಲಿ ಹೊಯ್ಸಳ ರಾಜರ ಪ್ರಮುಖ ಪ್ರದೇಶವಾಗಿತ್ತು. ಮತ್ತು ಅಲ್ಲಿಂದಲೇ ಶತೃಗಳ ನಿಗ್ರಹದ ಕಾರ್ಯಾಚರಣೆಗಳು ನಡೆಯುತ್ತಿದ್ದದು ಸ್ಪಷ್ಟ. ಬಹುಶ: 1328 ರಲ್ಲಿ ಬಲ್ಲಾಳ ಅಲ್ಲಿ ಸ್ವಾತಂತ್ರ್ಯ ಹೋರಾಟಗಾರರನ್ನು ಒಂದುಗೂಡಿಸಿದ್ದು ಇಲ್ಲಿಂದಲೇ ಮದುರೆಯೇ ದಕ್ಷಿಣ ಪಾಂಡ್ಯರ ರಾಜ್ಯದಲ್ಲಿ ಹೊಸದಾಗಿ ಹುಟ್ಟಿದ್ದ ಶತೃಗಳ ಸಂಹಾರಕ್ಕೆ ಯೋಜನೆ ಹೆಣೆಯಲಾಗಿತ್ತು. ಪಶ್ಚಿಮದಲ್ಲಿ ಮುಸ್ಲಿಂ ದಾಳಿ ತೀವ್ರವಾಗಿರಲಿಲ್ಲ. ಆದರೆ ಬಲ್ಲಾಳ ಪ್ರತಿಭಟಿಸಲಾರಂಭಿಸಿದ ಸಾಮಂತ ಆಲೂಪರನ್ನು ಸರಿಯಾಗಿ ಅಂದಾಜಿಸಬೇಕಿತ್ತು. ಕ್ರಿ.ಶ.1338[81] ಅವರ ಮೇಲೆ ಹಿಡಿತ ಸಾಧಿಸಲು ಬಾರಕೂರಿಗೆ ಭೇಟಿಯಿತ್ತು ಮತ್ತು ತನ್ನ ಸೈನ್ಯವನ್ನು ಬಲಪಡಿಸಿ ಕ್ರಿ.ಶ.1330ರಲ್ಲಿ ಬಲ್ಲಾಳ ತನ್ನ ಶಕ್ತಿಯನ್ನು ಒಗ್ಗೂಡಿಸಿದ. ಅವನ ಎಲ್ಲಾ ಅನುಯಾಯಿಗಳು ಆಶಾವಾದಿಗಳು ಮತ್ತು ತಮ್ಮ ಸಂಪ್ರದಾಯಕ್ಕೆ ಅನುಸಾರವಾಗಿ ಧಾರ್ಮಿಕ ಆಚರಣೆಗಳಿಂದ ಅವನ ವಿಜಯಕ್ಕೆ ಪ್ರಾರ್ಥಿಸಿದ್ದರು. 1330 ರಿಂದ ಬೆಂಗಳೂರು ಜಿಲ್ಲೆಯ ಎರಡು ಉಲ್ಲೇಖಗಳಂತೆ ಮುಮ್ಮಡಿ ಬಲ್ಲಾಳ ವಿಜಯತ್ತಾಕಿ ಪ್ರಾರ್ಥನೆಗಳಾಗಿದ್ದವು.

ಉತ್ತರದಲ್ಲಿ ಹಂಪಿ ಆನೆಗೊಂದ ಪ್ರದೇಶದಲ್ಲಿ ದೆಹಲಿ ಸುಲ್ತಾನರ ವಿರುದ್ಧ ಶಕ್ತಿಗಳು ಒಟ್ಟುಗೂಡುತ್ತಿದ್ದಂತೆ ಅವನ ಅಧಿಕಾರಿಗಳು ವಾಪಸ್ ಹೋಗಬೇಕಾಯ್ತು. ಆಂಧ್ರ ರಾಜ್ಯದಲ್ಲಿ ಈ ಹಿಂದೆಯೂ ನಡೆದ ಸ್ವಾತಂತ್ರ್ಯ ಸಮರಗಳಿಂದ ಪ್ರೇರಣೆಗೊಂಡ ಜನರು ಬಲ್ಲಾಳನ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿದ್ದರು ಮತ್ತು ದಕ್ಷಿಣ ಭಾಗದಲ್ಲಿ ಕೆಲ ಯಶಸುನ್ನು ಪಡೆದರು. ಆದರೆ ಇದರಿಂದ ನಡೆದ ಘಟನೆಗಳ ಪರಿಣಾಮಗಳಿಗಿಂತ ಹೆಚ್ಚಾಗಿ ಈ ವಿನಾಶಕಾರಿ ವಿದೇಶಿ ದಾಳಿಯಿಂದ ತಪ್ಪಿಸಿಕೊಳ್ಳಲು ರೂಪಿಸಿದ ತಂತ್ರಗಳಿಗೆ ನಾವು ಹೆಚ್ಚಿನ ಗಮನ ನೀಡಬೇಕು.

### ಅಧಿಕಾರದ ವಿಕೇಂದ್ರೀಕರಣ

ಈ ತಂತ್ರದ ಮೂಲ ಉದ್ದೇಶ ಅವನ ಮಂತ್ರಿಗಳಿಗೆ, ಸೈನಾಧಿಪತಿಗಳಿಗೆ, ಸಾಮಂತರಿಗೆ, ಸ್ಥಳೀಯ ಅಧಿಕಾರಿಗಳಿಗೆ ಹೆಚ್ಚಿನ ಸ್ವಾತಂತ್ರ್ಯ ಹಾಗೂ ಅಧಿಕಾರ ನೀಡುವುದಾಗಿತ್ತು. ಆದರೆ ಇದನ್ನು ಮೊದಲು ಬಲ್ಲಾಳ ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರ ನಿಷ್ಠೆಯನ್ನು ಪರೀಕ್ಷಿಸಿ ಮತ್ತು ವಿದೇಶ ಶತೃಗಳ ವಿರುದ್ಧದ ಅವನ ಗುರಿಯಲ್ಲಿ ಪಾಲ್ಗೊಳ್ಳುವುದನ್ನು ಖಚಿತಪಡಿಸಿ–ಕೊಂಡಿದ್ದ. ಈ ನಿಟ್ಟಿನಲ್ಲಿ ಸಾಕಷ್ಟು ಉದಾಹರಣೆಗಳಿವೆ. ಕೆಲವು ಉಲ್ಲೇಖಗಳನ್ನು ಇಲ್ಲಿ ಕೊಟ್ಟಿದೆ.

1) ರಾಜ ಬಲ್ಲಾಳ ಮತ್ತು ಮಾಡಿಗಿದೇವ ದ್ವಾರಸಮುದ್ರವನ್ನು ಆಳುತ್ತಿದ್ದರು. (ಎಪಿಗ್ರಾಪಿಯಾ ಕರ್ನಾಟಕ ಸಂಪುಟ 9, ಹೊಳಲ್ಕರೆ 136 1307 ಎ.ಡಿ.)

2) ರಾಜ ಬಲ್ಲಾಳ, ಮಹಾಮಂತ್ರಿದೇವ ಮಾಡಗಿದೇವ ಮತ್ತು ಮಹಾಮಂತ್ರಿ ಮಾಚಯ್ಯ (ಅಳಿಯ) ದ್ವಾರ ಸಮುದ್ರದಿಂದ ರಾಜ್ಯವನ್ನು ಆಳುತ್ತಿದ್ದನು. (ಚಿತ್ರದುರ್ಗ 1310 ಎ.ಡಿ.)
3) ರಾಜನ ಹೆಸರಿಲ್ಲ. ಮಹಾಮಂತ್ರಿ ಮಾವ ದಂಡನಾಯಕ ರಾಜ್ಯವನ್ನು ಆಳುತ್ತಿದ್ದ (1311 ಎ.ಡಿ. ಸಂಪುಟ 4, ಗುಂಡ್ಲುಪೇಟೆ 45)
4) ರಾಜ ಬಲ್ಲಾಳ, ಶಕ್ತಿಶಾಲಿ ಭೀಮರಾಯ, ರಾಜ ಕುಮಾರ ಕಥೋರಹರ, ರಾಜಕುಮಾರ ಸಿಂಹ ರಘುನಾಥ, ರಾಜಕುಮಾರ ಕಾಲಮೋಘ, ರಾಜಕುಮಾರ ವೀರ ಸಂತೆ, ದಂಡನಾಯಕರ ಬೈಚಯ್ಯ ಮಹಾಮಂತ್ರ ಬಾಳಪ್ಪ ದಂಡನೀಯ ಮತ್ತು ಮಹಾಮಂತ್ರಿ ಸಿಂಗೇಯ ದಂಡನಾಯಕ ಉಣ್ಣಾಮಲೆಯಿಂದ ರಾಜ್ಯವಾಳುತ್ತಿದ್ದರು. (1328ನೇ ಇಸವಿ, ಸಂಪುಟ 9, ಚಿತ್ರದುರ್ಗ 4)
5) ರಾಜ ಬಲ್ಲಾಳ ಮೊದಲು ವಿರೂಪಾಕ್ಷ ಹೊಸದುರ್ಗದಲ್ಲಿದ್ದ. ಅವನು ಮತ್ತು ಮಹಾಮಂತ್ರಿ ರಾಮೇಯ ದಂಡನಾಯಕ ರಾಜ್ಯವಾಳುತ್ತಿದ್ದರು. (1138 ಎ.ಡಿ. ಸಂಪುಟ 9, ಚಿತ್ರದುರ್ಗ 6).
6) ರಾಜನ ಹೆಸರಿಲ್ಲ ಮಹಾಮಂದಲೇಶ್ವರ ವೀರಹರಿಯಪ್ಪ ಒಡೆಯ ಅರಿರಾಯವಿಭಾಡ, ನಾಲ್ಕು ಸಾಗರ ಜಜಿಯ ಬಿರುದಂಅತಿತ ರಾಜ್ಯವಾಳುತ್ತಿದ್ದನು (1340 ಎ.ಡಿ. ಸಂಪುಟ 4, ನೆಲಮಂಗಲ 14).

**ಅಪರೂಪದ ಉದಾಹರಣೆಗಳು**

ಮೇಲಿನವನ್ನು ಮತ್ತು ಇತರೆ ಕೆಲವನ್ನು ಅಪರೂಪದ ಉದಾಹರಣೆಗಳೆನ್ನಬಹುದು. ಸಾಧಾರಣವಾಗಿ ಇಂತಹ ಪರಿಸ್ಥಿತಿಯಲ್ಲಿ ರಾಜ ತನ್ನ ಸಾರ್ವ ಭೌಮತ್ವವನ್ನು ತನ್ನ ರಾಣಿ, ರಾಜಪುತ್ರರು ಮತ್ತು ಇನ್ನಿತರ ರಾಜಮನೆತನದ ಸದಸ್ಯರ ಜೊತೆ ಹಂಚಿಕೊಂಡಿರುತ್ತಾನೆ. ಆದರೆ ಇಲ್ಲಿ ಅವನ ಅಧಿಕಾರ ಮಂತ್ರಿ ಹಾಗೂ ಸೇನಾದಿಪತಿಗೊಳಡನೆ ಅಂದರೆ ಅವನ ಕೈಕೆಳಗಿನ ಅದಿಕಾರಿಗೊಳಡನೆ ಹಂಚಲ್ಪಟಿದೆ. ಅನೇಕ ಬಾರಿ ರಾಜನೊಡನೆ ಚರ್ಚಿಸಿದ ಇವರುಗಳು ಕೊಡುಗೆಗಳನ್ನಿತ್ತಿದ್ದಾರೆ. ಹಾಗೆಂದು ಇದು ಉದ್ಧಟತನವೆಂದು ಎಲ್ಲೂ ದಾಖಲಾಗಿಲ್ಲ. ಈ ಹೆಚ್ಚುವರಿ ಅಧಿಕಾರವು ಬಹುಶ: ದೇಶದಲ್ಲಿ ಆಗುತ್ತಿದ್ದ ಅನ್ಯಾಯ ಘಟನೆಗಳ ಪರಿಣಾಮ–ವಿರಬೇಕು.

ಮೇಲಿನ 4ನೇ ಉದಾಹರಣೆಯಲ್ಲಿ ರಾಜ ಮತ್ತು ನಾಲ್ಕು ರಾಜಪುತ್ರರೊಡನೆ ಒಟ್ಟು ಒಂಭತ್ತು ಹೆಸರಿದೆ. ಇವರೆಲ್ಲಾ ಸೇರಿ ರಾಜ್ಯವಾಳುತ್ತಿದ್ದರೆಂದು ಹೇಳಲಾಗಿದೆ. ಇದು ಅತಿ

ಅಪರೂಪದ ಉದಾಹರಣೆ. ಇದು ಮೇಲೆ ಹೇಳಿದ ಬಲ್ಲಾಳನಿಗೆ ಮತ್ತು ಅವನ ರಾಜಾಸ್ಥಾನಕ್ಕೆ ಅನ್ವಯಿಸಿದೆ. ಕಡೆಯ ಉದಾಹರಣೆಯಲ್ಲಿ ಹೇಳಿದ ಹರಿಹರ ಪ್ರಶ್ನಾತೀತವಾಗಿ ವಿಜಯನಗರದ ಒಂದನೇ ಹರಿಹರ. ನಾಲ್ಕು ಸಾಗರ ಒಡೆಯ ಎಂಬ ಬಿರುದನ್ನು ಹೊಂದಿದ್ದರು. ಮಹಾ-ಮಂಡಲೇಶ್ವರ ಎಂದು ಬಿರುದು ನಿಡಿರುವುದು ಅವನು ಮೂರನೇ ಬಲ್ಲಾಳನಿಗೆ ಸಾಮಂತ-ನಾಗಿರುವುದನ್ನು ಸೂಚಿಸುತ್ತದೆ.

## ಹರಿಹರನ ಉದಯ

ಹರಿಹರನ ಪ್ರಾರಂಭದ ದಿನಗಳ ಬಗ್ಗೆ ಅಷ್ಟಾಗಿ ಉಲ್ಲೇಖಗಳು ಲಭ್ಯವಿಲ್ಲ. ಆದಾಗ್ಯೂ, ನಾವು ಅವನ ಬಗ್ಗೆ ಕೆಲವು ಖಚಿತ ದಾಖಲೆಗಳನ್ನು ಗಮನಿಸಬಹುದು. ಅವನು ಹಂಪೆ ಆನೆಗೊಡು ಪ್ರದೇಶವನ್ನು ಅಲ್ಲ ಅವನ ತಂದೆ ಸಂಗಮ ಒಬ್ಬ ಸಾಧಾರಣ ಅಧಿಕಾರಿ-ಯಾಗಿದ್ದವನು. ಹರಿಹರ ಸಹಾ 3ನೇ ಬಲ್ಲಾಳನ ಕೈಕೆಳಗೆ ಕೆಲಸ ಮಾಡಲು ಆರಂಭಿಸಿರಬೇಕು. ನಂತರ ದಿನಗಳಲ್ಲಿ ಮಹಾ ಮಂಡಲೇಶ್ವರನಿಗೆ ಅಥವಾ ಒಂದು ಪ್ರದೇಶದ ಪಾಲಕನಾಗಿ ನೇಮಕ ಗೊಂಡಿರಬೇಕು. 1334-40ರ ಸುಮಾರಿನ 3 ಉಲ್ಲೇಖಗಳು ಈ ಮೇಲ್ಕಂಡ ಬಿರುದನ್ನು ಸೂಚಿಸುತ್ತವೆ. ಆ ಕಾಲದಲ್ಲಿ ಮೂರನೇಬಲ್ಲಾಳನ ಹೊರತು ಬೇರಾರೂ ಸಾರ್ವಭೌಮರಿರಲಿಲ್ಲವಾದ್ದರಿಂದ ಅವನ ಬಲ್ಲಾಳನ ಕೈ ಕೆಳಗಿನ ಅಧಿಕಾರಿ ಎಂದೇ ಹೇಳಬಹುದು.

ಬಲ್ಲಾಳ ತನ್ನ ಸಾಮ್ರಾಜ್ಯದ ಉತ್ತರ ಸೀಮೆಗಳನ್ನು ರಕ್ಷಿಸಿಕೊಳ್ಳುವ ಉದ್ದೇಶದಿಂದ ಹರಿಹರನಿಗೆ ಉತ್ತರದ ಅಧಿಕಾರನೀಡಿರಬೇಕು. ಹರಿಹರನೇ ಅತಿ ದಕ್ಷ ಎನಿಸಿರಬೇಕು ಹೀಗೆ ಬಲ್ಲಾಳ ದಕ್ಷಿಣದ ಮತ್ತು ಆಗ್ನೇಯದಡಿ ಗಮನಹರಿಸಿದರೆ, ಹರಿಹರ ಉತ್ತರ ಹಾಗೂ ವಾಯುವ್ಯದ ಜವಾಬ್ದಾರಿ ತೆಗೆದುಕೊಂಡ. ಈ ನಿಟ್ಟಿಯಲ್ಲಿ ಹರಿಹರ ಯಶಸ್ಸು ಕಂಡ ಬಾದಾಮಿಯಲ್ಲಿ ಒಂದು ಕೋಟೆ ಕೊಟ್ಟಿದ್ದು, ಉತ್ತರದಲ್ಲಿ ಅವನ ವಿಜಯಗಳು ಎಲ್ಲವೂ ಆ ಪ್ರದೇಶದ ಮುಸ್ಲಿಂ ಅವಿತಾರಿಗಳಿಂದ ಗಮನಿಸಿಲ್ಲದ್ದಿವೆ. ಈ ಮೊದಲು ರಾಜರಕ್ತವನ್ನು ಗುರುತಿಸಿ ಹರಿಹರ ಮತ್ತು ಅವನ ಕುಟುಂಬದ ಸ್ಥಾನಮಾನ ಗುರುತಿಸಿ ಬಲ್ಲಾಳ ಅವನೊಡನೆ ವೈವಾಹಿಕ ಸಂಬಂಧ ಜನಿಸಿಸಿದ. ಪರಿಣಾಮವಾಗಿ ಬಾಳಪ್ಪ ದಂಡನಾಯಕನ, ಓರ್ವ ಉನ್ನತ ಹೊಯ್ಸಳ ಅಧಿಕಾರಿ ಹಾಗೂ ಬಲ್ಲಾಳನ ಮಾನಸಪುಟ, ಸೋದರಿಯ ಮಗನಾಗಿದ್ದವನು, ಹರಿಹರನ ಅಳಿಯನಾದ.

**ಕ್ರಿ.ಶ.1336–1340**

ಕ್ರಿ.ಶ.1336 ರ ಸುಮಾರಿಗೆ ಬಲ್ಲಾಳ ತೀವ್ರ ಸ್ವಾತಂತ್ರ್ಯ ಯುದ್ಧಕ್ಕೆ ಧುಮುಕಿದ ಅದರಲ್ಲಿ ಯಶಸ್ವಿಯಾದರು ಮದುರೆಯನ್ನು ಮುಸ್ಲಿಂ ಆಳ್ವಕೆಯಿಂದ ಸ್ವತಂತ್ರ್ಯಗೊಳಸಬೇಕಿತ್ತು. ಡೆಲ್ಲಿಯ ಸುಲ್ತಾನ ತನ್ನ ಅಧಿಕಾರ ಮೀರಿ ಹೋಗುತ್ತಿರುವ ಹಂಪಿ ಆನೆಗೊಂದು ಪ್ರದೇಶವನ್ನು ಹದ್ದು ಬಸ್ತಿನಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದ. 75ನೇ ವಯಸ್ಸಿನ ಬಲ್ಲಾಳನಿಗೆ ಇದು ತನ್ನ ಅಧಿಕಾರ ಮೊಟಕುಗೊಳಸುವ ಪ್ರಯತ್ನವಾಗಿದ್ದರೂ ಅದು ತನ್ನ ಶಕ್ತಿಗೆ ಮೀರಿದ ಮಾತಾಗಿತ್ತು.

ಹೀಗೆ ತನ್ನ ಅಧಿಕಾರವನ್ನು ಸಂಪೂರ್ಣವಾಗಿ ವಿಕೇಂದ್ರಿಕರಣಗೊಳಸಿ ಬಲ್ಲಾಳ ಹರಿಹರನಿಗೆ ಸಂಪೂರ್ಣ ಅಧಿಕಾರ ನೀಡಿದ್ದ. ಹರಿಹರ ಈ ಮಧ್ಯೆ ಹಂಪಿ ಪ್ರದೇಶದಲ್ಲಿ ದಂಗೆಕೋರರನ್ನು ದಮನ ಮಾಡಿದ್ದ ಅವರುಗಳು ಸಹ ಹರಿಹರನನ್ನೇ ರಾಜನೆಂದು ಒಪ್ಪಿಕೊಂಡಿದ್ದರು. ಹೀಗೆ ಮೂರನೇ ಬಲ್ಲಾಳನ ಆಳ್ವಕೆಯ ಕಡೆಯ ದಶಕದಲ್ಲಿ ವಿಜಯನಗರ ರಾಜ್ಯ ಅಸ್ತಿತ್ವಕ್ಕೆ ಬಂತು. ಇದು ವಿಶಾಲ ಮುನ್ನೋಟ, ದೂರದೃಷ್ಟಿ ಹಾಗೂ ರಾಜತಂತ್ರ ಮತ್ತು ರಾಜಕೀಯ ಉದಾರತೆ, ದೇಶ ಪ್ರೇಮದ ಬೇಗೆ ಸ್ವಾತಂತ್ರ್ಯದ ಸ್ಪೂರ್ತಿ, ತ್ಯಾಗ, ವಿಷಯ ಇದಲ್ಲವುದರ ಮಾತ್ರ.

1336 ರಿಂದ ನಾಲ್ಕು ವರ್ಷದ ಒಳಗೆ, ಓರ್ವ ಸಾರ್ವಭೌಮನಂತ ಹರಿಹರ ತನ್ನ ಸೋದರನಾದ ಕಂಪಣ್ಣ ಮತ್ತು ಬರ್ಮರೊಡನೆ ಪೂರ್ವದಿಂದ ಪಶ್ಚಿಮದವರಿಗೆ ಉತ್ತರದ ಪ್ರದೇಶಗಳನ್ನು ಬಿಸಿ ಮಾಡಿದ ಮತ್ತು ಸಾಗರದೊಡೆಯ ಎಂಬ ಬಿರುದು ಪಡೆದ ಜೊತೆಗೆ ವಿಜಯನಗರದ ವಿಶಿಷ್ಟ ಬಿರುದಾದ ಅದಿರಾಯವಿಭಾಡ ಮತ್ತು ಭಾಷೆಗೀತಪ್ಪುವರವರಗಂಡ ಎಂಬ ಬಿರುದನ್ನು ಪಟಜ 1343 ರಲ್ಲಿ ಮೂರನೇ ಬಲ್ಲಾಳ ಕಾಲವಾದಾಗ ಅವನು ತನ್ನನ್ನು ತಾನೇ ಮಹಾರಾಜಾಧಿರಾಜ ಎಂದು ಕರೆದುಕೊಂಡ ಮಹಾನ್ ಸಾರ್ವಭೌಮತೆ. ಬಲ್ಲಾಳನ ಸಾಧನೆಗಳು ಅನೇಕ. ಅವನು ಸ್ವಾತಂತ್ರ್ಯದ ನಾಯಕ ಮತ್ತು ಭಾರತೀಯ ಇತಿಹಾಸದ ಸಂಕಷ್ಟದ ಅವಧಿಯಲ್ಲಿ ವಿದೇಶಿದಾಳಯಿಂದ ಇಡೀ ದಕ್ಷಿಣ ಭಾರತವೇ ತತ್ತರಿಸುತ್ತಿದ್ದಾಗ ಉದ್ಬವಗೊಂಡ ಜನ ಸಂರಕ್ಷಕ. ಅವನ್ನು ತನ್ನ ರಾಜ್ಯ ಮೀರಿ ನಾಯಕನಾದ ಮತ್ತು ದಕ್ಷಿಣ ಎಲ್ಲಾ ರಾಜರಲ್ಲಿ ಮತ್ತು ಜನಗಳಲ್ಲಿ ಐಕ್ಯತೆ ತರಲು ಶ್ರಮಿಸಿದ. ಮುಂದಿನ ವಿಜಯನಗರದ ವೈಭವಕ್ಕೆ ಬುನಾದಿ ಹಾಕಿಕೊಟ್ಟ. 1342 ರಲ್ಲಿ ಮದುರೈಯಲ್ಲಿ ಶತೃವಿನಿಂದ ಹತಗೊಂಡು ಅಜರಾಮರನಾದ.

ಹರಿಹರ ಮೂರನೇ ಬಲ್ಲಾಳ ಯಶಸ್ವಿ ಉತ್ತರಾಧಿಕಾರಿ, ಬಲ್ಲಾಳ ಪೂರ್ಣಗೊಳಿಸಲಾಗದ ಸ್ವರಾಜ್ಯದ ಕಲ್ಪನೆಯನ್ನು ಸಾಕಾರಗೊಳಿಸಿದ ಆದರೆ ದಕ್ಷಿಣ ಭಾರತದ ರಾಷ್ಟ್ರೀಯ ಆಕಾಂಕ್ಷೆ ಯಾಗಿದ್ದ ಬಲಿಷ್ಠ ರಾಜ್ಯವನ್ನು ಕಟ್ಟುವುದು ಮತ್ತು ವೈರಿಗಳನ್ನು ಕಿತ್ತೊಗೆಯವದರಲ್ಲಿ 14ನೇ ಶತಮಾನದ ಸ್ವಾತಂತ್ರ್ಯ ಯೋದರು ಯಶಸ್ವಿಯಾಗುವುದರಲ್ಲಿ ಅವನಿಗೆ ಅನುಮಾನವಿತ್ತು.

## ಅಡಿಟಿಪ್ಪಣಿಗಳು

1) E.C.VI, Cm,35.
2) EC, XII, Gb, 58
3) EC, VI, Cm.36
4) EC X, Mr, 71.
5) E.C. IX, Bm 51
6) QJMS, II, p.128
7) EC XI, MK, 136
8) EC XII, Pg. 54
9) Ferishta-Briggs, 1, p.304-319.
10) Fleet, Kanarese Dynasties, p.532.
11) EC XI, Ji, 30
12) MAR 1912-13, p.40
13) EC XI, HK, 106
14) EC III, Sa; 156
15) Ferishta – Briggs, 1, pp.363-369
16) EC VIII, Sa, 97
17) Ibid, Sa, 102
18) Ibid, Sa, 96
19) Ibid, Sa, 45
20) EC VIII, Sa, 135
21) Ibid Sa, 45
22) Ibid Sa, 27
23) EC IX, Bn, 54
24) EC, VII, HI, 17
25) EC VII, Intero, p.38
26) MAR, 1912-13, p.40
27) EC III, Md, 83
28) EC X, Gd.49
29) Ibid, KI, 173
30) Ibid, Intro, p.32
31) IA, LI, p.207

32) Aiyer, Historical Sketches of Ancient Deccan
33) Tarikh-i-Alai, Elliot III, p.88
34) Ferishta-Briggs, I, 373.
35) Ibid I, p.373
36) I.A. II, p.208
37) Ibid, pp.87-90
38) EC V, Hn, 51, 52
39) MAR 1913-14, p.44
40) EC IX< Cp.25
41) I.A, LJ, p.207
42) EC VII, Sh.68
43) Rice, Mysore and Coorg, Gazetteer, p.386
44) Rice, Mysore Inscriptions, Intro, p.79
45) EC IX, Cp.73
46) Mar, 1916, p.55
47) Ferishta – Briggs I, p.379
48) EC VII, Sh, 68
49) EC XI, Hr, 87
50) Ibid
51) Ferishta –Briggs, 1, p.381
52) IA, LI, p.208
53) EC III, Md, 100
54) MER< 1918, p.172
55) EC III, Nj, 71
56) eC XII, CK, 4
57) EC VIII, Nr, 19
58) MER, 1918, p.172
59) EC IV, Kp.44
60) EC XIII, Tp.24
61) Mysore and Coorg Gazetter III, p.98
62) Ferishta –Briggs, I, pp.395-405
63) Ibid, p.413
64) Rice, Mysore Inscriptions, Intro, p.79

65) MAR, 1914-15, p.57
66) EC XII, Tp.83
67) MAR 1916, p.55
68) EC IX, DV, I 60
69) EC XII, Ch, 30
70) EC X, Mr. 10
71) MAR, 1919, p.32
72) Gozalvidu Inscription of Bukka I, 1374
73) Ep. Car Vol.III, Ml.121
74) Ibid, Vol.IV, Yd, 46.
75) Further Sources of Vijayanagara History, Vol.II, p.14
76) A History of Karnataka, p.305
77) Ep. Car, Vol.VI, Sg.1
78) EC Vol.IX, Dv.21
79) William Coelho, Hoysala Vamsha, p.239
80) Ibid, Vol.V, Ak.72
81) Hoysala Vamsa, p.246

# ಅಧ್ಯಾಯ–೮
# ಹೊಯ್ಸಳ ಸಾಮ್ರಾಜ್ಯದಲ್ಲಿನ ಕೆಲವು ಮುಖ್ಯ ಸಾಮಂತ ಕುಟುಂಬಗಳು

೮.1 ಪೀಠಿಕೆ

೮.2 ಚೆಂಗಾಳ್ವರು

೮.3 ಕೊಂಗಾಳ್ವರು

೮.4 ಹಾನಗಲ್ಲಿನ ಕದಂಬರು

೮.5 ಹುಂಚದ ಸಂತಾರರು

೮.6 ಹೊಸಗುಂದದ ಸಂತಾರರು

# ಅಧ್ಯಾಯ–8
# ಹೊಯ್ಸಳ ಸಾಮ್ರಾಜ್ಯದಲ್ಲಿನ ಕೆಲವು ಮುಖ್ಯ ಸಾಮಂತ ಕುಟುಂಬಗಳು

## 8.1 ಪೀಠಿಕೆ

ದೋರಸಮುದ್ರದ ಶ್ರೇಷ್ಠ ಅಧಿಕಾರದ ವ್ಯಾಪ್ತಿಯಲ್ಲಿ ತಮ್ಮ ಪ್ರದೇಶದಲ್ಲಿ ಅವರಿಗೂ ಮತ್ತು ಜನರಿಗೂ ಮಧ್ಯೆ ಕೊಂಡಿಯಾಗಿರುವಂತೆ ತಮ್ಮ ರಾಜ್ಯದ ವ್ಯಾಪ್ತಿ ಪ್ರದೇಶದಲ್ಲಿ ಆಳ್ವಿಕೆಯನ್ನು ಮಾಡಿಕೊಂಡಿರುವ ರಾಜ ಕುಟುಂಬದವರಿಗೆ ಸಾಮಂತರು ಎನ್ನುತ್ತಾರೆ. ಇಲ್ಲಿ ಹೊಯ್ಸಳ ಸಾಮ್ರಾಜ್ಯದಲ್ಲಿ ಇದ್ದ ಕೆಲವು ಮುಖ್ಯ ಸಾಮಂತರ ಸಂಬಂಧಗಳನ್ನು ಪರಿಶೀಲಿಸೋಣ.

## 8.2 ಚೆಂಗಾಳ್ವರು

ಚೆಂಗಾಳ್ವರು ಮೈಸೂರು ಮತ್ತು ಕೊಡಗು ಜಿಲ್ಲೆಗಳ ಪಶ್ಚಿಮಭಾಗದಲ್ಲಿ ಆಳುತಿದ್ದ ದೊರೆಗಳ ವಂಶ. ಈಗಿನ ಹುಣಸೂರು ತಾಲ್ಲೂಕು ಅವರ ಮೂಲ ಸ್ಥಾನವಾಗಿದ್ದು ಅಲ್ಲಿಂದ ಅವರು ಸುತ್ತಮುತ್ತಲು ಹರಡಿಕೊಂಡಿದ್ದು ಹೊಯ್ಸಳರಿಗೆ ನಿರಂತರ ಕೋಟಲೆಗಳ ಮೂಲ–ವಾಗಿದ್ದರು. ಹೊಯ್ಸಳರ ಮತ್ತು ಚೆಂಗಾಳ್ವರ ನಡುವೆ ಯಾವಾಗಿನಿಂದ ಪ್ರಾರಂಭವಾಯಿತು ಎಂಬುದನ್ನು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ವಿನಯಾಧಿತ್ಯನು ಚೆಂಗಾಳ್ವರ ಮೇಲೆ ಧಾಳಿ ಮಾಡಲಿಲ್ಲ ಎಂದು ಡೆರೆಟ್ ಅವರು ದೃಢವಾಗಿ ಹೇಳುತ್ತಾರೆ. ಆದರೆ ಕೆಲವು ಶಾಸನಗಳ ಆಧಾರಗಳು ಚೆಂಗಾಳ್ವರು ಮತ್ತು ಕೊಂಗಾಳ್ವರಿಗೆ ಸಂಬಂಧಿಸಿದೆ. ಬೇಲೂರಿನ ಒಂದು ಶಾಸನದಂತೆ ಈ ಗುಡ್ಡಗಾಡಿನ ದೊರೆಗಳು ತಮ್ಮ ತಲೆಗಳನ್ನು ವಿನಯಾದಿತ್ಯನ ಕಮಲ ಪಾದಗಳ ಮೇಲೆ ಇಟ್ಟರು. ಈ ಗುಡ್ಡದ ಮುಖ್ಯಸ್ಥರನ್ನು ಬಹುಶಃ ಚೆಂಗಾಳ್ವರೆಂದು ಗುರುತಿಸಬಹುದು. ಈ ವಿಷಯವು ಕ್ರಿ.ಶ.1091[1]ರ ಇನ್ನೊಂದು ಶಾಸನದಲ್ಲೂ ಉಲ್ಲೇಖವಾಗಿದೆ. ವಿನಯಾದಿತ್ಯನ ಆಡಳತದ ಕಾಲದಲ್ಲಿ ಚೆಂಗಾಳ್ವನ ಮುಖ್ಯಸ್ಥನಾದ ನರಿಯಪೆರ್ಗಡೆಯು ಮಾಡಿದ ಕೆಲವು ದಾನಗಳ ಬಗ್ಗೆ ಈ ಶಾಸನಗಳಲ್ಲಿ ಉಲ್ಲೇಖವಿದೆ. ಹೊಯ್ಸಳರ ದೊರೆ ಎರೆಯಂಗನ ಆಳ್ವಿಕೆಯ ಕಾಲದಲ್ಲಿ ಈ ಎರಡು ವಂಶಗಳ ನಡುವೆ ಯಾವುದೇ ಘರ್ಷಣೆಗಳು ಸಂಭವಿಸಲಿಲ್ಲ. ಮುಂದಿನ ಹೊಯ್ಸಳ ದೊರೆಯಾದ ಮೊದಲನೆ ಬಲ್ಲಾಳನು ಚೆಂಗಾಳ್ವರ ಮೇಲೆ ವಿಜಯವನ್ನು ಸಾಧಿಸಿ ತಾನು ಬೇರೆಯೇ ಎಂದು ಗುರುತಿಸಿಕೊಂಡನು. ಚೆಂಗಾಳ್ವರ ವಿರುದ್ಧದ ಎರೆಯಂಗನ ಅನಾಸಕ್ತಿಯು ಅವರನ್ನು ಸಾಕಷ್ಟು ಬಲಶಾಲಿಯನ್ನಾಗಿ ಮಾಡಿದ್ದು ಉನ್ನತವಾದ ಬಿರುದುಗಳನ್ನು ಹೊಂದಲು ಸಾಧ್ಯವಾಗಿತ್ತು. ಇದನ್ನು ಗಮನಿಸಿದ ಬಲ್ಲಾಳನು ಕೂಡಲೇ

ಚೆಂಗಾಳ್ವರ ವಿರುದ್ಧ ತಿರುಗಿಬಿದ್ದನು. ಕ್ರಿ.ಶ.1104ರ ಸುಮಾರಿಗೆ ಬಲ್ಲಾಳನು ಚೆಂಗಾಳ್ವದೇವನ ವಿರುದ್ಧ ದಂಡಯಾತ್ರೆಯಲ್ಲಿದ್ದನು. ಚೆಂಗಾಳ್ವ ಪ್ರದೇಶದ ಗಡಿಭಾಗದಲ್ಲಿದ್ದ ಎರಡು ಶಾಸನಗಳು ಬಲ್ಲಾಳನು ಮುಂದೆ ಹೋಗುವಾಗ ಅಲ್ಲಿ ತಂಗಿದ್ದನು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಶಾಸನಗಳಲ್ಲಿ ಹೇಳುವಂತೆ ಹೊಸವೀಡುವಿನಲ್ಲಿ ನಡೆದ ಯುದ್ದದಲ್ಲಿ ಅನೇಕ ಧೀರ ಸೈನಿಕರು ಮರಣವನ್ನಪ್ಪಿದರು. ಆದರೆ ಈ ಸೋಲು ಚಂಗಾಳ್ವರನ್ನು ಹೊಯ್ಸಳರ ಸಾಮಂತತನಕ್ಕೆ ತರಲಾಗಲಿಲ್ಲ. ಆದರೆ ಅವರನ್ನು ಸಾಕಷ್ಟು ಮಟ್ಟಿಗೆ ಹಿಡಿತದಲ್ಲಿಡಲಾಯ್ತು.

ಆದರೆ ಕ್ರಿ.ಶ.1116[2]ರ ಸುಮಾರಿಗೆ ಅವರು ಹೊಯ್ಸಳರ ವಿಷ್ಣುವರ್ಧನನ ಗಮನವನ್ನು ಸೆಳೆದರು. ಆಗ ವಿಷ್ಣುವರ್ಧನನ್ನು ಚೆಂಗಾಳ್ವರ ವಿರುಧ್ಧ ಯುದ್ಧದಲ್ಲಿದ್ದನು. ಕೊಂಗಾಳ್ವರು ಮತ್ತು ತುಳುವರು ಚೆಂಗಾಳ್ವರ ಅಧೀನರಾಗಿದ್ದರು. ಆದರೆ ಇದು ಪರಿಣಾಮಕಾರಿಯಾಗಿಲ್ಲದೇ ಚೆಂಗಾಳ್ವರು ಹೊಯ್ಸಳರ ವಿರುಧ್ಧದ ಚಟುವಟಿಕೆಗಳಲ್ಲಿ ತೊಡಗಿದ್ದರು. ಕ್ರಿ.ಶ.1124ರಲ್ಲಿ ವಿಷ್ಣುವರ್ಧನನ ಸೈನ್ಯವು ಶತೃಸೈನ್ಯದ ಬಲ್ಲಾಳ ಮತ್ತು ಇತರರನ್ನು ಕೊಂದ ಬೋಕಿನಾಯಕನ ನೇತೃತ್ವದಲ್ಲಿ ಹೊರಟಿತು. ಒಂದು ಶಾಸನವು ಈ ಯುದ್ಧವನ್ನು ಈ ರೀತಿಯಾಗಿ ವರ್ಣಿಸಿದೆ. ಬೋಕಿನಾಯಕನು ಚೆಂಗಾಳ್ವರ ಆನೆಗಳನ್ನು ಎದುರಿಸಿದನು, ಅವನು ಶತೃಗಳ ರುಂಡವನ್ನು ಚೆಂಡಾಡಿದನು. ಇನ್ನೊಂದು ಶಾಸನವು ಸ್ಪಷ್ಟವಾಗಿ ಚಂಗಾಳ್ವರ ಪ್ರದೇಶವು ಹೊಯ್ಸಳರ ಹಿಡಿತಕ್ಕೆ ಬಂದಿತ್ತು ಎಂದು ಉಲ್ಲೇಖಿಸಿದೆ. ಇನ್ನೊಂದು ಶಾಸನವು ವಿಷ್ಣುವರ್ಧನನನ್ನು ಚಂಗಾಳ್ವರ ವಿರುದ್ಧದ ಜಲಾಂತರ್ಗಾಮಿ ಬೆಂಕಿ ಎಂದು ಹೊಗಳಿದೆ. ಬಹುಶಃ ಚೆಂಗಾಳ್ವರು ಕೆಲವು ಕಾಲ ಹೊಯ್ಸಳರ ಸಾಮಂತತ್ವವನ್ನು ಒಪ್ಪಿಕೊಂಡವರೆಂದು ಕ್ರಿ.ಶ.1139[3]ರ ಒಂದು ಶಾಸನವು ಖಚಿತಪಡಿಸಿದೆ. ಅದೇ ವರ್ಷದಲ್ಲಿ ಹೊಯ್ಸಳ ದೊರೆಯು ಚೆಂಗಾಳ್ವ ದೊರೆಯ ಒಬ್ಬ ಅಧಿಕಾರಿಗೆ ದಾನವನ್ನು ಕೊಟ್ಟನು ಎಂದೂ ಉಲ್ಲೇಖಿಸಿದೆ.

ಚೆಂಗಾಳ್ವರು ವಿಷ್ಣುವರ್ಧನನಿಗೆ ಸಾಮಂತರಾಗಿದ್ದರೂ ಅವರಿದ್ದ ಗುಡ್ಡಗಾಡುಗಳಿಂದ ತುಂಬಿದ ಭೌಗೋಳಿಕ ಪ್ರದೇಶವು ಅಬೇಧ್ಯವಾಗಿದ್ದು ಅವರ ಸ್ವಾತಂತ್ರದ ಹೋರಾಟಕ್ಕೆ ಸ್ಪೂರ್ತಿಯನ್ನು ತುಂಬುವ ಸೆಲೆಯಾಗಿತ್ತು. ಅವರು ಹೊಯ್ಸಳ ದೊರೆ ಮೊದಲನೆಯ ನರಸಿಂಹನನ್ನು ಅವನು ತನ್ನ ಸಾಮ್ರಾಜ್ಯದ ಉತ್ತರ ಭಾಗಗಳಲ್ಲಿ ಕಾರ್ಯಪ್ರವೃತ್ತನಾಗಿದ್ದಾಗ ಬೆದರಿಸಲು ಪ್ರಾರಂಭಿಸಿದರು. ಕ್ರಿ.ಶ.1145[4]ರಲ್ಲಿ ಮೊದಲನೆಯ ನರಸಿಂಹನು ಚೆಂಗಾಳ್ವರ ವಿರುದ್ಧ ಒಂದು ಸೈನ್ಯವನ್ನು ಕಳುಹಿಸಿ ಅವರನ್ನು ಸೋಲಿಸಿದನು. ಆದರೆ ಎರಡನೆಯ ಬಲ್ಲಾಳನು ಅಧಿಕಾರಕ್ಕೆ ಬರುವುದಕ್ಕೆ ಮುಂಚೆ ಚೆಂಗಾಳ್ವರೊಡನೆ ಸ್ನೇಹವನ್ನು ಬೆಳಸಿದನು. ಚೆಂಗಾಳ್ವರು

ಇದನ್ನು ತಮ್ಮ ಉಪಯೋಗಕ್ಕೆ ಬಳಸಿಕೊಳ್ಳಬಹುದು ಎಂದು ಆಲೋಚಿಸಿ ಎರಡನೆಯ ಬಲ್ಲಾಳನಿಗೆ ಸ್ನೇಹ ಹಸ್ತವನ್ನು ನೀಡಿದನು. ಈ ಕಾರ್ಯವು ಕ್ರಿ.ಶ.1172[5]ರಲ್ಲಿ ಆಗಿರಬೇಕು. ಇದರ ಉಪಯೋಗವನ್ನು ಪಡೆದ ಚೆಂಗಾಳ್ವ ದೇವನು ಸಂಪೂರ್ಣವಾಗಿ ಸ್ವತಂತ್ರವಾಗಲು ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದನು. ಈ ವೇಳೆಗೆ ಎರಡನೆಯ ಬಲ್ಲಾಳನು ಅಧಿಕಾರಕ್ಕೆ ಬಂದಿದ್ದು ಚೆಂಗಾಳ್ವರು ತಮ್ಮ ಸ್ನೇಹಕ್ಕೆ ದ್ರೋಹವನ್ನು ಬಗೆಯುತ್ತಿರುವುದನ್ನು ಗಮನಿಸಿದನು. ಕ್ರಿ.ಶ.1174ರಲ್ಲಿ ಎರಡನೆಯ ಬಲ್ಲಾಳನು ಅವನ ನಂಬಿಕಸ್ತ ಸೇನಾಪತಿಯಾದ ಬೆಟ್ಟರಸನ ಮುಂದಾಳತ್ವದಲ್ಲಿ ಚೆಂಗಾಳ್ವ ಮಹಾದೇವನ ವಿರುದ್ಧ ಒಂದು ಸೈನ್ಯವನ್ನು ಕಳುಹಿಸಿದನು. ಈ ಧಾಳಿಗೆ ಹೆದರಿ ಚೆಂಗಾಳ್ವದೇವನು ಕೊಡಗು ಜಿಲ್ಲೆಯ ಒಳಭಾಗಕ್ಕೆ ಓಡಿಹೋಗಿ ಪಲ್ವಾರೆ ಕೋಟೆಯೊಳಗೆ ಹೋಗಿ ಶರಣಾದನು. ಬೆಟ್ಟರಸನು ವೀರಾವೇಶದಿಂದ ಹೋರಾಡಿ ಪಲ್ವಾರೆ ಕೋಟೆಯನ್ನು ವಶಪಡಿಸಿಕೊಂಡನು. ಇದು ಹೊಯ್ಸಳರಿಗೆ ಸಂಪೂರ್ಣ ವಿಜಯವಾಗಿದ್ದು ಚೆಂಗಾಳ್ವರ ಸಮಸ್ತ ರಾಜ್ಯವೂ ಹೊಯ್ಸಳರ ವಶಕ್ಕೆ ಬಂದಿತು. ಇದು ಅಲ್ಲಿನ ಪ್ರದೇಶದ ಹೊಯ್ಸಳ ಶಾಸನಗಳು ಇರುವುದರಿಂದ ಮತ್ತು ಚೆಂಗಾಳ್ವರ ಶಾಸನಗಳು ಇಲ್ಲದಿರುವುದರಿಂದ ಸ್ಪಷ್ಟವಾಗುತ್ತದೆ. ಹೊಯ್ಸಳರ ಶಾಸನಗಳು ಕ್ರಿ.ಶ.1175[6]ರಿಂದ ಕೊಡಗು ಪ್ರದೇಶದಲ್ಲಿ ಕಾಣಿಸಿಕೊಳ್ಳುತ್ತವೆ. ಐದು ವರ್ಷಗಳ ನಂತರ ಅಂದರೆ ಕ್ರಿ.ಶ.2280ರಲ್ಲಿ ಅಲ್ಲಿ ಒಂದು ಸಣ್ಣ ದಂಗೆಯಾಗಿ ಅದನ್ನು ಸ್ವತಃ ಎರಡನೆಯ ಬಲ್ಲಾಳನೇ ಅಲ್ಲಿಗೆ ಬಂದು ದಂಗೆಯನ್ನು ನಿಲ್ಲಿಸಿದನು. ಅಲ್ಲಿಂದ ಮುಂದೆ ಕೆಲವು ಕಾಲ ಹೊಯ್ಸಳರಿಗೆ ಚೆಂಗಾಳ್ವ ಪ್ರದೇಶದಲ್ಲಿ ಯಾವ ತೊಂದರೆಯೂ ಇರಲಿಲ್ಲ. ಈ ಕಾಲದ ಅನೇಕ ಶಾಸನಗಳು ಅಲ್ಲಿ ಹೊಯ್ಸಳರನ್ನು ಮಹಾರಾಜ ಎಂದಿವೆ.

ಆದರೆ ಚೆಂಗಾಳ್ವದೇವನ ಮಗನಾದ ಚೆಂಗಾಳ್ವ ಪಮ್ಮನು ಕೊಡಗು ಸೈನ್ಯ ಮುಖ್ಯಸ್ಥರಾದ ಬಡಗೌಂಡ, ನಂದಿದೇವ, ಉದಯಾದಿತ್ಯ ದೇವ ಮತ್ತು ಇತರರ ಹಿಂದೆ ತನ್ನ ಸೈನ್ಯಸಹಿತ ಸುತ್ತಿದನು. ಈ ಸಂಯುಕ್ತ ಸೈನ್ಯವು ಪಲ್ವಾರೆ ಕೋಟೆಯನ್ನು ಮುತ್ತಿ ಅಲ್ಲಿಂದ ಹೊಯ್ಸಳರನ್ನು ಓಡಿಸಿದವು. ಇದು ಮೂರನೆಯ ಬಲ್ಲಾಳನ ಸಮಯದಲ್ಲಿ ಆಗಿರಬೇಕು. ಕೊನೆಯಲ್ಲಿ ಅವರನ್ನು ಹೊಯ್ಸಳರು ಸೋಲಿಸಿ ಅವರನ್ನು ಕೊಡಗಿನಿಂದ ಓಡಿಸಿದರು. ಕ್ರಿ.ಶ.1245[7]ರ ಸುಮಾರಿಗೆ ಅವನು ಕೊಡಗಿನ ಶ್ರೀರಂಗಪಟ್ಟಣವೆಂಬ ಒಂದು ಹೊಸ ನಗರವನ್ನು ಕಟ್ಟಿದರು. ಕ್ರಿ.ಶ.1252[8]ರಲ್ಲಿ ಚೆಂಗಾಳ್ವರ ರಾಜನಾದ ಸೋಮದೇವ ಮತ್ತು ಇಯೊಪ್ಪದೇವರು ಹೊಯ್ಸಳ ರಾಜರ ಸಾಮಂತರಾಗಿದ್ದರು. ಎಷ್ಟು ಕಾಲ ಹೀಗೆ ಸಾಮಂತ–

ರಾಗಿದ್ದರೆಂಬುದು ತಿಳಿದುಬಂದಿಲ್ಲ. ಅವರು ಹೊಯ್ಸಳರೊಂದಿಗೆ ಇದ್ದರೂ ಅವರ ಸಂಬಂಧದ ಬಗ್ಗೆ ಯಾವುದೇ ಮಾಹಿತಿಯು ಇಲ್ಲ.

### 8.3 ಕೊಂಗಾಳ್ವರು

ಕೊಂಗಾಳ್ವರು ಉತ್ತರ ಕೊಡಗು ಮತ್ತು ಆಧುನಿಕ ಅರಕಲಗೂಡನ್ನು ಒಳಗೊಂಡ ಕೊಂಗಾಳ್ ಎಂಬ ಹೆಸರಿನ ಪ್ರದೇಶವನ್ನು ಆಳುತ್ತಿದ್ದ ಇನ್ನೊಂದು ಸಾಮಂತ ಕುಟುಂಬ. ಅವರು ಚೋಳರಿಗೆ ಸಾಮಂತರಾಗಿದ್ದರು ಮತ್ತು ಹೊಯ್ಸಳರಿಂದ ಕಿರಿಕಿರಿಯನ್ನು ಅನುಭವಿಸುತ್ತಿದ್ದರು. ಇವರು ಚೆಂಗಾಳ್ವರಷ್ಟು ಕ್ರಿಯಾಶೀಲರಾಗಿರಲಿಲ್ಲ ಮತ್ತು ಹೊಯ್ಸಳ–ರೊಂದಿಗೆ ಮಿಶ್ರ ಸಂಬಂಧವನ್ನು ಹೊಂದಿದ್ದರು. ಕೊಂಗಾಳ್ವರ ಮುಖ್ಯಸ್ಥ ರಾಜೇಂದ್ರ ಚೋಳ ಪೃಥ್ವೀ ಮಹಾರಾಜ ಕೊಂಗಾಳ್ವನಿಗೆ ಹೊಯ್ಸಳರ ನೃಪಕಾಮನ ಜೊತೆ ಯುದ್ಧ ಮಾಡಬೇಕೆಂದು ಬಲವಾಗಿ ಅನ್ನಿಸಿತ್ತು. ಕ್ರಿ.ಶ.1022[9]ರ ಒಂದು ಶಾಸನದ ಪ್ರಕಾರ ಈ ಯುದ್ಧದಲ್ಲಿ ನೃಪಕಾಮನಿಗೆ ಸೋಲಾಯಿತು. ಇದರಿಂದ ಉತ್ತೇಜಿತಗೊಂಡ ಅವನು ಇನ್ನೊಂದು ಬಾರಿ ಅವನೊಂಂದಿಗೆ ಯುದ್ಧವನ್ನು ಮಾಡಿದನು. ಕ್ರಿ.ಶ.1026[10]ರ ಹೊನ್ನೂರಿನ ಶಾಸನದಂತೆ ಈ ಯುದ್ಧವು ಮಣ್ಣಿಯಲ್ಲಿ ನಡೆಯಿತು ಮತ್ತು ಕೊಂಗಾಳ್ವರು ವಿಜಯಿಗಳಾದರು, ಆದರೆ ಈ ಉಲ್ಲೇಖವನ್ನು ನಂಬುವುದು ಕಷ್ಟ. ಈ ಪ್ರದೇಶದಲ್ಲಿ ಈ ಕೊಂಗಾಳ್ವರ ರಾಜರ ಹೆಸರನ್ನು ನಾವು ಮೂವತ್ತು ವರ್ಷದ ಅವಧಿಯವರೆಗೂ ಕೇಳಿಲ್ಲ. ಈ ಉಲ್ಲೇಖದಂತೆ ಅವರು ವಿಜಯಿಗಳಾಗಿದ್ದರೆ ಮುಂದೆ ಅವರ ಹೆಸರಿನ ಯಾವುದೇ ಸಾಕ್ಷ್ಯ ಸಿಗದಿರುವುದರಿಂದ ವಿವರಿಸುವುದು ಕಷ್ಟ (ನೆಲಮಂಗಲದಲ್ಲಿ).

ಹೊಯ್ಸಳ ರಾಜ ವಿನಯಾದಿತ್ಯನು ಚೆಂಗಾಳ್ವರ ಮೇಲಿನ ದಂಡಯಾತ್ರೆಯ ಸಮಯದಲ್ಲಿ ಮೊದಲು ಅಥವ ಸೋಲಿಸಿದ ನಂತರ ಕೊಂಗಾಳ್ವರ ಕಡೆ ಗಮನವನ್ನು ಹರಿಸಿದನು. ದಾಖಲೆಯಲ್ಲಿ ಕೊಂಗಾಳ್ವರ ಹೆಸರು ಪ್ರಸ್ಥಾಪವಾಗದಿದ್ದರೂ ಗುಡ್ಡಗಾಡಿನ ಮುಖ್ಯಸ್ಥ ಎಂದಿರುವುದು ಕೊಂಗಾಳ್ವರೇ ಇರಬೇಕು. ಈ ಅವಧಿಯಲ್ಲಿ ವಿನಯಾದಿತ್ಯನ ಉಲ್ಲೇಖಗಳು ಈ ಪ್ರದೇಶದಲ್ಲಿ ಬಹಳಷ್ಟು ದೊರೆತಿರುವುದು ಗಮನಾರ್ಹವಾಗಿದೆ. ವಿಷ್ಣುವರ್ಧನನ ಕಾಲದಲ್ಲಿ ಕೊಂಗಾಳ್ವರು ಹೊಯ್ಸಳರ ಪ್ರದೇಶದೊಳಗೆ ಸಣ್ಣ ಪ್ರದೇಶದೊಳಗೆ ನುಗ್ಗುತ್ತಿದ್ದರು. ವಿಷ್ಣುವರ್ಧನನ ದಂಡಾಧಿಪತಿಯಾದ ಪುನೀಸನು ಕೂಡ ಬೇರೆಕಡೆ ಕಾರ್ಯಪ್ರವೃತ್ತನಾಗಿದ್ದು ಕೊಂಗಾಳ್ವರ ಕಡೆ ತನ್ನ ಗಮನವನ್ನು ಹರಿಸಿದನು. ಪುನೀಸನು ಕೊಂಗಾಳ್ವರನ್ನು ಸಮರ್ಥವಾಗಿ ಸೋಲಿಸಿದನು ಮತ್ತು ಈ ಸಾಧನೆಯಿಂದ ವಿಷ್ಣುವರ್ಧನನಿಗೆ "ಕೊಂಗಾಳ್ವರ ದೊರೆ ಕಾಡಿನ

ಬೆಂಕಿ ಉರಿಯುತ್ತಿರುವ ಕಾಳ್ಗಿಚ್ಚು" ಎಂಬ ಬಿರುದು ಇತ್ತು. ಡೆರೆಟ್‌ರವರು ಈ ಅಂಶವನ್ನು ವಿಷ್ಣುವರ್ಧನನು ಕೊಂಗಾಳ್ವರೊಡನೆ ವೈವಾಹಿಕ ಸಂಬಂಧಕ್ಕೆ ಎಂಬುದರ ಮೂಲಕ ಸಮರ್ಥಿಸುತ್ತಾನೆ. ಅವನ ಅಭಿಪ್ರಾಯದಂತೆ ಕೊಂಗಾಳ್ವರ ಮಗಳಾದ ಚಂಗಳಾದೇವಿಯನ್ನು ವಿಷ್ಣುವರ್ಧನನಿಗೆ ವಿವಾಹ ಮಾಡಿಕೊಡಲಾಗಿತ್ತು. ಹೊಯ್ಸಳರ ಮೊದಲನೆಯ ನರಸಿಂಹನ ಪರಿಸ್ಥಿತಿಯು ಕ್ಷೀಣಿಸಿತ್ತು. ಬಿರುಗಾಳಿಯಂತಿದ್ದ ಕೊಂಗಾಳ್ವರು ಹೊಯ್ಸಳರ ಮೇಲೆ ಆಕ್ರಮಣದ ಪ್ರಯತ್ನ ಮಾಡಿದರು; ವೀರ ದೊಡ್ಡಕೊಂಗಾಳ್ವದೇವನ ನಂಬಿಕಸ್ಥ ದಂಡಾಧಿಕಾರಿಯಾದ ರುದ್ರನು ನರಸಿಂಹನ ಆಳ್ವಿಕೆಯ ಕೊನೆಯ ಭಾಗದಲ್ಲಿ ಕ್ರಿ.ಶ.1171[11]ರಲ್ಲಿ ಹೊಯ್ಸಳರ ಮೇಲೆ ಮೊಳತೆಯಬೀಡು ಎಂಬಲ್ಲಿ ಆಕ್ರಮಣವನ್ನು ಮಾಡಿದನು. ಕೊಂಗಾಳ್ವರ ಶಾಸನಗಳು ಅವರು ವಿಜಯವನ್ನು ಪಡೆದಂತೆ ಉಲ್ಲೇಖಿಸಿದೆ. ಆದರೆ ಕೊಂಗಾಳ್ವರ ಈ ವಿಜಯದ ಸಂತೋಷವು ಹೆಚ್ಚು ಕಾಲ ಇರಲಿಲ್ಲ. ಎರಡನೆಯ ಬಲ್ಲಾಳನು ತನ್ನ ತಂದೆ ಮೊದಲನೆ ನರಸಿಂಹನ ವಿರುದ್ಧ ದಂಗೆ ಎದ್ದು ಕೊಂಗಾಳ್ವರ ಜೊತೆ ಕೈಜೋಡಿಸಿದನು. ಇದರ ನಂತರ ಎರಡನೆಯ ಬಲ್ಲಾಳನ ಅಡಿಯಲ್ಲಿ ಕೊಂಗಾಳ್ವರು ನಿಷ್ಠಾವಂತ ಸಾಮಂತರಾದರು. ಕೊಂಗಾಳ್ವರ ಅನೇಕ ಶಾಸನಗಳು ಎರಡನೆಯ ಬಲ್ಲಾಳನನ್ನು ತಮ್ಮ ಅಧಿಪತಿಯೆಂದು ವರ್ಣಿಸಿವೆ. ಕ್ರಿ.ಶ.1176[12]ರ ಆ ಸಮಯದ ನಂತರ ಅವರು ಹೊಯ್ಸಳರ ಸಾಮಂತರಾಗಿ ಮುಂದುವರೆದರು.

### 8.4 ಹಾನಗಲ್ಲಿನ ಕದಂಬರು

ಹೊಯ್ಸಳರ ವಿಷ್ಣುವರ್ಧನನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಲು ಎಲ್ಲ ಸಾಧ್ಯತೆಗಳನ್ನೂ ಪರಿಶೀಲಿಸುತ್ತಿದ್ದನು. ಹಾನಗಲ್ಲಿನ ಕದಂಬರ ಮಹತ್ವವನ್ನು ಅರಿತುಕೊಂಡ ಅವನು ಕದಂಬರ ಪ್ರದೇಶಗಳ ಮೇಲೆ ಧಾಳಿಗಳನ್ನು ಮಾಡುವುದು ಈ ದಂಡಯಾತ್ರೆಯ ಯೋಜನೆಯ ಮೊದಲ ಹಂತವಾಗಿತ್ತು. ಕ್ರಿ.ಶ.1120[13]ರಲ್ಲಿ ಅವನು ಹಾನಗಲ್ಲನ್ನು ತನ್ನ ಮುಡಿಗೆ ಹಾಕಿಕೊಳ್ಳಬೇಕೆಂದಿದ್ದರೂ 1130ರಲ್ಲಿ ವಿಷ್ಣುವರ್ಧನನು ಅವರ ಮೇಲೆ ಧಾಳಿಯನ್ನು ನಡೆಸುವವರೆಗೂ ಹಾನಗಲ್ಲು ಅವರಿಗೆ ದಕ್ಕಲಿಲ್ಲ. ಎರಡನೆಯ ತೈಲನು ಆ ಕಾಲದಲ್ಲಿ ಹಾನಗಲ್ಲಿನ ದೊರೆಯಾಗಿದ್ದನು. ಅವನ ದಂಡಾಧಿಕಾರಿಯಾದ ತೈಲ ನಾಗನು ವಿಷ್ಣುವರ್ಧನನ ಆಕ್ರಮಣವನ್ನು ವಿರೋಧಿಸಿದನು. ಶಕ್ತಿಯುತವಾದ ಹೊಯ್ಸಳ ಸೈನ್ಯವು ಕದಂಬರ ಸೈನ್ಯಾಧಿಪತಿಯನ್ನು ಸೋಲಿಸಿ ಹಾನಗಲ್ಲಿಗೆ ನಡೆದು ಕೋಟೆಯನ್ನು ಮುತ್ತಿಗೆ ಹಾಕಿತು. ಆದರೆ ಎರಡನೆಯ ತೈಲನು ಹೊಯ್ಸಳರ ಎದುರು ನಿಲ್ಲಲು ಶಕ್ತರಾಗಿಲ್ಲದೆ ಇದ್ದುದರಿಂದ ಯುದ್ಧದಲ್ಲಿ ಸೋತು ಮಡಿದನು. ವಿಷ್ಣುವರ್ಧನನು ತಡಮಾಡದೇ ಈ ಯುದ್ಧದ ಮಹತ್ಸಾಧನೆಯ ಮತ್ತು ವಿಜಯದ ಸವಿನೆನಪಿಗಾಗಿ ಅನೇಕ ಬಿರುದು ಬಾವಲಿಗಳನ್ನು ಇಟ್ಟುಕೊಂಡನು.

ಎರಡನೆಯ ತೈಲನ ಮರಣಾನಂತರ ಅವನ ಹಿರಿಯ ಮಗನಾದ ಮೂರನೆಯ ಮಯೂರವರ್ಮನು ಸಿಂಹಾಸನವನ್ನೇರಿದನು. ಅವನ ಶಾಸನಗಳು ಅವನು ಹಾನಗಲ್ಲು. ಬನವಾಸಿ ಮತ್ತು ಸಾಂತಳಿಗೆಗಳನ್ನು ಆಳುತ್ತಿದ್ದನೆಂದು ಉಲ್ಲೇಖಿಸಿವೆ. ಇದು ಕೇವಲ ಕಲ್ಪನೆಯೋ ಅಥವ ನಿಜವಾದದ್ದೋ ಎಂಬುದು ಅನುಮಾನಾಸ್ಪದ ಏಕೆಂದರೆ ಆ ವೇಳೆಗಾಗಲೇ ವಿಷ್ಣುವರ್ಧನನ ದಂಡಯಾತ್ರೆಯ ಯೋಜನೆಯು ಬಹುತೇಕ ಸಂಪೂರ್ಣವಾಗಿತ್ತು. ಮೂರನೆಯ ಮಯೂರವರ್ಮನ್‌ನ ನಂತರ ಮಲ್ಲಿಕಾರ್ಜುನನು ಪಟ್ಟಕ್ಕೆ ಬಂದನು. ಅವನು ಪರಿಸ್ಥಿತಿಯನ್ನು ಅವಲೋಕಿಸಿ ಹೊಯ್ಸಳ ಪ್ರದೇಶಗಳ ಮೇಲೆ ಸಣ್ಣಪುಟ್ಟ ಧಾಳಿಗಳನ್ನು ಮಾಡಿ ವಿಷ್ಣುವರ್ಧನನ ಗಮನವನ್ನು ಇದರತ್ತ ಸೆಳೆದನು ಹೊಯ್ಸಳ ಸೈನ್ಯಾಧಿಪತಿಯಾದ ಗಂಗದೇವನು ಈ ಎಲ್ಲಾ ಧಾಳಿಗಳನ್ನೂ ಎದುರಿಸಿ ಅಂತ್ಯವನ್ನು ಹಾಡಿದನು ಮತ್ತು ಹಾನಗಲ್ಲಿನ ಮೇಲೆ ಮುತ್ತಿಗೆಯನ್ನೂ ಹಾಕಿದನೆಂದು ಹೇಳಲಾಗುತ್ತಿದೆ. ವಿಷ್ಣುವರ್ಧನನು ಹಾನಗಲ್ಲಿನ ಮೇಲೆ ಅದ್ಭುತವಾದ ವಿಜಯವನ್ನು ಸಾಧಿಸಿದ ನಂತರ ಅಲ್ಲಿಂದಲೇ ಆಳುತ್ತಿದ್ದನೆಂದು ಶಾಸನವೊಂದು ಉಲ್ಲೇಖಿಸಿದೆ.

ವಿಷ್ಣುವರ್ಧನನ ಮರಣಾನಂತರ ನರಸಿಂಹನು ಹೊಯ್ಸಳ ಸಿಂಹಾಸನಕ್ಕೆ ಬಂದನು. ಈ ಅವಧಿಯಲ್ಲಿ ಕದಂಬರು ಈ ಹಿಂದಿನ ಅವಧಿಯಲ್ಲಿ ಕಳೆದುಕೊಂಡಿದ್ದ ತಮ್ಮ ರಾಜ್ಯದ ಬಹುಪಾಲು ಪ್ರದೇಶವನ್ನು ಪುನಹ ಗಳಿಸಿಕೊಂಡರು. ಕದಂಬ ತೈಲಮನು ಹೊಯ್ಸಳರನ್ನು ಆ ದೇಶದಿಂದ ಓಡಿಸಿದರೆಂದು ಒಂದು ಶಾಸನವು ಉಲ್ಲೇಖಿಸಿದೆ. ಆದರೆ ಒಂದು ಹೊಯ್ಸಳರ ಶಾಸನವು ನರಸಿಂಹನ ಸೈನ್ಯಾಧಿಕಾರಿಗಳು ಅವ್ರ ಪ್ರದೇಶಗಳನ್ನು ಆಕ್ರಮಣವನ್ನು ಮಾಡಿ ಕದಂಬರ ದೊರೆಯನ್ನು ಸೋಲಿಸಿ ಅಪಾರವಾದ ಸಂಪತ್ತಿನೊಂದಿಗೆ ಹಿಂದಿರುಗಿದರು ಎಂದು ಉಲ್ಲೇಖಿಸಿದೆ. ಕದಂಬ ವಂಶದ ಪ್ರಮುಖ ದೊರೆಯಾದ ಕದಂಬ ಕಾಮದೇವನು ಹೊಯ್ಸಳರ ಎರಡನೆಯ ಬಲ್ಲಾಳನ ಸಮಕಾಲೀನನಾಗಿದ್ದನು. ಹೊಯ್ಸಳರು, ಕಲಚೂರಿಗಳು ಮತ್ತು ಚಾಳುಕ್ಯರ ನಡುವೆ ನಡೆಯುತ್ತಿದ್ದ ಘರ್ಷಣೆಗಳ ಕಾಲದಲ್ಲಿ ಕದಂಬರಿಗೆ ಶಾಂತಿಯುತವಾದ ಕಾಲವಾಗಿತ್ತು. ಅವನು ಕದಂಬ ಚಕ್ರವರ್ತಿ ಎಂಬ ಬಿರುದನ್ನೂ ಇಟ್ಟುಕೊಂಡನು. ಅವರು ಈ ಅನೇಕ ಘರ್ಷಣೆಗಳಿಂದ ಬಹಳಷ್ಟು ತೊಂದರೆಯನ್ನು ಅನುಭವಿಸಿದರು. ಆದರೆ ಕದಂಬ ಕಾಮದೇವನು ಸ್ವತಂತ್ರವಾಗಲು ಅನೇಕ ಪ್ರಯತ್ನಗಳನ್ನು ಮಾಡಿದನು. ಎಲ್ಲ ಸ್ತರಗಳಲ್ಲೂ ಬಲಯುತವಾಗಿದ್ದ ಎರಡನೆಯ ಬಲ್ಲಾಳನು ಕದಂಬರ ಮೇಲೆ ಅನೇಕ ಬಾರಿ ಧಾಳಿಗಳನ್ನು ನಡೆಸಿದನು. ಆದರೆ ಸಿಕ್ಕಿರುವ ಅಧಾರಗಳು ಇದಕ್ಕೆ ವಿರುದ್ಧವಾಗಿದೆ. ಹಾನಗಲ್ಲಿನ ಸಮೀಪವಿರುವ ಉದ್ದರೆಯ ಕೋಟೆಯ ಬಳಿ ಧಾಳಿಯು ಪ್ರಾರಂಭವಾಯಿತು. ಬಹುಶಃ ಕ್ರಿ.ಶ.1181[14]ರ ವೇಳೆಗೆ

ಈ ಕೋಟೆಯು ಹೊಯ್ಸಳರ ವಶದಲ್ಲಿತ್ತು ಎಂದು ಶಾಸನಗಳಿಂದ ಉದ್ಧರಿತವಾಗಿವೆ. ಆದರೆ ಈ ಕೋಟೆಯು ಕ್ರಿ.ಶ.1196ರ ವೇಳೆಗೆ ಕದಂಬರ ಕಾಮದೇವನ ವಶದಲ್ಲಿತ್ತು. ಶಾಸನಗಳ ಪ್ರಕಾರ ಕಾಮದೇವನು ಬಲ್ಲಾಳನ ಸೈನ್ಯವನ್ನು ಸೋಲಿಸಿ ಹೊಯ್ಸಳರನ್ನು ಹೊರದೂಡಿದನು ಎಂದು ಉಲ್ಲೇಖವಿದೆ. ಹಾನಗಲ್ಲಿನ ಕದಂಬರ ಮಹಾನ್ ದೊರೆಯಾದ ಕಾಮದೇವನ ಉದ್ಧರೆಯ ಕಾಲದಲ್ಲಿ ಕದಂಬ ವಂಶಕ್ಕೆ ಉನ್ನತವಾದ ಭವಿಷ್ಯವು ಕಂಡಿತು. ಕಾಮದೇವನು ಸೇವುಣರ ರಾಮಚಂದ್ರನ ಮಹಾಸೇನಾನಿಯಾದ ಸಾಳುವ ಟಿಕ್ಕಮನಿಗೆ ಸಹಾಯವನ್ನು ಮಾಡಿದನು. ಟಿಕ್ಕಮನು ಹೊಯ್ಸಳರ ವಿರುದ್ಧ ದಂಡಯಾತ್ರೆಯನ್ನು ಮಾಡಿ ದೋರಸಮುದ್ರವನ್ನು ಸೂರೆ ಹೊಡೆದನು. ಈ ಧಾಳಿಯ ಸಮಯದಲ್ಲಿ ಟಿಕ್ಕಮನು ಬನವಾಸಿ ಮತ್ತು ಹಾನಗಲ್ಲಿನ ಅನೇಕ ಪ್ರದೇಶಗಳನ್ನು ಆಕ್ರಮಿಸಿದನು. ಟಿಕ್ಕಮನು ಈ ಉದ್ದೇಶದಲ್ಲಿ ಸಂಪೂರ್ಣವಾಗಿ ಸಫಲನಾಗದೇ ಇದ್ದರೂ ಕದಂಬರಿಗೆ ಅವರ ಬಹಳಷ್ಟು ಪ್ರದೇಶವನ್ನು ಮರಳಿ ಕೊಡಿಸಿದನು. ಅವನು ಕದಂಬ ದೊರೆಯ ಸ್ಥಾಪಕನೆಂಬ ಬಿರುದನ್ನು ಹೊತ್ತನು. ಕ್ರಿ.ಶ.1300ರ ವೇಳೆಗೆ ಮೂರನೆಯ ಬಲ್ಲಾಳನು ಕದಂಬ ಕಾಮರಸನ್ನು ಸೋಲಿಸುವ ಪ್ರಯತ್ನವನ್ನು ಮಾಡಿದನು. ಆದರೆ ಈ ಪ್ರಯತ್ನದಲ್ಲಿ ಅವನು ನಿರೀಕ್ಷಿಸಿದಷ್ಟು ಯಶಸ್ಸನ್ನು ಪಡೆಯಲಿಲ್ಲ. ಹೀಗೆ ಕದಂಬರು ಹೊಯ್ಸಳರಿಂದ ತಪ್ಪಿಸಿಕೊಂಡರು. ಆದರೆ ಕದಂಬರ ಮೇಲಿನ ನಿರಂತರವಾದ ಧಾಳಿಗಳಿಂದ ಹೊಯ್ಸಳರು ತಮ್ಮ ಶಕ್ತಿಯನ್ನು ಕಳೆದುಕೊಂಡಿದ್ದರಿಂದ ಶಾಶ್ವತವಾದ ಯಶಸ್ಸನ್ನು ಗಳಿಸಲಾಗಲಿಲ್ಲ.

### 8.5 ಹುಂಚದ ಸಂತಾರರು

ಚರಿತೆಯಲ್ಲಿ ಪ್ರಾಚೀನ ಪೊಂಬುಚಪುರದ ಸಂತಾರರು ಬಹುಮುಖ್ಯವಾದ ಪಾತ್ರವನ್ನು ನಿರ್ವಹಿಸಿದರು. ಬಹಳ ಫಲವತ್ತಾದ ಕಣಿವೆಯಲ್ಲಿ ಸ್ಥಾಪಿತವಾಗಿದ್ದ ಸಂತಾರ ರಾಜ್ಯವು ಹೊಯ್ಸಳರ ಮೇಲೆ ಆಕ್ರಮಣವನ್ನು ಮಾಡಿತು. ಹೀಗಾಗಿ ಸಂತಾರರ ಮತ್ತು ಹೊಯ್ಸಳ ನಡುವೆ ಅನೇಕ ಘರ್ಷಣೆಗಳು ನಡೆದವು. ವಿನಯಾದಿತ್ಯನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ದೃಷ್ಟಿಯಿಂದ ಸಂತಾರರ ಕಡೆಗೆ ಗಮನವನ್ನು ಹರಿಸಿದನು. ಈ ಬಗ್ಗೆ ಹೆಚ್ಚಿನ ವಿವರಗಳು ತಿಳಿಯದಿದ್ದರೂ ಹೊಯ್ಸಳ ಸೈನ್ಯವು ವಿನಯಾದಿತ್ಯನ ಮುಂದಾಳತ್ವದಲ್ಲಿ ಸಂತಾರರನ್ನು ಸೋಲಿಸಿತು. ಅನೇಕ ವೀರಗಲ್ಲುಗಳು ಇದನ್ನು ಸಮರ್ಥಿಸುತ್ತವೆ. ವೀರ ಸಂತಾರ ದೇವನ ಕ್ರಿ.ಶ.1062[15] ಮತ್ತು ಕ್ರಿ.ಶ.1068[16]ರ ಎರಡು ಶಾಸನಗಳಲ್ಲಿ ಈ ಘರ್ಷಣೆಯ ಮೇಲೆ ಯಾವ ಬೆಳಕನ್ನೂ ಚೆಲ್ಲುವುದಿಲ್ಲ.

ಈ ಪ್ರದೇಶದಲ್ಲಿ ವಿರಳವಾಗಿರುವ ಸಮಕಾಲೀನವಾದ ಸಂತಾರದೇವನ ಶಾಸನಗಳು ಅವನು ಸೋತಿದ್ದನೆಂಬುದಕ್ಕೆ ಸಾಕ್ಷಿಯಾಗುತ್ತದೆ. ವೀರ ಸಂತಾರನ ಮಗನು ಹೊಯ್ಸಳರ

ರಾಜಕುಮಾರಿಯನ್ನು ವಿವಾಹವಾಗಿದ್ದನೆಂಬುದೂ ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ. ಆದರೆ ಇದರಿಂದ ಸಂತಾರರು ಹೊಯ್ಸಳರಿಗೆ ಸಂಪೂರ್ಣವಾಗಿ ಅಧೀನರಾಗಿದ್ದರೆಂಬ ತೀರ್ಮಾನಕ್ಕೆ ಬರಲಾಗುವುದಿಲ್ಲ. ಈ ಎರಡೂ ವಂಶದವರಲ್ಲಿ ಸ್ನೇಹದಲ್ಲೂ ಬಿಗಿಯಾದ ವಾತಾವರಣವು ಇದ್ದಿತು.

ವಿಷ್ಣುವರ್ಧನನು ಕದಂಬರನ್ನು ಸೋಲಿಸಲು ಸಂತಾರರ ಬೆಂಬಲವನ್ನು ಕೇಳಿದನು. ಹಗಾಗಿ ಅವನು ಮೊದಲು ಅವರ ಮೇಲೆ ಆಕ್ರಮಣವನ್ನು ಮಾಡಿ ಹುಂಚದ ಅವರ ಕೋಟೆಯನ್ನು ವಶಪಡಿಸಿಕೊಂಡನು. ಕೆಲವು ಶಾಸನಗಳು ವಿಷ್ಣುವರ್ಧನನು ಸಂತಾರ ದೊರೆ ಜಗದೇವನ ಮೇಲೆ ಗೆಲುವನ್ನು ಸಾಧಿಸಿದನೆಂದು ಹೇಳುತ್ತವೆ. ಆದರೆ ಹೊಯ್ಸಳ ನರಸಿಂಹನ ಕಾಲದಲ್ಲಿ ಕಲಚೂರ್ಯರ ಸಹಾಯದಿಂದ ಜಗದೇವನು ಅವರನ್ನು ಹೆದರಿಸುತ್ತಿದ್ದನೆಂದು ನಂಬಲು ಅನೇಕ ಆಧಾರಗಳಿವೆ. ಏರಾದಾಣೇಯಾ ಬಳ್ಳಾಳನ ಕಾಲದಲ್ಲಿ ಸಂತಾರರು ಹೊಯ್ಸಳರಿಗೆ ನಿಷ್ಠಾವಂತ ಸಾಮಂತರಾಗಿದ್ದು ಅವರ ಯುದ್ಧಗಳಲ್ಲಿ ಬಹಳ ಸಹಾಯವನ್ನು ಮಾಡಿದರು. ನೆರೆಯ ಸಣ್ಣ ಶಕ್ತಿಗಳ ಮೇಲೆ ತನ್ನ ಹಿಡಿತವನ್ನು ಇಟ್ಟುಕೊಳ್ಳಲು ಇದರಿಂದ ಬಲ್ಲಾಳನಿಗೆ ಸಹಾಯವಾಯಿತು. ಹುಂಚದ ಸಂತಾರರು ಸಾಮಂತರಾಗಿ ಹೊಯ್ಸಳರಿಗೆ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಲು ಸಹಾಯವನ್ನು ಮಾಡಿದರು.

## 8.6 ಹೊಸಗುಂದದ ಸಂತಾರರು

ಹೊಸಗುಂದದ ಸಂತಾರರು ಮುಖ್ಯವಾಹಿನಿಯಿಂದ ಯಾವಾಗ ಬೇರೆಯಾದರು ಎಂಬುದು ತಿಳಿದಿಲ್ಲ. ಆದರೆ ನಮಗೆ ತಿಳಿದಿರುವಂತೆ ಬಹುಶಃ ಬೀರರಸನು ನಾಯಕನಾಗಿದ್ದನು. ಈ ಸಂತಾರರು ಬಹಳ ದುರ್ಬಲರಾಗಿದ್ದರು ಮತ್ತು ಅವರು ಸೇವುಣರಿಂದ ತಮ್ಮ ಅಸ್ಥಿತ್ವವನ್ನೇ ಕಳೆದುಕೊಳ್ಳುವ ಹಂತದಲ್ಲಿದ್ದರು. ಹಾಗಾಗಿ ಸಂತಾರರು ತಮ್ಮನ್ನು ಸೇವುಣರಿಂದ ರಕ್ಷಿಸಿಕೊಳ್ಳಲು ಮಾತ್ರ ಹೊಯ್ಸಳರ ಸಾಮಂತರಾಗಿದ್ದರು. ಹೊಯ್ಸಳ ದೊರೆಗಳೂ ಕೂಡಾ ಸಂತಾರರ ಈ ಮನೋಭಾವದಿಂದ ಸಂತೃಪ್ತರಾಗಿದ್ದರು. ಕ್ರಿ.ಶ.1239[17]ರಲ್ಲಿ ಬೀರರಸನು ಹೊಯ್ಸಳರ ಬೆಂಬಲವನ್ನು ನಿರೀಕ್ಷಿಸಿ ಸೇವುಣರ ಮೇಲೆ ಆಕ್ರಮಣವನ್ನು ಮಾಡಿದನು. ಆದರೆ ಬೀರರಸನ ಲೆಕ್ಕಾಚಾರಗಳು ತಪ್ಪಾಗಿ ಸೇವೂಣರು ಬೀರರಸನ ಮೇಲೆ ಯುದ್ಧವನ್ನು ಮಾಡಿದರು. ಆದರೆ ಬೀರರಸನು ಹೊಯ್ಸಳರ ಬೆಂಬಲದಿಂದ ಸೇವುಣರ ಮೇಲೆ ಧಾಳಿಯನ್ನು ಮಾಡಲು ಸಂದರ್ಭಕ್ಕಾಗಿ ಕಾಯುತ್ತಿದ್ದನು. ಸೇವುಣರ ದೊರೆ ಮಹಾದೇವನು ಕದಂಬರ ಕಾಮದೇವನನ್ನು ಸೋಲಿಸಿದ ನಂತರ ಸಂತಾರರ ದೊರೆ ಬೀರರಸನ ಮೇಲೆ ಧಾಳಿಯನ್ನು

ಆಯೋಜಿಸಿದಾಗ ಆ ಸಂದರ್ಭವು ಒದಗಿ ಬಂದಿತು. ಹೊಯ್ಸಳರ ನೆರವಿನಿಂದ ಬೀರರಸನು ಸೇವುಣರ ಮಹದೇವನ ಆಕ್ರಮಣವನ್ನು ಯಶಸ್ವಿಯಾಗಿ ಎದುರಿಸಿದನು. ಆದರೆ ಈ ಆಟವು ಬಹಳ ಕಾಲ ನಡೆಯಲಿಲ್ಲ. ರಾಮಚಂದ್ರನ ಮಹಾದಂಡಾಧಿಕಾರಿಯಾದ ಸಾಳುವ ಟಿಕ್ಕಮನು ಹೊಯ್ಸಳರನ್ನು ಸೋಲಿಸಿ ಕದಂಬರ ಕಾಮದೇವನನ್ನು ಸಿಂಹಾಸನದಲ್ಲಿ ಕೂರಿಸಿದನು ಮತ್ತು ಹೊಸಗುಂದದ ಸಂತಾರರ ಕಡೆ ಸೈನ್ಯವನ್ನು ನಡೆಸಿದನು. ಅವನು ಈ ಬಾರಿ ಹೊಯ್ಸಳರ ನೆರವನ್ನು ಪಡೆಯಲಾಗದೇ ಸಂತಾರರ ಮುಖ್ಯಸ್ಥನಾದ ಬೊಮ್ಮರಸನು ಸೋಲನ್ನು ಅನುಭವಿಸಿದನು. ಕ್ರಿ.ಶ.1268ರಲ್ಲಿ ಬೊಮ್ಮರಸನು ಸೇವುಣರ ಸಾಮಂತನಾದನು. ಇದಾದ ನಂತರ ಕೆಲವು ಕಾಲದ ನಂತರ ಸೇವುಣರ ರಾಜ್ಯದಲ್ಲಿ ಉಂಟಾದ ಅಶಾಂತಿಯ ಲಾಭವನ್ನು ಪಡೆದ ಸಂತಾರ ಮುಖ್ಯಸ್ಥನು ಸೇವುಣರ ಹಿಡಿತದಿಂದ ಬಿಡುಗಡೆಯನ್ನು ಪಡೆದು ಸ್ವತಂತ್ರವಾಗಿ ಆಳ್ವಿಕೆಯನ್ನು ಮಾಡತೊಡಗಿದನು. ಈ ಸಮಯದಲ್ಲಿ ಮೂರನೆಯ ಬಲ್ಲಾಳನು ಮಧ್ಯ ಪ್ರವೇಶಿಸಿದನು ಮತ್ತು ಸಂತಾರ ದೊರೆಯಾದ ಬೊಮ್ಮರಸನನ್ನು ಸೋಲಿಸಿ ಹೊಸಗುಂದವನ್ನು ವಶಕ್ಕೆ ತಂದುಕೊಂಡನು.

## ಅಡಿಟಿಪ್ಪಣಿಗಳು

1) Derret: The Hoysalas P.27.
2) E.C Vol.V, B.158
3) MAR 1925, p.95
4) E.C Vol.V, BI.178
5) E.C Vol.V, Hn.69
6) MAR, 1912-13, p.36
7) E.C.IV, Ag 76
8) E.C.V, Hn 102
9) E.C.Vol.XII, Tp.31
10) E.C. Vol.V, Bl.202
11) E.C.Vol.VII, SK 212
12) EC Vol.VII, SK 244
13) EC Vol.VIII, SA 58
14) EC Vol.XI, Dg 59
15) Mysore Inscriptions, p.263
16) EC Vol.VIII, SA 137-140
17) EC Vol.XI, Dg 59

# ಅಧ್ಯಾಯ–೨
# ಹೊಯ್ಸಳರ ಪ್ರಭಾವ: ಇತರ ರಾಜ್ಯಗಳು

9.1 ಹೊಯ್ಸಳರು ಮತ್ತು ತಮಿಳು ರಾಜ್ಯಗಳು

9.1.1 ತಮಿಳುನಾಡಿನಲ್ಲಿ ಹೊಯ್ಸಳ ರಾಜ್ಯಭಾರ ರಾಜ್ಯ ವಿಭಜನೆ

9.2 ಆಂಧ್ರಪ್ರದೇಶದಲ್ಲಿ ಹೊಯ್ಸಳರ ಪ್ರಭಾವ

9.3 ಕಂಚಿಯಲ್ಲಿ ಹೊಯ್ಸಳರು

9.4 ಹೊಯ್ಸಳರು ಮತ್ತು ದಕ್ಷಿಣ ಕನ್ನಡ ಜಿಲ್ಲೆ

9.5 ಹೊಯ್ಸಳ ಚಾಳುಕ್ಯ ಸಂಬಂಧಗಳು

# ಅಧ್ಯಾಯ–9
# ಹೊಯ್ಸಳರ ಪ್ರಭಾವ: ಇತರ ರಾಜ್ಯಗಳು

## 9.1 ಹೊಯ್ಸಳರು ಮತ್ತು ತಮಿಳು ರಾಜ್ಯಗಳು

ಹನ್ನೆರಡನೆಯ ಶತಮಾನದಲ್ಲಿ ದಕ್ಷಿಣದಲ್ಲಿ ಹೊಯ್ಸಳರು ಬಹಳ ಶಕ್ತಿಶಾಲೀ ವಂಶದವ–ರಾಗಿದ್ದರು. ದಕ್ಷಿಣ ಭಾರತದ ಚರಿತ್ರೆಯಲ್ಲಿ ಹೊಯ್ಸಳರು ಒಂದುನೂರಕ್ಕೂ ಹೆಚ್ಚು ಕಾಲ ಸಾಮಂತರಾಗಿದ್ದ ಚಾಳುಕ್ಯರೊಡನೆ ಮತ್ತು ನೇರ ವ್ಯವಹಾರವನ್ನು ಹೊಂದಿದ್ದ ತಮಿಳು ದೇಶದ ರಾಜರೊಡನೆ ಇವರು ಹೊಂದಿದ್ದ ಸಂಬಂಧವು ಒಂದು ಮುಖ್ಯವಾದ ವಿಷಯವಾಗಿತ್ತು. ಈ ಭಾಗದಲ್ಲಿ ಅವರ ಸಂಬಂಧಗಳನ್ನು ಅಧ್ಯಯನ ಮಾಡುವ ಒಂದು ಪ್ರಯತ್ನವು ಇದೆ.

ದಕ್ಷಿಣದಲ್ಲಿನ ಮೇಲಾಟಕ್ಕಾಗಿ ನಡೆದ ಹೋರಾಟಗಳಲ್ಲಿ ಚಾಳುಕ್ಯರ ಸಾಮಂತರಾಗಿ ಹೊಯ್ಸಳರು ತಮ್ಮ ಸ್ವತಂತ್ರ ಸ್ಥಿತಿಯನ್ನು ಪಡೆಯುವ ಮೊದಲು ಸಕ್ರಿಯವಾಗಿ ಹೋರಾಡಿದರು. ಚೋಳದೇಶದ ವ್ಯವಹಾರಗಳಲ್ಲಿ ಹೊಯ್ಸಳರ ಪಾತ್ರಗಳ ಬಗ್ಗೆ ಸಾಕಷ್ಟು ಶಾಸನಗಳ ಆಧಾರವಿದೆ. ಒಂದು ದಾಖಲೆಯ ಪ್ರಕಾರ ಚೋಳರ ಮುಖ್ಯಸ್ಥನಾದ ಅಪ್ರಮೇಯನು ಹೊಯ್ಸಳರ ಒಬ್ಬ ಮುಖ್ಯಸ್ಥನನ್ನು ಸೋಲಿಸಿದನು.[1] ಬಿಲ್ಹಣನು ಚೋಳರು ಮತ್ತು ಚಾಳುಕ್ಯರ ನಡುವೆ ನಡೆದ ಒಂದು ಯುದ್ಧದ ಬಗ್ಗೆ ಪ್ರಸ್ಥಾಪಿಸುತ್ತಾ ಹೊಯ್ಸಳರ ಪ್ರಜೆಗಳ ಪರವಾಗಿ ಅವನ ಸೇನಾಯಕನಾದ ಎರೆಯಂಗನ ಹೆಸರನ್ನು ಪ್ರಸ್ಥಾಪಿಸಿ ಅವನು ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಪರವಾಗಿ ಹೋರಾಡಿದನು ಎಂದು ತಿಳಿಸಿದ್ದಾನೆ.

ಹೊಯ್ಸಳರ ಶಕ್ತಿಯ ಅಭ್ಯುದಯವು ಹನ್ನೆರಡನೆಯ ಶತಮಾನದಲ್ಲಿ ಬಿಟ್ಟಿಗ ಅಂದರೆ ವಿಷ್ಣುವರ್ಧನನ ಕಾಲದಲ್ಲಿ ಮೈಸೂರು ರಾಜ್ಯದಲ್ಲಿ ಚೋಳರ ಭವಿಷ್ಯವನ್ನು ತೀವ್ರವಾಗಿ ಬಾಧಿಸಿತು. ಚೋಳರು ಬಹಳ ಹಿನ್ನಡೆಯನ್ನು ಅನುಭವಿಸಿ ತಮ್ಮ ಪ್ರದೇಶದ ಗಮನೀಯ ಭಾಗಗಳನ್ನು ಹೊಯ್ಸಳರಿಗೆ ಬಿಟ್ಟುಕೊಡಬೇಕಾಯಿತು. ವಿಷ್ಣುವರ್ಧನನು ಒಬ್ಬ ಮಹಾನ್ ಸೈನಿಕನಾಗಿದ್ದು ಮಹತ್ವಾಕಾಂಕ್ಷಿಯಾಗಿದ್ದನು. ಕ್ರಿ.ಶ.1116[2]ರಲ್ಲಿ ವಿಷ್ಣುವರ್ಧನನು ಗಂಗಾವತಿಯ ಚೋಳರ ಪ್ರದೇಶದ ಮೇಲೆ ಧಾಳಿಯನ್ನು ಮಾಡಿದನು ಮತ್ತು ತಲಕಾಡಿನ ರಾಜ್ಯಪಾಲನಾದ ಡಿಗ್ಗೈಮನ್‌ನನ್ನು ಸೋಲಿಸಿ ಅದ ನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಬೇಲೂರಿನ ಕ್ರಿ.ಶ.1117[3]ರ ತಾಮ್ರ ಶಾಸನವೊಂದು ಹೀಗೆ ದಾಖಲಿಸಿದೆ: "ವಿಷ್ಣುವರ್ಧನನು ಯದುಕುಲವನ್ನು ಗಂಗರ ಪ್ರದೇಶವನ್ನು ಆಳಲು ಪ್ರಾರಂಭಿಸಿದವರಲ್ಲಿ ಮೊದಲಿಗನು, ಅಲ್ಲದೆ ಅವನು ಗಂಗರಾಜರ

ರಾಜಧಾನಿಯನ್ನು ಸುಟ್ಟುಹಾಕಿದನು". "ತಲಕಾಡುಗೊಂಡ" ಎಂಬ ಬಿರುದು ವಿಷ್ಣುವರ್ಧನನಿಗೆ ಬಂದದ್ದಾಗಿದ್ದು ಅದು ಕ್ರಿ.ಶ.1116[4]ರ ಒಂದು ಶಾಸನದಲ್ಲಿ ಉಲ್ಲೇಖಿಸಿದೆ. ಮತ್ತು ಅದೇ ವರ್ಷ ಅವನನ್ನು ತಲಕಾಡು ಮತ್ತು ಕೋಲಾಲ (ಕೋಲಾರ), ಗಂಗಾವತಿ, ಹಾಗೆಯೇ ಕೊಂಗು ಈ ಎಲ್ಲ ಪ್ರದೇಶಗಳನ್ನು ಆಳುತ್ತಿದ್ದನೆಂದು ಹೇಳಿದೆ. ಈ ಪ್ರದೇಶಗಳು ಅವನ ಪ್ರಸಿದ್ಧ ದಂಡಾನಾಯಕ ನಾಡ ಗಂಗರಾಜನ ಮೂಲಕ ಹೊಯ್ಸಳರಿಂದ ಗೆಲ್ಲಲ್ಪಟ್ಟಿತು. ಹೊಯ್ಸಳರ ಈ ವಿಜಯವು ತಮಿಳರನ್ನು ಗಂಗಾವತಿಯಿಂದ ಹೊರದೂಡಲ್ಪಟ್ಟಿತು. ಚೋಳರ ವಿರುದ್ಧದ ಅವನ ಈ ಸೈನಿಕ ಕಾರ್ಯಾಚರಣೆಯಲ್ಲಿ ಅವನು ರಾಮೇಶ್ವರಂನ ವರೆಗೂ ಹೋಗಿದ್ದನೆಂದು ಹೇಳಿಕೊಳ್ಳುತ್ತಾನೆ. ಹೊಯ್ಸಳರ ಈ ವಿಜಯವು ಶಾಸನಗಳಿಂದ ದೃಢಪಟ್ಟಿದ್ದು ಅದು ಚೋಳ ರಾಜ್ಯಪ್ರತಿನಿಧಿಯನ್ನು ಗಂಗರಾಜನು ಕ್ರಿ.ಶ.1117[5]ರಲ್ಲಿ ವಶಪಡಿಸಿಕೊಂಡಾಗ ಕಾವೇರಿ ನದಿಯಾಚೆಗೆ ಓಡಿಸಿದನೆಂಬುದನ್ನು ಖಚಿತಪಡಿಸುತ್ತದೆ.

ಪ್ರದೇಶದ ಆಕಾಂಕ್ಷೆ ಮತ್ತು ಸೈನಿಕ ವಿರೋಧದ ಜೊತೆಗೆ ಧರ್ಮವೂ ಕೂಡಾ ಹೊಯ್ಸಳ ಮತ್ತು ಚೋಳರ ನಡುವೆ ಇದ್ದ ಸೌಹಾರ್ದತೆಯನ್ನು ಹಾಳುಮಾಡುವಲ್ಲಿ ಹೆಚ್ಚಿನ ಪಾತ್ರವನು ವಹಿಸಿತು. ಪ್ರಸಿದ್ಧ ವೈಷ್ಣವ ತತ್ವಜ್ಞಾನಿಯೂ, ಉಪಧ್ಯಾಯನೂ ಆದ ರಾಮಾನುಜರು ಕಟ್ಟಾ ಶೈವ ಮತದವನಾಗಿದ್ದ ಚೋಳ ರಾಜ್ಯದಿಂದ ಹೊರಬಿದ್ದು ಹೊಯ್ಸಳರಲ್ಲಿ ಆಶ್ರಯ ಪಡೆದರು. ಹೊಯ್ಸಳ ಚಕ್ರವರ್ತಿ ಬಿಟ್ಟಿಗನು ರಾಮಾನುಜರ ಪ್ರಭಾವಕ್ಕೆ ಬಿದ್ದು ಅವನು ವೈಷ್ಣವ ಮತಕ್ಕೆ ತಿರುಗಿದನು. ಈ ದೊರೆಯು ಆಗ ವಿಷ್ಣುವರ್ಧನೆಂದು ಹೆಸರನ್ನು ಇಟ್ಟುಕೊಂಡು ಅವನಿಗೆ ಕೀರ್ತಿ ತರುವಂತಹ ಜಗತ್ಪ್ರಸಿದ್ಧ ದೇವಾಲಯಗಳನ್ನು ಕಟ್ಟಿದನು. ಅವನ ಪ್ರಾರಂಭಿಕ ದಿನಗಳಲ್ಲಿ ಮಹತ್ವಾಂಕಾಂಕ್ಷೀ ಜೈನನಾಗಿದ್ದು ಅವನು ತನ್ನ ಮಂತ್ರಿಯಾದ ಗಂಗರಾಜನಿಗೆ ಚೋಳರ ಧಾಳಿಯ ಸಮಯದಲ್ಲಿ ನಾಶವಾದ ಜೈನ ದೇವಸ್ಥಾನಗಳನ್ನು ಸರಿಪಡಿಸುವಂತೆ ಪ್ರೋತ್ಸಾಹಿಸಿದನು. ಚೋಳರಿಂದ ಜೈನ ದೇವಾಲಯಗಳ ನಾಶ ಮತ್ತು ಹೊಯ್ಸಳರಿಂದ ಅವುಗಳ ಪುನರುದ್ಧಾರ ಈ ಎರಡು ಶಕ್ತಿಗಳ ನಡುವಿನ ಸಂಬಂಧಗಳ ನಡುವೆ ಹುಳಿಯನ್ನು ಹಿಂಡಿತು. "ಭಾರತೀಯ ರಾಜರು ಸಾಧಾರಣವಾಗಿ ಮತಸಹಿಷ್ಣು ಭಾವದಿಂದ ಆಳುತ್ತಿದ್ದರೂ ರಾಜಕೀಯ ಯುದ್ಧಗಳು ಪ್ರಾಂತೀಯ ಮನೋವಿಕಾರಗಳು ಮತ್ತು ಕಳವಳಕಾರೀ ಹಿಂಸೆಯು ತಿಳಿದಿಲ್ಲದಾಗಿರಲಿಲ್ಲ"

ಚೋಳರ ಮೇಲಿನ ಈ ವಿಜಯದ ನಂತರ ವಿಷ್ಣುವರ್ಧನನು ಚಾಳುಕ್ಯ ಸಾಮ್ರಾಜ್ಯದ ಕಡೆ ತಿರುಗಿ ಪ್ರಾರಂಭದ ದಿನಗಳಲ್ಲಿ ಸಾಕಷ್ಟು ಯಶಸ್ಸನ್ನು ಪಡೆದನು. ಅವನು ಉಚ್ಚಂಗಿಯನ್ನು

ಗೆದ್ದು ನಂತರ ಉತ್ತರದ ಕೃಷ್ಣೆಯ ಕಡೆಗೆ ನಡೆದನು. ಚಾಳುಕ್ಯರು ಹೊಯ್ಸಳರನ್ನು ತಮ್ಮ ಪ್ರಾಂತ್ಯದಿಂದ ಓಡಿಸಿದರು ಮತ್ತು ಪಾಂಡ್ಯರನ್ನು ಹೆಚ್ಚಿನ ಬಲದಿಂದ ಹಿಂಬಾಲಿಸಿದರು. ಆದರೆ ಹೊಯ್ಸಳರು ತಮ್ಮ ಬಲವನ್ನು ಹೆಚ್ಚಿಸಿಕೊಂಡು ಚೋಳರು ದುರ್ಬಲರಾಗಿದ್ದ ಸಂದರ್ಭವನ್ನು ಗಮನಿಸಿ ಅವರ ಪ್ರಾಬಲ್ಯವನ್ನು ಉತ್ತರದಲ್ಲಿ ಹೆಚ್ಚಿಸಿಕೊಂಡರು. ಇದೇ ಸಮಯದಲ್ಲಿ ಪಾಂಡ್ಯರು ದಕ್ಷಿಣದಲ್ಲಿ ತಮ್ಮನ್ನು ಸ್ಥಾಪಿಸಿಕೊಂಡರು.[6] ಹೊಯ್ಸಳರ ಈ ಮೇಲಾಟವು ಚೋಳರನ್ನು ಎಚ್ಚರಿಸಿತು ಮತ್ತು ಅವರ ದೊರೆ ಮೂರನೆಯ ಕುಲೋತ್ತುಂಗನು (1178–1218) ಕೊಂಗು ಪ್ರಾಂತ್ಯದಲ್ಲಿ ತೀವ್ರ ಕಾರ್ಯಾಚರಣೆಯನ್ನು ಆ ಪ್ರಾಂತ್ಯದಲ್ಲಿ ಹೊಯ್ಸಳರ ಶಕ್ತಿಯನ್ನು ತಗ್ಗಿಸಲು ಕೈಗೊಂಡನು. ಹೊಯ್ಸಳ ದೊರೆ ಮೂರನೆಯ ಬಲ್ಲಾಳನೊಂದಿಗೆ ಅವನ ಸಂಬಂಧಗಳು ಅವನು ಚೋಳ ರಾಜಕುಮಾರಿಯನ್ನು ವಿವಾಹ ಮಾಡಿಕೊಂಡ ಮೇಲೆ ಸ್ನೇಹೀಭಾವದಲ್ಲಿತ್ತು. ತನ್ನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಕುಲೋತ್ತುಂಗನು ಪಾಂಡ್ಯರೊಡನೆ ತನ್ನ ಮಿತಿಯನ್ನು ಮೀರಿದನು ಮತ್ತು ಈ ಪರಿಸ್ಥಿತಿಯು ಹೊಯ್ಸಳರ ಮಧ್ಯಪ್ರವೇಶದಿಂದ ತಿಳಿಗೊಂಡಿತು. ಹೊಯ್ಸಳರು ಬೆಳೆಯುತ್ತಿದ್ದ ಪಾಂಡ್ಯರ ಶಕ್ತಿಯಿಂದ ಅಸಮಾಧಾನಗೊಂಡಿದ್ದು ಚೋಳ ಸಾಮ್ರಾಜ್ಯವನ್ನು ಬಲಪಡಿಸಬೇಕೆಂದು, ಅದರಿಂದ ಪರಿಸ್ಥಿತಿಯು ಸಮತೋಲನದಲ್ಲಿ ಇರುವುದೆಂದು ಯೋಚಿಸಿದರು. 13ನೆಯ ಶತಮನದ ಮೊದಲರ್ಧ ಭಾಗದಲ್ಲಿ ಹೊಯ್ಸಳರು ಪಾಂಡ್ಯರ ವಿದುದ್ಧವಾಗಿ ಚೋಳರ ಸಾಮ್ರಾಜ್ಯವನ್ನು ಸರ್ವನಾಶ ಮಾಡುವುದಕ್ಕಾಗಿ ತೋರುಗಾಣಿಕೆಗಾಗಿ ಪಾಂಡ್ಯರ ಪರವಾಗಿ ಅನೇಕ ಯುದ್ಧಗಳನ್ನು ಮಾಡಿದರು ಸಾಹಿತ್ಯಿಕ ಮತ್ತು ಶಾಸನಗಳ ಆಧಾರಗಳು ಈ ಯುದ್ಧಗಳ ಪುನರಾವರ್ತನೆಗಳ ಬಗ್ಗೆ ಸಾಕ್ಷ್ಯವನ್ನು ಕೊಡುತ್ತವೆ. ಬಾಣನ ಹರ್ಷ ಚರಿತದ ರೀತಿಯಲ್ಲಿ, ನಂತರ ಸಕಲವಿದ್ಯಾ ಚಕ್ರವರ್ತಿನ್‌ನ ಸಂಸ್ಕೃತದಲ್ಲಿರುವ ಚಾರಿತ್ರಿಕ ಗದ್ಯವು ಸುಮಾರು ಕ್ರಿ.ಶ.1234[7]ರ ವೇಳೆಗೆ ಚೋಳರ ನಶಿಸಿದ ಭವಿಷ್ಯವನ್ನು ಪುನರ್ರೂಪಿಸುವ ಸಲುವಾಗಿ ಹೊಯ್ಸಳರ ಎರಡಾನೆಯ ನರಸಿಂಹ ಮತ್ತು ಪಾಂಡ್ಯರು ಮತ್ತು ಅವರ ಸಹಾಯಕರ ನಡುವೆ ನಡೆದ 90 ದಿನಗಳ ಯುದ್ಧವನ್ನು ವರ್ಣಿಸುತ್ತದೆ. ಇದು ಒದಗಿಸಿದ ಮಾಹಿತಿಯನು ಅಂದರೆ ಚೋಳರ ಪರವಾಗಿ ಹೊಯ್ಸಳರು ನಡೆಸಿದ ಕಾರ್ಯಾಚರಣೆಯ ಬಗ್ಗೆ ಇತರ ಹೊಯ್ಸಳರ ಶಾಸನಗಳೂ ಖಚಿತಪಡಿಸಿವೆ. ತಿರುವೆಂಡಿಪುರಮ್‌ನ ಶಾಸನವು ಚೋಳರಾಜ ಮೂರನೆಯ ರಾಜರಾಜನ ಅನುಭವಗಳನ್ನು ವಿವರವಾಗಿ ವರ್ಣಿಸಿವೆ ಮತ್ತು ಅವನು ಹೊಯ್ಸಳರಿಂದ ಪಡೆದ ಸಹಾಯದ ಬಗ್ಗೆ ಇರುವ ಇದು ಶುದ್ಧವಾದ ಚಾರಿತ್ರಿಕ ದಾಖಲೆಗಳಲ್ಲಿ ಅತಿ ಮುಖ್ಯವಾದದ್ದಾಗಿದೆ. ಎರಡನೆಯ ನರಸಿಂಹನು ಚೋಳರ ವ್ಯವಹಾರಗಳಲ್ಲಿ ಮೂರು ಬಾರಿ ಮಧ್ಯ ಪ್ರವೇಶಿಸಿ ಕೊನೆಗೆ ತನ್ನ ಮಗನಾದ ಸೋಮೇಶ್ವರನನ್ನು ಚೋಳರು ಮತ್ತು ಪಾಂಡ್ಯರ ನಡುವೆ ಶಾಂತಿಯನು ಕಾಪಾಡಿಕೊಂಡು

ಬರುವ ಸಲುವಾಗಿ ಕಾವೇರಿ ನದಿಯ ಹತ್ತಿರವಿರುವ ಶ್ರೀರಂಗಂನ ಸಣ್ಣ ಪ್ರದೇಶಕ್ಕೆ ಅಧಿಪತಿಯನ್ನಾಗಿ ಮಾಡಿದನು. ಈ ಹೊಯ್ಸಳರ ಮಧ್ಯ ಪ್ರವೇಶವು ಕೇವಲ ಲಾಭದ ಮತ್ತು ಸ್ವಾರ್ಥದ ದೃಷ್ಟಿಯದಾಗಿತ್ತು.

ಹದಿಮೂರನೆಯ ಶತಮಾನದ ಮಧ್ಯಭಾಗದ ವೇಳೆಗೆ ದಕ್ಷಿಣದ ಯಜಮಾನಿಕೆಯು ಪಾಂಡ್ಯರ ಕೈಯಲ್ಲಿತ್ತು. ಸುಂದರಪಾಂಡ್ಯನು ದೋರಸಮುದ್ರದ ಹೊಯ್ಸಳರ ಮತ್ತು ತಾಂಜಾವೂರಿನ ಮತ್ತು ಕಾಂಚಿಯ ಚೋಳರ ಮೇಲೆ ಶ್ರೇಷ್ಠತೆಯನ್ನು ಸಾಧಿಸಿದ್ದನು. ಪಾಂಡ್ಯರು ಹೊಯ್ಸಳರಿಂದ ಶ್ರೀರಂಗಮ್ ಅನ್ನು ಕಿತ್ತುಕೊಂಡಿದ್ದರು. ಹೊಯ್ಸಳರ ಮತ್ತು ಪಾಂಡ್ಯರ ನಡುವಿನ ಉತ್ತಮ ಸಂಬಂಧವನ್ನು ಚೋಳರು ಲಾಭಕ್ಕೆ ತೆಗೆದುಕೊಂಡು ಹೊಯ್ಸಳರನ್ನು ಕ್ರಿ.ಶ.1245ರಲ್ಲಿ ತಮ್ಮ ಅನುವಂಶೀಯವಾದ ರಾಜ್ಯದಿಂದ ಸೋಮೇಶ್ವರನನ್ನು ಸೋಲಿಸುವ ಮೂಲಕ ಹೊರಹಾಕಿದರು. ಸೋಮೇಶ್ವರನು ತಮಿಳುದೇಶದ ವ್ಯವಹಾರಗಳಲ್ಲಿ ಹೆಚ್ಚಾಗಿ ವ್ಯವಹರಿಸುತ್ತಾ ಬಯಲು ಪ್ರದೇಶದ ತನ್ನ ವ್ಯವಹಾರಗಳನ್ನು ಮರೆತುಬಿಟ್ಟಿದನು. ಅವನು ದೋರಸಮುದ್ರಕ್ಕೆ ಬಹಳ ಅಪರೂಪಕ್ಕೆ ಭೇಟಿಯನ್ನು ಕೊಡುತ್ತಿದ್ದನು ಮತ್ತು ಹೊಯ್ಸಳರ ರಾಜಕೀಯ ಚಟುವಟಿಕೆಗಳನ್ನು ನಿಲ್ಲಿಸಿಬಿಟ್ಟಿದ್ದನು. ಹೊಯ್ಸಳ ಘನತೆಗೆ ಬಿದ್ದ ಪೆಟ್ಟು ಬಹಳ ಜೋರಾಗಿತ್ತು. ಸೋಮೇಶ್ವರ ಮತ್ತು ದೇವಕಿಯ ಮಗನಾದ ರಾಮನಾಥನು ಪಾಂಡ್ಯರ ಅನುಮತಿಯನ್ನು ತೆಗೆದುಕೊಂಡು ದಕ್ಷಿಣದಲ್ಲಿ ಜಹಗೀರೀ ಪ್ರದೇಶವನ್ನು ಆಳಿದನು ಮತ್ತು ಸೋಮೇಶ್ವರ ಮತ್ತು ಬಿಜ್ಜಳದೇವಿಯ ಮಗನಾದ ಮೂರನೆಯ ನರಸಿಂಹನು ದೋರಸಮುದ್ರವನ್ನು ಆಳುತ್ತಿದ್ದನು. ಸೋದರರಿಬ್ಬರ ನಡುವಿನ ಯುದ್ಧವು ರಾಜ್ಯದ ಒಗ್ಗಟ್ಟನ್ನು ಒಡೆಯುತ ಮತ್ತು ಸುತ್ತಲಿನ ಸೈನ್ಯಾಧಿಕಾರಿಗಳಿಗೆ ತಮ್ಮ ಚಟುವಟಿಕೆಗಳನ್ನು ನಡೆಸಲು ಅವಕಾಶವಾಯಿತು.

ಪಾಂಡ್ಯರ ಆಳ್ವಿಕೆಯು ಕೇವಲ ಕೆಲವು ಕಾಲದ್ದಾಗಿತ್ತು. ದಕ್ಷಿಣದಲ್ಲಿನ ಅಧಿಕಾರದ ಸಮತೋಲನವು ಅಸ್ಥಿರವಾಗಿತ್ತು. ಪಾಂಡ್ಯರಿಂದ ಮತ್ತು ಚೋಳರಿಂದ ಹೊಯ್ಸಳರು ಒತ್ತಲ್ಪಟ್ಟಿದ್ದರೂ ಈ ಮೂರು ಶಕ್ತಿಗಳಲ್ಲಿ ಅವರು ಇನ್ನೂ ಸಾಕಷ್ಟು ರಾಜ್ಯವನ್ನು ಮತ್ತು ಸಂಪನ್ಮೂಲವನ್ನು ಹೊಂದಿದ್ದು ಸ್ವಲ್ಪ ಕಾಲವಾದರೂ ಸಹ ಉತ್ತರದ ಮುಸ್ಲಿಮರ ಧಾಳಿಗೆ ತಡೆಯನ್ನು ಹಾಕುವ ಶಕ್ತಿಯನ್ನು ಹೊಂದಿದ್ದರು. ಮೂರನೆಯ ಬಲ್ಲಾಳನ ಕಾಲದಲ್ಲಿ ಹೊಯ್ಸಳರ ಸಾಮರ್ಥ್ಯವು ಪುನಶ್ಚೇತನಗೊಂಡು ಅವರು ತಮ್ಮ ಆಳ್ವಿಕೆಯನ್ನು ತಮಿಳುನಾಡಿನಲ್ಲಿ ಪ್ರಾರಂಭಿಸಿದರು. ಸಮಕಾಲೀನ ದಾಖಲೆ ಹೇಳುವಂತೆ ನೀಲಗಿರಿಯನ್ನು

ಗೆದ್ದವನು ಮತ್ತು ಡಣನಾಯಕನ ಕೋಟ್ಟೈ (ಕೊಯಮತ್ತೂರು ಜಿಲ್ಲೆಯ ಡಣನಾಯಕನ ಕೋಟೆ)ಯನ್ನು ಕಟ್ಟಿದ ಹೊಯ್ಸಳರ ಸೈನ್ಯಾಧಿಪತಿಯಾದ ಮಾಧವದಂಡನಾಯಕನು ಜಾತವರ್ಮನ್ ವೀರಪಾಂಡ್ಯನನ್ನು ಸೋಲಿಸಿದನು. ಕ್ರಿ.ಶ.1291 ರಿಂದ 1342ರವರೆಗೆ ಮತ್ತು ಇನ್ನೂ ಹೆಚ್ಚು ಕಾಲದವರೆಗೆ ತಮಿಳುದೇಶದ ಮೇಲೆ ಹೆಚ್ಚು ಪ್ರಭಾವವನ್ನು ಹೊಂದಿದ್ದರು. ಮೂರನೆಯ ಬಲ್ಲಾಳನ ಶಾಸನಗಳು ಅವನು ದೇವಾಲಯಗಳ ಉತ್ಸವಗಳಲ್ಲಿ ಮತ್ತು ದೇವಾಲಗಳಿಗೆ ಭೂಮಿಯನ್ನು ನೀಡುವುದರಲ್ಲಿ ತೆರಿಗೆಗಳ ವಿನಾಯಿತಿಯನ್ನು ನೀಡುವುದರಲ್ಲಿ ಭಾಗವಹಿಸುತ್ತಿದನೆಂದು ಹೇಳುತ್ತವೆ.

ಮೇಲಿನ ಪುನರ್ವಿಮರ್ಶೆಯನ್ನು ಬಿಟ್ಟರೂ ಹೊಯ್ಸಳರು ತಮಿಳುನಾಡಿನ ವ್ಯವಹಾರಗಳಲ್ಲಿ ಮತ್ತೆ ಮತ್ತೆ ಪ್ರವೇಶಿಸುತ್ತಿದ್ದರೆಂಬುದು ಸ್ಪಷ್ಟವಾಗಿದೆ ಮತ್ತು ಹೆಚ್ಚುತ್ತಿರುವ ಪಾಂಡ್ಯರ ಶಕ್ತಿಯ ವಿರುದ್ಧ ಹೋರಾಡುತ್ತಿರುವ ಚೋಳರಿಗೆ ಸಹಾಯ ಮಾಡುವ ಮೂಲಕ ದಕ್ಷಿಣದಲ್ಲಿ ಶಕ್ತಿಯ ಸಮತೋಲನವನ್ನು ಕಾಪಾಡಿಕೊಂಡು ಬಂದರು. ಇಷ್ಟಾದರೂ ದಕ್ಷಿಣ ಭಾರತದ ರಾಜ್ಯಗಳ ನಡುವಿನ ವಿನಾಶಕಾರಿ ಯುದ್ಧಗಳಿಂದ ತಮ್ಮ ಶಕ್ತಿ ಮತ್ತು ಸಂಪನ್ಮೂಲಗಳನ್ನು ಬರಿದು ಮಾಡಿಕೊಂಡು ಉತ್ತರದ ಧಾಳಿಗಳನ್ನು ಎದುರಿಸಲು ಅಶಕ್ತರಾದರು. ಮತ್ತೆ ಮತ್ತೆ ಯುದ್ಧಗಳು, ಸಣ್ಣಪುಟ್ಟ ಅಸೂಯೆಗಳು ಇವುಗಳು ತಮಿಳರು ಮತ್ತು ಹೊಯ್ಸಳರನ್ನು ದುರ್ಬಲಗೊಳಿಸಿ ಅವರು ಉತ್ತರದ ಮುಸ್ಲಿಮರ ಧಾಳಿಗೆ ಸುಲಭದ ತುತ್ತಾದರು.

## 9.2 ಆಂಧ್ರ ಪ್ರದೇಶದಲ್ಲಿ ಹೊಯ್ಸಳರ ಪ್ರಭಾವ

ಕಲ್ಯಾಣಿಯ ಪಶ್ಚಿಮ ಚಾಲುಕ್ಯರು ಹಾಗೂ ವಿಜಯನಗರದ ರಾಯರ ಮಧ್ಯದಲ್ಲಿ ಬರುವ ಹೊಯ್ಸಳರು ದಕ್ಷಿಣದಲ್ಲಿ ಹೆಚ್ಚು ಪ್ರಬಲರಾಗಿದ್ದರು. ಯಾದವ, ಕಾಕತೀಯ ಪಾಂಡ್ಯರ ಸಮಕಾಲೀನರಾದ ಹೊಯ್ಸಳರು ಪ್ರಾರಂಭದಲ್ಲಿ ಚಾಲುಕ್ಯ ಚೋಳರೊಡನೆ ಮತ್ತು ಅವರ ನೆಚ್ಚಿನ ಬೆಂಬಲಿಗರಾದ ನಲ್ಲೂರಿನ ತೆಲುಗು ಚೋಳರು, ಹೋರಾಡಬೇಕಾಯಿತು. ಮತ್ತು ನಂತರದಲ್ಲಿ ಕಾಕತೇಯರಲ್ಲಿ ಘರ್ಷಣೆಯಾಯಿತು ಮುಸ್ಲಿಂ ಪ್ರಾಬಲ್ಯವನ್ನು ವಿಂಧ್ಯದ ದಕ್ಷಿಣದಲ್ಲಿ ತಡೆಗಟ್ಟುವಲ್ಲಿ ಹೊಯ್ಸಳ ಪಾತ್ರ ಸ್ಮರೀಯ 12ನೇ, 13ನೇ, 14ನೇ ಶತಮಾನದಲ್ಲಿ ಆಂಧ್ರ ಪಶ್ಚಿಮ ಭಾಗ ರಾಯಲ್ ಸೀಮಾ ಹೊಯ್ಸಳರ ಆಳ್ವಕೆಯಲ್ಲಿತ್ತು.

ಆಂಧ್ರದಲ್ಲಿ ಆ ಸಮಯದಲ್ಲಿ ಹಲವಾರು ಚಿಕ್ಕಪುಟ್ಟ ವಂಶಗಳಲ್ಲಿ ವೇಲುನಾಡ ಚೋಳರು ಹಾಗೂ ತೆಲುಗು ಚೋಳರು ಬಹಳ ಮುಖ್ಯ, ವೇಲುನಾಡು ಚೋಳರು ಉತ್ತರ ಹಾಗೂ

ಸಮುದ್ರ ತೀರದಲ್ಲಿ ಪ್ರಬಲರಾಗಿದ್ದರೆ, ತೆಲುಗು ಚೋಳರ ಪಶ್ಚಿಮ ಹಾಗೂ ದಕ್ಷಿಣದಲ್ಲಿ ತೆಲುಗು ಚೋಳರು ಪ್ರಮುಖರು ನಲ್ಲೂರಿನ ತೆಲುಗು ಚೋಳರು (1100-1350) ಹಲವಾರು ತೆಲುಗು ಚೋಳ ವಂಶದವರಲ್ಲಿ ಉದಾ ಪಟ್ಟಪ್ಪಿ, ಎರುವ, ತಂಡೂರು ಮತ್ತು ಹೇಮಾವತಿ ಪ್ರಮುಖರು. ಈ ವಂಶದಲ್ಲಿ 12 ಜನ ಆಳಿದರು. ಅವರ ಕಾಲದಲ್ಲಿ ಅವರ ಸಾಮ್ರಾಜ್ಯ ಕೇವಲ ಆಂದ್ರದಲ್ಲಷ್ಟೇ ಅಲ್ಲದೆ ಹೊಯ್ಸಳ ತೆಲುಗಪಲ್ಲವ ಮತ್ತು ಚೋಳರಾಜ್ಯದಲ್ಲೂ ವಿಸ್ತರಿಸಿತು. ದಕ್ಷಿಣ ಭಾರತದ ರಾಜಕೀಯ ಇತಿಹಾಸದಲ್ಲಿ ನೆಲ್ಲೂರಿನ ಚೋಳರದು ಪ್ರಮುಖ ಪಾತ್ರ. ಮೊದಲಿಗೆ ಚೋಳರಿಗೆ ಸಾಮಂತರಾಗಿದ್ದ ಇವರು ನಂತರ ಕಾಕತೇಯರಿಗೆ ಸಾಮಂತರಾಗಿದ್ದರೂ ನಿಜವಾದ ಅರ್ಥದಲ್ಲಿ ಸ್ವತಂತ್ರ್ಯರಾಗಿದ್ದರು.

1ನೇ ಟಿಕ್ಕ (209 – 1248 AD), ಮನುಮಸಿದ್ಧ 2ನೇ ಮಗ, ತಮ್ಮ ಸಿದ್ಧ (1205-1209) ರ ನಂತರ, ಅಧಿಕಾರಕ್ಕೆ ಬಂದ. ನಲ್ಲೂರು ಚೋಳರಲ್ಲಿ ಅತಿಪ್ರಬಲರಾದ 1ನೇ ಟಿಕ್ಕನನ್ನು ತಇರುಕಾಲಚ್ಚಿ ಅಥವಾ ಗಂಡಗೋಪಾಲನೆಂದು ಕರೆಯುತ್ತಾರೆ. 40 ವರ್ಷಗಳ ಆಳ್ವಿಕೆ ನಡೆಸಿದ ಅವನ ಒಬ್ಬ ಆಡಳಿತಗಾರನಾಗಿ, ವೀರನಾಗಿ ತನ್ನ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಂಡ, ಲೇಖನಗಳಿಂದ ಗೊತ್ತಾಗುವಂತೆ ಅವನು ತನ್ನದೇ ಆದ ನಾಣ್ಯಗಳನ್ನು ಚಲಾವಣೆಗೊಳಿಸಿದ್ದ.

ಎರಡನೇ ನರಸಿಂಹ (1238-1234 AD) ಮತ್ತು ವೀರ ಸೋಮೇಶ್ವರ (1234-35-53) ಇಬ್ಬರು ಹೊಯ್ಸಳ ಚಕ್ರವರ್ತಿಗಳು ಗಂಡಗೋಪಾಲನ ಸಮಕಾಲೀನರು. ಪಾಂಡ್ಯರ ನೀತಿಯ ಬಗ್ಗೆ ಚೋಳರಿಗೆ ಹೊಯ್ಸಳರಿಗೆ ಇದ್ದ ಅಸಮದಾನದಿಂದ ಟಿಕ್ಕ ಅವರೊಡನೆ ವೈಮನಸ್ಯ ಹೊಂದು ಕೆಲವೊಂದು ಜಯಸಾಧಿಸಿದ್ದ 1231ರಲ್ಲಿ ಟಿಕ್ಕ ಮೊದಲ ಬಾರಿ ಹೊಯ್ಸಳ ಸೀಮೆಯ ಮೇಲೆ ದಾಳಿ ಕೈಗೊಂಡು ಕಂಟಿಯನ್ನು ವಶಪಡಿಸಿಕೊಂಡಿದ್ದ. ಕಾಂಜೀವರಂ ಎಂಬ ಹೆಸರಿನ ದಾಖಲೆ ಮೂರನೇ ರಾಜರಾಜನ ಕಾಲದಲ್ಲಿ (ಕ್ರಿ.ಶ.1231 ಅವನ ಆಳ್ವಿಕೆಯ 15ನೇ ವರ್ಷ) ಟಿಕ್ಕ ಗಂಡ ಗೋಪಾಲನನ್ನು ಸಮುದ್ರಕ್ಕೆ ಬಿದ್ದ ಮಹಾಗ್ನಿ ಕಲ್ಯಾಣಪುರಿ (ಚಾಲುಕ್ಯರ ರಾಜಧಾನಿ) ಮತ್ತು ನೆಲ್ಲೂರು (ವಿಕ್ರಮ ಸಿಂಹಪುರಿ) ಯ ಮಹಾರಾಜನೆಂದು ವರ್ಣಿಸಿದೆ. ಇದು ಕಲ್ಯಾಣಿಯ ಅಂದಿನ ಪ್ರಾಮುಖ್ಯತೆ ಮತ್ತು 1ನೇ ಟಿಕ್ಕನ ಅಧಿಕಾರ ಮತ್ತು ಗೌರವ, ವಿಜಯಗಳನ್ನು ತೋರುತ್ತದೆ.

ಈ ವಿಜಯಗಳಿಂದ ಉತ್ಸಾಹಿತನಾದ 1ನೇ ಟಿಕ್ಕ ಕ್ರಿ.ಶ.1239[9] ರಲ್ಲಿ ಅಂದರೆ 8 ವರ್ಷದ ನಂತರ ಮತ್ತೊಮ್ಮೆ ಹೊಯ್ಸಳ ಮೇಲೆ ದಾಳಿ ನಡೆಸಿದ ಮತ್ತು ಅದೃಷ್ಟಶಾಲಿಯಾದ, ದಕ್ಷಿಣ

ಅರ್ಕಾಟ್ ಜಿಲ್ಲೆಯ ಜಾಂಬೈನ ಒಂದು ದಾಖಲೆ ಹೇಳುವುದೇನೆಂದರೆ (1239ನೇ ಇಸವಿ ಯ ಮತ್ತು 3ನೇ ರಾಜರಾಜ ಚೋಳನ 23ನೇ ಆಳ್ವಿಕೆ ವರ್ಷದ್ದು) ಆ ವರ್ಷದ ಚೈತ್ರದಲ್ಲಿ ನಾಯನಾರ್ ಗಂಡಗೋಪಾಲ್ ಯುದ್ಧಕ್ಕಾಗಿ ಸಂತೋಷದಿಂದ ಹೋದ ವಲ್ಲವದೇವನನ್ನು ಕೊಂದು ಸೇನ್‌ಬೈಗೆ ಹೋದನು. ಈ ಲೇಖ ಅಲ್ಲಿಗೆ ಹಠಾತ್ ಮುಗಿಯುತ್ತದೆ. ತೆಲುಗು ಚೋಳರಿಗೆ ಈ ಹೋರಾಟ ವಿಜಯ ತಂದಿರಬೇಕು. ಏಕೆಂದರೆ ಈ ಹೋರಾಟದಲ್ಲಿ ಹೊಯ್ಸಳರ ರಾಜ ಮೃತಪಟ್ಟಿದ್ದಾನೆ. ವಲ್ಲವದೇವನೆಂಬ ಟಿಕ್ಕನ ಬೇಟೆ ಎರಡನೇ ನರಸಿಂಹ ವಲ್ಲವದೇವನೇ ಸಾಮಾನ್ಯವಾಗಿ ಎರಡನೇ ಬಲ್ಲಾಳನ ವೈಭವದ ಆಳ್ವಿಕೆಯ ನಂತರ ಎಲ್ಲಾ ಹೊಯ್ಸಳ ರಾಜರಿಗೂ ವಲ್ಲವ ಎಂಬ ಬಿರುದು ಸಾಮಾನ್ಯವಾಗಿ ಬಂದಿದೆ. ಹೀಗಾಗಿ ಹೊಯ್ಸಳ ಸಾಮ್ರಾಜ್ಯದ ಮೇಲೆ ದಾಳಿ ನಡೆಸಿದ ಒಂದನೇ ಟಿಕ್ಕನನ್ನು ರಾಜ ನರಸಿಂಹ ಎದುರಿಸಿ ಆ ಯುದ್ಧದಲ್ಲಿ ಮೃತ ಪಟ್ಟಿದ್ದಾನೆ. ಈ ಯುದ್ಧ ನಡೆದ ಜಾಗ ಗೊತ್ತಿಲ್ಲ. ಇದರ ನಂತರ ಟಿಕ್ಕನು ಜಾಂಬೈಗೆ ತೆರಳಿದ್ದಾನೆ ಮತ್ತು ಪ್ರಾಯಶ: ಅಲ್ಲಿ ಇನ್ನೂ ಅನೇಕ ಯುದ್ಧಗಳನ್ನು ಗೆದ್ದಿರಬೇಕು. ಅದರ ದಾಖಲೆಗಳಿಲ್ಲ.

ಕ್ರಿ.ಶ.1240[10]ರ ಆಗಸ್ಟ್‌ನಲ್ಲಿ ಎರಡನೇ ನರಸಿಂಹನ ಮಗ ಹಾಗೂ ಉತ್ತರಾಧಿಕಾರಿ ಸೋಮೇಶ್ವರ ಟಿಕ್ಕನ ಮೇಲೆ ದಾಳಿ ನಡೆಸಿದವೆಂದು ಮೈಸೂರು ರಾಜ್ಯದ ಹೊಯ್ಸಳ ಉಲ್ಲೇಖಗಳು ಹೇಳುತ್ತವೆ. ಇದಕ್ಕೆ ಕಾರಣ ತನ್ನ ಅಪ್ಪನ ಸಾವಿಗೆ ಸೇಡು ತೀರಿಸಿಕೊಳ್ಳುವುದೇ ಆಗಿರಬೇಕು. ಸಮಕಾಲೀನ ಸಾಹಿತ್ಯ ಹಾಗೂ ಉಲ್ಲೇಖಗಳ ಪ್ರಕಾರ ಈ ಯುದ್ಧದಲ್ಲಿ ಟಿಕ್ಕ ಗೆದ್ದು ಸೋಮೇಶ್ವರನನ್ನು ಅವನ ಸೈನ್ಯವನ್ನು ನಾಶ ಪಡಿಸಿರುತ್ತಾನೆ. ಟಿಕ್ಕನ ಸೋಮಯಾಜಿ ಪ್ರಕಾರ ಟಿಕ್ಕ ಕರ್ನಾಟ ಸೋಮೇಶನನ್ನು ಅಂದರೆ ಹೊಯ್ಸಳ ವೀರಸೋಮೇಶ್ವರ, ಕೇತನ ನನ್ನ ಸೋಲಿಸಿದ ಇನ್ನೊಬ್ಬ ಕವಿಯ ಪ್ರಕಾರ ಸೋಮೇಶ್ವರ ಅಂದರೆ ಕರ್ನಾಟರಾಜನ ಗೌರವವನ್ನು ಕೊನೆಗಳಿಸಿದ. ಟಿಕ್ಕ ಸೋಮೇಶ್ವರನ ವಿರುದ್ಧ ಹೋರಾಟ ನಡೆಸಿದ್ದು ಮುರನೇ ರಾಜೇಂದ್ರ ಹಾಗೂ ಮೂರನೇ ರಾಜರಾಜನ ಪರವಾಗಿಯೂ ಸಹಾ. 1257[11]ರ ನಳಂದೂರು ಉಲ್ಲೇಖದಂತೆ ನಲ್ಲೂರಿನ ರಾಜ ಟಿಕ್ಕ ಕಂಚಿಯನ್ನು ವಶಪಡಿಸಿ ಚಂಪಾಪುರಿ ಅಥವಾ ಜಾಂಬೈ ಅಥವಾ ಸೇನಾಖ್ಯೆನಲ್ಲಿ ಸೋಮೇಶ್ವರನನ್ನು ಸೋಲಿಸಿದ. ಈ ಸೋಮೇಶ್ವರನೇ ಕಲ್ಯಾಣಿ ಚಾಲುಕ್ಯರ 5 ಸೋಮೇಶ್ವರ ಎಂಬ ಮಾತನ್ನು ಇಸವಿಗಳ ಆಧಾರದ ಮೇಲೆ ಒಪ್ಪಲಾಗುವುದಿಲ್ಲ. ಸೋಮೇಶ್ವರ ಹಾಗೂ ಟಿಕ್ಕನ ನಡುವೆ ಯುದ್ಧ ನಡೆದ ಜಾಗದ ಬಗ್ಗೆ ನಲಂದೂರು ಉಲ್ಲೇಖಗಳು ತಿಳಿಸುತ್ತವೆ. ತೆಲುಗು ಚೋಳರ ಮೇಲೆ ಹೊಯ್ಸಳ ದಾಳಿ ಒಂದು ವಿಫಲ ಯತ್ನ. ಕುರು ಹಾಲೂರಿನ ಮೇಲೆ

ದಾಳಿ ನಡೆಸಿದ ಲಕುವಯ್ಯನ ಕುದುರೆಗಳನ್ನೇ ಟಿಕ್ಕ ವಶ ಪಡಿಸಿಕೊಂಡ ವಿವರಗಳು ಬಹುಶ: ಲಕುಮಯ್ಯ ಹೊಯ್ಸಳ ಸೇನಾಧಿಪತಿ ಎಂದು ತೋರುತ್ತದೆ.[12]

ಚೋಳ ಹೊಯ್ಸಳ ಯುದ್ಧದಲ್ಲಿ ಟಿಕ್ಕನ್ನು ಬಹಳ ಪ್ರಮುಖ ಪಾತ್ರ ವಹಿಸಿದ. ಮತ್ತು ಗೋದಾವರಿಯಿಂದ ದಕ್ಷಿಣ ಪೆನ್ನಾರ್‌ವರೆಗೂ ತನ್ನ ಚಟುವಟಿಕೆಗಳನ್ನು ನಡೆಸಿದ. ಅವನು ಮೂರನೇ ರಾಜರಾಜನನ್ನು ಮತ್ತೆ ಸಿಂಹಾಸನದ ಮೇಲೆ ಕೂರಿಸಿ ಚೋಳಸ್ಥ ಪಣಾಚಾರ್ಯ ಎಂಬ ಬಿರುದನ್ನು ನೀಡಿದ ಈ ಯುದ್ಧಗಳಲ್ಲಿ ಅಪ್ಪಯ್ಯ ದಂಡನಾಯಕ ಹಾಗೂ ಅವನ ಮಗ ಸಮುದ್ರ ಗೋಪಯ್ಯ ದಂಡನಾಯಕ ಎರಡನೇ ನರಸಿಂಹನ ಅಣತಿಯಂದಿ ಸೆಂಡಮಂಗಲಂನ ಬಂದೀಖಾನೆಯಿಂದ ಕಾಡವ ಕೊಪ್ಪೇರುನಿಂಗನ ಹಿಡಿತದಿಂದ ಬಿಡಿಸಿದರು. ಇವರಿಬ್ಬರು ಹೊಯ್ಸಳರ ಕಡೆಯಿಂದ ಬಹಳ ಪ್ರಮುಖ ಪಾತ್ರವಹಿಸಿದರು. ಒಂದನೇ ಟಿಕ್ಕನ ಕಡೆಯಿಂದ ತೊಂಡವೀಡು ರೆಡ್ಡಿಗಳ ಹಿರಿಯ ತಲೆಮಾರಿನವರು ಭಾಗವಹಿಸಿದ್ದರು. ಅವರನ್ನು ಸೋಲಿಸಿ ಅವರ ಬಿರುದು ಬಾವಲಿಗಳನ್ನು ತಾವು ಧರಿಸಿದರು. ಕೊಪ್ಪೇರು ನಿಂಗನ ಮೇಲೆ ದಾಳಿ ನಡೆಸಿದ್ದಕ್ಕಾಗಿ ಎರಡನೇ ನರಸಿಂಹ ಅಪ್ಪಯ್ಯ ಮತ್ತು ಗೋಪಯ್ಯನವರಿಗೆ ಹಳ್ಳಿಗಳನ್ನು ದಾನವಾಗಿ ಕೊಟ್ಟ (1233 AD) ಗೋಪಯ್ಯ ತನ್ನ ದೊಡ್ಡಪ್ಪ ಮಹಾಪ್ರಧಾನಿ ದಂಡಿನ ಗೋಪನ ಜಗದೊಬ್ಬಗಂಡನೆಂಬ ಬಿರುದನ್ನು ತಾನು ಇಟ್ಟುಕೊಂಡನೆಂದು 1231ರ ಕಾಂಚೀವರಂನ ದಾಖಲೆಗಳು ತಿಳಿಸುತ್ತವೆ. ಈ ಸೇನಾದಿಪತಿಗಳು ಸೋಮೇಶ್ವರನಲ್ಲೂ ಸೇವೆಯನ್ನು ಮುಂದುವರಿಸಿದರು. 1335ನೇ ಇಸವಿಯ ಚಿಮಕುರ್ತಿಯ ತಾಮ್ರದ ತಟ್ಟೆದತ್ತಿಯಲ್ಲಿ ಮೊದಲ ಬಾರಿ ಕಂಡುಬಂದಿರುವಂತೆ ರೆಡ್ಡಿಯ ಬಿರುದಗಳು ಅಪ್ಪಯ್ಯಗೊಪ್ಪಯ ದಿಸಪಟ್ಟ ಜಗನೊಬ್ಬಗಂಡ ಇದು ಮುಂದಿನ ಸಾಹಿತ್ಯ ಹಾಗೂ ದಾಖಲೆಗಳಲ್ಲೂ ಕಂಡುಬಂದಿದೆ. ಅಪ್ಪಯ್ಯ ಗೋಪಗದಿಸಪಟ್ಟ ಎಂಬುದು ಅಪ್ಪಯ್ಯ, ಗೊಪ್ಪಯ್ಯ ಎಂಬ ಇಬ್ಬರ ಮೇಲೆ ರೆಡ್ಡಿಯ ವಿಜಯ ಅಥವಾ ಅಪ್ಪಯ್ಯನ ಮಗ ಗೋಪಯ್ಯನ ಮೇಲಿನ ವಿಜಯ 1240[13] ರಲ್ಲಿ ಗೋಪಯ್ಯ ದಂಡನಾಯಕ ಕಂಚಿಯಲ್ಲಿದ್ದ ಮತ್ತು ಕಂಚಿಯ ಅರುಳ್ ಪೆರಮಾಳ್ ದೇವಸ್ಥಾನಕ್ಕೆ ದೀಪವೊಂದನ್ನು ಕಾಣಿಕೆಯಾಗಿ ನೀಡಿದ್ದ. ಬಹುಶ: ಇದೇ ಸಮಯದಲ್ಲಿ ಟಿಕ್ಕನ ಸೇನಾಧಿಪತಿ ರೆಡ್ಡಿ ಹೊಯ್ಸಳ ಸೇನಾದಿಪತಿಯನ್ನು ಸೋಲಿಸಿಲಿ ಅವನ ಬಿರುದನ್ನು ಧರಿಸಿರಬೇಕು. ಹೀಗಾಗಿ ಹೊಯ್ಸಳ ಬಿರುದುಗಳು ಆಂದ್ರದ ಕರಾವಳಿಯಿದ್ದರೂ ಕೊಂಡವೀಡು ರೆಡ್ಡಿಗಳಿಂದಾಗಿ ಸಂಚರಿಸಿತು. ಅವರ ದಾಖಲೆಗಳು ಮತ್ತು ಸಾಹಿತ್ಯದಲ್ಲೂ ಇದು ಕಂಡು ಬಂದಿದೆ.

ಎರಡನೇ ಬಲ್ಲಾಳನ ಅವಧಿಯಿಂದ ಹಿಡಿದು ಮೂರನೇ ಬಲ್ಲಾಳನ ಅವಧಿಯವರೆಗೂ ರಾಯಲ್ ಸೀಮಾದಲ್ಲಿ ಹೊಯ್ಸಳರ ಕೊಡುಗೆಗಳು ಅನೇಕ. ಈಗಿನ ಚಿತ್ತೂರು ಮತ್ತು

ಅನಂತಪುರ ಜಿಲ್ಲೆಗಳು ಮೊದಲು ಚಾಲುಕ್ಯ ಚೋಳರಿಗೆ ನಂತರ ಕಲ್ಯಾಣಿಯ ಚೋಳರಿಗೆ ನಂತರ ಹೊಯ್ಸಳರಿಗೆ ಸಾಮಂತರಾಗಿದ್ದರು. ಮೊದಲನೇ ವಿಷ್ಣುವರ್ಧನ (1108–1142)[14] ಮೊದಲನೇ ಬಲ್ಲಾಳನ ನಂತರ (1102–1108) ಪಟ್ಟಕ್ಕೆ ಬಂದು 34 ವರ್ಷ ಆಳ್ವಿಕೆ ನಡೆಸಿದ. ಈ ಸಮಯದಲ್ಲಿ ಹೊಯ್ಸಳ ಸಾಮ್ರಾಜ್ಯ ವಿಸ್ತರಣೆಗೆ ಮಹತ್ವ ನೀಡಿದ ಅವನ ಆಳ್ವಿಕೆಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. 1108 ರಿಂದ 1128 ರವರೆಗೆ ಸಾಮ್ರಾಜ್ಯ ವಿಸ್ತರಣೆಯ ಅವಧಿ, 1128 ರಿಂದ 1142 ಗಳಿಸಿದ ಹೊಸ ಸೀಮೆಗಳನ್ನು ಉಳಿಸಿಕೊಳ್ಳಲು ಹೋರಾಡಿದ ಅವಧಿ. ಮೊದಲ ಅವಧಿಯಲ್ಲಿ ಚೋಳರ ಮೇಲೆ ಹೋರಾಡಿ ಅವರಿಂದ ತಲಕಾಡನ್ನು ವಶಪಡಿಸಿಕೊಂಡ. ಆನಂತರ ಕಂಚಿಗೆ ಪ್ರಯಾಣ ಬೆಳೆಸಿ ಮಾರ್ಗಮಧ್ಯ ಕೋಲಾರ ಹಾಗೂ ನಂಗಳಿ ಮತ್ತು ಪ್ರಶಯ: ನಂಗಳಿಯಿಂದ 15 ಮೈಲಿ ದೂರವಿರುವ ಕೊಯತ್ತೂರು (ಈಗಿನ ಚಿತ್ತೂರು ರಾಜ್ಯದ ಲಡ್ಡಿಗಂ), ನಂಗಳ್ಳಿ ಮತ್ತು ಕೊಯತ್ತೂರಿನ ನಡುವೆ ಬಹುಶ: ಪಂಗನೂರಿನ ಸುತ್ತಮುತ್ತ ಸ್ವತಂತ್ರ್ಯವಾಗಿ 50ಕ್ಕೂ ಹೆಚ್ಚು ವರ್ಷದಿಂದ ಆಳ್ವಿಕೆ ನಡೆಸುತ್ತಿದ್ದ ಲಾಡಾ ಕುಟುಂಬದ ಹಿರಿಯರನ್ನು ಸೋಲಿಸಿರಬೇಕು. ಹೊಯ್ಸಳ ಉಲ್ಲೇಖಗಳಲ್ಲಿ ಲಾಡಾ ಎಂಬ ಹೆಸರಿದ್ದು, ವಿಷ್ಣು ವರ್ಧನನು ತೆರಿಯರೂ (ಹಿಂದುಪುರ ಇಂದ 4.5 ಮೈಲಿ ದೂರವಿರುವ ಪಿನಾಕಿನಿ ಮತ್ತು ಜಯಮಂಗಲಿ ಮಧ್ಯೆ) ಯನ್ನು ವಶಪಡಿಸಿಕೊಂಡಿದ್ದು ಕ್ರಿ.ಶ.1117[15]ರಲ್ಲಿ ಹೇಮಾವತಿಯ ತೆಲುಗು ಚೋಳರ ವಿರುದ್ಧ ಕಂಚಿಯಿಂದ ರಾಮೇಶ್ವರದವರೆಗಿನ ದಕ್ಷಿಣ ಯಾತ್ರೆಯಿಂದ ವಿಷ್ಣುವರ್ದನ ಹಿಂತಿರುಗಿ ಬಂದ ಮೇಲೆ ನಿಡುಗಲ್ ಮತ್ತು ಹೆಂಜೇರು (ಹೇಮಾವತಿ)ಯನ್ನು ವಶಪಡಿಸಿಕೊಂಡ ತೃಮಗೋಳ ಚೋಳರು ವೇದಾವತಿ ಮತ್ತು ಪಿನಾಕಿನಿ ನದಿಗಳ ನಡುವೆ ಪ್ರದೇಶದಲ್ಲಿ ಆಡಳಿತ ನಡೆಸುತ್ತಿದ್ದು ಅಲ್ಲಿನ ಪ್ರದೇಶಗಳಿಂದ ಆದಾಯ ಗಳಿಸುತ್ತಿದ್ದ ಈ ಪ್ರದೇಶಗಳ ಮೂಲಕವೇ ಸೆರೆನಾಡುನಾಯಕರು ಮೂರು ವರ್ಷಗಳ ಕೆಳಗೆ ಹೊಯ್ಸಳ ನಾಡನ್ನು ಕೊಳ್ಳೆಹೊಡೆದಿದ್ದು. ಕೋಲಾರದಿಂದ 95 ಮೈಲಿ ದೂರವಿರುವ ಹೆಂಜೇರಿನ ಮೇಲೆ ವಿಷ್ಣುವರ್ಧನ ಧಾಳಿ ನಡೆಸಿ ನಂತರ ಸಡಾಲಿ ಪಟ್ಟಣವನ್ನು ವಶಪಡಿಸಿಕೊಂಡ ಇರುಮ್‌ಗೋಳ ಅವನನ್ನು ಕದನದಲ್ಲಿ ವಿರೋಧಿಸಿದರೆ, ಅವರನ್ನು ಯುದ್ದದಲ್ಲಿ ಎದುರಿಸಿ[16] ಬುದಾಲಿ, ರೊಡ್ಡಂ ವಲ್ಲೂರು ಮತ್ತು ತೆರೆಯೂರು ವಶಪಡಿಸಿಕೊಂಡಿದ್ದು, ಇದು ರೊಡ್ಡಂಗೆ ಹೋಗುವಾಗ ಅಥವಾ ತಲಕಾಡಿನಿಂದ ಮರಳಿ ಬರುವಾಗ.

ಬುಡಾಲಿ ಮುಖ್ಯವಾದ ಪಟ್ಟಣ ಮತ್ತು ರೊಡ್ಡಂ ರಾಜ್ಯದ ವಿರಚನೆ ನಗರ ಮತ್ತು ಚೋಳರ ಸಾಮ್ರಾಜ್ಯದ ಕಿರೀಟದ ರತ್ನ. ಇರುಂಗೋಳ ಸೋಲಪ್ಪಿಕೊಂಡು ಸಮಂತರಾಗಿ ತನ್ನ ರಾಜ್ಯವನ್ನು ಉಳಿಸಿಕೊಂಡ, ಹೀಗೆ ತನ್ನ ನಿಷ್ಠೆಯನ್ನು ಉಳಿಸಿಕೊಂಡಿದ್ದರಿಂದಲೇ ಅವನು

ನೆಮ್ಮದಿಯಾಗಿದ್ದ. ಅವನ ವಂಶದವರು ಸಹಾ ಹೊಯ್ಸಳರು ಮತ್ತು ಚಾಲುಕ್ಯರೊಂದಿಗೆ ಸ್ನೇಹ ಉಳಿಸಿಕೊಂಡರು. ಕ್ರಿ.ಶ.1131ರಲ್ಲಿ ವಿಷ್ಣುವರ್ಧನ ತನ್ನನ್ನು ತಾನು ರೊಡ್ಡಂ ಹಾಗೂ ಘಟಕ ಸಂಹಾರಕ ಎಂದು ಕರೆದುಕೊಂಡ.

ಒಂದನೇ ನರಸಿಂಹ (1142–1162 AD) ಆಳ್ವಿಕೆ ತುಂಬಾ ನಿಶ್ಯಕ್ತ, ಕೊರತೆ ಮತ್ತು ಸೋಲಿನ ಅವಧಿಯಾಗಿತ್ತು. ಹೊಯ್ಸಳ ವಂಶದಲ್ಲೇ ನಿಸ್ಸಹಾಯಕ ಅವಧಿ 1146–47 ರಲ್ಲಿ ಹುಲಿಯೂರಿನ ಗೋವಿದೇವ ಹೊಯ್ಸಳರ ಪರವಾಗಿ ಶತೃವಿನ ವಿರುದ್ಧ (ಬಹುಶ: ಹೇಂಜುರುವಿನ ಚೋಳರು) ಹೋರಾಡಿದ ಕ್ರಿ.ಶ.1149ರಲ್ಲಿ ಹೊಯ್ಸಳರ ಸೈನ್ಯವೂ ಕಳಸಲ್ಪಟ್ಟಿತು. 1160[17]ರ ವೇಳೆಗೆ ಅವರೊಡನೆ ಮದುವೆ ಒಪ್ಪಂದ ಮಾಡಿಕೊಂಡಿರಬೇಕು. ನರಸಿಂಹ ಸಾಕಷ್ಟು ರಾಜ್ಯಗಳನ್ನು ಪ್ರದಾನ ಮಾಡಿದಂತಿದ ಜಬ ಮತ್ತು ಲಾಡ ಎಂಬ ನಿತ್ರಾಣ ವಂಶಗಳು ಮಗದ ಮತ್ತು ಲಾಲ ಎಂಬ ಹತ್ತಿರದ ರಾಜ್ಯದವರಿಗೆ, ನಸಿಂಹನ ಸಾಧನೆಗಳು ಸಂಪೂರ್ಣ ಋಣಾತ್ಮಕವಾಗಿದ್ದವು. ಎರಡನೇ ಬಲ್ಲಾಳನ ಅವಧಿಯಲ್ಲಿ ಹೊಯ್ಸಳ ಸಾಮ್ರಾಜ್ಯವು ಪುನರುತ್ತಾನವಾಯಿತು. (ಕ್ರಿ.ಶ.1173–1218)

ಅನೇಕ ಹೊಯ್ಸಳ ದಾಖಲೆಗಳಂತೆ ಎರಡನೇ ಬಲ್ಲಾಳ ಹೇಮಾವತಿಯ ತೆಲುಗು ಚೋಳರೊಡನೆ ಜಗಳವಾಡಿದ್ದ, ಕ್ರಿ.ಶ.1177[18]ರ ಒಂದು ದಾಖಲೆಯಂತೆ (ಹುಲಿಯೂರಿನದು) ಅವನ ರಾಜದಾನಿಯಿಂದ ಸ್ವಲ್ಪ ದೂರದಲ್ಲಿ ಚೋಳರು ಯುದ್ಧವಾಗಬೇಕಾಯಿತು. ಹಿಂದುಪುರ ತಾಲ್ಲೂಕಿನ ಪರಿಗಿಯ ಶಾಸನದಂತೆ (ಕ್ರಿ.ಶ.1178 ರದ್ದು ರೊಡ್ಡಂನಿಂದ 13 ಮೈಲಿ ದೂರದ್ದು) ಚೋಳರ ಮಲ್ಲದೇವನ ಮುಂದೆ ಎರಡನೇ ಬಲ್ಲಾಳನ ಅಧಿಕಾರ ಬಲವಾಗಿ ಪ್ರತಿಷ್ಠಾಪನೆ–ಯಾಗಿತ್ತು. ಕ್ರಿ.ಶ.1180ರ ಬಲ್ಲಾಳನ ಶಾಸನದಂತೆ ಇರುವ ಗೋಲೆ ಸಾವಿನ ನಂತರ ಆಡಳಿತ ನಡೆಸುತ್ತಿದ್ದ ಚೋಳರನ್ನು ಸಾಮಂತರನ್ನಾಗಿ ಮಾಡಿಕೊಂಡಿದ್ದ ನಿಡುಗಲ್‌ನ್ನು ಪ್ರಮುಖ ಕೋಟೆಯನ್ನಾಗಿ ಹೇಂಜರವನ್ನು ರಾಜಧಾನಿ ಮಾಡಿಕೊಂಡು ರಾಜ್ಯವನ್ನು ವಿಸ್ತರಿಸಿದ. ಕ್ರಿ.ಶ.1179[19]ರ ಡಿಸೆಂಬರ್‌ನಲ್ಲಿ ಕಂಡುಗಿಯ ಸೋಲಿನ ನಂತರವೂ ಸಹ ಹೊಯ್ಸಳರ ರಾಜ ನಿಷ್ಠೆಯೊಂದಿಗೆ ಚಾಲುಕ್ಯ ಸಾಮ್ರಾಜ್ಯದ ಸಾರ್ವ ಭೌಮತೆಯನ್ನು ಒಪ್ಪಿಕೊಂಡಿದ್ದು. ಕ್ರಿ.ಶ.1181[20] ರಲ್ಲಿ ಚೋಳರ ಅನುಯಾಯಿಗಳನ್ನು ಸೆಳೆಯುವುದಕ್ಕೆ ಹೊಯ್ಸಳರ ರಾಜ ಶಕ್ತಿ ಪ್ರದರ್ಶನ ನಡೆಸಿದ. ಕ್ರಿ.ಶ.1189ರ ಮಧ್ಯೆ ಹೆಂಜಾರುವಿನ ಚೋಳರು ಇನ್ನಿತರ ಸಾಮಂತರ ಜೊತೆ ಚಾಲುಕ್ಯರ 4ನೇ ಸೋಮೇಶ್ವರನಿಂದ ಸ್ವತಂತ್ರ್ಯರೆಂದು ಘೋಷಿಸಿಕೊಂಡರು. ಕ್ರಿ.ಶ.1192[21] ರಲ್ಲಿ ಎರಡನೇ ಬಲ್ಲಾಳ ತನ್ನ ಪೂರ್ವದಿಕ್ಕಿನ ದಂಡಯಾತ್ರೆಯಲ್ಲಿ ಹಾಲುವ (ಆದೋನಿಯ ಹಳ್ಳಿ)

ವನ್ನು ವಶಪಡಿಸಿಕೊಂಡ ಇದು ರಾಯಚೂರು ಜಿಲ್ಲೆಯ ನದಿಯಿಂದ 5 ಮೈಲಿ ಉತ್ತರಕ್ಕೆ ಇರುವ ಮಾನ್ವಿ ಮತ್ತು ತುಂಗಭದ್ರ ನದಿಯ 2 ಮೈಲಿ ದಕ್ಷಿಣಕ್ಕೆ ಇದೆ. ಮಾಉವೆ ಮತ್ತು ಹಾಲುವೆಯಲ್ಲಿ ಬೆಟ್ಟದ ಮೇಲೆ ಕೋಟೆ ಇದೆ. ಎರಡೂ ಕಡೆ ತುಂಗಭದ್ರೆಯ ರಕ್ಷಣೆಯಿದೆ. ನದಿ ಮತ್ತು ಹಗೇರಿ ನಡುವೆ ಫಲವತ್ತಾದ ಭೂಮಿ ಇದೆ. ಹೆಂಜಾರು ಚೋಳರ ರಾಜ್ಯದಲ್ಲಿರುವ ಕೃಷ್ಣೆಯಿಂದ 8 ಮೈಲಿದೂರದಲ್ಲಿರುವ ದೇವದುರ್ಗ ಕೂಡ ವಶಪಡಿಸಿಕೊಂಡು ಇವೆಲ್ಲಾ ಕುಂಟಾಲ ರಾಜ್ಯದಲ್ಲಿರುವ ಹೊರಭಾಗದಲ್ಲಿದೆ ಮತ್ತು ತೆಲುಂಗಾಣ ರಾಜ್ಯ ಅಲ್ಲಿಗೆ ಕೊನೆಯಾಗುವುದರಿಂದ ಈ ಪ್ರದೇಶಕ್ಕೆ ಮಹತ್ವ ಹೆಚ್ಚು ಪ್ರತಾಪರುದ್ರನ ಸೇಣದ ಪತಿ ವಿಠಲಭೂನಾಥ ಅಡವಾನಿ, ತುಂಬಂಲಂ (ಅಡವಿನಿಯಿಂದ ಉತ್ತರಕ್ಕಿ) ಮಾನುವ ಮತ್ತು ಹಾಲುವವನ್ನು ವಶಪಡಿಸಿಕೊಂಡು. ಬಹುಶ: ಎರಡೇ ಬಲ್ಲಾಳ ತುಂಬುಲಂ ಪ್ರವೇಶಿಸಿ ಜೇಟುಗೆ ಸೇವಣನನ್ನು ಅಧೀನಗೊಳಸಲು ಪ್ರಯತ್ನಿಸಿರಬೇಕೆಂದು ಒಂದು ದಾಖಲೆ ಹೇಳುತ್ತದೆ. 1218[22]ರಲ್ಲಿ ಬೆಳುಗುಟ್ಟಿಯ ಈಶ್ವರದೇವನಿಂದ ಅಕ್ರಮಣ ನೆಡಸಿದುದನ್ನು ಚೋಳರು ವಿರೋಧಿಸಿದರು. ಬಲ್ಲಾಳ ಅವನನ್ನು ಕ್ರಿ.ಶ.1218ರಲ್ಲಿ ನಿಡುಗಲ್‌ನಲ್ಲಿ ಎದುರಿಸಿದ ಅದನ್ನು ವಶಪಡಿಸಿಕೊಂಡು ಹಾಣೆಯೊಂದಿಗೆ ಜೋಡಿಸಿ ಸೋತಿದ್ದ ಕೆಲವು ಹಳ್ಳಿಗಳನ್ನು ಮತ್ತೆ ವಶಪಡಿಸಿಕೊಂಡು ಕ್ರಿ.ಶ.1276[23]ರವರೆಗೂ ಅಂದರೆ ಇರುಮಂಗಲನಿಂದಾಗಿ ಹೊಯ್ಸಳರು ಚೋಳರ ಮೇಲೆ ಅಕ್ರಮಣ ನೆಡಸಿದವವರೆಗೂ ಇದನ್ನು ಯಾರು ಮುಟ್ಟಿರಲಿಲ್ಲ. ನಂತರ ಇವರು ಸೇವುಣರ ಆಳ್ವಿಕೆಯಡಿ ಬಂದರು. ಕ್ರಿ.ಶ.1218 ರಿಂದ 1248 ರವರೆಗೆ ಚೋಳರ ದಾಖಲೆಗಳಲ್ಲಿ ಇದರ ಬಗ್ಗೆ ಮಾಹಿತಿ ಲಭ್ಯವಿಲ್ಲ. ಯಾದವ ಸಿಂಹಣ ಚೋಳ ರಾಜರ ವಿಧ್ವಂಸಕನೆಂಬ ಬಿರುದು ಹೊತ್ತ ಇಮ್ಮಡಿ ನರಸಿಂಹನ ಅವಧಿಯಲ್ಲಿ (ಕ್ರಿ.ಶ.1218 ರಿಂದ 1235) ಹೊಯ್ಸಳ ಚಟುವಟಿಕೆಗಳು ನೆಲ್ಲೂರಿನ ತೆಲುಗ ಚೋಳರ ವಿರುದ್ಧವಾಗಿತ್ತು. ಸೋಮೇಶ್ವರ (ಎರಡನೇ ನರಸಿಂಹನ ಮಗ ಹಾಗೂ ಉತ್ತರಾಧಿಕಾರಿ) ನೆಲ್ಲೂರಿನ ಒಂದನೇ ಟಿಕ್ಕನ ಜೊತೆ ಯುದ್ಧ ಮುಂದುವರಿಸಿದ. ಅವನ ಅವಧಿ ತುಂಬಾ ಅವಮಾನತಿದ್ದಿಯಿದು. ರಾಮನಾಥನ ಅವಧಿಯಲ್ಲಿ (ಕ್ರಿ.ಶ.1257-1245) ಅವನಿಗೂ ಮತ್ತು ಮೂರನೇ ನರಸಿಂಹನ ನಡುವೆ ಯುದ್ಧ ನಡೆಯಿತು. ಅವನ ಆಳ್ವಿಕೆಯ ಉತ್ತರ ಅವಧಿಯಲ್ಲಿ ರಾಮನಾಥನ ಆಳ್ವಿಕೆ ಕೇವಲ ಕೋಲಾರ ಜಿಲ್ಲೆಯ ಮಧ್ಯ ಹಾಗೂ ದಕ್ಷಿಣ ಬಾಗಗಳಿಗೆ ಹಾಗೂ ಬೆಂಗಳೂರು ಜಿಲ್ಲೆಯ ಪೂರ್ವಭಾಗಗಳಿಗೆ ಸೀಮಿತವಾಗಿತ್ತು. ಆದಾಗ್ಯೂ ಚಿತ್ತೂರು ಜಿಲ್ಲೆಯ ಪೊಂಗಾನೂರು (ಹೊಯ್ಸಳ ರಾಜ ವೀರ ರಾಮನಾಥ ದೇವನ 38ನೇ ವರ್ಷ) (ಕ್ರಿ.ಶ.1245) ನಂಗಾಲಿಯಿಂದ ಹತ್ತು ಮೈಲಿ ಇದು ವಾಮನವನ್ ಕುಟ್ಟಪಿರುಮಾಳ (ಬಹುಶ: ಆಜಾಗದ ಮುಖ್ಯಸ್ಥ) ನ ಬಗೆಗೆ ವಿವರಿಸುತ್ತದೆ. ಮೂರನೇ ಬಲ್ಲಾಳ (1291 ರಿಂದ 1342) 28ನೇ ವರ್ಷದಲ್ಲಿ ಒಂದು ನಿರ್ಮಲ ಸಾಮ್ರಾಜ್ಯದ

ಅಧಿಪತಿಯಾದ ಅವನ ಆಳ್ವಿಕೆ ಅವನ ವಂಶದಲ್ಲಿ ಅತಿ ದೀರ್ಘವಾದದ್ದು ಮತ್ತು ಅವನು ಎಲ್ಲಾದರದಲ್ಲೂ ಕಡೆಯರಾಜ. ಅವನ ಯೌವನ, ಮಧ್ಯ ವಯಸ್ಸು ಮುಪ್ಪು ಎಲ್ಲಾ ಹೊಯ್ಸಳ ಸಾಮ್ರಾಜ್ಯದ ಪತನದ ಹಾದಿಯಾಗಿತ್ತು. ಕ್ರಿ.ಶ.1301[24] ರಿಂದ 1303 ತನ್ನ ರಾಜ್ಯವನ್ನು ಒಗ್ಗೂಡಿಸುವ ಪ್ರಯತ್ನ ಮಾಡಿದೆ. ಕ್ರಿ.ಶ.1320ರಲ್ಲಿ ಕಂಪಿಲಾದೇವನೊಡನೆ ಹೋರಾಡಿ ಸೋಲಿಸಿದ ಮತ್ತು ಕಂಪಳ್ಳಿಯಿಂದ 10 ಮೈಲಿ ದೂರದಲ್ಲಿರುವ ದೂರವಾಡಿ ಕಡೆಗೆ ಮುನ್ನೆಡೆದ ಮತ್ತು ಈಶಾನ್ಯದತ್ತ ಗಮನವಿರಿಸಿದ ಪೆನುಗೊಂಡವನ್ನು ಆಕ್ರಮಿಸಿದ. ಸೆಪ್ಟಂಬರ್ ಕ್ರಿ.ಶ.1320ರಲ್ಲಿ ಅವನ ಅಳಿಯ ಮಾಚಯ್ಯ ದಣ್ಣನಾಯಕ ಅವನ ಪರವಾಗಿ ರಾಜ್ಯಭಾರ ಮಾಡುತ್ತಿದ್ದ. ದೊಡ್ಡನಿಂದ ಪೂರ್ವಕ್ಕೆ ಪೆನುಗೊಂಡ ಸ್ವಲ್ಪವೇ ದೂರವಿದ್ದುದರಿಂದ ಬಹುಶಃ ನಿಡುಗಲ್‌ನ ಚೋಳರ ಮೇಲೆ ಆಕ್ರಮಿಸಿರಬೇಕು. ಈ ಹೊಯ್ಸಳ ಚೆಕ್ಕುಬಂದಿ ಮಾಚಯ್ಯ ದಂಡನಾಯಕನಿಗೆ ಮೇಲಿಂದ ಮೇಲೆ ತೊಂದರೆ ಕೊಡುತ್ತಿದ್ದವರ ಹೊಟ್ಟೆಕಿಚ್ಚಿಗೆ ಕಾರಣ-ವಾಗಿರಬೇಕು. ಹಿಂದುಪುರ ತಾಲ್ಲೂಕಿನ ಸಿವರ್ ರಾಮ್ ಎಂಬಲ್ಲಿ ಮೂರನೇ ಬಲ್ಲಾಳನ ಬಗ್ಗೆ (ಕ್ರಿ.ಶ.1321) ದಾಖಲೆ ಇದೆ. ಇನ್ನೊಂದು ದಾಖಲೆ ಹಿಂದುಪುರ ತಾಲ್ಲೂಕಿನ ಅಲುಡಿ ಎಂಬಲ್ಲಿ, ತೌನುಪಲ್ಲೆ ಎಂಬಲ್ಲಿಯೂ ಸಹ ಇದೆ. ಇವೆಲ್ಲವೂ ಮೂರನೇ ಬಲ್ಲಾಳನ ಮಹಾಪ್ರದಾನ ಅಳಿಯ ಮಾಚಯ್ಯ ದಣ್ಣನಾಯಕ ರಾಮಾಡಿ ನಾಡುವಿನ ಮಡುವು ತುಂಬಯ ಹಳ್ಳಿಯಲ್ಲಿ ಭೂಮಿಯನ್ನು ದಾನಕೊಟ್ಟ ಬಗ್ಗೆ ಹೇಳುತ್ತಾನೆ. ಕ್ರಿ.ಶ.1324ರಲ್ಲಿ ಮಾಚಯ್ಯ ಅನೇಕ ತೊಂದರೆಗಳಿಗೆ ಸಿಕ್ಕಿದ್ದ ಆದರೆ ಸಿವರರಾಂನ (ಕ್ರಿ.ಶ.1324)ಯ ದಾಖಲೆಯಂತೆ ತುಂಬೆಯ-ಕಲ್ಲುನಲ್ಲಿ ರಾಚೇಯ ನಾಯಕನ ಮೇಲೆ ವಿಜಯ ಸಾಧಿಸಿದ ರಾಚೇಯನಾಯಕ ಓರ್ವ ಸ್ಥಳೀಯ ಮುಖ್ಯಸ್ಥ. ಕ್ರಿ.ಶ.1328 ರವರೆಗೂ ಮಾಚಯ್ಯ ಪೆನುಗೊಂಡವನ್ನು ಆಳಿದ ಎಂದು ಆ ವರ್ಷದ ಒಂದು ದಾಖಲೆ (ಹಿಂದೂಪುರ ತಾಲ್ಲೂಕಿನ ಕೊಡಿಗೆ ಪಲ್ಲೆ) ರಾಚೇಯ ನಾಯಕನನ್ನು ಮಹಾಪ್ರದಿನ ಮಾಚೇಯ ಜಗ್ಗಾಯಕ ಪೆನುಗೊಂಡದ ನೆಲವೀಡನ್ನು ಆಳುತ್ತಿದ್ದನು. ಮತ್ತು ನಾಗೇಯ ಗೌಡನಿಗೆ ಬೆಂಗಾರು ಹಳ್ಳಿಯನ್ನು ದಾನವಾಗಿ ಕೊಟ್ಟಿದ್ದನ್ನು ಹೇಳುತ್ತದೆ.

ಮಾಚಯ್ಯ ದಣ್ಣಾಯಕನ ನಂತರ ಈಶ್ವರ ದಣ್ಣಾಯಕ ಪೆನುಗೊಂಡದಲ್ಲಿ ಅಧಿಕಾರಕ್ಕೆ ಬಂದ (1340 AD) ಹಿಮದೂಪುರ ತಾಲ್ಲೂಕಿನಲ್ಲಿ ಸಂಜಿವರಾಯಣಿ ಪಲ್ಲಿಯಲ್ಲಿ ಮುಮ್ಮಡಿ ಬಲ್ಲಾಳನ ದಾಖಲೆಯಂತೆ ಈಶ್ವರ ವಲಗಲ ಕುಮ್ಮೇಯ ಹಳ್ಳಿಯನ್ನು ಗೋಪ ಗಾವುಂಡನಿಗೆ (ಚವಡ ಒಮ್ಮೆ ಗಾವುಂಡನ ಪುತ್ರ) ನೀಡಿದ 1349 ರಲ್ಲಿ ಅಲಿಯಾ ಮಾಚೇಯ ದಣ್ಣಾಯಕನ ಮಗ ಗಾಂಗಿದೇವ ದಣ್ಣಾಯಕ ಪೆನುಗೊಂಡವನ್ನು ಆಳುತ್ತಿದ್ದ ಎಂದು ಹಿಂದುಪುರ ತಾಲ್ಲೂಕಿನ ಸಂಗನಪಲ್ಲೆಯ ದಾಖಲೆ ಹೇಳುತ್ತವೆ. ನಿಡುಗಲ್ಲೂರ ರಾಜ್ಯದಲ್ಲಿ ಹೊಳಕಳ್‌ನ ಗಾಂಗೇಯ-

ನಾಯಕ ಆಳುತ್ತಿದ್ದ. ಈ ದಾಖಲೆ ಕಲ್ಯಾಣದುರ್ಗ ತಾಲ್ಲೂಕಿನ ಕುಂಟುರ್ಪಿಯ ಮೂರನೇ ಬಲ್ಲಾಳ ಅವಧಿಯದ ಕುಂದ್ರುಪೆಯಲ್ಲಿ ಹಂಪೆಯ ದೂನಯಲ್ಲಿ ಅವನ ಮಗ ಟಿಕ್ಕ ಒಮ್ಮೆಯನಾಯಕ ಒಂದು ಉತ್ವನನ ನೆಡೆಸಿದ್ದ. ಮಡಕಸಿರ ತಲ್ಲೂಕಿನ ಸೇರ ಜಮ್ಮನ ಹಳ್ಳಿಯ ದಾಖಲೆಯಂತೆ ಮುರನೇ ಬಲ್ಲಾಳನ ಅವಧಿಯಲ್ಲಿ ನಿಡಗಲ್ಲು ನಾಡಿನಲ್ಲಿ ಮಧುವಾಡಿಯಲ್ಲಿ ಬೇರೆ ಬೇರೆ ಸಮುದಾಯಗಳಿಗೆ ಕಾಣಿಕೆ ನೀಡಿದ್ದ. ಮಡಕಸಿರ ತಾಲ್ಲೂಕಿನ ಹೇಮಾವತಿಯ ದಾಖಲೆಯಂತೆ ಮೂರನೆ ಬಲ್ಲಾಳನ ಅವಧಿಯಲ್ಲಿ ಸಿರುನಾಡಿನ ಹೆಂಜಾರುವಿನ ದೇವಸ್ಥಾನಕ್ಕೆ ದಾನ ನೀಡಿದ್ದ ಮಾಹಿತಿ ಇದೆ.

ಹೀಗೆ ಹೊಯ್ಸಳರು ಪೂರ್ವಾರ್ಧದಲ್ಲಿ ಅನೇಕ ಸಣ್ಣಪುಟ್ಟ ವಂಶದೊಡನೆ ಸ್ನೇಹ ಬೆಳಸಿದ್ದನ್ನು ನಾವು ನೋಡಬಹುದು. ಒಂದನೇ ವಿಷ್ಣುವರ್ಧನನ ಕಾಲದಿಂದಲೂ ಅವರ ವಿಸ್ತರಣೆ ಹಾಗೂ ಸಾರ್ವಭೌಮತ್ವವನ್ನು ಇತರರ ಮೇಲೆ ಹೇರಿದರು. ಉದಾಹರಣೆಗೆ ಹೇಮಾವತಿಯ ತೆಲುಗು ಚೋಳರ ದಾಖಲೆಗಳು ಕಂತನಾಡ್ಲ, ಕಂಬದುರ, ಎರಡುಕೇರ ಇತರ ಪ್ರದೇಶಗಳಲ್ಲಿ ಹೇರಳವಾಗಿ ಕಾಣುತ್ತದೆ. ಇವೆಲ್ಲ ಅನಂತಪುರ ಜಿಲ್ಲೆಯಲ್ಲಿವೆ. ಆಂದ್ರ ಕರಾವಳಿಯಲ್ಲಿ ನಲ್ಲೂರಿನ ತೆಲುಗು ಚೋಳರೊಡನೆ ಕಲಹ ಎರಡನೇ ನರಸಿಂಹನ ಅವಧಿಯಿಂದ ಆರಂಭವಾಯಿತು ಮತ್ತು ಮೂರನೇ ಬಲ್ಲಾಳನ ಅವಧಿಯವರೆಗೂ ಮುಂದುವರೆಯಿತು. ಹೇಮಾವತಿಯ ಚೋಳರ ಮೇಲೆ ಹೊಯ್ಸಳರಿಗೆ ಬಲವಾದ ಹಿಡಿತವಿತ್ತು. ಮೂರನೇ ಬಲ್ಲಾಳನ ಅವಧಿಯಲ್ಲಿ ಪೆನುಗೊಂಡ ಹೊಯ್ಸಳರ ಮುಖ್ಯ ಸ್ಥಳವಾಗಿತ್ತು ಹಾಗೂ ಹೆಂಜೇರು ಚೋಳರ ಮೇಲೂ ನಿಯಂತ್ರಣವಿತ್ತು.[25]

## 9.3 ಕಂಚಿಯಲ್ಲಿ ಹೊಯ್ಸಳರು

ತಮಿಳುನಾಡಿನಲ್ಲಿ ಚೋಳರ ಅಧಿಕಾರದ ಕಡೆ ಹಂತವೆಂದರೆ III ನೇ ರಾಜರಾಜ ಕ್ರಿ.ಶ.1216 ರಿಂದ 1246) ಮತ್ತು ಮೂರನೇ ರಾಜೇಂದ್ರ (ಕ್ರಿ.ಶ.1247 ರಿಂದ 1279)ರ ಆಳ್ವಿಕೆ,[26] ಅವರ ಅಧಿಕಾರ ಕಡೆಗಣಿಸಲಾಯಿತು ಹಾಗೂ ಪಾಂಡ್ಯರಿಂದ ಇನ್ನಿತರ ಸಾಮಂತರಾಜರಿಂದ ಕಡೆಗೂ ಮುಕ್ತಾಯಗೊಳಿಸಲಾಯಿತು. ಈ ಸಮಯದಲ್ಲೇ ಇಂತಹ ಆಂತರಿಕ ಗಲಭೆಗಳನ್ನು ಹೊಯ್ಸಳರೂ ಸಹ ಉಪಯೋಗಿಸಿಕೊಂಡರು. ಕೆಲ ಸಮಯದವರೆಗೆ ವಾರಂಗಲ್‌ನ ಕಾಕತೇಯರೂ ಕಂಚಿಯನ್ನು ವಶಪಡಿಸಿಕೊಂಡಿದ್ದರು.[27] ಗದ್ಯ ಕರ್ಣಾಮೃತ ಹಾಗೂ ತಿರುವನೆಂದಿಪುರಂ ಉಲ್ಲೇಖಗಳಂತೆ ಚೋಳರ ಸಾಮಂತ ಕಡವ ಕೊಪ್ಪೇರುನಿಂಜಿಂಗ ಚೋಳರಾಜನ ಮೇಲೆ ಆಕ್ರಮಣ ಮಾಡಿ ಅವನನ್ನು ಬಂದಿಯಾಗಿಸಿದರು. ಈ ಅಘಾತಕಾರಿ

ವಿಷಯ ಹೊಯ್ಸಳರಾಜ ವೀರನರಸಿಂಹ (ಕ್ರಿ.ಶ.1220 ರಿಂದ 1238) ರಿಗೆ ತಲುಪಿದಾಗ, ಅವನು ತನ್ನ ದಕ್ಷ ಸೇನಾಧಿಪತಿಗಳಾದ ಅಪ್ಪಣ್ಣ ಹಾಗೂ ಗೊಡ್ಡಯ್ಯರ ಜೊತೆ ಸೈನ್ಯವನ್ನು ಕಳುಹಿಸಿದ ಮತ್ತು ಚೋಳರಾಜ ಮೂರನೇ ರಾಜ ರಾಜನನ್ನು ಬಿಡುಗಡೆ ಮಾಡಿಸಿದ. ಇದು ನಡೆದಿದ್ದು ಕ್ರಿ.ಶ.1222–23[28]ರ ಸುಮಾರಿಗೆ, ಇದರಿಂದಾಗಿ ತಮಿಳುನಾಡಿನಲ್ಲಿ ತಮ್ಮ ಅಧಿಪತ್ಯಸಾದಿಸಲು ಹೊಯ್ಸಳ ಸೈನ್ಯ ಉತ್ತಮ ಅವಕಾಶ ದೊರೆತಂತಾಯ್ತು. ಹಾಗೂ ರಾಮೇಶ್ವರಂವರೆಗೂ ಪಾಂಡ್ಯರ ಅದಿಪತ್ಯವನ್ನು ಭೇದಿಸಲು ಸಾಧ್ಯವಾಯಿತು. ಮೂರನೇ ರಾಜ ರಾಜನ ಕಾಲದಲ್ಲಿ ಚೋಳರ ರಾಜ್ಯ ಹೊಯ್ಸಳರ ರಕ್ಷೆಯಾಗಿತ್ತು. 5 ರಿಂದ 29ನೇ ವರ್ಷದವರೆಗೂ ಕಂಚಿ ನಗರದಲ್ಲಿ 50ಕ್ಕೂ ಹೆಚ್ಚು 3ನೇ ರಾಜರಾಜರ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ಮತ್ತು ಆ ಸಮಯದಲ್ಲಿ ಚೋಳರ ಮೇಲಿನ ಹೊಯ್ಸಳರ ಪ್ರಾಬಲ್ಯವನ್ನು ತೋರಿಸುತ್ತವೆ. ಕ್ರಿ.ಶ.1220 ರಿಂದ 1245[29] ರವರೆಗೆ ಹೊಯ್ಸಳ ಪ್ರಭಾವ ನಿಧಾನವಾಗಿ ಹೆಚ್ಚುತ್ತಿತ್ತು. ಕ್ರಿ.ಶ.1221 ರಲ್ಲಿ ದೊರೆ 1 ಉಲ್ಲೇಖವು ಕಂಚಿಯಲ್ಲಿ ಹೊಯ್ಸಳ ಸೈನ್ಯದ ಅಸ್ತಿತ್ವದ ಬಗ್ಗೆ ಹೇಳುತ್ತದೆ. ಬಹುಶ: 3ನೇ ರಾಜರಾಜನಿಗೆ ಬೇರೆ ದಾರಿ ಇರದೇ ಹೊಯ್ಸಳರ ಸೈನ್ಯ ಇರಿಸಿಕೊಳ್ಳಬೇಕಾಯಿತು. ಅವನ ಸಹಾಯ ಪಡೆದಿದ್ದಕ್ಕಾಗಿ ವಿಷ್ಣುವರ್ಧನನ ಅನೇಕ ಸೇನಾಧಿಪತಿಗಳು ಕಂಚಿಯಲ್ಲಿ ಪಾಡವರ ವಿರುದ್ಧದ ಹೋರಾಟದಲ್ಲಿ ಭಾಗವಹಿಸಿದ್ದರು. 1226 ರಿಂದ 1240 ರವರೆಗೆ ಕಂಚಿಯಲ್ಲಿ ಅನೇಕ ಹೊಯ್ಸಳ ಮಹಾಪ್ರಧಾನರು, ದಂಡನಾಯಕರು, ಸಾಮಂತರು ಹಾಗೂ ಅವರು ದೇವಸ್ಥಾನಗಳಿಗೆ ನೀಡಿದ ಕೊಡುಗೆಗಳ ಬಗ್ಗೆ ಉಲ್ಲೇಖಗಳಿವೆ. ಇವೆಲ್ಲವೂ ವೀರವಿಷ್ಣುವರ್ಧನ II ಹಾಗೂ ವೀರ (1233–1267) ರ ಆಳ್ವಿಕೆಯ ಕಾಲದ್ದು, ಈ ಎಲ್ಲಾ ಉಲ್ಲೇಖಗಳಲ್ಲಿ 3ನೇ ರಾಜರಾಜ ಸಾರ್ವಭೌಮತ್ವವನ್ನು ಹೊಗಳಲಾಗಿದೆ. ಕ್ರಿ.ಶ.1231[30]ರಲ್ಲಿ ಗೂಡ್ಯಯ್ಯ ದಂಡನಾಯಕನ ಮಗ ಮಲ್ಲಯ್ಯ ದಂಡನಾಯಕನು ವರದರಾಜ ಸ್ವಾಮಿಗೆ ಹಳ್ಳಿಯೊಂದನ್ನು ದಾನವಾಗಿ ಇತ್ತಿದ್ದ ದಾಖಲೆ ಇದೆ, ಬಹುಶಃ ಇವನು ಅಪ್ಪಣ್ಣನ ಜೊತೆ ಕೊಪ್ಪರುನಿಂಬೆಂಗನನ್ನು ಸೋಲಿಸಿದ ಅದೇ ಗೂಡ್ಯಯ್ಯನೇ ಇರಬೇಕು, ಕಂಚಿಯನ್ನು ದರ್ಶಿಸಿ ಅದೇ ವಿಷ್ಣು ದೇವಸ್ಥಾನಕ್ಕೆ ಕೊಡುಗೆಗಳಿತ್ತ ಇನ್ನಿಬ್ಬರು ದಂಡನಾಯಕ–ರೆಂದರೆ ಅಮ್ಮಣ್ಣ ದಂಡನಾಯಕ ಹಾಗೂ ಮಲ್ಲ ಮಲ್ಲಪ್ಪ ದಂಡನಾಯಕ ಇಬ್ಬರು ವೀರನರಸಿಂಹ ಹೊಯ್ಸಳ ರಾಜನಾಗಿದ್ದಾಗ ಕ್ರಿ.ಶ.1230ರಲ್ಲಿ ಆದರೆ ಮೂರನೇ ರಾಜರಾಜ ಚೋಳನ 14ನೇ ವರ್ಷದಲ್ಲಿ ಇದ್ದವರು. ಕ್ರಿ.ಶ.1234ರಲ್ಲಿ ವೀರ ಸೋಮೇಶ್ವರ ಹೊಯ್ಸಳ ರಾಜನಾದ. ಅವನ ರಾಜ್ಯಭಾರದ ಕಾಲದಲ್ಲಿ ಕಂಚಿಯ ಮೇಲೆ ನೇರ ನಿಯಂತ್ರಣವಿತ್ತು ಮತ್ತು ಉಲ್ಲೇಖಗಳ ಪ್ರಕಾರ ಅಲ್ಲಿಯವರೆಗೂ ಚೋಳರ ನಾಮಮಾತ್ರ ನಿಯಂತ್ರಣವಿತ್ತು. ಅನಂತರ ಅದು ಸಹಾ ನಿಂತಿತು. ಸೋಮೇಶ್ವರನ ಕಾಲದಲ್ಲಿ ಅವನ ಇಬ್ಬರು ಮಂತ್ರಿಗಳು ಪೂಲವಿ

ದಂಡನಾಯಕ ಹಾಗೂ ವಲ್ಲಯ್ಯ ದಂಡಾಯಕ ಕಂಚಿಯ ವಿಷ್ಣು ದೇವಾಲಯವನ್ನು ದರ್ಶಿಸಿ ಕೊಡುಗೆಗಳಿತ್ತಿದ್ದಾರೆ. ಅಲ್ಲಿ ಮಲ್ಲಪ್ಪ ದಂಡನಾಯಕ ಹಾಗೂ ಗೊಡ್ಡಯ್ಯ ದಂಡನಾಯಕರೂ ಕೊಡುಗೆಗಳಿತ್ತಿದ್ದಾರೆ. 1240 ರಲ್ಲಿ ಮೂರನೇ ರಾಜರಾಜ ಕಂಚಿ ಕೊರೆ ಎಂದು ಪರಿಗಣಿತ-ವಾಗಿದೆ ಮತ್ತು ಈ ವರ್ಷದಲ್ಲಿ ಇನ್ನೊಬ್ಬ ಹೊಯ್ಸಳ ಸೇನಾಧಿಪತಿ ಮಲ್ಲಯ್ಯನ ಮಗ ಕೇಶವ ದಂಡನಾಯಕ ಕಂಚಿ ದೇವಸ್ಥಾನಕ್ಕೆ ಬೇಟಿ ನೀಡಿದ್ದಾನೆ. ಇಷ್ಟೆಲ್ಲಾ ಹೊಯ್ಸಳ ಸೇನಾಧಿಪತಿಗಳು ಚೋಳರ ರಾಜ್ಯದಲ್ಲಿ ನೆಲಸಿರುವುದು ಚೋಳರ ಅಂದಿನ ಪರಿಸ್ಥಿತಿ ವಿವರಿಸುತ್ತದೆ. ನಂತರದ ಚೋಳರ ಅವಧಿಯಲ್ಲಿ ಕಂಚಿ ಹೊಯ್ಸಳ ಎರಡನೇ ರಾಜಧಾನಿಯಾಗಿತ್ತು. ಮತ್ತು ಅವರ ಸೈನ್ಯದ ನೆಲವೀಡಾಗಿತ್ತು. 12ನೇ ಶತಮಾನದಲ್ಲಿ ಕಳಗರ ಜೊತೆ ಯುದ್ಧ ಮಾಡಲು ಹೋಗುವ ಮುನ್ನ ಕರುಣಾಕರ ತೊಂಡೈಮನ್ ಸಹಾ ಇಲ್ಲಿ ಕೆಲಕಾಲ ತಂಗಿದ್ದ. ಹೀಗೆ ಚೋಳರ ನೆಪಮಾತ್ರ ಆಡಳಿತ ನಡೆಯುವ ಕಾಲದಲ್ಲಿ ನೆಲ್ಲೂರಿ ತೆಲುಗು ಚೋಳರೂ ಸಹ ಕಂಚಿಯಲ್ಲಿ ಅಧಿಪತ್ಯ ಸ್ಥಾಪಿಸಿದ್ದರು.

ಅವರ ಬಗ್ಗೆ ಕಂಚಿಯಲ್ಲಿ ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ. ಅವರ ದಾಖಲೆಗಳು ತಮ್ಮ ಸಿದ್ದರಿಗೆ ಸಂಬಂಧಿಸಿದಂತೆ ಕ್ರಿ.ಶ.1205[31]ರಷ್ಟು ಹಳೆಯವು. ಅವನ ನಂತರ ಬಂದ ಮೊದಲನೇ ಟಿಕ್ಕ ಅಥವಾ ಗಂಡ ಗೋಪಾಲ ಮೂರನೇ ರಾಜರಾಜನ ಸಮಯದಲ್ಲಿ ಕಂಚಿಯನ್ನು ನೋಡಿಕೊಳ್ಳುತ್ತಿದ್ದ, ಅವನ ಉಲ್ಲೇಖಗಳು ಚೋಳರ ನೆಪಮಾತ್ರ ಆಡಳಿತವನ್ನು ಒಪ್ಪಿಕೊಳ್ಳುತ್ತವೆ. ಹೊಯ್ಸಳರು ಇಲ್ಲಿ ಅಧಿಕಾರ ನಡೆಸುವಾಗ ಗಂಡಗೋಪಾಲನೇ ಕಂಚಿಯ ಜವಾಬ್ದಾರಿ ತೆಗೆದುಕೊಂಡಿದ್ದ. ದಕ್ಷಿಣ ಅರ್ಕಾಟ್‌ನಲ್ಲಿ ಕಾದವರನ್ನು ಓಡಿಸಿ ಚೋಳರನ್ನು ರಕ್ಷಿಸಿದಂತೆಯೇ ಇಲ್ಲಿಂದ ತೆಲುಗು ಚೋಳರನ್ನು ಓಡಿಸಿರಬೇಕು. ಗಂಡಗೋಪಾಲನ ಅವಧಿ ಕ್ರಿ.ಶ.1223 ರಿಂದ 1250 ಆದರೆ ಕಂಚಿಯಲ್ಲಿ ಹೊಯ್ಸಳರ ಪ್ರಾಬಲ್ಯದ ಬಗೆಗಿನ ಉಲ್ಲೇಖ ಕ್ರಿ.ಶ.1226 ರಿಂದ 1240 ರವರೆಗಿನದು.

ತೆಲುಗು ಚೋಳರ ಅಧಿಕಾರವನ್ನು ಮೊಟುಕುಗೊಳಿಸಿವುದಕ್ಕೆ ಪ್ರಾಯಶಃ ಹೊಯ್ಸಳರೇ ಕಾರಣ ಆದರೆ ಅದು ಕೇವಲ ತಾತ್ಕಾಲಿಕ. ತೆಲುಗು ಚೋಳ ಟಿಕ್ಕ ಅಥವಾ ಗಂಡಗೋಪಾಲ ಮತ್ತೊಮ್ಮೆ ಹೊಯ್ಸಳರಾಜ ಸೋಮೇಶ್ವರನನ್ನು ಹತ್ತಿಕ್ಕಿ ಮತ್ತೆ ಪ್ರಬಲನಾದನೆಂದು ಟಿಕ್ಕಣ್ಣ ಸಾಮಯಾಜಿಯವ ನಿರ್ವಕಣೊತ್ತರ ರಾಮಾಯಣಂ ಹೇಳುತ್ತದೆ. ಮತ್ತು ಚೋಳ ಅಪ್ಪಪಣಚರಿಯ ಎಂಬ ಬಿರುದನ್ನು ಪಡೆದವನೆಂದೂ ಹೇಳುತ್ತದೆ. ಕ್ರಿ.ಶ.1240ರ ಒಂದು ಹೊಯ್ಸಳ ಉಲ್ಲೇಖ ಗಂಡಗೋಪಾಲನ ಮೇಲಿನ ಸೋಮೇಶ್ವರನ ಯುದ್ಧವನ್ನು ತಿಳಿಸುತ್ತದೆ.

ಹೊಯ್ಸಳರು ಕಂಚಿಯಿಂದ ನಿರ್ಗಮಿಸಿದ ಮೇಲೆ ಮತ್ತು ಗಂಡ ಗೋಪಾಲನ ಬಗೆಗಿನ ಉಲ್ಲೇಖಗಳು ದೊರಕಿವೆ. ಬಹುಶ: ಇದೇ ಕಾರಣಕ್ಕಾಗಿ ಕಂಚಿಯಿಂದ ಹೊಯ್ಸಳರು ಹೊರಬಂದಿರಬೇಕು. 1240ರ ನಂತರ ಅವರ ಬಗೆಗೆ ಉಲ್ಲೇಖಗಳಿಲ್ಲ. ಕ್ರಿ.ಶ.1249[32] ರವರೆಗೂ ಒಂದನೇ ಟಿಕ್ಕ ಕಂಚಿಯ ಅಧಿಪತಿಯಾಗಿದ್ದ ನಂತರ ಕಾಕತೇಯ ಗಣಪತಿ ಕಂಚಿಯನ್ನು ಆಕ್ರಮಿಸಿದ ನಂತರ ಬಹಳ ಬೇಗ ಕಂಚಿಯು ಕಾಡವ ಕೊಪ್ಪೇರು ನಿಂಜ, ನಂತರ ಪಾಂಡ್ಯರ ವಶವಾಯಿತು. ಕ್ರಿ.ಶ.1260[33] ಜಟಾವರ್ಮನ್ ಸುಂದರನಿಂದ ಪಾಂಡ್ಯರ ಪ್ರಬಲ್ಯ ಆರಂಭವಾಯಿತು. ಅವನು ತೋಂಡಮಂಡಲ ಹಾಗೂ ನೆಲ್ಲೂರಿನ ವರೆಗೆ ತೆಲುಗುಚೋಳರನ್ನು ಹತ್ತಿಕ್ಕಿದ. ಮೂರನೇ ರಾಜರಾಜನ ಮೇಲೆ, ಹೊಯ್ಸಳ ಸೋಮೇಶ್ವರನ ಮೇಲೆ, ಕಾಡವ ಕೊಪ್ಪೇರು ನಿಂಗನ ಮೇಲೆ, ತೆಲುಗು ಚೋಳ ವಿಜಯ ಗಂಡ ಗೋಪಾಲ ಮತ್ತು ಕಾಕತೇಯರಾಜ ಗಣಪತಿ ಮೇಲೆ ಅದ್ಭುತ ವಿಜಯಸಾಧಿಸಿದ ಅವನೇ ಸ್ವತ: ನೆಲ್ಲೂರು ಮತ್ತು ಕಂಚಿಯಲ್ಲಿ ಪಟ್ಟಾಭಿಷೇಕ ಮಾಡಿಕೊಂಡ ಅದನ್ನು ಎರಡನೇ ರಾಜಧಾನಿಯಾಗಿಸಿದ. ಕ್ರಿ.ಶ.1312[34]ರಲ್ಲಿ ಚೇರರ ರಾಜ ರವಿವರ್ಮ ಮಿಂಚಿನಂತೆ ಕಂಚಿಯನ್ನು ಆಕ್ರಮಿಸಿ ರಾಜನಾದ. ಅವನ ಬಗೆಗಿನ ಉಲ್ಲೇಖಗಳು ಮತ್ತು ಅವನು ಈ ಸಂದರ್ಭದಲ್ಲಿ ವರದರಾಜ ಸ್ವಾಮಿಗೆ ಕೊಡುಗೆಗಳನ್ನಿತ್ತುದ್ದುರ ಬಗ್ಗೆ ದೇವಸ್ಥಾನದಲ್ಲಿ ಉಲ್ಲೇಖಗಳಿವೆ. ಆದರೆ ಅವನ ಕಂಚಿ ಆಳ್ವಿಕೆ ಬಹಳ ಕಡಿಮೆ ಅವಧಿಯದು. ಕಾಡತೇರಯರ ಪ್ರಬಲರಾಜ ಎರಡೇ ಪ್ರತಾಪರುದ್ರ ಮಲ್ಲಕಾಫರನ ಹಿಂದಿನ ದಾಳಿಯಿಂದ ಚೇತರಿಸಕೊಂಡು ಕಂಚಿಯತ್ತ ನಡೆದ. ಪ್ರತಾಪರುದ್ರನ ಸೇನಾದಿಪತಿ ಕಂಚಿಗೆ ಬಂದು ಅವನ ಗಳಿಕೆಯನ್ನೆಲ್ಲಾ ಅರುತಲ ಪೆರಮಾಳ್ ದೇವಸ್ಥಾನಕ್ಕೆ ನೀಡಿದ ಶ್ರೀರಂಗಂನಲ್ಲಿ ದಾಖಲಾಗಿರುವಂತೆ ಕಾಕತೇಯರು ಮತ್ತಷ್ಟು ಪ್ರಭಲರಾಗಿ ಬಹುಶ: ಹೊಯ್ಸಳರೊಂದಿಗೆ ಸೇರಿ ಅಳಿದುಳಿದ ಪಾಂಡ್ಯರ ಬಲವನ್ನು ನಾಶಮಾಡಿದರು.

## 1335ರಲ್ಲಿ ಕಂಚಿಯಲ್ಲಿ ಹೊಯ್ಸಳರ ಮತ್ತೊಂದು ಅಂತವಿರಾಮ

ಮೂರನೇ ಬಲ್ಲಾಳನ ಆಳ್ವಿಕೆಯ ಸಮಯದಲ್ಲಿ ಕಂಚಿಯಲ್ಲಿ ಹೊಯ್ಸಳರ ಆಳ್ವಿಕೆಗೆ ಮತ್ತೊಂದು ಅಂಕವಿರಾಮವಾಯಿತು. ಆಗ ದಕ್ಷಿಣ ಭಾರತ ದೆಹಲಿಯ ಸುಲ್ತಾನ ಮಹಮದ್ ಬಿನ್ ತೊಘಲಕ್‌ನ ಸೈನ್ಯದ ಹತೋಟಿಯಲ್ಲಿತ್ತು. ಅವನ ಸೈನ್ಯ ಹೊಯ್ಸಳರ ರಾಜಧಾನಿ ದ್ವಾರ ಸಮುದ್ರದಾಟಿ ಮದುರೈ ಆಕ್ರಮಿಸಿತ್ತು. ಕ್ರಿ.ಶ.1371[35] ರವರೆಗೂ ಮದುರೈಯಲ್ಲಿ ಸುಲ್ತಾನೇಖ್ ಇತ್ತು. ಈ ಮಧ್ಯೆ ಹೊಯ್ಸಳರಾಜ ಮೂರನೇ ಬಲ್ಲಾಳ ದ್ವಾರಸಮುದ್ರ ಬಿಡಬೇಕಾಗಿ ಬಂತು. ನಂತರ ತನ್ನ ರಾಜಧಾನಿಯನ್ನು ಅವನು ತಮಿಳುನಾಡಿನ ದಕ್ಷಿಣ ಅರ್ಕಾಟ್ ಜಿಲ್ಲೆಯಾದ ತಿರುವಣ್ಣಾಮಲೈಗೆ ಸ್ಥಳಾಂತರಿಸಿದ.

ಕ್ರಿ.ಶ.1335[36]ನೇ ಇಸವಿಯ ವರದರಾಜಸ್ವಾಮಿ ದೇವಸ್ಥಾನದ ಅವನ ಬಗೆಗಿನ ಉಲ್ಲೇಖಗಳು ಅವನು ಆಗ ಕಂಚಿಯಲ್ಲಿ ಇದ್ದದ್ದು, ಅವನ ಮಂತ್ರಿ ಕಂಪಯ್ಯ ದಣ್ಣಾಯಕ ದೇವಸ್ಥಾನಕ್ಕೆ ಕೊಡುಗೆ ನೀಡಿದನ್ನು ತಿಳಿಸುತ್ತದೆ. ಇನ್ನೊಂದು ಶಾಸನ (ದಾಖಲಾದ ವರ್ಷದ ಮಾಹಿತಿ ಇಲ್ಲ) ಹೊಯ್ಸಳ ರಾಜ ಮತ್ತು ರಾಣಿ ದೇವಸ್ಥಾನಕ್ಕೆ ಬೇಟಿ ನೀಡಿದ್ದು, ವೀರವಲ್ಲನ್ ಎಂಬ ಅವನದೇ ಹೆಸರಿನ ಪಲ್ಲಕ್ಕಿ ಯೊಂದನ್ನು ಅದೇ ದೇವಸ್ಥಾನಕ್ಕೆ ದಾನವಾಗಿ ಇತ್ತದು. ಅದನ್ನು ಅಭಿಷೇಕ ಮಂಟಪದ ಚಾವಸಿಯಡಿ ಇಟ್ಟದ್ದು ಮತ್ತು ಉತ್ಸವಗಳಲ್ಲಿ ಅದರಲ್ಲಿ ದೇವರನ್ನು ಕೂರಿಸಿತಿದ್ದಿದ್ದ ಬಗ್ಗೆ ಮಾಹಿತಿ ನೀಡುತ್ತದೆ. ರಾಜ ತಿರುವಯ್ಮೊಳಿಯ ಸಾನಿಧ್ಯದಲ್ಲಿ ಶ್ರೇಷ್ಠ ಸಂತ ಸಬಗೋಪ (ನಮ್ಮಲ್ವರ್) ಬರೆದ ಮಂತ್ರಗಳನ್ನು ಉಚ್ಚರಿಸಲಾಗುತ್ತಿತ್ತು. ಹಾಗೂ ದೇವಸ್ಥಾನಕ್ಕೆ ವಿಶೇಷ ಸೇವೆ ಸಲ್ಲಿಸಿದವರಿಗೆ ಸನ್ಮಾನ ಮಾಡಲಾಗುತ್ತಿತ್ತು. ಬೇರೆ ಬೇರೆಯವರಿಗೆ ಬೇರೆ ಬೇರೆ ಸನ್ಮಾನ ಮಾಡಿದಿದುರ ಬಗ್ಗೆ ಕಂಚಿಯ ವರದ ರಾಜ ಸ್ವಾಮಿ ದೇವಸ್ಥಾನದಲ್ಲಿ ಕನಿಷ್ಟ 4 ಉಲ್ಲೇಖಗಳಿವೆ, ಈ ಲೇಖನಗಳ ಪ್ರಕಾರ ಬಲ್ಲಾಳ ರಾಮಾನುಜರ ಶಿಷ್ಯ ಹಾಗೂ ಒಂದನೇ ವಿಷ್ಣು ವರ್ಧನನಂತೆ ವಿಷ್ಣುವಿನ ಭಕ್ತ. ಇವನು ಕಂಚಿಯೊಡನೆ, ಅಲ್ಲಿನ ವಿಷ್ಣು ದೇವಸ್ಥಾನದೊಡನೆ ಗಾಡ ಸಂಬಂಧ ಹೊಂದಿದ್ದು, ಇದರಿಂದಾಗಿ ದೇವಸ್ಥಾನ ಪ್ರಸಿದ್ಧಿಗೊಂಡಿತು. ಮೂರನೇ ಬಲ್ಲಾಳ ಹೀಗಾಗಿ ದೇವಸ್ಥಾನಕ್ಕೆ ಬೇಟಿಯಿತ್ತು ಅನೇಕ ವಿಶೇಷ ಬಹುಮಾನ ನೀಡಿದ.

ಕ್ರಿ.ಶ.1335[37] ರಲ್ಲಿ ಮೂರನೇ ಬಲ್ಲಾಳ ಕಂಚಿಗೆ ಭೇಟಿ ನೀಡಿದ ನಂತರ 7 ವರ್ಷ ಮಾತ್ರ ಬದುಕಿದ್ದ. ಆ ಸಮಯದಲ್ಲಿ ಮದುರ ಸುಲ್ತಾನರ ಜೊತೆ ಜಿದ್ದಾಜಿದ್ದಿನ ಹೋರಾಟ ನಡೆಸಿ, ತನ್ನೆಲ್ಲಾ ಸಾಮರ್ಥ್ಯವನ್ನು ಒಟ್ಟು ಗೂಡಿಸಬೇಕಾಯ್ತು. ದೊಡ್ಡ ಸೈನ್ಯದೊಡನೆ ತಿರುಚನಾ–ಪಳ್ಳಿಯಲ್ಲಿ ಯುದ್ಧವಾಡಿದ. ಮೊಟ್ಟಮೊದಲು ಗೆದ್ದರೂ ಬಲ್ಲಾಳ ನಂತರ ಸೋತು ಖೈದಿಯಾದ ಮಾತು 1342ರಲ್ಲಿ ಕೊಲಲ್ಪಟ್ಟ. ಈ ಹೊಡೆತದಿಂದ ಹೊಯ್ಸಳರು ಚೇತರಿಸಿಕೊಳ್ಳಲಿಲ್ಲ. ಈ ಮಧ್ಯೆ ಕಂಚಿಯು ಸಾಂಬುವರೆಯರ ಹಿಡಿತದಲ್ಲಿತ್ತು. ಕ್ರಿ.ಶ.1362ರ ಹೊತ್ತಿಗೆ ಹೊಸದಾಗಿ ಸ್ಥಾಪನೆಯಾದ ವಿಜಯನಗರದ ತೆಕ್ಕೆಗೆ ಬಂತು. ಆಮೇಲಿನಿಂದ ಕಂಚಿಯಲ್ಲಿ ವಿಜಯನಗರ ಉಲ್ಲೇಖಗಳು ಕಾಣಲಾಂಭಿಸಿದವು.

## 9.4 ಹೊಯ್ಸಳರು ಮತ್ತು ದಕ್ಷಿಣ ಕನ್ನಡ ಜಿಲ್ಲೆ

ಒಂದು ಚಕ್ರಾಧಿಪತ್ಯವಾಗಿ ಹೊಯ್ಸಳರಾಜ್ಯ ಹೊರ ಹೊಮ್ಮಿದ್ದು ಪಶ್ಚಿಮ ಘಟ್ಟಗಳ ಪಶ್ಚಿಮದಲ್ಲಿರುವ ದಕ್ಷಿಣ ಕನ್ನಡದ ಕರಾವಳಿ ಜಿಲ್ಲೆಯಲ್ಲಿ ಸಾಕಷ್ಟು ರಾಜಕೀಯ ಬದಲಾವಣೆ ತಂದಿತ್ತು. ಮೊದಲಿಗೆ ಮೂಡಗೆರೆ ತಾಲ್ಲೂಕಿನ ಅಂಗಡಿ ಎನ್ನುವ ಚಿಕ್ಕ ಪ್ರದೇಶದಲ್ಲಿ ಮಾತ್ರ

ಹೊಯ್ಸಳರ ರಾಜ್ಯಭಾರವಿತ್ತು. ನಿಧಾನವಾಗಿ ಅಲ್ಲಿನ ಅನೇಕ ಸಣ್ಣಪುಟ್ಟ ರಾಜರನ್ನು ಸೋಲಿಸಿ ಮಲೆಪರೋಲ್ಗಂಡ ಎಂಬ ಬಿರುದನ್ನು ಪಡೆದ. ಅನೇಕ ಸಣ್ಣ ಪುಟ್ಟ ಜೈನ ನಾಯಕರು ಘಟ್ಟವನ್ನು ಬಿಟ್ಟು ಕರಾವಳಿಯಲ್ಲಿ ಆಶ್ರಯ ಪಡೆಯಬೇಕಾಯಿತು. 2, 13, 14ನೇ ಶತಮಾನದಲ್ಲಿ ಅಲ್ಲಲ್ಲಿ ತಲೆ ಎತ್ತಿದ ಜೈನನಾಯಕರು ಅಲೂಪ ಎನ್ನುವ ಸ್ಥಳೀಯ ರಾಜವಂಶದ ಮೇಲೆ ಅತಿಕ್ರಮಣ ನಡೆಸಿದ್ದರು.

ದಕ್ಷಿಣ ಕನ್ನಡವನ್ನು ಆಳುತ್ತಿದ್ದ ಅನೇಕ ಜೈನ ರಾಜಕುಮಾರರಲ್ಲಿ ಕನಿಷ್ಟ ಪಕ್ಷ 3 ಕುಟುಂಬವಾದರೂ ಘಟ್ಟದ ತುಳುವರಿಂದ ವಲಸೆ ಬಂದವರು ಪ್ರಸ್ತುತ ಟಿಕ್ಕಂಗಡಿ ತಾಲೂಕಿನಲ್ಲಿರುವ ಬಂಗಾಡಿಯ ಬಂಗರು ಗಂಗಾವಾಡಿಯಿಂದ ಬಂದವರೆಂದು ಅವರ ಇತಿಹಾಸದ ಕುರಿತಾದ ಪುಸ್ತಕದಲ್ಲಿ ವರ್ಣಿಸಲಾಗಿದೆ. ಇದು ದಕ್ಷಿಣ ಕನ್ನಡ ಇತಿಹಾಸದ ಮೇಲಿನ ಗಣಪತಿ ರಾವ್ ಎಗಳರ ಕನ್ನಡ ಪುಸ್ತಕದಲ್ಲಿ ಬಂದಿದೆ. ಹೊಯ್ಸಳ ವಿಷ್ಣುವರ್ಧನನಿಂದ ತಮ್ಮ ಮೂಲಸ್ಥಾನ ಬಿಡಬೇಕಾಯ್ತು ಎಂದಿದೆ. ಬಹುಶಃ ಇವರು ಮುಡುಗೆರೆ ತಾಲ್ಲೂಕಿನ ಮೆಲ್ಬಂಗಡಿ ಆಳುತ್ತಿದ್ದಿರಬೇಕು. ನಂತರ ಅಲ್ಲಿಂದ ಬೆಳ್ತಂಗಡಿ ತಾಲ್ಲೂಕಿನ ಬೆಂಗಡಿಗೆ ವಲಸೆ ಬಂದಿರಬೇಕು. ಇದೇ ರೀತಿ ಯೆಗ್ಗೂರಿನ ಅಜಿಲರು (ಪ್ರಸ್ತುತ ಬೆಳ್ತಂಗಡಿ ತಾಲ್ಲೂಕಿನ ವೇನೂರು) ತಮ್ಮನ್ನು ತಾವು ಚಾಮುಂಡರಾಯರೆಂದು ಕರೆದುಕೊಂಡರು. ಎಂದೂ ಒಂದು ಉಲ್ಲೇಖ ಹೇಳುತ್ತದೆ. ಗೋವಿಂದಪೈರವರು ಹೇಳುವಂತೆ ಅವರ ಜೈಫಿಯಾತ್‌ಗಳು ಗಂಗಾವತಿಯ ಚಾವುಂಡರಾಯನ ಸಂಬಂಧಿಕರು (ಚಾವುಂಡರಾಯನ ಗಂಗಾಮಂತ್ರಿಗಳು), ಕಾರ್ಕಳದ ಸಂತರ ರಾಜರು 14ನೇ ಶತಮಾನದಲ್ಲಿ ಆಡಳಿತಕ್ಕೆ ಬಂದು ಮೂಡುಗೆರೆ ತಾಲ್ಲೂಕಿನ ಕಳಸವನ್ನು ತಮ್ಮ ರಾಜಧಾನಿಯಾಗಿ ಮಾಡಿಕೊಂಡರು.

ಇದಲ್ಲದೆ ಹೊಯ್ಸಳರು ತುಳವರ ಆಲೂಪರ ಅಥವಾ ಅಲ್ವಖೇಡರ (ದಕ್ಷಿಣ ಕನ್ನಡದ ಪೂರ್ವನಾಮ) ಜೊತೆ ಹೊಡೆದಾಡಿದಂತೆ ಕಾಣುತ್ತದೆ. ಚಕಮಕಿಗಳ ಬಗ್ಗೆ ಅನೇಕ ಉಲ್ಲೇಖಗಳಿವೆ. ಹೊಯ್ಸಳರು ತುಳುವರನ್ನು ಸೋಲಿಸಿದ್ದರು. ಕೆಲವರ ಪ್ರಕಾರ ತುಳವರು ಹೊಯ್ಸಳರಿಗೆ ಸಾಮಂತರಾಗಿದ್ದರು.

ವಿನಯಾದಿತ್ಯನ ಒಂದು ಉಲ್ಲೇಖದಂತೆ ಅವನ ರಾಜ್ಯದಲ್ಲಿ ಡೊಂಕಣ ಮತ್ತು ಅಲ್ವಖೇಡವನ್ನು ಒಳಗೊಂಡಿತ್ತು. ವಿಷ್ಣುವರ್ದನನ ಕಾಲದಲ್ಲಿ ತುಳ ದೇಶವು ಹೊಯ್ಸಳರ ಭಾಗವಾಗಿತ್ತು. ಆದರೆ ಕೆಲವು ದಾಖಲೆಗಳಲ್ಲಿ ಅಲ್ವ ಖೇಡ ರಾಜ್ಯದ ಸೀಮೆಯಲ್ಲಿದೆ ಅಥವಾ

ಬಾರಕೂರ ಘಟ್ಟ ಈ ತರದ ಕೆಲವು ದಾಖಲೆಗಳು ಒಂದನೇ ನರಸಿಂಹನ ಕಾಲದ್ದೂ ಸಹ ದೊರಕಿದೆ; ನರಸಿಂಹ ತನ್ನನ್ನು ತಾನು ತುಳುವ ಸೈನ್ಯ ಹಡಗಿನ ಬೆಂಕಿ ಎಂದು ಕರೆದುಕೊಂಡಿದ್ದಾನೆ. ಕ್ರಿ.ಶ.1155ನೇ ಇಸವಿ ಒಂದು ಉಲ್ಲೇಖ ನರಸಿಂಹನ ಸೇನಾನಿ ಬೊಕಣ ಅಥವಾ ಬೊಕಿಮಯ್ಯ ತಳವರನ್ನು ನಿಗ್ರಹಿಸಲು ಕಾರಣ ಎಂದು ಹೇಳುತ್ತದೆ. ಬೆಳ್ತಂಗಡಿ ತಾಲ್ಲೂಕಿನ ಜಮಾಲಬಾದ್ ಕೋಟೆಯ ಬಳಿ ನರಸಿಂಹ ಅಂಗಡಿ ಎಂಬ ಪ್ರದೇಶದ ಇರುವಿಕೆ ನರಸಿಂಹ ತುಳುವರ ಮೇಲೆ ಯುದ್ಧ ಮಾಡಿದ್ದನ್ನು ತೋರಿಸುತ್ತದೆ. ಬೊಂಗ ಕುಟುಂಬದ ದಾಖಲೆಗಳು ತಮ್ಮ ಮೂಲಸ್ಥಳದಿಂದ ತಮ್ಮನ್ನು ವಿಷ್ಣುವರ್ಧನ ಸ್ಥಳಾಂತರ ಗೊಳಿಸಿದ್ದನ್ನು ಹಾಗೂ ಕುಟುಂಬ ಬಂಗಾಡಿಗೆ ಬಂದಿದ್ದನ್ನು ತೋರಿಸುತ್ತದೆ. ಹೊಯ್ಸಳರ ನರಸಿಂಹ ಈ ಕುಟುಂಬದ ಅನಾಥರಾಜ ಕುಮಾರನ ಮೇಲೆ ಕರುಣೆ ತೋರಿ ಅವನನ್ನು 13ನೇ ಮಗಾನೆಗಳ ಮುಖ್ಯಸ್ಥನನ್ನಾಗಿ ಮಾಡಿದ. ಆ ರಾಜನಿಗೆ ವೀರನರಸಿಂಹನೆಂದು ರಾಜ ಕರೆದನೆಂದು ಕ್ರಿ.ಶ.1079ರ ಚರಿತ್ರೆಯಲ್ಲಿದೆ.[38] (AD 1157)

ಹೀಗೆ ಬಂಗಾಳ ಜೈನ-ಶೈವ ಕುಟುಂಬದಲ್ಲಿ ವೀರನರಸಿಂಹನೆಂಬ ವೈಷ್ಣವ ಹೆಸರು ಅಲ್ಲಲ್ಲಿ ಕಂಡು ಬರುತ್ತದೆ. ಬಹುಶ: ಬೊಂಗಾಡಿಯ ಸುತ್ತಮುತ್ತಲ ಪ್ರದೇಶದಲ್ಲಿ ನರಸಿಂಹ ಅಂಗಡಿಯಲ್ಲಿ ಅವರ ಆಳ್ವಿಕೆ ಶುರುವಾಗಿರಬೇಕು.

ಎರಡನೇ ಬಲ್ಲಾಳ ಸಹ ಆಳ್ವಖೇಡರ ವಿರುದ್ಧ ಹೋರಾಡಿದಂತೆ ಕಾಣುತ್ತದೆ. ಕ್ರಿ.ಶ.1178[39] ರ ದಾಖಲೆಯೊಂದು ಅವನನ್ನು ಆಳ್ವಖೇಡ ಪರ್ವತಗಳಿಗೆ ಮುಸುಕಿಂದ ಮಂಜಿನಂತೆ ಎಂದು ವರ್ಣಿಸಿದೆ. ಕ್ರಿ.ಶ.1173[40] ರ ಇನ್ನೊಂದ ದಾಖಲೆ ಎರಡನೇ ಬಲ್ಲಾಳನ ಜೊತೆ ಯುದ್ಧ ಮಾಡಿದ ನಂತರ ತುಳುವರು ತಮ್ಮ ಜೀವ ರಕ್ಷಣೆಗಾಗಿ ಓಡಿ ಹೋದರು. ಎಂದು ಹೇಳುತ್ತದೆ. ಆದರೆ ಎರಡನೇ ನರಸಿಂಹನ ದಾಖಲೆ ಆಳ್ವಖೇಡ ಅವನ ರಾಜ್ಯದ ಪಶ್ಚಿಮದಲ್ಲಿದೆ ಎಂದು ಹೇಳುತ್ತದೆ. ಬಹುಶ: ಸೋಮೇಶ್ವರನಿಗೆ ದಕ್ಷಿಣದೆಡೆಗೆ ಗಮನ ಕೊಡಲು ಸಮಯವಿರಲಿಲ್ಲ ಅವನ ಗಮನವೆಲ್ಲ ಪೂರ್ವದೆಡೆಗೆ ಇತ್ತು. ಮೂರನೇ ನರಸಿಂಹನ ಆಳ್ವಿಕೆಯು ಉತ್ತರಭಾಗದಲ್ಲಿ ತುಳುವರನ್ನು ಅವರ ಸುಪರ್ದಿಗೆ ತರಲು ಗಂಭೀರ ಪ್ರಯತ್ನ ನಡೆಸಿದ. ಅಲ್ಲಿವರೆಗೂ ತುಳುವರ ಅವರ ಸಾಮ್ರಾಜ್ಯದ ಭಾಗವಾಗಿರಲಿಲ್ಲ. ಘಟ್ಟದ ಉದ್ದಕ್ಕೂ ತುಳುವರು ಸಾಕಷ್ಟು ಕಡೆ ಇದ್ದರೂ ಅಲ್ಲೆಲ್ಲೂ ಹೊಯ್ಸಳರಿಗೆ ಸಂಬಂಧಿಸಿದ ದಾಖಲೆ ಕಂಡು ಬಂದಿಲ್ಲ. ಇಲ್ಲಿರುವ ಮತ್ತು ಲಭ್ಯವಿರುವ ಎಲ್ಲ ದಾಖಲೆಗಳು ಹೊಯ್ಸಳರು ತುಳುವರನ್ನು ಸೋಲಿಸಿರುವುದು ಮತ್ತು ಅವರಿಂದ ಕಪ್ಪುಕಾಣಿಕೆ ಪಡೆದಿರುವ ಬಗ್ಗೆ.

ತುಳುವರ ಎರಡು ದಾಖಲೆಗಳು ಮೂರನೇ ನರಸಿಂಹನ ಕಾಲದಲ್ಲಿ ತುಳುವರು ಹೊಯ್ಸಳ ಸಾಮ್ರಾಜ್ಯದ ಸಾಮಂತರಾಗಿದ್ದರೆಂದು ಸೂಚಿಸುತ್ತಿದ್ದು ಯುವರಾಜ ಬಲ್ಲ. ತುಳುವರ ಅಧಿಪತಿಯಾಗಿದ್ದ ಕ್ರಿ.ಶ.1281[41]ರ ಮೂಡಬಿದಿರೆಯ ಉಲ್ಲೇಖದ ಪ್ರಕಾರ ಬಲ್ಲಾಳ ಒಂದು ಧರ್ಮದ ಕಲ್ಲು ಸ್ಥಾಪಿಸಿದ್ದ ಇದನ್ನು ಊರಿನ ಹಿರಿಯ ನಾಗರೀಕರ ಎದುರಿಗೆ ಮಾಡಿದ್ದ ಕ್ರಿ.ಶ.1278ರ ಉತ್ತರ ಕನ್ನಡ ಜಿಲ್ಲೆ ಸಿರಾಳಿಯ ಎರಡನೇ ದಾಖಲೆ ಬಲ್ಲಾಳನನ್ನು ಮಹಾಮಂಡಲೇಶ್ವರ ಮತ್ತು ಕುಮಾರ ಎಂದು ಕರೆದಿದೆ.[42]

ಮೂರನೇ ಬಲ್ಲಾಳ ಪಟ್ಟಕ್ಕೆ ಬಂದ ನಂತರ ತುಳುವರ ವಿಷಯದಲ್ಲಿ ಆಸಕ್ತಿ ವಹಿಸಿದೆ. ತುಳುವರ ಮೇಲೆ, ಅದರಲ್ಲೂ ಉತ್ತರ ಕನ್ನಡದಲ್ಲಿ ಮೂರನೇ ಬಲ್ಲಾಳನ ಸಾಕಷ್ಟು ದಂಡಯಾತ್ರೆಗಳ ಬಗ್ಗೆ ಉಲ್ಲೇಖಗಳಿವೆ. ಕ್ರಿ.ಶ.1300[43]ರಲ್ಲಿ ಚಂದಾವರ ಕದಂಬರ ಮೇಲೆ ದಾಳಿ ನಡೆಸಿದಂತಿದೆ. ಕ್ರಿ.ಶ.1303[44] ರಲ್ಲಿ ಅದೇ ಕುಟುಂಬದ ಮೇಲೆ ಸಿರಿಸೆಯಲ್ಲಿ ಯುದ್ಧ ಮಾಡಿದ. 1319ರಲ್ಲಿ ಚಂದಾವರವನ್ನು ವಿನಾಶ ಪಡಿಸಿದ.

ದಕ್ಷಿಣ ಕನ್ನಡದಲ್ಲಿ ಆಲೂಪ ಕುಟುಂಬದ ರಾಜಕುಮಾರಿ ಕೃಷಾಯಿತಾಯಿ (ಬಹುಶ: ಸೋಯಿದೇವ ಅಲೂಪನ ಸೋದರಿ) ಮದುವೆ ಮಾಡಿಕೊಂಡು ನಂತರ ಅವಳಿಗೆ ಹುಟ್ಟಿದ ತನ್ನ ಮಗ ಕುಲಶೇಖರನನ್ನು ಅಲೂಪರ ರಾಜನಾಗಿ ಮಾಡಿದ.

ಆ ಕಾಲದಲ್ಲಿ ತುಳುವರಲ್ಲಿ ಅಳಿಯ ಸಂತಾನ ಪ್ರಸಿದ್ಧಿ ಪಡೆದಿತ್ತು. ಸೋಯಿದೇವನಿಗೆ ಬಂಕಿದೇವನೆಂಬ ಅಳಿಯನಿದ್ದ. ಅವನು ನಿಜವಾಗಿ ಅಲೂಪ ಸಿಂಹಾಸನ ಹಕ್ಕುದಾರ 1316ರ ಸೋಯಿದೇವರ ಬಾರಕೂರಿ ದಾಖಲೆಗಳಲ್ಲಿ ಅವನ ಹೆಸರು ಪ್ರಾಮುಖ್ಯವಾಗಿ ಕಂಡು ಬರುತ್ತದೆ. ಸೋಯಿದೇವನ ಕಡೇ ದಾಖಲೆ ಕ್ರಿ.ಶ.1335 ರದು. ಕುಲಶೇಖರನ ಮೊದಲ ದಾಖಲೆ ಕ್ರಿ.ಶ.1339 ರಂದು ಸೋಯಿದೇವ ಈ ಮಧ್ಯದಲ್ಲಿ ಮೃತಪಟ್ಟಿರಬೇಕು. ಬಲ್ಲಾಳ ಕ್ರಿ.ಶ.1338[45] ರಲ್ಲಿ ತುಳುವರನ್ನು ಸಂದರ್ಶಿಸಿದ ಮತ್ತು ಅವನ ಸೇನಾನಿ ಅಂಕೇಯನಾಯಕನನ್ನು ಬಾರಕೊರಿನಲ್ಲಿ ಸ್ಥಾಪಿಸಿದ. ಇದಕ್ಕೆ ಕಾರಣ ತನ್ನ ಮಗ ಕುಲಶೇಖರನನ್ನು ಪಟ್ಟಕ್ಕೆ ತರುವುದು ಮತ್ತು ಬಂಕಿದೇವನಂತ ವೈರಿಗಳನ್ನು ಹಿಮ್ಮೆಟ್ಟಿಸುವುದು ಕ್ರಿ.ಶ.1346[46] ರವರೆಗೆ ಕುಲಶೇಖರನೇ ಆಳ್ವಿಕೆ ನಡೆಸಿದನೆಂದು ಶಿರಾಲಿಯ ದಾಖಲೆ ಹೇಳುತ್ತದೆ. ಬಲ್ಲಾಳ ಕಾಂತವರ ಸಂದರ್ಶಿದನೆಂದು 1338ರ ಇನ್ನೊಂದು ದಾಖಲೆ ಹೇಳುತ್ತದೆ.[47]

ಬಲ್ಲಾಳನ ರಾಣಿ ಕೃಷ್ಣಾಯಿ ಅಥವಾ ತಿಕ್ಕಾಯಿ ತಾಯಿ ತುಳುವರ ಅಳಿಯ ಸಂತಾನ ಕಟ್ಟನಂತೆ ತುಳುವರ ಜೊತೆಯೇ ಇದ್ದರು. ಅವಳು ಹೊಯ್ಸಳ ವಂಶದ ಬಿರುದುಗಳನ್ನು ಧರಿಸಿದ್ದಳು. ಮತ್ತು ತುಳುವರಲ್ಲಿ ಪ್ರಮುಖ ಪಾತ್ರ ವಹಿಸಿದ್ದಳು. ಅವಳ ಜೊತೆ ವೈಜಪ್ಪ ದಣ್ಣಾಯಕ ಮತ್ತು ಆ ಜನ ಸಹಾನಿ ಎಂಬ ಇಬ್ಬರು ಅಧಿಕಾರಿಗಳ ಹೆಸರು ಪ್ರಮುಖವಾಗಿ ಕಾಣುತ್ತದೆ. ಶೃಂಗೇರಿ ಕ್ರಿ.ಶ.1346[49]ರ ಉಲ್ಲೇಖದಂತೆ ಹೊಯ್ಸಳರ ಮತ್ತು ಸಂಗಮ ಸಹೋದರರ ಅನುಯಾಯಿಗಳ ಮಧ್ಯೆ ಹೊಂದಾಣಿಕೆ ತರಲು ಶ್ರಮಿಸಿದ್ದಳು. ಕ್ರಿ.ಶ.1338ರಲ್ಲಿ ಮೂರನೇ ಬಲ್ಲಾಳ ತನ್ನ ಮಗನನ್ನು ಪಟ್ಟಕ್ಕೆ ತಂದು ತನ್ನ ಉದ್ದೇಶ ಈಡೇರಿಸಿಕೊಂಡ ಅಂದರೆ ತುಳುವರನ್ನು ಹೊಯ್ಸಳ ನಿಷ್ಟರಾಗಿ ಮಾಡಿದ.

## 9.1.2 ತಮಿಳುನಾಡಿನಲ್ಲಿ ಹೊಯ್ಸಳರ ರಾಜ್ಯಭಾರ ಮತ್ತು ರಾಜ್ಯದ ವಿಭಜನೆ

ಹೊಯ್ಸಳರ ಸಾಮ್ರಾಜ್ಯದ ಒಂದು ಮುಖ್ಯವಾದ ನೀತಿ ಎಂದರೆ ದೂರ ದಕ್ಷಿಣದಲ್ಲಿ ಸಾಮ್ರಾಜ್ಯದ ವಿಸ್ತರಣೆಯಾಗಿತ್ತು. ಕಲ್ಯಾಣದಲ್ಲಿ ಚಾಳುಕ್ಯರು ಕಣ್ಮರೆಯಾದ ನಂತರ ಹೊಯ್ಸಳ ವಂಶದವರು ದಕ್ಷಿಣದಲ್ಲಿ ಪ್ರಬಲ ಶಕ್ತಿಯಗಿ ಬೆಳೆದರು. ಆ ಕಾಲದಲ್ಲಿ ಇನ್ನೊಂದು ಅಷ್ಟೇ ಪ್ರಬಲವಾದ ಶಕ್ತಿ ಎಂದರೆ ದೇವಗಿರಿಯ ಸೇವುಣರು. ಇವರಿಬ್ಬರೂ ತಮ್ಮತಮ್ಮಲ್ಲೇ ದಕ್ಷಿಣದಲ್ಲಿ ಮೇಲುಗೈಯನ್ನು ಪಡೆಯಲು ಪ್ರಯತ್ನಿಸುತ್ತಿದ್ದರು. ಈ ಅವಿರತ ಯುದ್ಧಗಳ ಫಲವಾಗಿ ಅವರು ಕೊನೆಗೆ ದೆಹಲಿ ಸುಲ್ತಾನರ ಆಳ್ವಿಕೆ ಒಳಗಾಗಬೇಕಾಯಿತು.

ಹೀಗೆ ಸೇವುಣರ ರಾಜಕೀಯ ಮತ್ತು ಸೈನಿಕ ಒತ್ತಡದ ಫಲವಾಗಿ ಹೊಯ್ಸಳರಿಗೆ ಉತ್ತರದಲ್ಲಿ ತಮ್ಮ ರಾಜ್ಯವನ್ನು ವಿಸ್ತರಿಸಲು ಆಗಲಿಲ್ಲ. ಹೀಗಾದರೂ ಹೊಯ್ಸಳರಿಗೆ ತಮಿಳುನಾಡಿನಲ್ಲಿ ಇದ್ದ ಪರಿಸ್ಥಿತಿಯು ಅವರಿಗೆ ಅದರಲ್ಲಿ ತಲೆಹಾಕಲು ಅನುಕೂಲವಾಗಿತ್ತು. ಹತ್ತು ಹನ್ನೆರಡನೆಯ ಶತಮಾನದಲ್ಲಿ ಮೊದಲನೆಯ ರಾಜರಾಜಚೋಳನ ಕಾಲದಲ್ಲಿ ಚೋಳರು ಸಂಪಾದಿಸಿ ಉಳಿಸಿಕೊಂಡದ್ದ ಉನ್ನತ ಸ್ಥಾನವು ಅಶಕ್ತ ರಾಜರುಗಳಿಂದ ಇಳಿಮುಖವಾಗ ತೊಡಗಿತು. ಸಾಮಂತರಾಗಿದ್ದ ಪಾಂಡ್ಯರು ಚೋಳರ ಮೇಲೆ ಧಾಳಿ ಮಾಡಿ ಸೋಲಿಸಿದರು. ಈ ಹಿನ್ನೆಲೆಯಲ್ಲಿ ಚೋಳರು ಹೊಯ್ಸಳರ ಸಹಾಯವನ್ನು ಕೇಳಿದರು. ಹೀಗಾಗಿ ಹೊಯ್ಸಳರು ತಮಿಳುನಾಡಿನ ವ್ಯವಹಾರಗಳಲ್ಲಿ ಕೈ ಹಾಕತೊಡಗಿದರು. ಇದು ತಮಿಳುನಾದಿನ ಅನೇಕ ಭಾಗಗಳ ಮೇಲೆ ಆಡಳಿತವನು ಹೇರಲು ಎಡೆ ಮಾಡಿಕೊಟ್ಟಿತು.

## ಎರಡನೆಯ ಬಲ್ಲಾಳ ಮತ್ತು ಚೋಳರು

ಎರಡನೆಯ ಬಲ್ಲಾಳನು ತಮಿಳುನಾಡಿನ ವ್ಯವಹಾರಗಳಲ್ಲಿ ಕೈಹಾಕಿದವರಲ್ಲಿ ಮೊದಲನೆಯವನು. ದುರ್ಬಲಗೊಳ್ಳುತ್ತಿದ್ದ ಚೋಳರ ಪರಿಸ್ಥಿತಿಯು ಇದಕ್ಕೆ ಕಾರಣವಾಗಿತ್ತು. ಕುಲೋತ್ತುಂಗನು (ಕ್ರಿ.ಶ.1178–1218) ಅವನ ಸಾಮ್ರಾಜ್ಯದಲ್ಲಿ ಮೊದಲು ಕೆಲವು ಸಮಸ್ಯೆ-ಗಳನ್ನು ಎದುರಿಸಿದನು. ಹಾಗಾಗಿ ನೆರೆಯವರಾದ ಹೊಯ್ಸಳರೊಂದಿಗೆ ಆಪ್ತವಾದ ಸಂಬಂಧವನ್ನು ಬಯಸಿದನು. ಕ್ರಿ.ಶ.1200[50]ರಲ್ಲಿ ಚೋಳ ದೊರೆಯ ಒಬ್ಬ ರಾಜಕುಮಾರಿ-ಯನ್ನು ಎರಡನೆಯ ಬಲ್ಲಾಳನಿಗೆ ಕೊಟ್ಟು ವಿವಾಹವನ್ನು ಮಾಡಲಾಯಿತು ಎಂದು ಬಲ್ಲ ಮೂಲಗಳು ತಿಳಿಸುತ್ತವೆ. ಕ್ರಿ.ಶ.1216[51]ರ ಕೊನೆಯ ವೇಳೆಗೆ ಕೆಲವು ಘಟನೆಗಳು ತಮಿಳುನಾಡಿನಲ್ಲಿ ನಡೆದು ಚೋಳ ಸಾಮ್ರಾಜ್ಯದ ಕಾರ್ಯಗಳಲ್ಲಿ ಎರಡನೆಯ ಬಲ್ಲಾಳನು ಕೈ ಹಾಕುವಂತಾಯಿತು. ಮಧುರೈನ ಪಾಂಡ್ಯರು ಚೋಳರಿಗೆ ಬಹಳ ತೊಂದರೆಯನ್ನು ಕೊಡತೊಡಗಿದರು.

ಚೋಳ ದೊರೆಗಳಾದ ಮೂರನೆಯ ರಾಜರಾಜ ಚೋಳ (ಕ್ರಿ.ಶ.1216ರಿಂದ 1246) ಮತ್ತು ಮೂರನೆಯ ರಾಜೇಂದ್ರ ಚೋಳ (ಕ್ರಿ.ಶ.1247–1279)[52] ಇವರ ಆಳ್ವಿಕೆಯು ತಮಿಳುದೇಶದ ಕೊನೆಯ ಚೋಳ ಶಕ್ತಿಯಾಯಿತು. ಅವರ ಸಾಮಂತರಾದ ಪಾಂಡ್ಯರು ಅವರನ್ನು ಬಹಿರಂಗವಾಗಿ ಧಿಕ್ಕರಿಸಿ ಅವರನ್ನು ಹೊರಹಾಕಿದರು. ಈ ಕಾಲದಲ್ಲಿಯೂ ಸಹ ಹೊಯ್ಸಳರು ಕ್ರಿಯಾಶೀಲರಾಗಿ ಈ ಅಧಿಕಾರದ ಕಿತ್ತಾಟದಲ್ಲಿ ತಮ್ಮ ಲಾಭವನ್ನು ಹುಡುಕ-ತೊಡಗಿದರು. ವಾರಂಗಲ್ಲಿನ ಕಾಕತೀಯರೂ ಸಹ ಧಾಳಿಯನ್ನು ಮಾಡಿ ಕಾಂಚಿಯವರೆಗೆ ಬಂದರು.

ಪಾಂಡ್ಯರಾಜನ ಮಾರವರ್ಮನ್ ಸುಂದರಪಾಂಡ್ಯನು ಹೆಸರಿಗೆ ಮಾತ್ರವಿರುವ ಚೋಳರ ಅಧೀನತ್ವವನ್ನು ಕಿತ್ತು ಹಾಕಲು ನಿರ್ಧರಿಸಿದನು. ಅವನು ಇತರ ಚೋಳರ ಸಾಮಂತರಾದ ಬಾಣರು ಮತ್ತು ಕಡವರ ಜೊತೆ ಒಪ್ಪಂದವನ್ನು ಮಾಡಿಕೊಂಡನು. ನಂತರ ಸುಂದರಪಾಂಡ್ಯನು ಮೂರನೆಯ ರಾಜರಾಜಚೋಳನನ್ನು ಎದುರಿಸಿ ಅವನಿಗೆ ಅವಮಾನ ಮಾಡಿದನು. ಚೋಳ ದೊರೆಯು ಎರಡನೆಯ ಬಲ್ಲಾಳನನ್ನು ಸಹಾಯಕ್ಕಾಗಿ ಬೇಡಿದನು. ಈ ಮೊದಲೇ ತಿಳಿಸಿದಂತೆ ಈ ಎರಡೂ ಮನೆತನಗಳ ನಡುವೆ ವೈವಾಹಿಕ ಸಂಬಂಧವು ಇತ್ತು. ಹಾಗಾಗಿ ಎರಡನೆಯ ಬಲ್ಲಾಳನು ತನ್ನ ಮಗನಾದ ಎರಡನೆಯ ನರಸಿಂಹನನ್ನು ಕ್ರಿ.ಶ.1218ರಲ್ಲಿ ಒಂದು ಸೈನ್ಯದೊಂದಿಗೆ ಅವರ ಸಹಾಯಕ್ಕಾಗಿ ಕಳುಹಿಸಿಕೊಟ್ಟನು.

ಹೊಯ್ಸಳರು ಬಾಣರ ಪ್ರದೇಶದ ಮೂಲಕ ನೇರವಾಗಿ ಹಾದುಹೋಗಲು ಸಾಧ್ಯ-ವಿದ್ದುದರಿಂದ ಹಾಗೆ ಹೋಗಲು ಸಾಧ್ಯವಾಯಿತು. ಬಾಣರ ಸಾಮ್ರಾಜ್ಯವು ಪೂರ್ವದಲ್ಲಿ ತಾರಮಂಗಲದವರೆಗೆ, ವೆಲ್ಲಾರ್ ಕಡೆಗೆ ತಿಟ್ಟಗುಡಿಯವರೆಗೆ, ಉತ್ತರದ ಕಡೆಗೆ ತಿರುವಣ್ಣಾಮಲೈ ಕೂಡಾ ಸೇರಿದಂತೆ ಪೊನ್ನಾಯಿಯಾರ್‌ವರೆಗೆ ಹರಡಿದ್ದ ಈ ರಾಜ್ಯದ ಕೇಂದ್ರಘಟ್ಟದ ಕೆಳಗಿನ ಅಟ್ಟಂ ಆಗಿತ್ತು. ಎರಡನೆಯ ನರಸಿಂಹನು ಆದಿಜಯಮನ್ ಮತ್ತು ಬಾಣರ ಸೈನ್ಯಗಳೆರಡನ್ನೂ ಸೋಲಿಸಿದನು. ನಂತರ ಅವನು ಕಾವೇರೀ ಬಯಲಿಗೆ ಬಂದನು. ಅಲ್ಲಿ ಅವನು ಪಾಂಡ್ಯರ ಸೈನ್ಯದ ಮೇಲೆ ಧಾಳಿಯನ್ನು ಮಾಡಿದನು. ಶ್ರೀರಂಗಂನ ಬಳಿ ಅವರನ್ನು ಸೋಲಿಸಿದನು. ಈ ಯುದ್ಧದ ಕಾಲದಲ್ಲಿ ಮಲ್ಲೆಯನಾಯಕ ಎಂಬುವವನೊಬ್ಬನು ಪಾಂಡ್ಯರೊಡನೆ ಹೋರಾಡುವಾಗ ಅವರನ್ನು ಸೋಲಿಸಲು ಮತ್ತು ಅವರನ್ನು ಅಲ್ಲಿಂದ ಓಡಿ ಹೋಗುವಂತೆ ಮಾಡುವಾಗ ಬಹಳ ಶೌರ್ಯವನ್ನು ತೋರಿಸಿದನು. ಈ ಎಲ್ಲಾ ಧಾಳಿಗಳಿಂದ ಪ್ರತಾಪ ನರಸಿಂಹನು ರಾಜರಾಜನನ್ನು ಅವನ ಸಾಮಂತರಿಂದ ಬಂದ ಕಷ್ಟಗಳಿಂದ ರಕ್ಷಿಸಿದನು. ಹೀಗಾಗಿ ಎರಡನೆಯ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ತಮಿಳುದೇಶದ ಮೇಲೆ ಹೊಯ್ಸಳ ಮೇಲ್ಮೆಯನ್ನು ಸ್ಥಾಪಿಸಿದ ಕೀರ್ತಿಯು ಪ್ರತಾಪ ನರಸಿಂಹನದಾಯಿತು. ಅವನು “ಚೋಳ ಪ್ರತಿಷ್ಟಾಪನಚಾರ್ಯ”, “ಆದಿಯಮಕಾರಘಟ್ಟ” ಮತ್ತು “ಮಗರ ರಾಜ್ಯ ದಿಸಾಪಟ್ಟ”ಎಂಬ ಬಿರುದುಗಳನ್ನು ಪಡೆದನು.[53] ನರಸಿಂಹನು ಹಿಂತಿರುಗಿದ ಕೇಡಲೇ ಅವನಿಗೆ ಹೊಯ್ಸಳ ರಾಜಧಾನಿಯಲ್ಲಿ ‘ವಿಜಯಭಿಷೇಕ’ವನ್ನು ಆಚರಿಸಲಾಯಿತು. ಈ ಎಲ್ಲ ಸಾಧನೆಗಳ ನಂತರ ಎರೆಡನೆಯ  ವೀರಬಲ್ಲಾಳನು “ಮಗರ ರಾಜ್ಯ ನಿರ್ಮೂಲನ”,[54] “ಪಾಂಡ್ಯ ರಾಜ್ಯ ಕೇಸರಿ” ಮತ್ತು “ರಾಜರಾಜ ಪ್ರತಿಷ್ಠಾಪನಾಚಾರ್ಯ” ಎಂಬ ಬಿರುದುಗಳನ್ನು ಪಡೆದನು. ಈ ಸಮಯದಲ್ಲಿದ್ದ ಪ್ರಸಿದ್ಧ ಕವಿಯಾದ ರುದ್ರಭಟ್ಟನು “ಜಗನ್ನಾಥ ವಿಜಯ”ವನ್ನು ಬರೆದನು. ಈ ಕೃತಿಯಲ್ಲಿ ಅವನು ತಮಿಳುದೇಶದ ಮೇಲಿನ ಹೊಯ್ಸಳರ ಸಾಧನೆಗಳನ್ನು ಮತ್ತು ಎರಡನೆಯ ಬಲ್ಲಾಳನು ಪಡೆದ “ರಾಜರಾಜ ಪ್ರತಿಷ್ಠಾಪನಾಚಾರ್ಯ”[55] ಎಂಬ ಉಪಾಧಿಯ ಬಗ್ಗೆಯೂ ಉಲ್ಲೇಖಿಸಿದ್ದಾನೆ. ಈ ಮೇಲಿನ ವಿವರಣೆಗಳಿಂದ ವೀರಬಲ್ಲಾಳನ ನೇತೃತ್ವದಲ್ಲಿ ಹೊಯ್ಸಳ ಸೇನೆಯು ತಮಿಳುದೇಶಕ್ಕೆ ತೆರಳಿ ಪಾಂಡ್ಯರನ್ನು ಸೋಲಿಸಲು ಚೋಳ ರಾಜರಿಗೆ ಸಹಾಯವನ್ನು ಮಾಡಿತು.[56] ಅಲ್ಲಿ ಚೋಳರ ಆಧಿಪತ್ಯವನ್ನು ಪುನಹ ಸ್ಥಾಪಿಸಿದ ನಂತರ ಹೊಯ್ಸಳ ಸೈನ್ಯವು ಕಾಂಚಿ ಮತ್ತು ಶ್ರೀರಂಗಂನವರೆಗೆ ಬಂದಿತು. ವೀರಬಲ್ಲಾಳನ ಉತ್ತರಾಧಿಕಾರಿಗಳು ಇದೇ ನೀತಿಯನ್ನು ಮುಂದುವರೆಸಿ ತಮಿಳುದೇಶದಲ್ಲಿ ಅವರ ಅಧಿಕಾರವನ್ನು ಗಟ್ಟಿಯಾಗಿಸಿದರು.

## ಎರಡನೆಯ ನರಸಿಂಹ ಮತ್ತು ತಮಿಳುದೇಶ

ಕ್ರಿ.ಶ.1220 ರಿಂದ ಕ್ರಿ.ಶ.1245ರವರೆಗೆ ಹೊಯ್ಸಳರ ಪ್ರಭಾವವು ಹೆಚ್ಚುತ್ತಲೇ ಹೋಯಿತು. ಎರಡನೆಯ ನರಸಿಂಹನು ಪಟ್ಟಕ್ಕೆ ಬರುತ್ತಲೇ ತಮಿಳುದೇಶದ ವ್ಯವಹಾರಗಳಲ್ಲಿ ಕೈ ಹಾಕಬೇಕಾಯಿತು. ಕುಲೋತ್ತುಂಗನ ವಾರಸುದಾರನಾದ ಮೂರನೆಯ ರಾಜರಾಜ ಚೋಳನು ದುರ್ಬಲನಾದ್ದರಿಂದ ಚೋಳರ ಶಕ್ತಿಯು ಕುಗ್ಗಿತು. ಚೋಳರ ಸಾಮಂತನಾದ ಕಡವರ ಮುಖ್ಯಸ್ಥನಾದ ಕೊಪ್ಪೆರುಂಜಿಗನು ಅವರ ಅಧಿಕಾರವನ್ನು ಧಿಕ್ಕರಿಸಿ ಅವರ ಶತೃಗಳಾದ ಪಾಂಡ್ಯರ ರಾಜ ಮಾರವರ್ಮನ್ ಸುಂದರಪಾಂಡ್ಯನ ಜೊತೆ ಕೈಗೂಡಿಸಿದನು. ತೆಳ್ಳಾರುವಿನಲ್ಲಿ ನಡೆದ ಕದನದಲ್ಲಿ ಮೂರನೆಯ ರಾಜರಾಜನನ್ನು ಸೋಲಿಸಿ ಅವನನ್ನು ಕಡವ ಮುಖ್ಯಸ್ಥನು ಖೈದಿಯನ್ನಾಗಿ ಮಾಡಿ ಸೆರೆ ಹಿಡಿದನು. ಈ ಸಂದರ್ಭದಲ್ಲಿ ಎರಡನೆಯ ಬಲ್ಲಾಳನ ಮಗ ಎರಡನೆಯ ನರಸಿಂಹನು ಚೋಳದೊರೆಯ ಸಹಾಯಕ್ಕಾಗಿ ಬಂದನು. ಸುಂದರಪಾಂಡ್ಯನು ಸೋತು ಹೊರದಬ್ಬಲ್ಪಟ್ಟನು. ಚೋಳದೊರೆಯನ್ನು ಬಂಧನದಿಂದ ಬಿಡಿಸಲ್ಪಟ್ಟು ಮತ್ತೆ ಅಧಿಕಾರಕ್ಕೆ ಬಂದನು. ನರಸಿಂಹನು ರಾಮೇಶ್ವರದವರೆಗೆ ಹೋಗಿ ಅಲ್ಲಿ ಒಂದು ವಿಜಯ ಸ್ಥಂಭವನ್ನು ಸ್ಥಾಪಿಸಿದನು. ಹೊಯ್ಸಳನು ಅಲ್ಲಿಂದ ಅಪರವಾದ ಕೊಳ್ಳೆಯನ್ನು ಹೊಡೆದು ದೋರಸಮುದ್ರಕ್ಕೆ ಹಿಂತಿರುಗಿದನು.

ಒಂದು ಸಣ್ಣ ತುಕಡಿಯನ್ನು ಅಲ್ಲಿ ಇರಿಸಿದರೂ ರಾಜರಾಜನ ಸ್ಥಿತಿಯು ಸುಭದ್ರ–ವಾಗೇನೂ ಇರಲಿಲ್ಲ. ಕಾದವ ಮತ್ತು ಬಾಣರು ಚೋಳರ ವಿರುದ್ಧ ತಮ್ಮ ಕಾರ್ಯಾಚರಣೆ–ಯನ್ನು ಮುಂದುವರೆಸಿದರು. ಪಾಂಡ್ಯರ ದೊರೆ ಮಾರವರ್ಮನ್ ಸುಂದರ ಪಾಂಡ್ಯನು ಮಾಗರ ಮತ್ತು ಕಾಡವರ ಸಾಮಂತರ ಸ್ನೇಹ ಮತ್ತು ತೆಲುಗು ಚೋಳ ಮುಖ್ಯಸ್ಥ ತಿಕ್ಕ ಗಂಡ ಗೋಪಾಲಂನ ಕ್ರಿ.ಶ.1228[57]ರಲ್ಲಿ ಸಹಾನುಭೂತಿಯನ್ನು ಗಳಿಸಿದನು. ಅವರು ಚೋಳ ರಾಜನನ್ನು ಎದುರಿಸಿದರು ಮತ್ತು ಅವನು ಎರಡನೆಯ ಬಾರಿಗೆ ಕ್ಷೇಮಕ್ಕಾಗಿ ಓಡಿಹೋದನು. ಚೋಳ ದೊರೆಯು ಮತ್ತೆ ವೃದ್ಧಾಚಲಂನಿಂದ ಹದಿಮೂರು ಮೈಲು ದೂರವಿರುವ ಸೆಂಡಮಂಗಳಮ್‌ನ ಬಳಿ ಸೆರೆ ಕಾಡವ ಮುಖ್ಯಸ್ಥನಿಂದ ಹಿಡಿಯಲ್ಪಟ್ಟನು. ಈ ಘಟನೆಯನ್ನು "ಗದ್ಯಕರ್ಣಾಮೃತ" ವೆಂದು ವರ್ಣಿಸಲಾಗಿದೆ. ಕೆಲವು ಶಾಸನಗಳು ಸಹ ಇದನ್ನು ವರ್ಣಿಸಿವೆ.

ನರಸಿಂಹನು ಪುನಹ ಇವನ ಸಹಾಯಕ್ಕಾಗಿ ಬಂದನು. ಅವನು ಮೊದಲು ಮಾಗರ ರಾಜ್ಯವನ್ನು ಆಕ್ರಮಿಸಿ ರಾಜನನ್ನು ಸೆರೆ ಹಿಡಿದನು. ಅನಂತರ ಅವನು ದೂರದ ಕಣ್ಣಾನೂರಿಗೆ ಹೋದನು. ಅವನು ತನ್ನ ಸೈನ್ಯಾಧಿಕಾರಿಗಳನ್ನು ಚೋಳರ ಸಹಾಯಕ್ಕಾಗಿ ಕಾಡವರ ವಿರುದ್ಧ

ಕಳುಹಿಸಿದನು. ನರಸಿಂಹನ ಸೈನ್ಯಾಧಿಕಾರಿಗಳಾದ ಅಪ್ಪಯ್ಯ ಮತ್ತು ಗೋಪಣ್ಣರು ಕೊಪ್ಪೇರುಂಜಿಗನೊಡನೆ ಹೋರಾಡಿ ಅವನನ್ನು ಸೋಲಿಸಿದರು. ಸೋತ ಅವನು ಚೋಳ ದೊರೆಯನ್ನು ತಕ್ಷಣವೇ ಬಿಡುಗಡೆ ಮಾಡಲು ಒಪ್ಪಿದನು. ಹೊಯ್ಸಳ ಸೈನ್ಯಾಧಿಕಾರಿಗಳು ಚೋಳ ದೊರೆಯೊಡನೆ ಅವನ ರಾಜಧಾನಿಗೆ ಬಂದರು. ಈ ಹೊಯ್ಸಳರ ಸಾಧನೆಯನ್ನು ನೆನಪಿಸಿಕೊಳ್ಳುವಂತೆ ಒಂದು ಶಾಸನವನ್ನು ತಿರುವೆಂಡಿಪುರಂನಲ್ಲಿ ಬರೆದನು ಮತ್ತು ಆ ಸೈನ್ಯಾಧಿಕಾರಿಗಳಿಗೆ ಅಮೂಲ್ಯವಾದ ಕಾಣಿಕೆಗಳನ್ನು ನೀಡಿದನು. ಹೊಯ್ಸಳ ಸೈನ್ಯಾಧಿ–ಕಾರಿಗಳೂ ಸಹ ಕಂಚಿಯ ಅಲ್ಲನಾಥ ದೇವಾಲಯಕ್ಕೆ ಸ್ವಲ್ಪ ಭೂಮಿಯನ್ನು ದಾನವಾಗಿ ನೀಡಿದರು.

ಅದೇ ಸಮಯದಲ್ಲಿ ಪಾಂಡ್ಯ, ಬಾಣ ಮತ್ತು ಕಡವರ ಸಂಯುಕ್ತವಾದ ಬಲವನ್ನು ನರಸಿಂಹನು ಎದುರಿಸಿದನು. 'ಗದ್ಯಕರ್ಣಾಮೃತ'ದಲ್ಲಿ ಮೆಕ್ಕ ಮತ್ತು ಪಾಂಡ್ಯರಮತ್ತು ಅವರ ಮಿತ್ರರ ಕಡೆಯಿಂದ ಹೋರಾಡಿದ ವಿದೇಶೀ ಸೈನಿಕರ ಬಗ್ಗೆ ಉಲ್ಲೇಖವಿದೆ. ಬಹುಶಃ ಮೆಕ್ಕ ಎಂದರೆ ಮುಸ್ಲಿಮರ ಮತ್ತು ವಿದೇಶೀ ಸೈನಿಕರೆಂದರೆ ಚೀನೀಯರು ಮತ್ತಿತರ ವಿದೇಶಿಗರಿರ ಬೇಕು. ನರಸಿಂಹನು ಪಾಂಡ್ಯರು ಮತ್ತು ಅವರ ಬಳಗವನ್ನು ಸುಲಭವಾಗಿ ಸೋಲಿಸಿದನು. ಈ ಮಹಾವಿಜಯದ ನಂತರ ಅವನು ದೂರದ ಸೇತುವರೆಗೆ ಹೋಗಿ ಅಲ್ಲಿ ಒಂದು ವಿಜಯ ಸ್ತಂಭವನ್ನು ಸ್ಥಾಪಿಸಿದನು. ಅವನು ತಮಿಳುದೇಶದಲ್ಲಿ ಕೆಲವು ಕಾಲ ತಂಗಿದ್ದು ಆ ಪ್ರದೇಶದಲ್ಲಿನ ಆಡಳಿತದ ಸುಧಾರಣೆಯನ್ನು ಮಾಡಲು ಕ್ರಮವನ್ನು ಕೈಗೊಂಡನು.

ಚೋಳ ದೊರೆಗಳಿಗೆ ಸಹಾಯ ಮಾಡಿದುದರ ಕಾರಣವಾಗಿ ಅವರಿಗೆ ಹೇರಳವಾಗಿ ಕೊಡುಗೆಗಳನ್ನು ನೀಡಿದನು. ಮೂರನೆಯ ರಾಜರಾಜನಿಂದ ನರಸಿಂಹನು ಶ್ರೀರಂಗಂನ ಸುತ್ತ ಅಪರವಾದ ಭೂಮಿಯನ್ನು ಪಡೆದನು. ಶ್ರೀರಂಗಂನ ಸಮೀಪವಿರುವ ಕಣ್ಣಾನೂರು ಅಂದರೆ ವಿಕ್ರಮಪುರವು ಹೊಯ್ಸಳರ ಮುಖ್ಯ ಕೇಂದ್ರವಾಯಿತು. ಅಲ್ಲಿ ಅವರ ಸೈನ್ಯವನ್ನು ಸ್ಥಾಪಿಸಿದನು.

**ವೀರ ಸೋಮೇಶ್ವರ ಮತ್ತು ತಮಿಳುದೇಶ**

ಹೊಯ್ಸಳರ ಅತಿಯಾದ ಆಸೆಯು ಅವರ ತಮಿಳುದೇಶದ ಮೇಲಿನ ಆಕ್ರಮಣವು ಸೂಚಿಸುತ್ತದೆ ಎಂದು ಡೆರ್ರೆಟ್‌ರವರು ಬಲವಾಗಿ ಪ್ರತಿಪಾದಿಸಿದ್ದಾರೆ. ಈ ಅಭಿಪ್ರಾಯವನ್ನು ಖಚಿತಪಡಿಸುವಂತೆ ಅವನು ಸೋಮೇಶ್ವರನ ದುರಾದೃಷ್ಟವು ಅವನು ತಮಿಳುನಾಡುನಲ್ಲಿ ಮುಳುಗಿದದ್ದು. ಸುರೇಂದ್ರರಾವ್‌ರ ಅಭಿಪ್ರಾಯದಂತೆ ಸೋಮೇಶ್ವರನು ತಮಿಳುನಾಡಿನ ವ್ಯವಹಾರದಲ್ಲಿ ಮುಳುಗಿದುದು ಅನುವಂಶಿಕವಾದ ಬದ್ಧತೆಯಾಗಿತ್ತು.

## ವೀರ ಸೋಮೇಶ್ವರನ ಮುಖ್ಯಸ್ಥಳವಾಗಿ ಕಣ್ಣಾನೂರು

ವೀರ ಸೋಮೇಶ್ವರನು ಎರಡನೆಯ ನರಸಿಂಹ ಮತ್ತು ಅವನ ರಾಣಿ ಕಾಳಲಾದೇವಿಯ ಮಗನಾಗಿದ್ದನು. ಅವನ ತಾಯಿ ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದ್ದರಿಂದ ಅವನು ತನ್ನ ಅತ್ತೆಯಾದ ಸೋವಲಾದೇವಿಯ ತೊಡೆಯ ಮೇಲೆ ಬೆಳೆದನು. ಸೋವಲಾದೇವಿಯನ್ನು ಮೂರನೆಯ ರಾಜರಾಜನಿಗೆ ಕೊಟ್ಟು ವಿವಾಹವನ್ನು ಮಾಡಿದ್ದರು. ಅವನು ತನ್ನ ಬಾಲ್ಯದಿಂದಲೇ ತಮಿಳುನಾಡಿನ ವ್ಯವಹಾರಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದನು. ಅವನ ತಂದೆಯೂ ತಮಿಳುದೇಶದ ವ್ಯವಹಾರದಲ್ಲಿ ತೊಡಗಿದ್ದನು. ಚೋಳ ಸಾಮ್ರಾಜ್ಯವು ದುರ್ಬಲವಾಗಿತ್ತು. ಸಾಮಂತ ರಾಜರು ಚೋಳರನ್ನು ಹೊರಹಾಕುವುದಕ್ಕೆ ಪ್ರಯತ್ನವನ್ನು ಪಡುತ್ತಿದ್ದರು. ವಿಶೇಷವಾಗಿ ಒಮ್ಮೆ ಸಾಮಂತರಾದ ಪಾಂಡ್ಯರು ಚೋಳರ ಮೇಲೆ ಆಕ್ರಮಣವನ್ನು ಮಾಡಿದರು. ಎರಡನೆಯ ನರಸಿಂಹನು ಚೋಳರಿಗೆ ಸಹಾಯವನ್ನು ಮಾಡಲು ತನ್ನ ಮಗನಾದ ವೀರ ಸೋಮೇಶ್ವರನನ್ನು ನೇಮಿಸಿದನು. ಅವನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1228[58]ರಷ್ಟು ಮುಂಚೆಯೇ ಅವನನ್ನು ತನ್ನ ತಂದೆಯ ಪ್ರತಿನಿಧಿಯಾಗಿ ತಮಿಳುದೇಶಕ್ಕೆ ನೇಮಿಸಲ್ಪಟ್ಟನು ಮತ್ತು ಮೂರನೆಯ ರಾಜರಾಜನ ಶತೃಗಳ ವಿರುದ್ಧದ ಹೋರಾಟಗಳಲ್ಲಿ ಭಾಗವಹಿಸಿದನು. ಶ್ರೀರಂಗಂನ ಹತ್ತಿರವಿರುವ ಕಣ್ಣಾನೂರು ಸೋಮೇಶ್ವರನ ಕೇಂದ್ರ ಕಾರ್ಯಸ್ಥಾನವಾಗಿತ್ತು. ಕ್ರಿ.ಶ.1233ರಲ್ಲಿ ಅವನು ತನ್ನ ತಂದೆಯ ಸಹರಾಜ್ಯಪಾಲನಾಗಿ ನೇಮಿಸಲ್ಪಟ್ಟನು. ಕ್ರಿ.ಶ.1229ರ ಬದನಾಳುವಿನ ಮಹಾಲಿಂಗೇಶ್ವರ ದೇವಾಲಯದ ಒಂದು ಶಾಸನವು ಸೋಮೇಶ್ವರನು ತಮಿಳುನಾಡಿನ ಕಣ್ಣಾನೂರಿನಲ್ಲಿ ತಂಗಿದ್ದನೆಂದು ಉಲ್ಲೇಖಿಸುತ್ತದೆ. ಕ್ರಿ.ಶ.1237[59]ರ ಗೋವಿಂದನಹಳ್ಳಿಯ ಒಂದು ಶಾಸನದಂತೆ ಸೋಮೇಶ್ವರನು ತನ್ನ ಚಿಕ್ಕ ವಯಸ್ಸಿನಲ್ಲೇ ಶತೃಗಳ ತಲೆಬುರುಡೆಯೊಂದಿಗೆ ಆನಂದದಿಂದ ಆಟವಾಡುತ್ತಿದ್ದನೆಂದು ಉಲ್ಲೇಖವಿದೆ. ಕಣ್ಣಾನೂರನ್ನು ಸೋಮೇಶ್ವರನು ತನ್ನ ಸಂತೋಷಕ್ಕಾಗಿ ನಿರ್ಮಿಸಿದನೆಂದೂ ಅದಕ್ಕೆ ಅವನ ಬಿರುದಿನಂತೆ ವಿಕ್ರಮಪುರ ಅಥವಾ ವಿಕ್ರಮ ರಾಜೇಂದ್ರಪುರ ಎಂದು ಹೆಸರಿತ್ತು. ಸೋಮೇಶ್ವರನ ಆಳ್ವಿಕೆ ಕಾಲದಲ್ಲಿ ಹೊಯ್ಸಳರ ಚಟುವಟಿಕೆಗಳು ದೋರಸಮುದ್ರದಿಂದ ಕಣ್ಣಾನೂರಿಗೆ ಬದಲಾಯಿಸಲ್ಪಟ್ಟಿತ್ತು. ಅವನು ದೋರಸಮುದ್ರಕ್ಕೆ ಮತ್ತೆಮತ್ತೆ ಭೇಟಿ ಕೊಡುತ್ತಿದ್ದನು.

## ತನ್ನ ತಂದೆಯನೀತ್ಯ ಮುಂದುವರಿಕೆ

ಅವನು ತನ್ನ ಸಹರಾಜ್ಯಪಾಲನಾಗಿದ್ದಾಗ ಮೂರನೆಯ ರಾಜರಾಜನಿಗೆ ದುಷ್ಟ ಕಾಡವರಿಂದ ರಕ್ಷಿಸಿ ಅವನಿಗೆ ಹೊಸ ಬದುಕನ್ನು ಕೊಟ್ಟನು ಮತ್ತು ಅವನಿಗೆ "ಚೋಳ ರಾಜ್ಯದ ಸಂಸ್ಥಾಪಕ" ಎಂಬ ಬಿರುದನ್ನು ಕೊಟ್ಟುಕೊಂಡನಲ್ಲದೆ ಹೊಯ್ಸಳರ ರಾಜಕೀಯ ಪ್ರಭಾವವನ್ನು

ತಮಿಳುದೇಶದಲ್ಲಿ ಬೆಳೆಸಿದನು. ಅವನು ಪಟ್ಟಕ್ಕೆ ಬಂದಕೂಡಲೇ ಅವನು ತಮಿಳುದೇಶದ ವ್ಯವಹಾರಗಳಲ್ಲಿ ತಲೆ ಹಾಕಬೇಕಾಯಿತು. ಚೋಳ ದೊರೆ ಮೂರನೆಯ ರಾಜರಾಜಚೋಳ, ಮಾರವರ್ಮನ್ ಸುಂದರಪಾಂಡ್ಯ, ಮತ್ತು ಅವನ ಮರಣದ ನಂತರ ಅವನ ಮಗ ಜಾತವರ್ಮನ್ ಸುಂದರಪಾಂಡ್ಯ, ತೆಲುಗು ಮುಖ್ಯಸ್ಥ ಗಂಡಾಗೋಪಾಲ ಇವರುಗಳು ತಮಿಳುದೇಶದಲ್ಲಿ ವೀರಸೋಮೇಶ್ವರನ ಸಮಕಾಲೀನರಾಗಿದ್ದರು. ಅವನ ರಾಜ್ಯದ ಸೇವುಣ ದೊರೆ ಕೃಷ್ಣ ಕಂಧರನು ಅವನ ಸಮಕಾಲೀನನಾಗಿದ್ದನು. ವೀರ ಸೋಮೇಶ್ವರನು ಮೂರನೆಯ ರಾಜರಾಜಚೋಳ ಮತ್ತು ಮಾರವರ್ಮನ್ ಸುಂದರಪಾಂಡ್ಯನನ್ನು ಬಿಟ್ಟು ಇನ್ನುಳಿದ ಎಲ್ಲ ಸಮಕಾಲೀನ ರಾಜರುಗಳೊಡನೆ ಸಂಘರ್ಷವನ್ನು ಹೊಂದಿದ್ದನು.

ಸೋಮೇಶ್ವರನು ತನ್ನ ತಂದೆಯಂತೆಯೇ ಚೋಳರಿಗೆ ತನ್ನ ಬೆಂಬಲ ಕೊಡುವುದನ್ನು ಮುಂದುವರೆಸಿದನು. ಪಟ್ಟಾಭಿಷೇಕವಾದ ಕೂಡಲೇ ಅವನು ಕಡವ ಕೊಪ್ಪರುಂಜಿಗನೊಡನೆ ಕ್ರಿ.ಶ.1237ರಲ್ಲಿ ಯುದ್ಧವನ್ನು ಮಾಡಬೇಕಾಯಿತು ಅವನನ್ನು ಮಂಗಳದಕಪ್ಪ ಎಂಬ ಸ್ಥಳದಲ್ಲಿ ಸೋಲಿಸಿದನು. ಕ್ರಿ.ಶ.1240[60]ರಲ್ಲಿ ಸೋಮೇಶ್ವರನು ತೆಲುಗುಚೋಡ ಚಿಕ್ಕಗಂಡಾ ಗೋಪಾಲನೊಡನೆ ಯುದ್ಧವನ್ನು ಮಾಡಬೇಕಾಯಿತು. ತೆಲುಗು ಕವಿ ಚಿಕ್ಕಣ್ಣ ಸೋಮಯಾಜಿಯು ತನ್ನ 'ನಿರ್ವಚನೋತ್ತರ ರಾಮಾಯಣಮು' ಎಂಬ ಕಾವ್ಯದ ಪ್ರಾರಂಭಿಕ ಪದ್ಯಗಳಲ್ಲಿ ತನ್ನನು ತಾನು 'ಚೋಳ ಸಂರಕ್ಷಕ' ಎಂದು ವರ್ಣಿಸಿಕೊಂಡಿದ್ದಾನೆ. ಅವನು ಕರ್ನಾಟಕದ ಪಳಗಿಸದ ಬಾಹುಗಳ ಉದ್ಧಟತನವನ್ನು ಹಾಳುಗೆಡವಿದ ಕಾರಣದಿಂದ ಈ ಬಿರುದು ಎಂದು ಹೇಳಿಕೊಂಡಿದ್ದಾನೆ. ನಿಸ್ಸಂದೇಹವಾಗಿ ಗಂಡಗೋಪಾಲನು ಕಾಡವರನ್ನು ಸೋಲಿಸಿ ಮೂರನೆಯ ರಾಜೇಂದ್ರ ಚೋಳನಿಗೆ ಹೊಯ್ಸಳರ ಬಂಧನದಿಂದ ಹೊರಬಂದು ಸ್ವಾತಂತ್ರವನ್ನು ಪಡೆಯಲು ಉತ್ತೇಜನವನ್ನು ನೀಡಿದನು. ಕ್ರಿ.ಶ.1227[61]ರಿಂದಲೇ ಮೂರನೆಯ ರಾಜೇಂದ್ರ ಇಂತಹ ಆಲೋಚನೆಯನ್ನು ಮಾಡುತ್ತಿದ್ದನು. ಗಂಡಗೋಪಾಲನು ಕಾಡವರನ್ನು ಸೋಲಿಸಿದ್ದರಿಂದ ಇದು ಸೋಮೇಶ್ವರನನ್ನು ದಕ್ಷಿಣದಲ್ಲಿ ಇರುವಿಕೆಯನ್ನು ದುರ್ಬಲಗೊಳಿಸಿತು ಮತ್ತು ಮೂರನೆಯ ರಾಜರಾಜ ಚೋಳ ಮತ್ತು ಅವನ ಸಹರಾಜ್ಯಪಾಲ ರಾಜೇಂದ್ರ ಚೋಳ ಹೊಯ್ಸಳರ ಪ್ರಭಾವವನ್ನು ಕಡಿಮೆ ಮಾಡಿದರು ಎಂದು ಹೇಳಲಾಗುತ್ತಿದೆ. ಕ್ರಿ.ಶ.1237ರ ವೇಳೆಗೆ ಮೂರನೆಯ ರಾಜರಾಜನ ಸಹ ರಾಜ್ಯಪಾಲನಾಗಿ ರಾಜೇಂದ್ರ ಚೋಳನು ಸ್ವಾತಂತ್ರವನ್ನು ಗಳಿಸಿಕೊಳ್ಳುವ ಒಂದು ವ್ಯರ್ಥಪ್ರಯತ್ನವನ್ನು ಮಾಡಿದನು; ಹಾರನಹಳ್ಳಿಯ ಸೋಮೇಶ್ವರ ದೇವಾಲಯದಲ್ಲಿರುವ ಒಂದು ಶಾಸನದಂತೆ ಸೋಮೇಶ್ವರನು ರಾಜೇಂದ್ರ ಚೋಳನನ್ನು ರಣರಂಗದಲ್ಲಿ ಸೋಲಿಸಿದನು ಮತ್ತು ಅವನು ಶರಣಾಗತನಾದಾಗ ಅವನನ್ನು ರಕ್ಷಿಸಿದನು.

ಆದ್ದರಿಂದ ಮೂರನೆಯ ರಾಜೇಂದ್ರ ಚೋಳನು ಮಹತ್ವಾಕಾಂಕ್ಷಿಯಾಗಿದ್ದು ತನ್ನ ರಾಜ್ಯವನ್ನು ಮತ್ತು ತನ್ನನ್ನು ವಿದೇಶೀಯರ ಹೆಗಲಿನಿಂದ ಬಿಡಿಸಿಕೊಳ್ಳಲು ಆಲೋಚಿಸುತ್ತಿದ್ದನು. ಆದರೆ ಅವನು ಒಂದು ಬಾರಿ ಸೋಲಿಸಲ್ಪಟ್ಟಿದನು ಅನಿವಾರ್ಯವಾಗಿ ತಲೆಬಾಗಿಸಿ ಸೋಮೇಶ್ವರ-ನೊಡನೆ ಸ್ನೇಹವನು ಬೆಳೆಸಬೇಕಾಯಿತು. ಕ್ರಿ.ಶ.1240ರ ಕಡೂರಿನ ಒಂದು ದಾಖಲೆಯ ಪ್ರಕಾರ ಅವನು ಗಂಡಗೋಪಾಲ ಮತ್ತು ಮೂರನೆಯ ರಾಜೇಂದ್ರನ ವಿರುದ್ಧ ಸೈನ್ಯವನ್ನು ನಡೆಸುತ್ತಿದ್ದನು; ರಾಜೇಂದ್ರನ ಪ್ರಕಾರ ತನ್ನ ಒಂದು ಶಾಸನದಲ್ಲಿ ತನ್ನ ಚಿಕ್ಕಪ್ಪ ಸೋಮೇಶ್ವರ-ನೊಂದಿಗೆ ಕ್ಷಮೆ ಬೇಡಿದನು ಎಂದು ದಾಖಲಿಸಿದೆ. ಆದರೆ ಸೋಮೇಶ್ವರನು ರಾಜೇಂದ್ರನನ್ನು ಸೋಲಿಸಿದಾಗ ಅವನು ಶರಣಾಗತನಾಗಿದ್ದು ಅವನನ್ನು ರಕ್ಷಿಸಿದನು ಎಂದು ಹೇಳಿಕೊಂಡಿದ್ದಾನೆ.

ಈ ರೀತಿಯಲ್ಲಿ ಹೊಯ್ಸಳರು ತಮ್ಮ ಪ್ರಭಾವವನ್ನು ತಮಿಳುನಾಡಿನಲ್ಲಿ ಹಾಕುವುದನ್ನು ಮುಂದುವರಿಸುತ್ತಲೇ ಹೋದರು. ಕ್ರಿ.ಶ.1240ರ ಒಂದು ಶಾಸನವು ಶ್ರೀವೈಷ್ಣವರಿಗೆ ನೀಡಿದ ಒಂದು ದತ್ತಿಯ ಬಗ್ಗೆ ಉಲ್ಲೇಖಿಸುತ್ತದೆ. ಅದು ಮುಂದೆ ಮುಡಿಕೊಂಡಚೋಳಪುರಂನ ಬಗ್ಗೆಯೂ ಉಲ್ಲೇಖಿಸುತ್ತದೆ. ಇದು ಹೊಯ್ಸಳರ ಪ್ರಭಾವವು ತಮಿಳುದೇಶದಲ್ಲಿ ಮುಂದುವರೆ-ದಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಮುಂದೆ ರಾಜೇಂದ್ರ ಚೋಳನ ತನ್ನ ಆಳ್ವಿಕೆಯ ನಾಲ್ಕನೆಯ ವರ್ಷ (ಕ್ರಿ.ಶ.1250) ಮತ್ತು ಇನ್ನೊಂದು (ಕ್ರಿ.ಶ.1251) ಅಂದರೆ ಆಳ್ವಿಕೆಯ ಐದನೆಯ ವರ್ಷದ ಶಾಸನಗಳು ಹೊಯ್ಸಳರ ಅಧಿಕಾರಿಗಳ ಬಗ್ಗೆ ಇದೆ. ಇದು ಚೋಳ ಸಾಮ್ರಾಜ್ಯದಲ್ಲಿ ಹೊಯ್ಸಳರ ಹೆಚ್ಚುಗಾರಿಕೆಯನ್ನು ಸೂಚಿಸುವುದಾಗಿದೆ.

### ಪಾಂಡ್ಯರೊಡನೆ ಒಪ್ಪಂದ

ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳರ ಮತ್ತು ಪಾಂಡ್ಯರ ನಡುವಿನ ಸಂಬಂಧವು ಅಮೂಲಾಗ್ರವಾಗಿ ಬದಲಾವಣೆಯನ್ನು ಹೊಂದಿತು. ಪ್ರಾರಂಭದಲ್ಲಿ ಪಾಂಡ್ಯರು ಹೊಯ್ಸಳ ವಿರುದ್ಧವಾಗಿ ಬಲವಾಗಿ ಹೋರಾಡಿದರು ಏಕೆಂದರೆ ಹೊಯ್ಸಳರು ಚೋಳರ ಹಿತವನ್ನು ಕಾಪಾಡಿದರು. ಎರಡನೆಯ ವೀರಬಲ್ಲಾಳ ಮತ್ತು ವೀರ ನರಸಿಂಹರು ಮೂರನೆಯ ರಾಜರಾಜಚೋಳನನ್ನು ರಕ್ಷಿಸುವ ಸಲುವಾಗಿ ಹೋರಾಡಿದರು. ಪ್ರಾರಂಭದಲ್ಲಿ ಸೋಮೇಶ್ವರನು "ಪಾಂಡ್ಯ ರಾಜ ಗಜಕೇಸರಿ" ಎಂಬ ಬಿರುದನ್ನು ಅನುಭವಿಸಿದನು. ಸೋಮೇಶ್ವರನು ಅವನನ್ನೇ "ಪಾಂಡ್ಯ ರಾಜ ದಿಸಾಪಟ್ಟ" ಎಂಬ ಬಿರುದಿನೊಂದಿಗೆ ಹೆಮ್ಮೆಪಡುತ್ತಿದ್ದನು. ಆದರೆ ಮೂರನೆಯ ರಾಜೇಂದ್ರನು ಚೋಳ ಸಿಂಹಾಸನಕ್ಕೆ ಬಂದೊಡನೆ ಚೋಳ-ಹೊಯ್ಸಳರ ಸಂಬಂಧದಲ್ಲಿ ಬದಲಾವಣೆಯು ಕಂಡುಬಂದಿತು. ಹೊಯ್ಸಳರು ಮತ್ತು ಚೋಳರು ಬಹಳ ನಿಕಟವಾದರು.

ಇದು ತಿರುಮಯಮ್ ಮತ್ತು ತಿನ್ನವೇಲಿಯ ದಾಖಲೆಗಳಿಂದ ತಿಳಿಯುತ್ತದೆ. 'ಮಾಮಡಿ' ಎಂಬ ಉಪಾಧಿಯು ಸ್ಪಷ್ಟವಾಗಿ ಸೋಮೇಶ್ವರನು ಎರಡನೆಯ ಮಾರವರ್ಮ ಸುಂದರಪಾಂಡ್ಯ–ನೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿದ್ದ ಎಂಬುದನ್ನು ಸೂಚಿಸುತ್ತದೆ. ಎರಡು ದಾಖಲೆಗಳ ಪ್ರಕಾರ ಒಬ್ಬ ಪಮ್ಮುಯಕ್ಕಂಉ ಸೋಮೇಶ್ವರನ ಮಗಳಾಗಿದ್ದಳು ಎಂದು ತಿಳಿಯುತ್ತದೆ; ಅವಳನ್ನು ಎರಡನೆಯ ಸುಂದರಪಾಂಡ್ಯನಿಗೆ ಕೊಟ್ಟು ವಿವಾಹವಾಗಿತ್ತು. ಹೊಯ್ಸಳ, ಚೋಳ ಮತ್ತು ಪಾಂಡ್ಯರ ಮನೆತನದವರೊಡನೆ ವೈವಾಹಿಕ ಸಂಬಂಧಗಳಿತ್ತು ಎಂಬುದು ಗಮನಾರ್ಹ ಸಂಗತಿಯಾಗಿದೆ.

ಪಾಂಡ್ಯರೊಡನೆ ಸೋಮೇಶ್ವರನ ವೈವಾಹಿಕ ಸಂಬಂಧದಿಂದ, ಅಲ್ಲದೇ ಮೂರನೆಯ ರಾಜೇಂದ್ರನ ಮಹತ್ವಾಕಾಂಕ್ಷೆಯಿಂದಲೂ ಒಂದು ಕ್ಲಿಷ್ಟ ಪರಿಸ್ಥಿತಿಯು ಉಂಟಾಗಿ, ಆಗ ಚೋಳ ದೊರೆಯು ಎರಡನೆಯ ಸುಂದರಪಾಂಡ್ಯನ ಮೇಲೆ ಧಾಳಿಯನ್ನು ಮಾಡಿದನು. ಅವನು ತನ್ನ ಕಳೆದುಹೋದ ತನ್ನ ವಂಶದ ಗೌರವವನ್ನು ಮರಳಿ ಪಡೆಯಲು ಅಪೇಕ್ಷಿಸಿದನು. ಒಂದು ಶಾಸನದಂತೆ ಅವನು ತೆಲುಗು ಚೋಳರ ಸಹಾಯವನ್ನು ಪಡೆದು ಪಾಂಡ್ಯರ ಮೇಲೆ ಆಕ್ರಮಣವನ್ನು ಮಾಡಿ ಅದರಲ್ಲಿ ಜಯವನ್ನು ಹೊಂದಿರಬೇಕು ಎಂಬ ಉಲ್ಲೇಖವಿದೆ. ಸೋಮೇಶ್ವರನು ಈ ಸಮಯದಲ್ಲಿ ಮಧ್ಯೆ ಪ್ರವೇಶಿಸಿ ಮೂರನೆಯ ರಾಜೇಂದ್ರನ ವಿರುದ್ಧ ಸುಂದರಪಾಂಡ್ಯನಿಗೆ ಸಹಾಯವನ್ನು ಮಾಡಿದನು. ಹೀಗೆ ಈ ಎರಡೂ ವಂಶಗಳ ವೈವಾಹಿಕ ಸಂಬಂಧವು ರಾಜಕೀಯ ಒಪ್ಪಂದದಿಂದಲೂ ಕೂಡಿತ್ತು. ಕ್ರಿ.ಶ.1246[62] ರ ಒಂದು ಶಾಸನವು ಸೋಮೇಶ್ವರನು 'ಪಾಂಡ್ಯ ರಾಜ ಸಂಸ್ಥಾಪನಾಚಾರ್ಯ' ಎಂಬ ಬಿರುದನ್ನು ಹೊಂದಿದನು ಎಂದು ಉಲ್ಲೇಖಿಸಿದೆ. ಇನ್ನೊಂದು ಶಾಸನವು ಕ್ರಿ.ಶ.1248ರಲ್ಲಿದ್ದು ಅದು ಸೋಮೇಶ್ವರನಿಗೆ ಸಂಬಂಧಿಸಿದ್ದು ಇದು 'ಪಾಂಡ್ಯ ಕುಲ ಸಂರಕ್ಷಕ', "ದಕ್ಷ ದಕ್ಷಿಣ ಭುಜಂ" ಅಥವ "ಪಾಂಡ್ಯರನ್ನು ರಕ್ಷಿಸುವ ಬಲಭುಜ" ಎಂದು ಹೇಳಿದೆ. ಎರಡನೆಯ ಸುಂದರ ಪಾಂಡ್ಯನ ಒಂದು ತಮಿಳು ಶಾಸನವು ವೀರ ಸೋಮೇಶ್ವರನ ಒಬ್ಬ ಮಂತ್ರಿಯಾದ ಅಪ್ಪಣ್ಣ ದಂಡನಾಯಕನು ವೈಷ್ಣವ ಮತ್ತು ಶೈವರ ನಡುವೆ ಇದ್ದ ಒಂದು ವಿವಾದವನ್ನು ಬಗೆಹರಿಸಿದ ಎಂಬ ವಿಷಯವು ಸ್ವಾರಸ್ಯ–ವಾದದ್ದಾಗಿದೆ. ಕ್ರಿ.ಶ.1250 ರವರೆಗೆ ಸೋಮೇಶ್ವರನು ತಮಿಳುದೇಶದಲ್ಲಿ ಮೇಲುಗೈಯನ್ನು ಹೊಂದಿದ್ದನು. ಅವನು ಪಾಂಡ್ಯ ಮತ್ತು ಚೋಳರ ಎರಡೂ ವಂಶಗಳಿಂದ 'ಮಾಮದ್ಗಲಿ' ಎಂಬ ಗೌರವಕ್ಕೆ ಪಾತ್ರನಾಗಿದ್ದನು. ಈ ಚಕ್ರವರ್ತಿಯು ಪಾಂಡ್ಯ ಮತ್ತು ಚೋಳ ಈ ಎರಡೂ ವಂಶಗಳ ಕುಲ ಸಂರಕ್ಷಕನೆಂಬ ಗೌರವಯುತ ಬಿರುದನ್ನು ಹೊಂದಿದ್ದನು. ಚಕ್ರವರ್ತಿ ಸೋಮೇಶ್ವರನಿಗೆ ಎಲ್ಲ ಕಡೆಯೂ ಎಲ್ಲವೂ ಸರಾಗವಾಗಿದೆ ಎಂದು ಕಂಡುಬರುತ್ತಿತ್ತು.

**ತಮಿಳುದೇಶದಲ್ಲಿ ಸೋಮೇಶ್ವರನ ಕೊನೆಯ ದಿನಗಳು**

ಕ್ರಿ.ಶ.1251ರಲ್ಲಿ ಜಾತವರ್ಮನ್ ಸುಂದರ ಪಾಂಡ್ಯನು ಸಿಂಹಾಸನವನ್ನೇರುತ್ತಿದ್ದಂತೆಯೇ ಪಾಂಡ್ಯ, ಚೋಳ ಮತ್ತು ಹೊಯ್ಸಳ ವಂಶಗಳ ಸಂಬಂಧಗಳಲ್ಲಿ ಸಮಸ್ಯೆಯು ತಲೆದೋರಿತು. ಪಾಂಡ್ಯರ ಚರಿತ್ರೆಯಲ್ಲಿ ಅವನ ಸಿಂಹಾಸಾರೋಹಣವು ಒಂದು ಮುಖ್ಯ ಘಟ್ಟವಾಗಿದೆ. ಅವನು ಪಟ್ಟಕ್ಕೆ ಬಂದ ಕೂಡಲೇ ವಿಜಯದ ನೀತಿಯನ್ನು ಪ್ರಾರಂಭಿಸಿದನು. ಅವನು ತಕ್ಷಣವೇ ನೆರೆಯ ಪ್ರಾಂತ್ಯಗಳ ಮೇಲೆ ಧಾಳಿಯನ್ನು ಪ್ರಾರಂಭಿಸಿದನು. ಅವನ ಈ ವಿಸ್ತರಣ ನೀತಿಯಲ್ಲಿ ವೈವಾಹಿಕ ಸಂಬಂಧಗಳು ಅಥವ ರಾಜಕೀಯ ಒಪ್ಪಂದಗಳು ಅಡ್ಡ ಬರಲಿಲ್ಲ. ಶಾಸನಗಳು ಹೇಳುವಂತೆ ಅವನು ಕೇರಳ ವಂಶವನ್ನು ನಾಶ ಮಾಡಿದನು; ಲಂಕವನ್ನು ಎರಡನೆಯ ರಾಮನಂತೆ ಧ್ವಂಸಗೊಳಿಸಿದನು; ಚೋಳರಿಗೆ ಮಿಂಚಿನಂತೆ ಧಾಳಿ ಮಾಡಿ ಸೋಲನ್ನುಣಿಸಿದನು ಮತ್ತು ಕರ್ನಾಟಕದ ದೊರೆಯನ್ನು ಅಲ್ಲಿಂದ ಹೊರಹಾಕಿದನು. ಅವನು ನಿಜವಾಗಿಯೂ ಪಾಂಡ್ಯ ವಂಶದ ಒಬ್ಬ ಮಹಾನ್ ನಾಯಕನಾಗಿದ್ದು ಅನೇಕ ಮುಖ್ಯಸ್ಥರನ್ನು ಶರಣಾಗುವಂತೆ ಮಾಡಿದ. ಹೊಯ್ಸಳರ ಮತ್ತು ಪಾಂಡ್ಯರ ನಡುವೆ ಘರ್ಷಣೆಯು ಪ್ರಾರಂಭವಾಯಿತು. ಕ್ರಿ.ಶ.1256ರ ಒಂದು ದಾಖಲೆಯು ಸುಂದರ ಪಾಂಡ್ಯನು ಹೊಯ್ಸಳರ ಮೇಲೆ ಆಕ್ರಮಣವನ್ನು ಮಾಡಿದನು ಮತ್ತು ಅದರಲ್ಲಿ ಸಿಂಗಣನೂ ಸೇರಿದಂತೆ ಅನೇಕ ಸೇನಾನಾಯಕರುಗಳು ಮಡಿದರು ಎಂದು ದಾಖಲಿಸಿದೆ. ಶ್ರೀರಂಗಂನ ಇನ್ನೊಂದು ದಾಖಲೆಯಂತೆ ಜಾತವರ್ಮನ್ ಸುಂದರ ಪಾಂಡ್ಯನು 'ಕರ್ನಾಟಕದ ಚಂದ್ರನನ್ನು ಇನ್ನೊಂದು ಲೋಕಕ್ಕೆ ಕಳುಹಿಸಿದನು' ಎಂದಿದೆ. ಅವನು ತನ್ನ ಆಳ್ವಿಕೆಯ 29ನೆಯ ವರ್ಷದಲ್ಲಿದ್ದನು(ಅಂದರೆ ಕ್ರಿ.ಶ.1262) ಎಂದು ಹೇಳುವ ಶಾಸನದಂತೆ ಅವನು 1262ರ ವರೆಗೆ ಬದುಕಿದ್ದನು ಎಂದು ಹೇಳಬೇಕಾಗುತ್ತದೆ. ಆದರೆ ಇದು ಕ್ರಿ.ಶ.1257ರ ಇನ್ನೊಂದು ಶಾಸನಕ್ಕೆತಾಳೆಯಾಗುತ್ತಿಲ್ಲ; ಇದು ಕನ್ನಯ್ಯ ನಾಯಕನು ತನ್ನ ಪತ್ನಿಯರು ಮತ್ತು ಸೇವಕರೊಡನೆ 'ಗರುಡ'ವನ್ನು ಸೋಮೇಶ್ವರನಿಗೆ ಕೊಟ್ಟ ಮಾತಿನಂತೆ ಅಪ್ಪಿದರು ಎಂಬುದು ಅಪ್ರತ್ಯಕ್ಷವಾಗಿ ಹೊಯ್ಸಳ ದೊರೆಯ ಸಾವನ್ನು ಸೂಚಿಸುತ್ತದೆ. ಅನೇಕ ತಮಿಳು ದಾಖಲೆಗಳು ಸೋಮೇಶ್ವರನು ಕ್ರಿ.ಶ.1257ರಲ್ಲಿ ಮರಣವನ್ನು ಹೊಂದಿದನು ಎಂಬುದನ್ನು ಖಚಿತಪಡಿಸುತ್ತವೆ. ಹಾಗಾಗಿ 1262ರ ಶಾಸನವನ್ನು ನಿರ್ಲಕ್ಷಿಸಬಹುದು.

**ಹೊಯ್ಸಳ ಸಾಮ್ರಾಜ್ಯದ ವಿಭಜನೆ**

ವೀರ ಸೋಮೇಶ್ವರನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಒಂದು ಬಹು ಮುಖ್ಯ ಘಟನೆಯು ಹೊಯ್ಸಳ ಸಾಮ್ರಾಜ್ಯದಲ್ಲಿ ಜರುಗಿತು. ಸೋಮೇಶ್ವರನು ತನ್ನ ಇಬ್ಬರು ಮಕ್ಕಳಲ್ಲಿ

ಸಾಮ್ರಾಜ್ಯವನ್ನು ವಿಭಜಿಸಿದನು. ವೀರ ಸೋಮೇಶ್ವರನಿಗೆ ಇಬ್ಬರು ರಾಣಿಯರಿದ್ದರು; ಒಬ್ಬಳು ಬಿಜ್ಜಳ ಮಹಾದೇವಿ, ಇನ್ನೊಬ್ಬಳು ದೇವಲ ಮಹಾದೇವಿ. ಸೋಮೇಶ್ವರನು ಇಬ್ಬರು ಗಂಡು ಮಕ್ಕಳನ್ನು ಹೊಂದಿದ್ದನು. ಬಿಜ್ಜಳಾದೇವಿಯಿಂದ ಮೂರನೆಯ ನರಸಿಂಹ, ದೇವಲಾದೇವಿಯಿಂದ ರಾಮನಾಥ. ಅವರು ಸಮವಯಸ್ಕರಾಗಿದ್ದರು. ಆದರೆ ಅವರಲ್ಲಿ ಹೊಂದಾಣಿಕೆ ಇರಲಿಲ್ಲ. ಕ್ರಿ.ಶ.1255[63]ರಿಂದಲೂ ರಾಮನಾಥನು ಅವನ ತಂದೆಗೆ ಕಣ್ಣಾನೂರಿನಿಂದ ಸಹಾಯ ಮಾಡುತ್ತಿದ್ದನು ಮತ್ತು ನರಸಿಂಹನು ದೋರಸಮುದ್ರದಿಂದ ಸಹಾಯ ಮಾಡುತ್ತಿದ್ದನು. ಸೋಮೇಶ್ವರನು ಅವನ ಮಕ್ಕಳ ಸ್ವಭಾವವನ್ನು ಅರಿತುಕೊಂಡಿದ್ದನು ಮತ್ತು ಅವರು ಮುಂದೆ ತನ ಮರಣದ ನಂತರ ಸಿಂಹಾಸನಕ್ಕಾಗಿ ಕಚ್ಚಾಡಬಹುದೆಂದೂ ಅರಿತಿದ್ದನು. ಹಾಗಾಗಿ ಅವನು ತನ್ನ ಸಾಮ್ರಾಜ್ಯವನ್ನು ತನ್ನ ಮಕ್ಕಳಿಗಾಗಿ ವಿಭಜಿಸಿದನು. ಅವನ ಮರಣದ ಮುಂಚಿನಿಂದಲೂ ಅವರು ತಮ್ಮ ವಿಭಾಗದಲ್ಲಿ ಆಧಿಪತ್ಯ ನಡೆಸುತ್ತಿದ್ದರು. ಈ ಮುಂಚೆಯೇ ತಿಳಿಸಿದಂತೆ ಎರಡನೆಯ ನರಸಿಂಹನು ದೋರಸಮುದ್ರದಿಂದ ತನ್ನ ತಂದೆಗೆ ಹೊಯ್ಸಳ ಸಾಮ್ರಾಜ್ಯದ ಕರ್ನಾಟಕ ಪ್ರಾಂತ್ಯದ ಭಾಗದ ಆಡಳಿತದಲ್ಲಿ ಸಹಾಯವನ್ನು ಮಾಡುತ್ತಿದ್ದನು. ಇನ್ನೊಂದು ಕಡೆಯಲ್ಲಿ ರಾಮನಾಥನು ಅವನ ತಂದೆಯ ಪರವಾಗಿ ತಮಿಳು ಪ್ರಾಂತ್ಯದ ಭಾಗದ ಆಡಳಿತವನು ಮಾಡುತ್ತಿದ್ದನು. ಹಾಗಾಗಿ ನಿಜವಾಗಿ ಅವನ ಸಾಮ್ರಾಜ್ಯವು ಅವನ ಮರಣದ ಮುಂಚಿನಿಂದಲೇ ವಿಭಾಗವಾಗಿದ್ದಿತು. ಕ್ರಿ.ಶ.1257ರಲ್ಲಿ ಸೋಮೇಶ್ವರನು ಇಬ್ಬರೂ ತಮ್ಮ ಪ್ರಾಂತ್ಯಗಳಲ್ಲಿ ಸ್ವತಂತ್ರವಾಗಿ ರಾಜ್ಯ ಭಾರವನ್ನು ಮಾಡತೊಡಗಿದರು. ಈ ವಿಭಾಗವು ಆಡಳಿತಾತ್ಮಕ ತುರ್ತು ಅಥವ ಸೊದರರ ಕಲಹದ ಕಾರಣವಾಗಿರಬೇಕು.

## ಮೂರನೆಯ ಬಲ್ಲಾಳ ಮತ್ತು ತಮಿಳುದೇಶ

ರಾಮನಾಥನ ಮಗ ವಿಶ್ವನಾಥನನ್ನು ಕೆಳಗಿಳಿಸಿ ಮೂರನೆಯ ಬಲ್ಲಾಳನು ಹೊಯ್ಸಳ ಸಾಮ್ರಾಜ್ಯವನ್ನು ಒಂದುಗೂಡಿಸಿದನು. ಮೂರನೆಯ ಬಲ್ಲಾಳನು ತನ್ನ ಆಂತರಿಕ ಸಮಸ್ಯೆಗಳಿಂದ ಮತ್ತು ಉತ್ತರದಲ್ಲಿ ಸೇವುಣರ ಧಾಳಿಯನ್ನು ಎದುರಿಸಬೇಕಾಗಿರುವುದರಿಂದ ತಮಿಳು ದೇಶದ ಬಗ್ಗೆ ಗಮನಹರಿಸಲು ಮತ್ತು ಹೊಯ್ಸಳ ಸಾಮ್ರಾಜ್ಯವನ್ನು ಪುನರ್‌ಸ್ಥಾಪಿಸಲು ಸಾಧ್ಯವಾಗಲಿಲ್ಲ. ಹಾಗಾಗಿ ಅವನ್ನು ಕೂಡಲೇ ಕಣ್ಣಾನೂರನ್ನು ಪಾಂಡ್ಯರಿಂದ ವಶಪಡಿಸಿ–ಕೊಳ್ಳಲಾಗಲಿಲ್ಲ.

## ಚೋಳರ ಆಳ್ವಿಕೆಯ ಅಂತ್ಯ ಮತ್ತು ಪಾಂಡ್ಯರು ತಮಿಳುನಾಡಿನಲ್ಲಿ ಪ್ರಬಲ ಶಕ್ತಿಯಾಗಿ ಉದಯ

ಚೋಳರು ಪ್ರಬಲ ಶಕ್ತಿಯಾಗಿ ರಾಜಕೀಯದಿಂದ ಮಾಯವಾದ ಕೂಡಲೇ ಪಾಂಡ್ಯರು ತಮಿಳುನಾಡಿನಲ್ಲಿ ಶ್ರೇಷ್ಠರಾಗಿ ಉದಯಿಸತೊಡಗಿದರು. ಚೋಳ ರಾಜಧಾನಿಯಾದ ತಾಂಜಾ-ವೂರನ್ನು ಪಾಂಡ್ಯರು ವಶಪಡಿಸಿಕೊಂಡರು. ಇದು ಚೋಳರ ಆಳ್ವಿಕೆಯ ಕೊನೆಯಾಯಿತು. ಮೂರನೆಯ ರಾಜೇಂದ್ರನು ಗಂಗಯಿಕೊಂಡ ಚೋಳಪುರಕ್ಕೆ ಓಡಿಹೋದನು ಮತ್ತು ಅಲ್ಲಿಯೇ ಮರಣವನ್ನು ಹೊಂದಿದನು. ರಾಜೇಂದ್ರನ ಸಾವು ಚೋಳ ಸಾಮ್ರಾಜ್ಯದ ಸಮಾಧಿಯಾಯಿತು. ಮೊದಲನೆಯ ಜಾತವರ್ಮನ್ ಸುಂದರಪಾಂಡ್ಯನು ಪಾಂಡ್ಯ ವಂಶದಲ್ಲೇ ಬಹುದೊಡ್ಡ ರಾಜನಾಗಿದ್ದನು ಎಂದು ಪ್ರಶಂಸಿಸಲಾಗುತ್ತದೆ. ಚೋಳರ ಆಳ್ವಿಕೆಯನ್ನು ಕಿತ್ತುಹಾಕಲು ಮಾಡಿದ ಹಿಂದಿನ ಅನೇಕ ರಾಜರುಗಳ ಪ್ರಯತ್ನವು ವಿಫಲವಾಗಿತ್ತು. ಸುಂದರ ಪಾಂಡ್ಯನು ಅವರನ್ನು ಸೋಲಿಸಿದ್ದಷ್ಟೇ ಅಲ್ಲದೇ ತಮಿಳುದೇಶವನ್ನು ಅವರ ಹಿಡಿತದಿಂದ ಬಿಡಿಸಲು ಶಕ್ತನಾದನು. ಅವನು ಇಡೀ ತಮಿಳುಪ್ರದೇಶದ ಒಡೆಯನಾದನು. ಅವನು ಕ್ರಿ.ಶ.1268ರಲ್ಲಿ ಮರಣ ಹೊಂದಿದನು.

ಮಾರವರ್ಮನ್ ಕುಲಶೇಖರನು ತನ್ನ ತಂದೆ ಜಾತವರ್ಮನ್ ಸುಂದರಪಾಂಡ್ಯನ ನಂತರ ಪಟ್ಟಕ್ಕೇರಿದನು. ಅವನು 40 ವರ್ಷಗಳ ಕಾಲ ರಾಜ್ಯಭಾರವನ್ನು ಮಾಡಿದನು (ಕ್ರಿ.ಶ.1268-1308). ಅವನ ದೀರ್ಘಕಾಲದ ಅಳ್ವಿಕೆಯಲ್ಲಿ ರಾಜ್ಯವು ಪ್ರಶಾಂತವಾಗಿದ್ದು ಅದು ಏಳಿಗೆಯನ್ನು ಹೊಂದಿತು. ಅವನು ಚೇರರ ದೊರೆಯನ್ನು ಸೋಲಿಸಿದನು. ಅವನು ಸಿಲೋನನ್ನು ಕೂಡಾ ಆಕ್ರಮಣ ಮಾಡಿ ಮೂರನೆಯ ಪರಾಕ್ರಮ ಬಾಹುವನ್ನು ಸೋಲಿಸಿ ಅವನಿಂದ ಬೆಲೆಬಾಳುವ ವಸ್ತುಗಳನ್ನು ಪಡೆದನು. ಕುಲಶೇಖರನ ಆಳ್ವಿಕೆಯಲ್ಲಿ ಪಾಂಡ್ಯ ಸಾಮ್ರಾಜ್ಯವು ವಿಶಾಲವಾಗಿತ್ತಲ್ಲದೇ ಶಕ್ತಿಯುತವಾಗಿ ಇತ್ತು. ಮೂರನೆಯ ಬಲ್ಲಾಳನು ತನ್ನ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನ ವ್ಯವಹಾರಗಳಲ್ಲಿ ಹಸ್ತಕ್ಷೇಪವನ್ನು ಮಾಡಲಿಲ್ಲ; ಏಕೆಂದರೆ ಅವನು ತನ್ನ ರಾಜ್ಯದಲ್ಲಿ ಸ್ಥಾನವನ್ನು ಕ್ರೋಢೀಕರಿಸುವುದರಲ್ಲೇ ಮಗ್ನನಾಗಿದ್ದನು. 1308ರಲ್ಲಿ ಅವನ ಮರಣದ ನಂತರ ಚೋಳ ಸಾಮ್ರಾಜ್ಯದ ಅಂತ್ಯವಾಯಿತು.

## ಮೂರನೆಯ ಬಲ್ಲಾಳ ಮತ್ತು ಪಾಂಡ್ಯ ಸಾಮ್ರಾಜ್ಯ

ರಾಮನಾಥನ ಆಳ್ವಿಕೆಯ ಕಾಲದಲ್ಲಿ ಪಾಂಡ್ಯರಿಂದ ಅವರು ಕಳೆದುಕೊಂಡ ಕಣ್ಣಾನೂರು ಇನ್ನೂ ಅವರ ವಶದಲ್ಲಿಯೇ ಇತ್ತು. ಮೂರನೆಯ ಬಲ್ಲಾಳನು ತನ್ನ ಆಳ್ವಿಕೆಯ ಮೊದಲ ಹತ್ತು

ವರ್ಷದಲ್ಲಿ ತನ್ನ ರಾಜ್ಯವನ್ನು ಸುವ್ಯವಸ್ಥಿತವಾಗಿಡುವುದರಲ್ಲಿ ಮತ್ತು ಉತ್ತರದಲ್ಲಿ ಸೇವುಣರ ವಿರುದ್ಧ ಯುದ್ಧವನ್ನು ಮಾಡುವುದರಲ್ಲೇ ಮುಳುಗಿದ್ದನು. ಅವನು 1291ರಲ್ಲಿ ಅಧಿಕಾರಕ್ಕೆ ಬಂದಾಗ ಅವನ ಸ್ಥಾನವು ಇರಬೇಕಾದಷ್ಟು ಬಲವಾಗಿ ಇರಲಿಲ್ಲ. ಏಕೆಂದರೆ ಅವನು ತನ್ನ ರಾಜ್ಯದ ಅರ್ಧಭಾಗವನ್ನಷ್ಟೇ ಹೊಂದಿದ್ದನು. ಅವನ ಅಜ್ಜನಾದ ಸೋಮೇಶ್ವರನು ರಾಜ್ಯವನ್ನು ಎರಡು ಭಾಗವನ್ನಾಗಿ ವಿಭಾಗಿಸಿದ್ದನು. ಮೂರನೆಯ ಬಲ್ಲಾಳನ ಆದ್ಯ ಕರ್ತವ್ಯವೆಂದರೆ ಸಾಮ್ರಾಜ್ಯವನ್ನು ಒಂದುಗೂಡಿಸುವುದಾಗಿತ್ತು. ಅವನು ಆ ಕಾರ್ಯದಲ್ಲಿ 1301ರ ವೇಳೆಗೆ ಯಶಸ್ವಿಯಾದನು. ಆದ್ದರಿಂದ ನಾವು ಅವನ ಹಿಂದಿನ ಮಹಾನ್ ನಾಯಕರಂತೆ ಶಕ್ತಿಶಾಲೀ ರಾಜ್ಯವನ್ನು ಪಡೆಯಲಿಲ್ಲ ಎಂಬುದನ್ನು ಒಪ್ಪಿಕೊಳ್ಳಬೇಕು. ಅದರ ಪರಿಣಾಮವಾಗಿ ಅವನು ತಮಿಳುನಾಡಿನ ಬಹಳಷ್ಟು ಪ್ರದೇಶಗಳನ್ನು ಕಳೆದುಕೊಂಡಿದ್ದರೂ ಸಹ ಅಲ್ಲಿನ ವ್ಯವಹಾರಗಳಲ್ಲಿ ಮಧ್ಯೆ ಪ್ರವೇಶವನ್ನು ಮಾಡಲಾಗಲಿಲ್ಲ. ಅವನು ತಮಿಳುದೇಶ ಅಥವ ಪಾಂಡ್ಯರಾಜ್ಯಕ್ಕೆ ಪ್ರವೇಶವನ್ನು ಕೊಡಲು ಸಮಯಕ್ಕಾಗಿ ಕಾಯುತ್ತಿದ್ದನು.

## ಪಾಂಡ್ಯ ಸಾಮ್ರಾಜ್ಯದಲ್ಲಿ ಆಂತರಿಕ ಯುದ್ಧ

ಮಾರವರ್ಮನ್ ಕುಲಶೇಖರನ ಮರಣಾನಂತರ ಪಾಂಡ್ಯ ಸಾಮ್ರಾಜ್ಯದಲ್ಲಿ ನಡೆದ ರಾಜಕೀಯ ಬೆಳವಣಿಗೆಗಳು ಮೂರನೆಯ ವೀರಬಲ್ಲಾಳನಿಗೆ ತಮಿಳುದೇಶದ ಆಂತರಿಕ ವ್ಯವಹಾರಗಳಲ್ಲಿ ಪ್ರವೇಶ ಮಾಡಲು ಒಂದು ಸಂದರ್ಭವನ್ನು ಒದಗಿಸಿತು. ಮಾರವರ್ಮನ್ ಕುಲಶೇಖರನಿಗೆ ಇಬ್ಬರು ಮಕ್ಕಳಿದ್ದರು. ಮೊದಲನೆಯವನು ಮೂರನೆಯ ಜಾತವರ್ಮನ್ ಸುಂದರಪಾಂಡ್ಯ ಮತ್ತು ಜಾತವರ್ಮನ್ ವೀರ ಪಾಂಡ್ಯ. ಮಾರವರ್ಮನ್ ಕುಲಶೇಖರನು ವೀರಪಾಂಡ್ಯನ್‌ನು ಹೆಚ್ಚು ಸೂಕ್ತವೆಂದು ಪರಿಗಣಿಸಿ ಅವನನ್ನು ಅವನ ವಾರಸುದಾರನೆಂದು ಘೋಷಿಸಿದನು. ಈ ವಿಷಯವು ಅವನು ತನ್ನ ತಂದೆಯ ಆಡಳಿತದಲ್ಲಿ ಸಹಾಯವನ್ನು ಮಾಡುತ್ತಿದ್ದನು ಎಂದು ಸೂಚಿಸಿದೆ ಮತ್ತು ಅವನು 1296ರಲ್ಲಿ ಅಧಿಕಾರಕ್ಕೆ ಬಂದನು. ಇದು ಸಹೋದರರಲ್ಲಿ ಕಹಿ ಮತ್ತು ದ್ವೇಷಕ್ಕೆ ಎಡೆಮಾಡಿಕೊಟ್ಟಿತು. ಅವರು ತಮ್ಮತಮ್ಮಲ್ಲೇ ಸಿಂಹಾಸನಕ್ಕಾಗಿ ಅನೇಕ ಯುದ್ಧಗಳನ್ನು ಮಾಡಿದರು. ಐದು ಅಥವ ಆರು ವರ್ಷಗಳ ನಂತರ ಜಾತವರ್ಮನ್ ಸುಂದರಪಾಂಡ್ಯನ ಆಳ್ವಿಕೆಯು ಪ್ರಾರಂಭವಾಯಿತು. ವಸ್ಸರ ಪ್ರಕಾರ ಸೋದರರ ವೈರ ಮತ್ತು ದ್ವೇಷವು ಕುಲಶೇಖರನ ಕೊನೆಯ ದಿನಗಳನ್ನು ಕಹಿಯನ್ನಗಿಸಿತು ಮತ್ತು ಕೊನೆಗೆ ಅವನ ಕೊಲೆಯಲ್ಲಿ ಪರ್ಯಾವಸಾನಗೊಂಡಿತು. ಮಲ್ಲಿಕ್‌ಕಾಫುರ್‌ನ ಧಾಳಿಯ ಸಮಯದಲ್ಲಿ ಈ ಅಪರಾಧವು ಯುದ್ಧಕ್ಕೆ ಎಡೆಮಾಡಿ ಸಾಮ್ರಾಜ್ಯವನ್ನು ಗೊಂದಲಕ್ಕೀಡುಮಾಡಿತು. ಹೀಗೆ ತನ್ನ ತಂದೆಯನ್ನು ಕೊಲೆ ಮಾಡಿ ಸುಂದರ ಪಾಂಡ್ಯನು ಮದುರದಲ್ಲಿ ಪಟ್ಟಕ್ಕೆ ಬಂದನು. ವೀರ

ಪಾಂಡ್ಯನು ಸುಂದರ ಪಾಂಡ್ಯನ ವಿರುದ್ಧ ಹೋರಾಟವನ್ನು ಮುಂದುವರೆಸಿದನು. ಅಮೀರ್ ಖುಸ್ರುವಿನ ಹೇಳಿಕೆಯಂತೆ ಮಲ್ಲಿಖಾಫರನಿಗೆ ಮಲಬಾರಿನ ಇಬ್ಬರು ರೈಗಳು, ಹಿರಿಯವನು ಬೀರ್ ಪಾಂಡ್ಯ ಕಿರಿಯವನು ಸುಂದರಪಾಂಡ್ಯ ಇವರುಗಳು ಬಹಳ ಕಾಲದವರೆಗೆ ಸ್ನೇಹಭಾವ-ದಿಂದಿದ್ದು ಕೊನೆಯಲ್ಲಿ ಅವರಿಬ್ಬರಲ್ಲೂ ವೈರತ್ವವು ಬೆಳೆಯಿತು ಎಂಬುದರ ಅರಿವಿತ್ತು. ಸುಂದರಪಾಂಡ್ಯನು ಕೊನೆಯಲ್ಲಿ ಸೋಲನ್ನು ಅನುಭವಿಸಿದನು. ಅವನು ಅಲ್ಲಾವುದ್ಧೀನ್ ಖಿಲ್ಜಿಯ ಸಹಾಯವನ್ನು ಅಪೇಕ್ಷಿಸಿದನು ಎಂದು ಹೇಳಲಾಗಿದೆ. ಮಾರ್ಕೊಪೊಲೊನು ಸುಂದರಪಾಂಡಿಯು (ಸುಂದರಪಾಂಡ್ಯ) ಅಲ್ಲಾವುದ್ದೀನನ್ನು ದೆಹಲಿಯಲ್ಲಿ ಭೇಟಿಯಾಗಿದ್ದನು ಎಂದು ಹೇಳಿದ್ದಾನೆ. ಆದರೆ ಈ ಹೇಳಿಕೆಯನ್ನು ಒಪ್ಪಲಾಗುವುದಿಲ್ಲ. ಏಕೆಂದರೆ ಮಲ್ಲಿಕಾಫರನು ಎಂದೂ ಸುಂದರಪಾಂಡ್ಯನನ್ನು ಮಧುರ ಸಿಂಹಾಸನದ ಮೇಲೆ ಕೂರಿಸಲು ಪ್ರಯತ್ನಿಸಲಿಲ್ಲ.

## ತನ್ನ ಹಿಂದಿನವರು ಕಳೆದುಕೊಂಡ ಪ್ರದೇಶಗಳನ್ನು ವಶಪಡಿಸಿಕೊಳ್ಳುವಲ್ಲಿ ಬಲ್ಲಾಳನ ಆಸಕ್ತಿ

ಮೂರನೆ ವೀರಬಲ್ಲಾಳನು ತನ್ನ ಹಿಂದಿನವರು ತಮಿಳು ದೇಶದಲ್ಲಿ ಕಳೆದುಕೊಂಡ ಪ್ರದೇಶಗಳನ್ನು ಪುನ: ವಶಪಡಿಸಿ ಕೊಳ್ಳಲು ಒಂದು ಸಂದರ್ಭಕ್ಕಾಗಿ ಕಾಯುತಿದ್ದನು. ಯಾವಾಗ ಅಲ್ಲಿ ನಾಗರೀಕ ಯುದ್ಧವು ಪ್ರಾರಂಭವಾಯಿತೋ ಆಗ ಅವನು ತಮಿಳು ದೇಶದ ವ್ಯವಹಾರ-ಗಳಲ್ಲಿ ಮಧ್ಯ ಪ್ರವೇಶಿಸಲು ಇದು ಸೂಕ್ತ ಸಂದರ್ಭ ಎಂದು ಯೋಚಿಸಿದನು. ಹಾಗಾಗಿ ಒಂದು ದೊಡ್ಡ ಸೈನ್ಯದೊಡನೆ ಅಲ್ಲಿಗೆ ನಡೆದನು. ಅವನ ಉದ್ದೇಶವು ಎಲ್ಲಕ್ಕಿಂತ ಹೆಚ್ಚಾಗಿ ಇಬ್ಬರು ಸೋದರರಿಂದ ಕೆಲವು ಪ್ರದೇಶಗಳನ್ನು ಪಡೆಯುವುದಾಗಿತ್ತು. ಈ ಕೃತಿಯಿಂದ ಅವನು ಕಣ್ಣಾನೂರು ಕೋಟೆಯನ್ನು ಗೆದ್ದು ಹಿಡಿತಕ್ಕೆ ತೆಗೆದುಕೊಂಡನು.

ಬಹುಶಃ ಕ್ರಿ.ಶ.1311ರಲ್ಲಿ ಕುಲಶೇಖರ ಪಾಂಡ್ಯನು ಸುಂದರ ಪಾಂಡ್ಯನಿಂದ ಕೊಲೆಯಾದನು. ಈ ಕೊಲೆಯ ನಂತರ ಅವನು ತಮಿಳುನಾಡಿನಲ್ಲಿ ಬಹಳ ಸಮಸ್ಯೆಗಳನ್ನು ಎದುರಿಸಿದನು. ಹಾಗಾಗಿ ಅವನು ಬಲವಂತದಿಂದ ಕಾವೇರಿ ಕಣಿವೆಯ ಉತ್ತರದಲ್ಲಿದ್ದ ವೀರ ಪಾಂಡ್ಯನ ಪ್ರದೇಶಗಳ ಮೇಲೆ ಆಕ್ರಮಣವನ್ನು ಮಾಡಿಸುವ ಅತ್ಯುತ್ತಮವಾದ ಭೌಗೋಳಿಕ ಸ್ಥಾನದಲ್ಲಿದ್ದ ಮೂರನೆಯ ಬಲ್ಲಾಳನ ಸಹಾಯವನ್ನು ಪಡೆಯಬೇಕಾಯಿತು. ಬಲ್ಲಾಳನು ಈ ಆಹ್ವಾನವನ್ನು ಈ ಸೋದರರ ಕಲಹದ ಲಾಭವನ್ನು ಪಡೆಯುವ ಉದ್ದೇಶದಿಂದಲೇ ಒಪ್ಪಿಕೊಂಡ ಎಂಬುದು ಚೆನ್ನಾಗಿ ತಿಳಿದ ವಿಚಾರ ಎಂದು ಅಮೀರ್ ಖುಸ್ರುವಿನಿಂದ ತಿಳಿದಿದೆ. ಜೆ.ಡಿ.ಎಮ್ ಡೆರ್ರೆಟ್‌ರ ವರಂತೆ ಇದು ಬಲ್ಲಾಳನ ಅವಿಶ್ರಾಂತ ಮತ್ತು ಸಮಯಾನುಕೂಲವಾದ ಗುಣಗಳಿಗೆ

ಸರಿಹೊಂದುವುದರಿಂದ ಮತ್ತು ಘಾತಿಯ ಕೆಳಗಿನ ಪ್ರದೇಶಗಳ ಚರಿತ್ರೆಯನ್ನು ಗಮನಿಸಿದಾಗ ಈ ಅಭಿಪ್ರಾಯವು ಸರಿಯಾಗಿದೆ ಎನಿಸುತ್ತದೆ. ಅಮೀರ್ ಖುಸ್ರುವು ತನ್ನ ಖಜಿಯನ್‌ನಲ್ಲಿ ದೋರಸಮುದ್ರದ ರಾಜನಾದ ಬಲ್ಲಾಳದೇವನು ಇಬ್ಬರು ಸೋದರರ ನಡುವೆ ಘರ್ಷಣೆ-ಯುಂಟಾದ ಕೂಡಲೇ ಆ ಪ್ರದೇಶಗಳನ್ನು ವಶಪಡಿಸಿಕೊಳ್ಳುವ ಮತ್ತು ಆ ಎರಡು ನಗರಗಳನ್ನು ಮತ್ತು ಅಲ್ಲಿನ ವಣಿಕರ ಸಂಪತ್ತನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಅಲ್ಲಿಗೆ ತೆರಳಿದ ಎಂದು ಹೇಳಿದ್ದಾನೆ.

## ಅಡಿಟಿಪ್ಪಣಿಗಳು

1) K.A. Nilakantasastri, Second Edition, Madras, 1955, p.190.
2) K.A.Nilakantasastri, A History of South India, London, 1955, p.184.
3) Indian Antiquary, Vol.II, 1837, p.299.
4) Lewis Rice, Mysore and Coorg, p.93.
5) K.A.Nilakantasastri, The Pandyan Kingdom, London, 1929, p.129.
6) I.A., Vol.37, 1908, p.229.
7) Vincent Smith, Oxford History of India, 3rd Edition, 1958, p.218.
8) K.A.Nilakantasastri, A History of South India, p.184.
9) Ibid, p.188.
10) C.S.Srinivasachari, Indian Historical Quarterly, Vol.II, p.190.
11) K.A.Nilakantasastri, The Cholas, p.5
12) I.A, Vol.12, 1922, p.232
13) M.Arokiaswami, The Kongu Country, 1950, pp.216-217.
14) Ibid
15) Ep. Ind. VII, pp.95
16) Ibid
17) MAR 1919, p.397
18) Ibid, p.366
19) Ibid, 1919, p.404
20) Ibid, p.612
21) Ep.Car, VI, Kd, 100
22) Ibid
23) EI, IV, p.145
24) EI, VII, p.128
25) Ibid
26) Ibid, p.140
27) ARE 1919-20, p.199
28) Derrett: The Hoysalas, p.173
29) E.C. V, BI, 58
30) Ibid

31) S.K.Aiyangar, Ancient India, p.238
32) EC BI, 147
33) Rice, Mysore Inscriptions, p.262 and Introd, p.76
34) EC II, SB, 73
35) Ibid, BI, 17
36) Ibid, Ch, 83
37) Rice, Mysore Gazetteer, p.11
38) Ibid, p.262
39) EC II, SB, 73
40) EC V, BI, 17
41) Rice, Mysore and Coorg, p.48
42) EC IV, Ch 83
43) EC V, BI, 58
44) EC V, Kr, 31
45) EC IV, Ch.83
46) EC V, BI, 17
47) EC, IX, NI, 84
48) EC V, BI, 17
49) EC IX, Hs, 18
50) EC IV< Ch, 83
51) EC V, BI, 58
52) EC IV, Kr, 31
53) EC IV, Ch 83
54) EC V, BI, 17
55) Ibid
56) Rice, Mysore Inscriptions, p.215
57) Ibid, p.178
58) Ibid p.137
59) EC V, BI, 93
60) EC II, SB, 345
61) EC VI, Kd, 34
62) EC IV, Ch.20
63) CC VIII, Sa 58

# ಅಧ್ಯಾಯ–10
# ಉಪಸಂಹಾರ

ಪ್ರಬಲ ಸಾಮ್ರಾಜ್ಯವಾಗಿದ್ದ ಹೊಯ್ಸಳರ ಅವನತಿಯನ್ನು ಅಧ್ಯಯನ ಮಾಡುವುದು ದುರದೃಷ್ಟವೇ ಸರಿ. ಈ ಸಾಮ್ರಾಜ್ಯವು ಸಮರ್ಥ ದೊರೆಗಳೆನಿಸಿದ ವಿಷ್ಣುವರ್ಧನ, 2ನೇ ವೀರಬಲ್ಲಾಳ ಮತ್ತು 3ನೇ ವೀರಬಲ್ಲಾಳನಿಗೆ ಜನ್ಮ ನೀಡಿದರೂ ಕೊನೆಯ ಅವಧಿಯಲ್ಲಿ ದೆಹಲಿ ಸುಲ್ತಾನರು ಮತ್ತು ಮಧುರೈ ಸುಲ್ತಾನರ ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಸೋಮೇಶ್ವರನ ಮರಣ ನಂತರ ಆಂತರಿಕ ಕಲಹಗಳಿಂದಾಗಿ ಈ ಸಾಮ್ರಾಜ್ಯದ ರಾಜರು ತಮ್ಮ ಪರಮಾಧಿಕಾರನ್ನು ಕಳೆದುಕೊಂಡರು. ಊಳಿಗಮಾನ್ಯ ಪದ್ಧತಿಯು ಸಮಾಜದಲ್ಲಿ ಪ್ರಬಲ–ವಾಯಿತು. ಸಾಮ್ರಾಜ್ಯದಲ್ಲಿ ಉಂಟಾದ ಒಡಕು ಇದರ ಅವನತಿಗೆ ಕಾರಣವಾಯಿತು. 3ನೇ ಬಲ್ಲಾಳನು ತನ್ನ ಅಧಿಕಾರದ ಎಲ್ಲೆಯನ್ನು ಮೀರಿ ಏಕತೆಯನ್ನು ಸಾಧಿಸಲು ಶಕ್ತಿಮೀರಿ ಪ್ರಯತ್ನಿಸಿದನು ಮತ್ತು ಆಗಾಗ್ಗೆ ಸೇವುಣರು ಅಥವಾ ದೇವಗಿರಿಯ ಯಾದವರ ವಿರುದ್ಧ ಸಂಭವಿಸಿದ ಕದನಗಳಿಂದಾಗಿ ಈ ಎರಡೂ ಸಾಮ್ರಾಜ್ಯಗಳು ದುರ್ಬಲಗೊಂಡವು. ದಕ್ಷಿಣದ ಹಿಂದೂ ಸಾಮ್ರಾಜ್ಯಗಳೂ ತಮ್ಮ ಸ್ವಾರ್ಥ, ಅಸೂಯೆ ಮತ್ತು ನಾಯಕತ್ವದ ಮಹತ್ವಾಕಾಂಕ್ಷೆ–ಯಿಂದಾಗಿ ತಮ್ಮ ರಾಜ್ಯಗಳಿಗೆ ಬಂದೊದಗಿದ ಅಪಾಯದ ಬಗ್ಗೆ ಸ್ವಲ್ಪ ಅರಿವಿದ್ದರೂ ಏಕತೆಯನ್ನು ಸಾಧಿಸಲು ವಿಫಲಗೊಂಡವು. 3ನೇ ಬಲ್ಲಾಳನು ಇವರುಗಳಲ್ಲಿ ಏಕತೆಯನ್ನು ಮೂಡಿಸಲು ಪ್ರಯತ್ನಿಸಿದನಾದರೂ ಆಗಲೇ ಸಮಯವು ಮೀರಿಹೋಗಿತ್ತು. ಮುಸ್ಲಿಮರು ದಕ್ಷಿಣದಲ್ಲಿ ಶಾಶ್ವತವಾಗಿ ನೆಲೆಯೂರಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು.

'ಸಳ' ನಿಜವಾಗಿಯೂ ಐತಿಹಾಸಿಕ ವ್ಯಕ್ತಿ ಮತ್ತು ಅವನ ಸಾಧನೆಗಳ ಬಗ್ಗೆ ಬಹಳಷ್ಟು ಮಾಹಿತಿ ಇಲ್ಲದಿದ್ದರೂ ಅವನೇ ಹೊಯ್ಸಳ ಸಾಮ್ರಾಜ್ಯದ ಮೂಲ ಪುರುಷ. ಕ್ರಿ.ಶ.1006 ರಲ್ಲಿ ಸಳನ ನಂತರ ವಿನಯಾದಿತ್ಯ ಪಟ್ಟಕ್ಕೆ ಬಂದ ವಿನಯಾದಿತ್ಯ ಚಾಲುಕ್ಯರ 5ನೇ ವಿಕ್ರಮಾದಿತ್ಯನ ಸಾಮಂತ. ಅವನು 'ತ್ರಿಭುವನಮಲ್ಲ' ಎಂಬ ಬಿರುದನ್ನು ಪಡೆದಿದ್ದ. ಅವನು ತನ್ನ ದೊರೆಯ ಜೊತೆ ಚೋಳ ಮತ್ತು ಅವರ ಸಾಮಂತರೊಡನೆ ಯುದ್ಧ ಮಾಡಿದ. ವಿನಯಾದಿತ್ಯನಿಗೂ ಮತ್ತು ಚೋಳರ ದಂಡನಾಯಕ ಅಪ್ರಮೇಯನಿಗೂ ಕ್ರಿ.ಶ.1006ರಲ್ಲಿ ಟಿ.ನರಸೀಪುರ ತಾಲ್ಲೂಕಿನ ಕಲಾವೂರಿನಲ್ಲಿ ಭೀಕರ ಕಾಳಗ ನಡೆಯಿತು. ವಿನಯಾದಿತ್ಯನ ದಂಡನಾಯಕ ನಾಗಣ್ಣ ಮತ್ತು ಇತರರು ಚೋಳರ ಸೈನ್ಯದೆದುರು ಸೋಲನ್ನಪ್ಪಿದರು. ವಿಷ್ಣುವರ್ಧನ ಗಂಗವಾಡಿಯನ್ನು ಕೊನೆಗೂ ವಶಪಡಿಸಿಕೊಳ್ಳುವವರೆಗೆ ಚೋಳ ಮತ್ತು ಹೊಯ್ಸಳ ನಡುವೆ ನಡೆದ ಸರಣಿ ಕಾಳಗ.

ಇದು ಮೊದಲ ಕಾಳಗವಾದ್ದರಿಂದ ಇದು ಪ್ರಮುಖ ಕದನವಾಗಿತ್ತು. 1022ರಲ್ಲಿ ಒಂದನೇ ವಿನಯಾದಿತ್ಯನ ಮಗ ನೃಪಕರ್ಮ ಪಟ್ಟಕ್ಕೆ ಬಂದ.

ನೃಪಕರ್ಮ 'ಮಹಾಮಂಡಲೇಶ್ವರ'ನೆಂಬ ಬಿರುದನ್ನು ಧರಿಸಿದ ಮೊದಲನೇ ಹೊಯ್ಸಳ ರಾಜ. ಅವನು 'ರಾಜಮಲ್ಲ' 'ಪೆರುಮಾಡಿ' ಎಂಬ ಬಿರುದನ್ನು ಸಹ ಧರಿಸಿದ್ದನು. ಇದು ಕೇವಲ ಗಂಗರಿಗೆ ಮೀಸಲಾಗಿದ್ದ ಬಿರುದು. ನೃಪಕರ್ಮನ ಮಗ ಎರಡನೇ ವಿನಯಾದಿತ್ಯ 1048ಕ್ಕೆ ಪಟ್ಟಕ್ಕೆ ಬಂದ. ಇವನು ಹೊಯ್ಸಳ ಸಾಮ್ರಾಜ್ಯದ ಮೊದಲ ಪ್ರಬಲ ರಾಜ. ಅವನ ಅರ್ಧ ಶತಕಕ್ಕೂ ಹೆಚ್ಚಿನ ಆಳ್ವಿಕೆಯಲ್ಲಿ ಹೊಯ್ಸಳ ಸಾಮ್ರಾಜ್ಯದ ವಿಸ್ತರಣೆ ಆಗಿದಷ್ಟೆಯಲ್ಲ, ಹೊಯ್ಸಳ ಸಾಮ್ರಾಜ್ಯ ಒಂದು ರಾಜಕೀಯ ಶಕ್ತಿಯಾಗಿ ಬೆಳೆಯಿತು. ಅವನ ಆಳ್ವಿಕೆಯಲ್ಲಿ 1062ರಲ್ಲಿ ರಾಜಧಾನಿಯು ಸೊಸೆಯೂರಿನಿಂದ ದ್ವಾರಸಮುದ್ರಕ್ಕೆ ಬದಲಾಯಿತು. ಎರಡನೇ ವಿನಯಾದಿತ್ಯ ಕಲ್ಯಾಣದ ಚಾಲುಕ್ಯರ ಸಾಮಂತ. ಎರಡನೇ ವಿನಯಾದಿತ್ಯ ಕ್ರಿ.ಶ.1100ರಲ್ಲಿ ಮರಣ ಹೊಂದಿದ. ಅವನ ನಂತರ ಕ್ರಿ.ಶ.1101 ರಲ್ಲಿ ಅವನ ಮೊಮ್ಮಗ ಒಂದನೇ ಬಲ್ಲಾಳ ಪಟ್ಟಕ್ಕೆ ಬಂದಿದ್ದ.

ಒಂದನೇ ಬಲ್ಲಾಳ ಎಂಟು ವರ್ಷಗಳ ಕಾಲ ಆಳ್ವಿಕೆ ನಡೆಸಿದ. ಒಂದನೇ ಬಲ್ಲಾಳ 'ತ್ರಿಭುವನಮಲ್ಲ', 'ಹೊಯ್ಸಳೇಶ್ವರ' ಎಂಬ ಬಿರುದನ್ನು ಪಡೆದಿದ್ದ.

ಕ್ರಿ.ಶ.1108 ರಲ್ಲಿ ಒಂದನೇ ಬಲ್ಲಾಳ ಮರಣ ಹೊಂದಿದ. ಅವನಿಗೆ ಮಕ್ಕಳಿಲ್ಲದ ಕಾರಣ ಅವನ ತಮ್ಮ ಬಿಟ್ಟಿದೇವ ಅಂದರೆ ವಿಷ್ಣುವರ್ಧನ 1108ರಲ್ಲಿ ಪಟ್ಟಕ್ಕೆ ಬಂದ. ವಿಷ್ಣುವರ್ಧನ ಪಟ್ಟಕ್ಕೆ ಬಂದಾಗ ಹೊಯ್ಸಳ ಸಾಮ್ರಾಜ್ಯ ತುಂಬಾ ಚಿಕ್ಕದಾಗಿತ್ತು. ಸಾಮ್ರಾಜ್ಯ ಸದ್ಯದ ಹಾಸನ ಜಿಲ್ಲೆ, ಮೈಸೂರಿನ ಕೆಲವು ತಾಲ್ಲೂಕುಗಳು ಮತ್ತು ಶಿವಮೊಗ್ಗ ಜಿಲ್ಲೆಗೆ ಸೀಮಿತವಾಗಿತ್ತು. ಅವನ ಸತತ ಯುದ್ಧಗಳಿಂದ ಅವನ ಸಾಮ್ರಾಜ್ಯ ಎಲ್ಲಾ ದಿಕ್ಕುಗಳಲ್ಲೂ ವಿಸ್ತರಣೆಯಾಯಿತು. ಡಾ॥ಎಸ್.ಕೆ.ಅಯ್ಯಂಗಾರ್ ಅವನನ್ನು "ಹಳೇ ಮೈಸೂರು ರಾಜ್ಯ ಕರ್ತೃ" ಎಂದಿದ್ದಾರೆ. ಅವನ ಉಲ್ಲೇಖಗಳ ಪ್ರಕಾರ ಪೂರ್ವದಲ್ಲಿ ನಂಗಾಲಿ, ದಕ್ಷಿಣದಲ್ಲಿ ಬಾರಕೂರ, ಉತ್ತರದಲ್ಲಿ ಸೋವಿಮಲೆ, ದಕ್ಷಿಣದಲ್ಲಿ ಕೊಂಗಾಳ್ವ ಮತ್ತು ಚೆಂಗಾಳ್ವ ಹೊಯ್ಸಳ ಸಾಮ್ರಾಜ್ಯದ ಸೀಮೆಗಳಾಗಿದ್ದವು. ಅವನು ಚೋಳರನ್ನು ಗಂಗವಾಡಿಯಿಂದ ಜರಿಸಿದ ಮತ್ತು ತನ್ನ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಿದ ಅವನು ಅನೇಕ ಚಾಲುಕ್ಯ ಸಾಮಂತರನ್ನು ಸೋಲಿಸಿ ತನ್ನ ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿದ್ದು ನಂತರ ಕಲ್ಯಾಣಿ ಚಾಲುಕ್ಯರಿಂದ ಸ್ವತಂತ್ರ್ಯವಾಗಿ ತನ್ನ ಚಕ್ರಾಧಿಪತ್ಯ

ಸ್ಥಾಪಿಸಿದ. ಅವನು ಗಂಗರಿಂದ ಮತ್ತು ಕಲ್ಯಾಣಿ ಚಾಲುಕ್ಯರಿಂದ ಅನೇಕಾಡಳಿತ ನೀತಿಗಳನ್ನು ಅಳವಡಿಸಿಕೊಂಡು ಅತ್ಯುತ್ತಮವಾಗಿ ಆಡಳಿತ ನಡೆಸಿದ. ಅವನ ಸಲಹಾ ಸಮಿತಿಯನ್ನು 'ಪಂಚಪ್ರಧಾನ ಸಮಿತಿ' ಎಂದು ಕರೆಯಲಾಗಿತ್ತು. ತನ್ನ ಪಂಚಪ್ರಧಾನ ಸಮಿತಿಯಲ್ಲಿ ಸಂಧಿವಿಗ್ರಹಿ, ಶ್ರೀ ಕರಂಡಿಕರಿ, ಸೇನಾಧಿಪತಿ, ಹಿರಿಯ ಭಂಡಾರಿ ಹಾಗೂ ಅರ್ಹವ್ಯಕ್ತಿಗಳನ್ನು, ಮಂತ್ರಿ ಹಾಗೂ ದಂಡನಾಯಕರನ್ನಾಗಿ ಮಾಡಿದನು.

ನರಸಿಂಹನು ಹೇಗೋ ಕಷ್ಟಪಟ್ಟು ತನಗೆ ಎದುರಾಗಿದ್ದ ಸಮಸ್ಯೆಗಳನ್ನು ಪರಿಹರಿಸಿ–ಕೊಳ್ಳುವುದರಲ್ಲಿ ಯಶಸ್ವಿಯಾದನು. ಆದರೆ ಇದೇ ಸಮಯದಲ್ಲಿ 1142ರ ಮಾರ್ಚ್ ತಿಂಗಳಲ್ಲಿ ವಿಷ್ಣುವರ್ಧನನು ಬಂಕಾಪುರದಲ್ಲಿ ಮರಣ ಹೊಂದಿದನು. ಅವನ ದಂಡನಾಯಕ ಬೊಪ್ಪ ಬಂಕಾಪುರದಿಂದ ವಿಷ್ಣುವರ್ಧನನ ಪಾರ್ಥಿವ ಶರೀರವನ್ನು ವಿಶೇಷ ಗೌರವದೊಡನೆ ಮುದುಗೆರೆಗೆ ಸಾಗಿಸಿಕೊಂಡು ತಂದು ಅಲ್ಲಿ ಸಕಲ ಗೌರವದೊಂದಿಗೆ ಅಂತ್ಯಕ್ರಿಯೆಯನ್ನು ನೆರವೇರಿಸಿದನು.

ವಿಷ್ಣುವರ್ಧನನಿಗೆ ಶಾಂತಲಾದೇವಿ ಮತ್ತು ಲಕ್ಷ್ಮೀದೇವಿ ಎಂಬ ಪತ್ನಿಯರಿದ್ದರು. ಇವರಲ್ಲದೆ ಬಮ್ಮಲದೇವಿ, ರಾಜಲದೇವಿ, ಶಾಂತಲಾದೇವಿ (ಕಿರಿಯ) ಮತ್ತು ದೇವಕಿದೇವಿ ಎಂಬ ಇನ್ನಿತರ ರಾಣಿಯರಿದ್ದರೆಂಬುದಕ್ಕೆ ಮಾಹಿತಿಗಳು ದೊರಕುತ್ತವೆ. ವಿಷ್ಣುವರ್ಧನನ ಮೊದಲ ಶಾಸನಗಳಲ್ಲೆಲ್ಲ ಶಾಂತಲಾದೇವಿ ಪಟ್ಟಮಹಿಷಿಯಾಗಿ ಕಾಣಿಸಿಕೊಳ್ಳುತ್ತಾಳೆ. ಈಕೆ ಕ್ರಿ.ಶ.1131ರಲ್ಲಿ ಮೃತಳಾದ ಮೇಲೆ ಲಕ್ಷ್ಮೀದೇವಿ ಪಟ್ಟದ ರಾಣಿಯಾದಳು. ವಿಷ್ಣುವರ್ಧನನ ಮಕ್ಕಳಲ್ಲಿ ಶಾಂತಲಾದೇವಿಯಲ್ಲಿ ಜನಿಸಿದ ಬಲ್ಲಾಳ ಮತ್ತು ಹರಿಯಲಾದೇವಿ ಪ್ರಮುಖರು. ಅದೇ ರೀತಿ ಮತ್ತೊಬ್ಬಳು ಪಟ್ಟದರಸಿ ಲಕ್ಷ್ಮೀದೇವಿಯಲ್ಲಿ ಜನಿಸಿದ ನರಸಿಂಹನು ಪ್ರಮುಖ. ಕುಮಾರ ಬಲ್ಲಾಳ ಕ್ರಿ.ಶ.1129ರಲ್ಲೇ ಮರಣ ಹೊಂದಿದ್ದನು. ವಿಷ್ಣುವರ್ಧನನಿಗೆ ಮೇಲೆ ವಿವರಿಸಿದ ಮಕ್ಕಳಲ್ಲದೆ ಚಿಕ್ಕ ಬಿಟ್ಟಿದೇವ ಮತ್ತು ವಿನಯಾದಿತ್ಯ ಎಂಬ ಇತರ ಮಕ್ಕಳು ಇದ್ದರೆಂದು ತಿಳಿದುಬರುತ್ತದೆ.

ವಿಷ್ಣುವರ್ಧನನು ಹೊಯ್ಸಳ ರಾಜ್ಯವನ್ನು ವಿಸ್ತರಿಸಿ ಒಂದು ಪ್ರಬಲ ರಾಜ್ಯವನ್ನಾಗಿ ಮಾರ್ಪಡಿಸುವುದರಲ್ಲಿ ಯಶಸ್ವಿಯಾದನು. ತನ್ನ ಆಳ್ವಿಕೆಯ ಪ್ರಾರಂಭದಲ್ಲಿ ತನ್ನ ರಾಜ್ಯದ ದಕ್ಷಿಣದಲ್ಲಿದ್ದ ಚೋಳರನ್ನು ತಲಕಾಡಿನಿಂದ ಹೊಡೆದೋಡಿಸಿ ಹೊಯ್ಸಳರ ಅಧಿಕಾರವನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾದನು. ಚೋಳರು ಕ್ರಿ.ಶ.1004ರಲ್ಲಿ ಗಂಗರ ರಾಜಧಾನಿ ತಲಕಾಡನ್ನು ಗೆದ್ದುಕೊಂಡು ಗಂಗರ ಆಳ್ವಿಕೆಯು ಕೊನೆಗೊಳ್ಳಲು ಕಾರಣರಾಗಿದ್ದರು.

ವಿಷ್ಣುವರ್ಧನನ ಮಹದಾಶೆ ಪ್ರಮುಖವಾಗಿ ತಲಕಾಡನ್ನು ಚೋಳರಿಂದ ಬಿಡಿಸುವುದಾಗಿತ್ತು. ಅಂತಿಮವಾಗಿ ತಲಕಾಡನ್ನು ಕ್ರಿ.ಶ.1114ರಲ್ಲಿ ಚೋಳರನ್ನು ಸದೆಬಡಿದು ಪುನಃ ಕರ್ನಾಟಕದ ರಾಜಮನೆತನದ ಆಳ್ವಿಕೆಗೆ ಒಳಪಡಿಸುವುದರಲ್ಲಿ ಸಂಪೂರ್ಣವಾಗಿ ವಿಜಯಿಯಾದನು. ಕಲ್ಯಾಣಿ ಚಾಲುಕ್ಯರ ವಿರುದ್ಧ ಸತತವಾಗಿ ಹೋರಾಟ ನಡೆಸಿ ತನ್ನ ರಾಜ್ಯವನ್ನು ವಿಸ್ತರಿಸಿದನು. ತನ್ನ ಪ್ರಯತ್ನಗಳಲ್ಲಿ ಅನೇಕ ಬಾರಿ ಹಿಮ್ಮೆಟ್ಟಿಸಲ್ಪಟ್ಟರೂ ಚಾಲುಕ್ಯರ ಹಿಡಿತದಲ್ಲಿದ್ದ ಅನೇಕ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಅನೇಕ ಮಹಾಮಾಂಡಳಿಕರು ಕೂಡ ಚಾಲುಕ್ಯ ಸಾಮ್ರಾಟನನ್ನು ತ್ಯಜಿಸಿ ವಿಷ್ಣುವರ್ಧನನ ಅಧಿಕಾರವನ್ನು ಒಪ್ಪಿಕೊಂಡರು. ವಿಷ್ಣುವರ್ಧನನ ಆಳ್ವಿಕೆಯ ಅಂತ್ಯದ ವೇಳೆಗೆ ಹೊಯ್ಸಳ ರಾಜ್ಯ ಹೆಚ್ಚುಕಡಿಮೆ ಒಂದು ಸ್ವತಂತ್ರ ರಾಜ್ಯದ ಅಸ್ತಿತ್ವವನ್ನು ಪಡೆದುಕೊಂಡಿತೆಂದು ಹೇಳಿದರೆ ತಪ್ಪಾಗಲಾರದು. ವಿಷ್ಣುವರ್ಧನನು ಬದುಕಿರುವವರೆಗೂ ಅವನು ವಿಧೇಯ ಸಾಮಂತನಾಗಿರುವುದಕ್ಕಿಂತ ಸ್ವತಂತ್ರ ರಾಜನಂತೆಯೇ ರಾಜ್ಯವನ್ನಾಳಿದನು. ಈ ರೀತಿಯಾಗಿ ವಿಷ್ಣುವರ್ಧನನ ಕಾಲ ಹೊಯ್ಸಳ ರಾಜ್ಯದ ಔನ್ನತ್ಯದಲ್ಲಿ ಒಂದು ಪ್ರಮುಖ ಹಂತ. ಮುಂದೆ ಅದು ಹೊಯ್ಸಳ ಎರಡನೆಯ ವೀರಬಲ್ಲಾಳನ ಕಾಲದಲ್ಲಿ ಒಂದು ಶಕ್ತಿಯುತ ಸಾಮ್ರಾಜ್ಯವಾಗಿ ಮಾರ್ಪಡಲು ಭದ್ರ ತಳಪಾಯ ಹಾಕಿದ ಕೀರ್ತಿಗೆ ವಿಷ್ಣುವರ್ಧನನು ಪಾತ್ರನಾದನು. "ವಿಷ್ಣುವರ್ಧನ ನಿಜವಾಗಿ ಹೊಯ್ಸಳ ಸಾಮ್ರಾಜ್ಯದ ನಿರ್ಮಾಪಕ" ಎಂದು ಎಸ್.ಕೆ.ಅಯ್ಯಂಗಾರ್ ಅಭಿಪ್ರಾಯ ಪಟ್ಟಿದ್ದಾರೆ.

ವಿಷ್ಣುವರ್ಧನನ ನಂತರ ಅವನ ಮಗ 1ನೇ ನರಸಿಂಹ ಪಟ್ಟಕ್ಕೆ ಬಂದ. ಅವನ ಪಟ್ಟಕ್ಕೆ ಬಂದಾಗ ಅವನಿಗೆ ಕೇವಲ ಎಂಟು ವರ್ಷ. ನಿಷ್ಠಾವಂತ ಮಂತ್ರಿಗಳು ಮತ್ತು ವಿಷ್ಣುವರ್ಧನನ ಅಂಗರಕ್ಷಕರು ಅವನನ್ನು ಪಟ್ಟದಲ್ಲಿ ಕೂರಿಸಿ ಅವನ ಹೆಸರಿನಲ್ಲಿ ಆಡಳಿತ ನಡೆಸಿದರು. ಕದಂಬ, ಸಿಂದ ಮತ್ತು ಪಾಂಡ್ಯರು ತಮ್ಮ ನಿಷ್ಠೆಯನ್ನು ಬದಲಿಸಿಕೊಂಡು ಚಾಲುಕ್ಯರ ಸಾರ್ವಭೌಮತೆಯನ್ನು ಒಪ್ಪಿಕೊಂಡರು. ಚಾಲುಕ್ಯರ ರಾಜ ಜಗದೇಕಮಲ್ಲ ತನ್ನ ಅಧಿಕಾರವನ್ನು ಬಂಕಾಪುರ ಮತ್ತು ಹಾನಗಲ್ ಪ್ರದೇಶದಲ್ಲಿ ಮತ್ತೆ ಸ್ಥಾಪಿಸಿದ. ತುಂಗಭದ್ರ ಪ್ರದೇಶದಲ್ಲಿ ಹೊಯ್ಸಳ ಆಳ್ವಿಕೆ ಕೊನೆಗೊಂಡಿತು. ಕಲ್ಯಾಣಿ ಚಾಲುಕ್ಯರ ಮತ್ತು ಹೊಯ್ಸಳರ ಕಾಲದಲ್ಲಿ ಸಾಮಂತರಾಗಿ ಮಾಡಿಕೊಂಡರು. ನರಸಿಂಹ ಪ್ರಾಬಲ್ಯಕ್ಕೆ ಬಂದ ಮೇಲೆ ಅವನು ವಿಲಾಸಿಯಾಗಿ ಅವನ ಕರ್ತವ್ಯಗಳನ್ನು ನಿರ್ಲಕ್ಷಿಸಿದನು. ಆಗ ಚೆಂಗಾಳ್ವರು ಹೊಯ್ಸಳ ಸೀಮೆಯ ಮೇಲೆ ದಾಂಧಲೆ ಆರಂಭಿಸಿದರು. ಆನಂತರ ಹೊಯ್ಸಳ ಸಾಮ್ರಾಜ್ಯದ ಕೆಲವು ಭಾಗಗಳನ್ನು ಅತಿಕ್ರಮಿಸಿದರು. ನರಸಿಂಹನ ಮಂತ್ರಿಗಳು ಮತ್ತು ದಂಡನಾಯಕರು ಶೂರರಾಗಿ ಹಾಗೂ ನಿಷ್ಠರಾಗಿ ಉಳಿದಿದ್ದರಿಂದ ಹೊಯ್ಸಳ ಸಾಮ್ರಾಜ್ಯ ಸಂಪೂರ್ಣ ವಿನಾಶವಾಗುವುದು ತಪ್ಪಿತ್ತು.

ಅವನ ಆಳ್ವಿಕೆಯ ಕಡೆಯಲ್ಲಿ ಅವನು ತನ್ನ ಪತ್ನಿ ಏಚಲಾದೇವಿ ಮತ್ತು ತನ್ನ ಮಗ ವೀರಬಲ್ಲಾಳನನ್ನು ಉತ್ತರಾಧಿಕಾರಿಗಳಾಗಿ ನೇಮಿಸಿದ. ಹೊಯ್ಸಳ ಮಂತ್ರಿಗಳ ಪ್ರಾಮಾಣಿಕ ಪ್ರಯತ್ನದ ನಂತರವೂ ಹೊಯ್ಸಳ ಸಾಮ್ರಾಜ್ಯ ತನ್ನ ಹಿರಿಮೆ ಕಳೆದುಕೊಳ್ಳುತ್ತಿತ್ತು. ರಾಜಕುಮಾರ ಬಲ್ಲಾಳ ತನ್ನ ತಂದೆಯ ಈ ಧೋರಣೆಯಿಂದ ಬೇಸತ್ತಿದ್ದ. ಕ್ರಿ.ಶ.1172 ರಲ್ಲಿ ಅವನು ತನ್ನ ತಂದೆಯ ವಿರುದ್ಧವೇ ದಂಗೆ ಎದ್ದು, ಆದಾಗ್ಯೂ ಮಗ ಮತ್ತು ತಂದೆಯ ಮಂತ್ರಿಗಳ ಮಧ್ಯೆ ಒಂದು ಒಪ್ಪಂದವಾಯಿತು. ಅನಂತರ ನರಸಿಂಹ ಹೆಚ್ಚು ಕಾಲ ಬಾಳಲಿಲ್ಲ. ಅನಾರೋಗ್ಯದ ಕಾರಣದಿಂದ ಕ್ರಿ.ಶ.1173 ರಲ್ಲಿ ಮರಣ ಹೊಂದಿದನು. ಒಬ್ಬ ವಿದ್ವಾಂಸ ಹೇಳಿದಂತೆ ನರಸಿಂಹನ ಮೂವತ್ತು ವರ್ಷದ ಆಳ್ವಿಕೆ ಹೊಯ್ಸಳ ಸಾಮ್ರಾಜ್ಯದ ಅತಿ ಕೆಟ್ಟ ಅವಧಿಯೇನಲ್ಲ, ಆದರೆ ಅದು ನಿರ್ಬಲತೆ, ಕೊರತೆ ಮತ್ತು ಸೋಲುಗಳ ಚಿತ್ರಣವಾಗಿತ್ತು. (ದಿ ಹೊಯ್ಸಳಾಸ್ ಪುಟ 70).

ಎರಡನೇ ವೀರಬಲ್ಲಾಳನ ಪಟ್ಟಾಭಿಷೇಕವು 22ನೇ ಜುಲೈ ಕ್ರಿ.ಶ.1172 ರಲ್ಲಿ ಆಯಿತು. ಈ ಘಟನೆಯನ್ನು ಆಸ್ಥಾನ ಕವಿಗಳು ರಾಮರಾಜ್ಯದ ಆರಂಭ ಎಂದು ಕರೆದಿದ್ದಾರೆ. ಅವನ ಪಟ್ಟಾಭಿಷೇಕವಾದ ಕೆಲವೇ ಸಮಯದಲ್ಲಿ ಅವನು ದಂಡಯಾತ್ರೆಗಳ ಯುಗವನ್ನೇ ಆರಂಭಿಸಿದ. ಅದು ಹೆಚ್ಚು ಕಡಿಮೆ ಅವನ ಆಳ್ವಿಕೆಯ ಕಡೆವರೆಗೂ ನಡೆಯಿತು. ಅವನ ಮೊದಲ ದಂಡಯಾತ್ರೆ ಚೆಂಗಾಳ್ವ ಮತ್ತು ಕೊಂಗಾಳ್ವರ ವಿರುದ್ಧ ಆಗಿತ್ತು. ಅವನು ಅವರನ್ನು ಸುಲಭವಾಗಿ ಸೋಲಿಸಿದ ಮತ್ತು ಹೊಯ್ಸಳರ ಸಾರ್ವಭೌಮತೆಯನ್ನು ಒಪ್ಪಿಕೊಳ್ಳುವಂತೆ ಮಾಡಿದ. 1177ರಲ್ಲಿ ಪಾಂಡ್ಯರ ರಾಜ್ಯ ಮತ್ತು ಉಚ್ಚಂಗಿಯನ್ನು ವಶಪಡಿಸಿಕೊಂಡ ಹಾಗೂ ಪಾಂಡ್ಯರ ಸೀಮೆಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಹೊಯ್ಸಳ ಸಾಮ್ರಾಜ್ಯ ಕೃಷ್ಣಾನದಿವರೆಗೂ ಹರಡಿಕೊಂಡಿತ್ತು ಮತ್ತು ಅದಕ್ಕೆ ಸಾಮ್ರಾಜ್ಯದ ಪಟ್ಟ ಬಂದಿತ್ತು. ಬಲ್ಲಾಳ ಬಹಳ ಬೇಗ ಉದ್ರೆ, ದೂರೆವಾಡಿ, ಬಲ್ಲಾರ, ಒಂದನಿತೆ, ಲಕ್ಕುಂಡಿ ಮತ್ತು ಇತರ ಪ್ರದೇಶಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು ತನ್ನ ರಾಜ್ಯದ ಸೀಮೆಗಳನ್ನು ವಿಸ್ತರಿಸಿಕೊಂಡ.

- **ತಮಿಳುನಾಡಿನ ರಾಜಕೀಯದಲ್ಲಿ ಅತಿಯಾದ ಹಸ್ತಕ್ಷೇಪ**

ಹೊಯ್ಸಳ ರಾಜರುಗಳು ತಮ್ಮ ಸಾಮ್ರಾಜ್ಯವನ್ನು ಹೆಚ್ಚು ಪ್ರಬಲಗೊಳಿಸಿದ್ದಲ್ಲದೆ ಸಮಕಾಲೀನ ರಾಜರುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ತಮಿಳುನಾಡಿನ ಅತಂತ್ರ ರಾಜಕೀಯ ಪರಿಸ್ಥಿತಿ ಹೊಯ್ಸಳರನ್ನು ಹಸ್ತಕ್ಷೇಪ ಮಾಡಲು ಪ್ರೇರೇಪಿಸಿತು.

## • ಎರಡನೇ ಬಲ್ಲಾಳ ಮತ್ತು ಎರಡನೇ ನರಸಿಂಹನ ಹಸ್ತಕ್ಷೇಪ

2ನೇ ಬಲ್ಲಾಳನ ಅವಧಿಯಲ್ಲಿ ಹೊಯ್ಸಳರ ಗಮನ ತಮಿಳುನಾಡಿನತ್ತ ತಿರುಗಿತು. ಈತನ ಅಧಿಕಾರಾವಧಿಯಲ್ಲಿ ಹೊಯ್ಸಳರು ದಕ್ಷಿಣ ಭಾರತದಲ್ಲಿ ಶಕ್ತಿಶಾಲಿಗಳಾದರು. ಚೋಳರು ತಮ್ಮ ಸಾಮಂತರುಗಳಿಂದ ವಿರೋಧ ವ್ಯಕ್ತವಾದಾಗ ಹೊಯ್ಸಳ ರಾಜನ ಸಹಾಯವನ್ನು ಯಾಚಿಸಿದನು. ಚೋಳರನ್ನು ಪಾಂಡ್ಯರಿಂದ ರಕ್ಷಿಸಲು 2ನೇ ಬಲ್ಲಾಳನು ತನ್ನ ಮಗ ನರಸಿಂಹನ ನೇತೃತ್ವದಲ್ಲಿ ಪ್ರಬಲ ಸೈನ್ಯವನ್ನು ಕಳುಹಿಸಿದನು. ನರಸಿಂಹನು ಚೋಳರ ಅಧಿಕಾರವನ್ನು ಪುನರ್ ಸ್ಥಾಪಿಸುವಲ್ಲಿ ಸಫಲನಾದನು. ಇದು ತಮಿಳುನಾಡಿನಲ್ಲಿ ಹೊಯ್ಸಳರ ಪ್ರಾರಂಭದ ಪ್ರಭಾವವಾಗಿತ್ತೇ ಹೊರತು ಸಾಮ್ರಾಜ್ಯದ ವಿಸ್ತರಣಾ ದೃಷ್ಟಿಯಿರಲಿಲ್ಲ. ಆದರೆ ಚೋಳರ ದೌರ್ಬಲ್ಯದಿಂದಾಗಿ ಹೊಯ್ಸಳರಿಗೆ ತಮಿಳುನಾಡಿನಲ್ಲಿ ಹಸ್ತಕ್ಷೇಪ ಅತ್ಯವಶ್ಯಕ-ವೆನಿಸಿತು. ಇದು ಎರಡನೇ ಬಲ್ಲಾಳನ ಉತ್ತರಾಧಿಕಾರಿಯಾದ ನರಸಿಂಹನನ್ನು ತಮಿಳುನಾಡಿನ ಪ್ರದೇಶಗಳಲ್ಲಿ ಹಸ್ತಕ್ಷೇಪ ಮಾಡಲು ಒತ್ತಾಯಪಡಿಸಿತು. ಪಾಂಡ್ಯ, ಕಾಡವ ಮತ್ತು ಬಾಣರು ಮೈತ್ರಿಕೂಟವನ್ನು ರಚಿಸಿ 3ನೇ ರಾಜರಾಜನ ವಿರುದ್ಧ ದಂಡೆತ್ತಿ ಹೋದರು. ಆಗ ಕೊಪ್ಪರುಂಜಿಂಗ ಇವನನ್ನು ಸೋಲಿಸಿ ಸೆರೆಯಲ್ಲಿಟ್ಟನು. ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲಿ ರಾಜರಾಜ ಸಹಾಯ ಕೋರಲಾಗಿ 2ನೇ ನರಸಿಂಹ ಸ್ವತಃ ಧಾವಿಸಿ, ಕಾಡವರನ್ನು ಸೋಲಿಸಿ ಚೋಳ ರಾಜನನ್ನು ಸೆರೆಯಿಂದ ಬಿಡುಗಡೆಗೊಳಿಸಿದನು. ನರಸಿಂಹ ಸೇವುಣರ ವಿರುದ್ಧ ಯುದ್ಧದಲ್ಲಿ ನಿರತನಾಗಿದ್ದ ಸಂದರ್ಭದಲ್ಲಿ ಪಾಂಡ್ಯರು ತಮ್ಮ ಸಾಮಂತರಾದ ಮಗಾರ ಮತ್ತು ಕಾಡವರೊಡನೆ ಕೂಡಿ ಚೋಳ ದೊರೆಯನ್ನು ಸೋಲಿಸಿದರು. ನರಸಿಂಹನ ದಂಡನಾಯಕರಾದ ಅಪ್ಪಯ್ಯ ಮತ್ತು ಗೋಪಣ್ಣ ಎಂಬುವರು ಪಾಂಡ್ಯ ಮತ್ತವರ ಸಾಮಂತರನ್ನು ಸೋಲಿಸಿ ಚೋಳ ರಾಜನನ್ನು ಸೆರೆಯಿಂದ ಮುಕ್ತಿಗೊಳಿಸಿದರು. ಇದೇ ಸಂದರ್ಭದಲ್ಲಿ ನರಸಿಂಹನೂ ತಮಿಳುನಾಡಿಗೆ ಧಾವಿಸಿದನು. ಶ್ರೀರಂಗಂ ಬಳಿಯಲ್ಲಿ 2ನೇ ರಾಜರಾಜನಿಂದ ವಿಶಾಲವಾದ ಭೂಮಿಯನ್ನು ಬಹುಮಾನವಾಗಿ ಪಡೆದನು. ಶ್ರೀರಂಗಂ ಬಳಿಯ ಕಣ್ಣಾನೂರು ಅಥವಾ ವಿಕ್ರಮಪುರ ಹೊಯ್ಸಳರ ಆಡಳಿತ ಕೇಂದ್ರವಾಯಿತು. ಈ ಮೇಲಿನ ಕಾರಣಗಳಿಂದಾಗಿ ನರಸಿಂಹನು ತಮಿಳುನಾಡಿನ ವಿಚಾರಗಳಲ್ಲಿ ಹೆಚ್ಚು ಆಸಕ್ತಿದಾಯಕನಾಗಿದ್ದನು.

## • ವೀರ ಸೋಮೇಶ್ವರನ ಸಂಪೂರ್ಣ ವಿಫಲತೆ

ವೀರ ಸೋಮೇಶ್ವರನ ಅಧಿಕಾರಾವಧಿಯಲ್ಲಿ ಹೊಯ್ಸಳರ ವೈಭವ ತುತ್ತತುದಿಯನ್ನು ತಲುಪಿತು. ಅದೇ ರೀತಿ ಈತನ ಅಧಿಕಾರದ ಕೊನೆಯ ಅವಧಿಯಲ್ಲಿ ಪ್ರಭಾವವೂ ದುರಂತ

ಅಂತ್ಯವನ್ನು ಕಂಡಿತು. ಇದಕ್ಕೆ ಪ್ರಮುಖ ಅಂಶವೆಂದರೆ ಈತ ತಮಿಳುನಾಡಿನಲ್ಲಿ ವಿಫಲ ಹೊಂದಿದ್ದು ವೀರಸೋಮೇಶ್ವರ ಅಧಿಕಾರರೂಢನಾದಾಗಲಿಂದಲೂ ಕರ್ನಾಟಕಕ್ಕಿಂತ ತಮಿಳು–ನಾಡಿನ ವಿಚಾರಗಳಲ್ಲಿ ಹೆಚ್ಚು ಆಸಕ್ತಿ ಹೊಂದಿದವನಾಗಿದ್ದನು. ಅವನ ತಾಯಿ ಅವನಿನ್ನೂ ಚಿಕ್ಕವನಿದ್ದಾಗಲೇ ತೀರಿ ಹೋದುದರಿಂದ ನರಸಿಂಹನ ಸಹೋದರಿಯಾದ ಸೋಮಲದೇವಿಯ ಪೋಷಣೆಯಲ್ಲಿ ಬೆಳೆದನು. ಸೋಮಲದೇವಿಯನ್ನು 3ನೇ ರಾಜರಾಜ ವಿವಾಹವಾದ್ದರಿಂದಾಗಿ ಸೋಮೇಶ್ವರನು ಚಿಕ್ಕಂದಿನಿಂದಲೇ ತಮಿಳುನಾಡಿನ ವಿಚಾರಗಳಲ್ಲಿ ಆಸಕ್ತಿ ಹೊಂದಿದನು. ತಂದೆಯ ಮರಣಾನಂತರವೂ ದಕ್ಷಿಣದಲ್ಲೇ ಉಳಿದು ಚೋಳರನ್ನು ಬೆಂಬಲಿಸಿದನು. ಕಣ್ಣಾನೂರು ಅವನ ಆಡಳಿತ ಕೇಂದ್ರವಾಯಿತು.

ಕ್ರಿ.ಶ.1236ರಲ್ಲಿ ಈತನ ಪಟ್ಟಾಭಿಷೇಕ ದ್ವಾರಸಮುದ್ರದಲ್ಲಿ ಏರ್ಪಟ್ಟ ನಂತರವೂ ಕಣ್ಣಾನೂರಿಗೆ ಹಿಂತಿರುಗಿ ತನ್ನ ಆಡಳಿತ ಕೇಂದ್ರದಲ್ಲೇ ಉಳಿದು ಆಗಾಗ್ಗೆ ಮಾತ್ರ ದ್ವಾರಸಮುದ್ರಕ್ಕೆ ಭೇಟಿ ನೀಡುತ್ತಿದ್ದ. ತಮಿಳುನಾಡಿನಲ್ಲಿ ಆಗಾಗ್ಗೆ ತಲೆದೋರುತ್ತಿದ್ದ ಸಮಸ್ಯೆಗಳಿಂದಾಗಿ ಕಣ್ಣಾನೂರಿನಲ್ಲೇ ವಾಸ್ತವ್ಯ ಹೂಡಿ ಆ ಸಮಸ್ಯೆಗಳ ಪರಿಹಾರಕ್ಕೆ ಹೆಚ್ಚಿನ ಗಮನ ಹರಿಸಿದನು. ಇದರಿಂದಾಗಿ ಉತ್ತರದ ಗಡಿಗಳನ್ನು ನಿರ್ಲಕ್ಷಿಸಿದನು. ಇದು ಸೇವುಣರಿಗೆ ಹೊಯ್ಸಳರ ಹೆಚ್ಚಿನ ಪ್ರದೇಶಗಳನ್ನು ಆಕ್ರಮಿಸಲು ಪ್ರೇರೇಪಿಸಿತು. ಈತ 3ನೇ ರಾಜರಾಜ ಮತ್ತು 3ನೇ ರಾಜೇಂದ್ರನ ಸಮಕಾಲೀನ. ಸೋಮೇಶ್ವರನ ಪಟ್ಟಾಭಿಷೇಕದ ನಂತರ ಕಾಡವ ರಾಜನು 3ನೇ ರಾಜರಾಜನಿಗೆ ತೊಂದರೆ ಕೊಡಲಾಗಿ ಸೋಮೇಶ್ವರನು ಆತನನ್ನು ಸೋಲಿಸಿದನು. ಅಷ್ಟರಲ್ಲಿ 2ನೇ ಸುಂದರಪಾಂಡ್ಯನ ಕಾಲದಲ್ಲಿ ಈ ಎರಡೂ ಮನೆತನಗಳ ನಡುವೆ ವೈವಾಹಿಕ ಸಂಬಂಧವೇರ್ಪಟ್ಟಿತು. ಆದ್ದರಿಂದ ಸೋಮೇಶ್ವರ ಚೋಳ ಮತ್ತು ಪಾಂಡ್ಯರೊಂದಿಗೆ ಸ್ನೇಹದಿಂದಿರಲು ಪ್ರಯತ್ನಿಸಿದನು. ಈತನ ಈ ಇಬ್ಬಗೆ ನೀತಿಯನ್ನು ಚೋಳರು ಸಹಿಸದಾದರು. 3ನೇ ರಾಜೇಂದ್ರ ಚೋಳನು ಪಾಂಡ್ಯ ದೊರೆ 2ನೇ ಸುಂದರಪಾಂಡ್ಯನ ಮೇಲೆ ಆಕ್ರಮಣ ಮಾಡಿದನು. ಸೋಮೇಶ್ವರನು ಈ ಯುದ್ಧದಲ್ಲಿ ಭಾಗವಹಿಸಿ ಚೋಳರ ವಿರುದ್ಧ 2ನೇ ಸುಂದರಪಾಂಡ್ಯನಿಗೆ ಬೆಂಬಲ ನೀಡಿದನು. ಮೊದಲಿನಂತೆ ಪಾಂಡ್ಯರ ವಿರುದ್ಧ ಚೋಳರಿಗೆ ಬೆಂಬಲ ನೀಡುವುದನ್ನು ಬಿಟ್ಟು ಚೋಳರ ಮೇಲೆಯೇ ಪಾಂಡ್ಯರಿಗೆ ಸಹಾಯ ನೀಡತೊಡಗಿದನು. ಆದರೆ ತಮಿಳುನಾಡಿನಲ್ಲಿ ಈತನ ಸಾರ್ವಭೌಮತೆ ಹೆಚ್ಚು ಕಾಲ ಮುಂದುವರೆಯಲಿಲ್ಲ. ಏಕೆಂದರೆ ಕ್ರಿ.ಶ.1251ರಲ್ಲಿ ಜಟವರ್ಮನ್ ಸುಂದರಪಾಂಡ್ಯನು ಅಧಿಕಾರದ ಗದ್ದುಗೆ ಏರಿದಾಗ ತಮಿಳುನಾಡಿನ ರಾಜಕೀಯ ಚಿತ್ರಣ ಸಂಪೂರ್ಣ ಬದಲಾಯಿತು. ಈತ ಚೋಳರ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದಲ್ಲದೆ ಹೊಯ್ಸಳ ದೊರೆ

ಸೋಮೇಶ್ವರನನ್ನು ಸೋಲಿಸಿ ತಮಿಳುನಾಡಿನ ಹೊಯ್ಸಳರ ಕೆಲವಾರು ಪ್ರದೇಶಗಳನ್ನು ಆಕ್ರಮಿಸಿದನು. ಇದರಿಂದಾಗಿ ಹೊಯ್ಸಳರಿಗೆ ತೀವ್ರ ಹಿನ್ನಡೆ ಉಂಟಾಯಿತು. ಇದರಿಂದಾಗಿ ಸೋಮೇಶ್ವರನ ಅಧಿಕಾರದ ಕೊನೆಯಲ್ಲಿ ಹೊಯ್ಸಳರು ತಮಿಳುನಾಡಿನಲ್ಲಿ ಸಂಕಷ್ಟಕ್ಕೆ ಗುರಿಯಾದರು. ಜೊತೆಗೆ ಉತ್ತರದ ಗಡಿಯಲ್ಲಿ ಸೇವುಣರಿಂದ ಸೋಲನ್ನನುಭವಿಸಿದರು. 2ನೇ ವೀರಬಲ್ಲಾಳನಂತೆ ಹೊಯ್ಸಳ ಸಾಮ್ರಾಜ್ಯದ ಇತರ ದೊರೆಗಳು ಉತ್ತರದ ಗಡಿಯಲ್ಲಿ ಸೇವುಣರ ಹೋರಾಟವನ್ನು ಎದುರಿಸುವಲ್ಲಿ ಸಫಲರಾಗಲಿಲ್ಲ. ಇದರಿಂದಾಗಿ ಹೊಯ್ಸಳರು ತಮ್ಮ ಪ್ರದೇಶಗಳನ್ನು ಕಳೆದುಕೊಂಡಿದ್ದಲ್ಲದೆ ಸಾಮಂತರ ಮೇಲೆ ತಮ್ಮ ಹಿಡಿತವನ್ನೂ ಕಳೆದುಕೊಂಡರು.

- **3ನೇ ಬಲ್ಲಾಳನು ತಮಿಳುನಾಡಿನ ರಾಜಕೀಯ ವಿಚಾರಗಳಲ್ಲಿ ಭಾಗವಹಿಸಲು ಕಾರಣವಾದ ಅಂಶಗಳು**

ಹಸ್ತಕ್ಷೇಪದ ವಿಚಾರದಲ್ಲಿ 3ನೇ ಬಲ್ಲಾಳನೂ ಸಹ ತನ್ನ ಹಿಂದಿನವರಿಗಿಂತ ಹೊರತಾಗಿರಲಿಲ್ಲ. 3ನೇ ಬಲ್ಲಾಳನು ಹೊಯ್ಸಳ ಸಾಮ್ರಾಜ್ಯವನ್ನು ಒಂದುಗೂಡಿಸಿದ ನಂತರ ತಮಿಳುನಾಡಿನ ವಿಚಾರಗಳಲ್ಲಿ ಭಾಗವಹಿಸಲಾರಂಭಿಸಿದನು. ಆ ಹೊತ್ತಿಗಾಗಲೇ ಚೋಳರ ಅಧಿಕಾರ ಕೊನೆಗೊಂಡು ಪಾಂಡ್ಯರು ತಮಿಳುನಾಡಿನಲ್ಲಿ ಪ್ರಭಾವಶಾಲಿಗಳಾಗಿದ್ದರು. ಪ್ರಾರಂಭದಲ್ಲಿ ಯಾವುದೇ ಸಮಸ್ಯೆಗಳಿಲ್ಲದ ಪಾಂಡ್ಯ ಸಾಮ್ರಾಜ್ಯದಲ್ಲಿ ಕುಲಶೇಖರನ ಮರಣದ ನಂತರ ಆತನ ಮಕ್ಕಳಾದ ಸುಂದರಪಾಂಡ್ಯ ಮತ್ತು ವೀರಪಾಂಡ್ಯರ ನಡುವೆ ಅಂತರ್‌ಯುದ್ಧ ಆರಂಭವಾಯಿತು. ಜಟವರ್ಮನ್ ಸುಂದರಪಾಂಡ್ಯನ ಅಧಿಕಾರಾವಧಿಯಲ್ಲಿ ಹೊಯ್ಸಳರು ಕಳೆದುಕೊಂಡ ತಮಿಳು ಪ್ರದೇಶಗಳನ್ನು ಪುನಃ ಹಿಂದಿರುಗಿಸುವುದಾಗಿ ವಚನವಿತ್ತು ಸುಂದರಪಾಂಡ್ಯನು 3ನೇ ಬಲ್ಲಾಳನ ಸಹಾಯವನ್ನು ಕೋರಿದನು. 3ನೇ ಬಲ್ಲಾಳನು ಉತ್ತರದ ಗಡಿಗಳ ರಕ್ಷಣೆಯನ್ನು ನಿರ್ಲಕ್ಷಿಸಿ ಪಾಂಡ್ಯರ ರಾಜ್ಯಕ್ಕೆ ತನ್ನ ಸೈನ್ಯಸಮೇತ ಧಾವಿಸಿದನು. ಈ ಅವಧಿಯಲ್ಲಿ ದೆಹಲಿ ಸುಲ್ತಾನರ ಆಕ್ರಮಣಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಸಂಪೂರ್ಣ ವಿಫಲನಾದನು. ಕ್ರಿ.ಶ.1297ರ ಪ್ರಾರಂಭದ ಹೊತ್ತಿಗಾಗಲೇ ಸೇವುಣರ ರಾಜ ರಾಮಚಂದ್ರನು ದೆಹಲಿ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯ ದಾಳಿಗೆ ತುತ್ತಾಗಿದ್ದನು. ಅಪಾಯವನ್ನು ಅರಿತ ಬಲ್ಲಾಳನು ಯಾವುದೇ ಯುದ್ಧ ತಯಾರಿಯಲ್ಲಿ ತೊಡಗದೆ ತಪ್ಪು ಮಾಡಿದನು. ಪರಿಣಾಮವಾಗಿ ಕ್ರಿ.ಶ.1301ರಲ್ಲಿ ಮಲ್ಲಿಕಾಫರನು ದ್ವಾರಸಮುದ್ರವನ್ನು ಮುತ್ತಿದನು. ಇದರಿಂದಾಗಿ ಹೊಯ್ಸಳರಿಗೆ ದೊಡ್ಡ ಹೊಡೆತವುಂಟಾಯಿತು. ತಕ್ಷಣ ಬಲ್ಲಾಳ ಪಾಂಡ್ಯ ರಾಜ್ಯದಿಂದ ತನ್ನ ರಾಜಧಾನಿಗೆ ಹಿಂದಿರುಗಿದನು. ಇಂತಹ ಸಂಧಿಗ್ಧ ಪರಿಸ್ಥಿತಿಯಲ್ಲಿ ಯುದ್ಧದ ಬದಲಾಗಿ ದೆಹಲಿ ಸೈನ್ಯದೊಂದಿಗೆ

ಶಾಂತಿ ಒಪ್ಪಂದವನ್ನು ಏರ್ಪಡಿಸಿಕೊಂಡನು. ಇದರ ಪ್ರಕಾರ ಅಪಾರ ಪ್ರಮಾಣದ ಸಂಪತ್ತು, ಕುದುರೆಗಳೂ ಮತ್ತು ಆನೆಗಳನ್ನು ನೀಡಿ ತನ್ನ ರಾಜಧಾನಿ ಮತ್ತು ಸಾಮ್ರಾಜ್ಯವನ್ನು ರಕ್ಷಿಸಿಕೊಂಡನು. ನಂತರ ಮಲ್ಲಿಕಾಫರನು ಪಾಂಡ್ಯ ರಾಜ್ಯದ ಮೇಲೆ ನಡೆಸಿದ ದಾಳಿಯಲ್ಲಿ ಬಲ್ಲಾಳನು ಆತನಿಗೆ ನೆರವು ನೀಡಿದನು. ಒಟ್ಟಿನಲ್ಲಿ ಬಲ್ಲಾಳನು ದೆಹಲಿ ಸುಲ್ತಾನನ ಆಕ್ರಮಣದ ಜೊತೆಗೆ ದಕ್ಷಿಣದಲ್ಲಿ ಬದಲಾದ ರಾಜಕೀಯ ಪರಿಸ್ಥಿತಿಯನ್ನು ಅರಿಯಲು ಸಂಪೂರ್ಣ ವಿಫಲನಾದನು. ಸೇವುಣರ ರಾಜನು ದೆಹಲಿ ಸುಲ್ತಾನನಿಂದ ಆಕ್ರಮಣಕ್ಕೊಳಗಾದ ಸಂದರ್ಭದಲ್ಲಿ 3ನೇ ಬಲ್ಲಾಳನು ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳದೆ ತಮಿಳುನಾಡಿನ ಪಾಂಡ್ಯ ಸಾಮ್ರಾಜ್ಯದ ಅಂತರ್ ಯುದ್ಧದಲ್ಲಿ ಮಗ್ನನಾಗಿದ್ದನು. ಇದು ಆತನ ದೂರದೃಷ್ಟಿಯ ಕೊರತೆಯನ್ನು ತೋರಿಸುತ್ತದೆ.

ಈ ಎಲ್ಲಾ ಅಂಶಗಳಿಂದ 2ನೇ ವೀರಬಲ್ಲಾಳನ ನಂತರದ ಎಲ್ಲಾ ಹೊಯ್ಸಳ ರಾಜರು ತಮಿಳುನಾಡಿನ ಆಂತರಿಕ ವಿಚಾರಗಳಲ್ಲಿ ಆಸಕ್ತಿ ವಹಿಸಿದರೆಂದು ತಿಳಿದುಬರುತ್ತದೆ. ಇದರಿಂದಾಗಿ ತಮ್ಮ ಉತ್ತರದ ಗಡಿಗಳನ್ನು ನಿರ್ಲಕ್ಷಿಸಿದರು. ಮೊದಲು ಸೇವುಣರು ನಂತರ ದೆಹಲಿ ಸುಲ್ತಾನರು ಹೊಯ್ಸಳ ಸಾಮ್ರಾಜ್ಯದ ಅವನತಿಗೆ ಕಾರಣವಾಯಿತು.

- **ಸಾಮ್ರಾಜ್ಯದ ವಿಭಜನೆ**

ಹೊಯ್ಸಳ ಸಾಮ್ರಾಜ್ಯದ ಅವನತಿಗೆ ಪ್ರಮುಖ ಕಾರಣವೆಂದರೆ ಸಾಮ್ರಾಜ್ಯದ ವಿಭಜನೆ. ವೀರಸೋಮೇಶ್ವರನ ಇಬ್ಬರು ರಾಣಿಯರಿಂದ ವೀರನರಸಿಂಹ ಮತ್ತು ರಾಮನಾಥರೆಂಬ ಇಬ್ಬರು ಮಕ್ಕಳಿದ್ದರು. ಒಂದೇ ವಯಸ್ಸಿನವರಾದ ಈ ಮಲಸಹೋದರರ ನಡುವೆ ಹೊಂದಾಣಿಕೆ ಇರಲಿಲ್ಲ. ವೀರಸೋಮೇಶ್ವರನು ತನ್ನ ಆಳ್ವಿಕೆಯ ಕೊನೆಯ ದಿನಗಳಲ್ಲಿ ರಾಜ್ಯವನ್ನು ಎರಡು ಭಾಗಗಳಾಗಿ ವಿಂಗಡಿಸಿದನು. ದ್ವಾರಸಮುದ್ರ ರಾಜಧಾನಿಯನ್ನೊಳಗೊಂಡ ಕರ್ನಾಟಕವನ್ನು ವೀರ ನರಸಿಂಹನಿಗೂ ಕಣ್ಣಾನೂರು ರಾಜಧಾನಿಯನ್ನೊಳಗೊಂಡ ತಮಿಳು ಪ್ರದೇಶಗಳನ್ನು ವೀರ ರಾಮನಾಥನಿಗೂ ನಿಯುಕ್ತಿಗೊಳಿಸಿದನು. ಈ ವಿಭಜನೆಯಿಂದಾಗಿ ಸಂಪನ್ಮೂಲಗಳೂ ವಿಭಾಗಗೊಂಡು ಹೊಯ್ಸಳ ಸಾಮ್ರಾಜ್ಯವು ದುರ್ಬಲವಾಯಿತು. ದುರ್ಬಲರಾದ ಇಬ್ಬರೂ ಪರಸ್ಪರ ಹೋರಾಟದಲ್ಲಿ ಮಗ್ನರಾದರು. ಇದು ಹೊಯ್ಸಳ ಸಾಮ್ರಾಜ್ಯದ ಮೇಲೆ ಪರಿಣಾಮ ಬೀರಿತು. ವೀರಬಲ್ಲಾಳನ ನೇತೃತ್ವದಲ್ಲಿ ಒಂದುಗೂಡಿದರೂ ಹೊಯ್ಸಳ ಸಾಮ್ರಾಜ್ಯ ತೀವ್ರ ಒತ್ತಡಕ್ಕೆ ಒಳಗಾಯಿತು.

## • ಸೇವುಣರು ಮತ್ತು ಹೊಯ್ಸಳರ ನಡುವಿನ ಕೊನೆಗೊಳ್ಳದ ಯುದ್ಧಗಳು

ಕಲ್ಯಾಣದ ಚಾಲುಕ್ಯರ ಪತನದ ನಂತರ ಹೊಯ್ಸಳ ಮತ್ತು ಸೇವುಣರು ಅವರ ಹಲವಾರು ಪ್ರದೇಶಗಳನ್ನು ಆಕ್ರಮಿಸಿದರು. ತಮ್ಮ ತಮ್ಮ ಗಡಿಗಳ ವಿಸ್ತರಣಾ ಕಾರ್ಯದಲ್ಲಿ ವಿರೋಧಿಗಳಾದರು. ಇದು ಇವರಿಬ್ಬರ ನಡುವಿನ ನಿರಂತರ ಕದನಗಳಿಗೆ ಕಾರಣವಾಯಿತು.

## • ಹೊಯ್ಸಳ ಸಾಮ್ರಾಜ್ಯದ ಮೇಲೆ ಸೇವುಣರ ಆಕ್ರಮಣ ಮತ್ತು ಪರಿಣಾಮ

5ನೇ ಬಿಲ್ಲಮನು ಸಾಮ್ರಾಜ್ಯದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ನಂತರ ತನ್ನ ನೆಲೆಗಳನ್ನು ಆಕ್ರಮಿಸಿದ್ದ ಹೊಯ್ಸಳ ರಾಜನನ್ನು ಶಿಕ್ಷಿಸಲು ಪ್ರಯತ್ನಿಸಿದನು. ಪ್ರಾರಂಭದಲ್ಲಿ ಬಿಲ್ಲಮನು ಹೊಯ್ಸಳರ ಪ್ರದೇಶಗಳ ಮೇಲೆ ಆಕ್ರಮಣ ಮಾಡುವುದರ ಜೊತೆಗೆ ಹಲವಾರು ಪ್ರದೇಶಗಳನ್ನು ವಶಪಡಿಸಿಕೊಂಡನು. ಗದಗ್‌ನಿಂದ 16ಕಿ.ಮೀ ದಕ್ಷಿಣಕ್ಕಿರುವ ಸೊರಟೂರಿ-ನವರೆಗೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿದಾಗ 5ನೇ ಬಿಲ್ಲಮ ಮತ್ತು 2ನೇ ಬಲ್ಲಾಳನ ನಡುವೆ ನಿರ್ಣಾಯಕ ಕದನವೊಂದು ಜರುಗಿತು. ಹೊಯ್ಸಳ ಸೈನ್ಯ ಜಯ ಗಳಿಸಿತು. ಬಿಲ್ಲಮನು ಲಕ್ಕುಂಡಿ ಕೋಟೆಯಲ್ಲಿ ರಕ್ಷಣೆ ಪಡೆದನು. ನಂತರ 2ನೇ ಬಲ್ಲಾಳನಿಂದ ಹತನಾದನು. 2ನೇ ಜೈತುಗಿ 5ನೇ ಬಿಲ್ಲಮನ ಉತ್ತರಾಧಿಕಾರಿಯಾದನು. ಈತನ ಅಧಿಕಾರಾವಧಿಯಲ್ಲೂ ಹೊಯ್ಸಳರ ಮತ್ತು ಸೇವುಣರ ನಡುವೆ ವೈರತ್ವ ಮುಂದುವರಿಯಿತು. 2ನೇ ಬಲ್ಲಾಳ ಹಿಡಿತಕ್ಕೊಳಪಟ್ಟ ಪ್ರದೇಶಗಳನ್ನು ಪುನಃ ವಶಪಡಿಸಿಕೊಳ್ಳಲು ಪ್ರಯತ್ನಿಸಿದರ ಫಲವಾಗಿ ಇವರಿಬ್ಬರ ನಡುವಿನ ಕದನಗಳಿಗೆ ಕಾರಣವಾಯಿತು. 2ನೇ ಸಿಂಗಣ್ಣನು ಈತನ ಉತ್ತರಾಧಿಕಾರಿಯಾದನು. ಇವನೂ ಸಹ ಇಮ್ಮಡಿ ಬಲ್ಲಾಳನ ಸಮಕಾಲೀನನಾದವನು. ಈತನ ಅವಧಿಯಲ್ಲೂ ವೈರತ್ವ ಮುಂದುವರೆಯಲಾಗಿ ಗಡಿಪ್ರದೇಶದ ಮಾಂಡಲಿಕರ ಮೇಲೆ ತನ್ನ ಪರಮಾಧಿಕಾರವನ್ನು ಸ್ಥಾಪಿಸಿದನು. ಪ್ರಮುಖವಾಗಿ ಸಿಂಧರನ್ನು ಸೋಲಿಸಿ ತನ್ನ ಪರಮಾಧಿ-ಕಾರಕ್ಕೆ ಒಳಪಡಿಸಿದನು. ಬಲ್ಲಾಳನು ತಮಿಳುನಾಡಿನ ರಾಜಕೀಯದಲ್ಲಿ ಭಾಗವಹಿಸಿದ್ದರಿಂದಾಗಿ ಗಡಿಗಳತ್ತ ಗಮನ ಹರಿಸಲಾಗಲಿಲ್ಲ. ಇಂತಹ ಸದಾವಕಾಶವನ್ನು ಸಿಂಘಣನು ಬಹಳ ಚಾತುರ್ಯದಿಂದ ಬಳಸಿಕೊಂಡನು.

## • ಉತ್ತರದ ಗಡಿಗಳನ್ನು 2ನೇ ನರಸಿಂಹ ಮತ್ತು ವೀರ ಸೋಮೇಶ್ವರ ಕಡೆಗಣಿಸಿದ್ದು

ಕ್ರಿ.ಶ.1220ರಲ್ಲಿ 2ನೇ ಬಲ್ಲಾಳನ ಮರಣಾನಂತರ 2ನೇ ನರಸಿಂಹ ಚಕ್ರವರ್ತಿ-ಯಾದನು. ಆದರೆ ನರಸಿಂಹ ತಮಿಳುನಾಡಿನ ರಾಜಕೀಯದಲ್ಲಿ ಹೆಚ್ಚು ಆಸಕ್ತಿ ವಹಿಸಿದನು. ಇದು

ಉತ್ತರದ ಗಡಿಗಳನ್ನು ದುರ್ಬಲಗೊಳಿಸಿತು. ಇದು ಸೇವುಣರ ರಾಜ 2ನೇ ಸಿಂಗಣ್ಣನಿಗೆ ತನ್ನ ಪ್ರಭಾವವನ್ನು ದಕ್ಷಿಣದಲ್ಲಿ ವಿಸ್ತರಿಸಲು ಉತ್ತಮ ಸದಾವಕಾಶವನ್ನು ಒದಗಿಸಿತು. ನರಸಿಂಹನು ಸೇವುಣ ದೊರೆಯರಿಂದ ದಕ್ಷಿಣದ ಪ್ರದೇಶಗಳನ್ನು ರಕ್ಷಿಸಲು ಪ್ರಯತ್ನಿಸಿದನು. ನರಸಿಂಹನ ಶಾಸನವೂ ಸಹ ಈತ ಸೇವುಣ ರಾಜನೊಡನೆ ನಡೆಸಿದ ಯುದ್ಧಗಳ ಬಗ್ಗೆ ಮಾಹಿತಿ ನೀಡುತ್ತದೆ. ಈ ಯುದ್ಧಗಳಲ್ಲಿ ಹಲವಾರು ದಂಡನಾಯಕರು ಹತರಾದರು. ದೀರ್ಘಕಾಲದವರೆಗೆ ಯುದ್ಧಗಳು ಮುಂದುವರೆದವು. ನರಸಿಂಹನಿಗೆ ತನ್ನ ಭದ್ರಕೋಟೆಯಾದ ದಕ್ಷಿಣದಿಂದ ಸಿಂಗಣ್ಣನನ್ನು ಹೊರಹಾಕಲು ಸಾಧ್ಯವಾಗಲಿಲ್ಲ. ತುಂಗಭದ್ರ ನದಿಯು ಎರಡೂ ಸಾಮ್ರಾಜ್ಯಗಳ ಗಡಿಯಾಗಿ ಮುಂದುವರೆಯಿತು.

ಈತನ ಉತ್ತರಾಧಿಕಾರಿಯಾದ ವೀರಸೋಮೇಶ್ವರನ ಅವಧಿಯಲ್ಲೂ ಸೇವುಣರು ಪ್ರಬಲ ವಿರೋಧ ಎದುರಿಸಲಿಲ್ಲ. ಸೋಮೇಶ್ವರನೂ ಸಹ ಚೋಳ ರಾಜ್ಯದ ಕಡೆ ಗಮನ ಹರಿಸಿದನು. ಆದ್ದರಿಂದಾಗಿ ಉತ್ತರದ ಗಡಿಗಳನ್ನು ಕಡೆಗಣಿಸಿದನು. ಕಳೆದುಕೊಂಡ ಈತನ ಹೆಚ್ಚಿನ ಶಾಸನಗಳು ಯಾವುದೇ ಮಾಹಿತಿಗಳನ್ನು ನೀಡಲು ವಿಫಲಗೊಂಡಿವೆ. ಸೇವುಣರು ಈ ಕಾಲದಲ್ಲಿ ಹೊಯ್ಸಳರ ವಿರೋಧವನ್ನು ಎದುರಿಸಿದವನೆಂದರೆ ಕನ್ನಾರ. ಸೋಮೇಶ್ವರನು ತಮಿಳುನಾಡಿನ ವಿಚಾರಗಳ ಹಸ್ತಕ್ಷೇಪದಿಂದಾಗಿ ಸೇವುಣರ ವಿರುದ್ಧದ ಯುದ್ಧಗಳಲ್ಲಿ ಹಿನ್ನಡೆ ಅನುಭವಿಸಿದನು. ಇದರ ಸದುಪಯೋಗ ಪಡೆದ ಕನ್ನಾರ ಚಾಕಚಕ್ಯತೆಯಿಂದ ಹೊಯ್ಸಳರನ್ನು ಸೋಲಿಸಿ ಹೊಯ್ಸಳ ರಾಜ್ಯದ ಉತ್ತರ ಗಡಿಗಳಲ್ಲಿ ತನ್ನ ಪ್ರಭಾವವನ್ನು ಸ್ಥಾಪಿಸಿದನು.

- **3ನೇ ನರಸಿಂಹ ಮತ್ತು ಸೇವುಣರು**

ಸೇವುಣ ವಂಶದ ಮುಂದಿನ ದೊರೆ ಮಹದೇವ. ಕ್ರಿ.ಶ.1271ರವರೆಗೂ ಅಧಿಕಾರದಲ್ಲಿ ಮುಂದುವರೆದನು. ಈತನ ಅಧಿಕಾರಾವಧಿಯಲ್ಲಿ ಹೊಯ್ಸಳ ಸಾಮ್ರಾಜ್ಯವು ವಿಭಾಗಗೊಂಡಿತು. ಸೋಮೇಶ್ವರನು ತನ್ನ ಇಬ್ಬರು ಪುತ್ರರಾದ 3ನೇ ನರಸಿಂಹನಿಗೆ ಕನ್ನಡ ಪ್ರದೇಶಗಳನ್ನೂ ರಾಮನಾಥನಿಗೆ ತಮಿಳು ಪ್ರದೇಶಗಳನ್ನೂ ನೀಡಿದನು. ಇದರಿಂದ ಇಬ್ಬರೂ ಸಹೋದರರು ಅಸಮಾಧಾನಗೊಂಡರು. ರಾಮನಾಥನು ಹಾಗಾಗ ಕನ್ನಡ ಪ್ರದೇಶಗಳ ಮೇಲೆ ಸೈನಿಕ ಕಾರ್ಯಾಚರಣೆ ಕೈಗೊಳ್ಳುತ್ತಿದ್ದನು. ಇಂತಹ ಅರಾಜಕತೆಯ ಸದುಪಯೋಗ ಪಡೆದ ಸೇವುಣ ಮಹಾದೇವನು ದಕ್ಷಿಣದ ಹೊಯ್ಸಳ ಪ್ರದೇಶಗಳ ಮೇಲೆ ಆಕ್ರಮಣ ಮಾಡಿದನು. ಇಬ್ಬರೂ ಹೊಯ್ಸಳ ದೊರೆಗಳು ಮತ್ತು ಸೇವುಣರು ಪರಸ್ಪರ ಜಯ ಗಳಿಸಿದರು. ಆದ್ದರಿಂದ ಹೊಯ್ಸಳರು

ತಮ್ಮ ರಾಜ್ಯದ ಗಡಿಗಳಿಂದ ಸೇವುಣರನ್ನು ಸೋಲಿಸಿ ಹೊರಹಾಕಿದರು ಎಂದು ಹೇಳುವುದು ಕಷ್ಟದಾಯಕವಾಗಿದೆ.

ಸೇವುಣ ರಾಜ್ಯದಲ್ಲಿ ಅಮಾನನು ಕ್ರಿ.ಶ.1271ರಲ್ಲಿ ಅಧಿಕಾರಕ್ಕೆ ಬಂದನು. ಈತನ ಅಧಿಕಾರವಧಿ ಕೆಲವು ತಿಂಗಳುಗಳಲ್ಲಿ ಅಂತ್ಯಗೊಂಡಿತು. ರಾಮಚಂದ್ರ, ಕನ್ನಾರನ ಮಗ ಈತನನ್ನು ಪದಚ್ಯುತಿಗೊಳಿಸಿ ಸಿಂಹಾಸನರೂಢನಾದನು. ಈತನ ಅವಧಿಯಲ್ಲೂ ಸೇವುಣ ಹೊಯ್ಸಳ ವೈರತ್ವ ಮುಂದುವರೆಯಲಾಗಿ ಹೊಯ್ಸಳ ರಾಜ್ಯದ ಕಡೆ ತನ್ನ ಗಮನ ಕೇಂದ್ರೀಕರಿಸಿದನು. 3ನೇ ನರಸಿಂಹನ ಆಕ್ರಮಣಗಳಿಂದಾಗಿ ಈತನ ಸಹೋದರನಾದ ರಾಮನಾಥನಿಗೆ ಉತ್ತರದ ಗಡಿಗಳ ರಕ್ಷಣೆ ಕಷ್ಟದಾಯಕವಾಯಿತು. ಸೇವುಣ ರಾಮಚಂದ್ರನ ಹೊಯ್ಸಳ ರಾಜ್ಯದ ಮುತ್ತಿಗೆಗೆ ಹಾವೇರಿಯ ಜಯನಾಯಕನ ನೇತೃತ್ವದಲ್ಲಿ ಸೈನ್ಯವೊಂದನ್ನು ನಿಯೋಜಿಸಿದನು. ನಂತರ ರಾಮಚಂದ್ರನು ಕ್ರಿ.ಶ.1276ರಲ್ಲಿ ಪ್ರಮುಖ ದಂಡನಾಯಕರು-ಗಳಾದ ಸಾಳುವ, ಜೋಗಿದೇವ ಮತ್ತು ಹರಿಪಾಲರ ನೇತೃತ್ವದಲ್ಲಿ ಪ್ರಬಲ ಸೈನ್ಯವನ್ನು ಕಳುಹಿಸಿದನು. ಅದೇ ವರ್ಷದ ಏಪ್ರಿಲ್ 5 ಮತ್ತು 25ರಂದು ಮೇ 8 ಮತ್ತು 10 ರಂದು ಜೂನ್ 7 ರಂದು ಹೊರಡಿಸಿರುವ ಶಾಸನಗಳು ಈ ನಿರ್ಣಾಯಕ ಯುದ್ಧದ ಮೇಲೆ ಬೆಳಕು ಚೆಲ್ಲುತ್ತವೆ. ಸೇವುಣರ ಸೈನ್ಯ ಯುದ್ಧದಲ್ಲಿ ಅಧಿಪತ್ಯವನ್ನು ಹೊಯ್ಸಳರ ರಾಜಧಾನಿಯವರೆಗೂ ಧಾವಿಸಿತು. ಹೊಯ್ಸಳ ಸೈನ್ಯದ ನಾಯಕತ್ವವನ್ನು ದಂಡನಾಯಕನಾದ ಮಹಾಪ್ರಧಾನ ಚಿಕ್ಕ ಕೇಟಯ್ಯ ನಾಯಕ ವಹಿಸಿದನು. ಯುದ್ಧದ ಆರಂಭದಲ್ಲಿ ಹಲವಾರು ಅಧಿಕಾರಿಗಳನ್ನು ಕಳೆದುಕೊಂಡ ಹೊಯ್ಸಳರು ಸೇವುಣರ ಸೈನ್ಯವನ್ನು ಬೆಳವಾಡಿಯಿಂದ ಹೊರಹಾಕಿದರು. ಸೇವುಣ ಸೈನ್ಯಾಧಿಕಾರಿಗಳು ದ್ವಾರಸಮುದ್ರವನ್ನು ವಶಪಡಿಸಿಕೊಂಡು ಹೊಯ್ಸಳ ಸಾಮ್ರಾಜ್ಯ-ವನ್ನು ನಾಶಪಡಿಸಿದೆವೆಂದೇ ಭಾವಿಸಿದ್ದರು. ಶಕ್ತಿಯಲ್ಲಿ ಸಮಾನತೆ ಹೊಂದಿದ್ದ ಹೊಯ್ಸಳರು ಸೇವುಣರನ್ನು ಪ್ರಬಲವಾಗಿ ವಿರೋಧಿಸಿದರು. ಹೊಯ್ಸಳ ಅಂಕನಾಯಕನು ಸೇವುಣ ತಿಕ್ಕಮನ ದ್ವಾರಸಮುದ್ರದ ಮುತ್ತಿಗೆಯನ್ನು ವಿಫಲಗೊಳಿಸಿ ಸೇವುಣರ ವಿರುದ್ಧ ವೀರಾವೇಶದಿಂದ ಹೋರಾಡಿದನು. ಇದರಿಂದ ಹರಿಪಾಲ ವಿಚಲಿತನಾಗಿ ಸೇವುಣರು ಸೋಲನ್ನೊಪ್ಪಿದರು. ಯುದ್ಧರಂಗದಿಂದ ಪಲಾಯನಗೈದ ಸೇವುಣರು ಬೆಳವಾಡಿಯಿಂದ ತಮ್ಮ ಆಕ್ರಮಣವನ್ನು ಹಿಂತೆಗೆದುಕೊಂಡರು.

ಇದರ ನಡುವೆ ಅಲ್ಲಾವುದ್ದೀನ್ ಖಿಲ್ಜಿಯು ಸೇವುಣ ರಾಜ್ಯವನ್ನು ಆಕ್ರಮಿಸಿ ರಾಮಚಂದ್ರನನ್ನು ಸೋಲಿಸಿದನು. ಅಲ್ಲಾವುದ್ದೀನ್ ಅಪಾರ ಪ್ರಮಾಣದ ಕಪ್ಪಕಾಣಿಕೆಯನ್ನು

ಸ್ವೀಕರಿಸಿ ಸೇವುಣ ರಾಜ್ಯವನ್ನು ಹಿಂದಿರುಗಿಸಿದನು. ಇದರಿಂದ ಪಾಠ ಕಲಿತ ರಾಮಚಂದ್ರ ನೆರೆಯ ರಾಜ್ಯಗಳೊಂದಿಗೆ ಮೈತ್ರಿ ಮಾಡಿಕೊಂಡು ಪುನಃ ಹೊಯ್ಸಳ ರಾಜ್ಯವನ್ನು ಆಕ್ರಮಿಸಲು ಪ್ರಯತ್ನಿಸಿದನು. ಪ್ರಾರಂಭದಲ್ಲಿ ಹೊಯ್ಸಳರ ಅಧೀನರನ್ನು ಸೋಲಿಸಿದನು. ಆದರೆ 3ನೇ ಬಲ್ಲಾಳನಿಂದ ಸೇವುಣ ಸೈನ್ಯವು ಸೋಲನ್ನನುಭವಿಸಿತು.

- **ಹೊಯ್ಸಳ ವಂಶದ ಅವನತಿಗೆ ಕಾರಣವಾದ ಆಂತರಿಕ ಮತ್ತು ಬಾಹ್ಯ ಅಂಶಗಳು**

ಹೊಯ್ಸಳ ವಂಶದ ಅವನತಿಗೆ ಕಾರಣವಾದ ಆಂತರಿಕ ಅಂಶಗಳಲ್ಲಿ ಪ್ರಮುಖವಾದದ್ದು ಹೊಯ್ಸಳ ವಂಶದ ಸಹೋದರರಾದ ಮೂರನೇ ನರಸಿಂಹ (ಕ್ರಿ.ಶ.1254-1292) ಮತ್ತು ರಾಮನಾಥರ (ಕ್ರಿ.ಶ.1254 ರಿಂದ ಕ್ರಿ.ಶ.1295) ನಡುವೆ ಹೊಯ್ಸಳ ಸಾಮ್ರಾಜ್ಯ ಪಾಲಾಗಿದ್ದು, ಇವರಿಬ್ಬರೂ ಸೋಮೇಶ್ವರನ ಮಕ್ಕಳು (ಕ್ರಿ.ಶ.1235-54) ನರಸಿಂಹನಿಗೆ ರಾಜ್ಯದ ಬಹುಪಾಲು ಅಂದರೆ ರಾಜಧಾನಿ ದ್ವಾರಸಮುದ್ರ ಸೇರಿದಂತೆ ಕನ್ನಡ ಮಾತನಾಡುವ ಪ್ರದೇಶಗಳನ್ನು ವಹಿಸಲಾಯಿತು. ರಾಮನಾಥನಿಗೆ ತಮಿಳು ಪ್ರದೇಶಗಳು, ಸೇಲಂ ಜಿಲ್ಲೆ, ವಾಪನಾಶಂ, ಮನ್ನಾರ್‌ಗುಡಿ ತಾಲ್ಲೂಕುಗಳು, ಪಡುಕೊಟ್ಟಿ ರಾಜ್ಯದ ಪೂರ್ವ ಭಾಗಗಳು ಮತ್ತು ಆಧುನಿಕ ಕೋಲಾರದ ಜಿಲ್ಲೆಗಳನ್ನು ವಹಿಸಲಾಯಿತು. ಕಣ್ಣಾನೂರು ಅವನ ರಾಜಧಾನಿ ಆಯಿತು.

ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಈ ಸಾಮ್ರಾಜ್ಯದ ಇಬ್ಭಾಗವು ಮುಖ್ಯವಾಗಿ ಆಡಳಿತ ಸರಾಗವಾಗಿ ನಡೆಸಲು ಆಗಿತ್ತು. ಈ ಇಬ್ಭಾಗವು ನಯವಾಗಿ ನಡೆದಿತ್ತು. ಹೊಯ್ಸಳರ ಅವಧಿಯ ಮುನ್ನ ಅಖಂಡ ರಾಷ್ಟ್ರಕೂಟ, ಅಖಂಡ ಚೋಳ ಸಾಮ್ರಾಜ್ಯಗಳ ಇರುವಿಕೆಯ ಮುಂದೆ ಈ ಸಾಮ್ರಾಜ್ಯದ ವಿಭಾಗಗಳನ್ನು ಒಪ್ಪಿಕೊಳ್ಳಲು ಕಷ್ಟವಾಗಬಹುದು. ಇತಿಹಾಸದ ಯಾವುದೇ ಪುಟದಲ್ಲೂ ಸಹ ಸರಾಗ ಆಡಳಿತಕ್ಕಾಗಿ ಇಬ್ಭಾಗವನ್ನು ಮಾಡಿಲ್ಲ. ಹಾಗಾಗಿ ಆಡಳಿತ ಕಾರಣಕ್ಕಾಗಿ ಇಬ್ಭಾಗವಾಯಿತೆಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಈ ಇಬ್ಭಾಗವನ್ನು ಸೋಮೇಶ್ವರನ ಮಕ್ಕಳು ರಾಜಕೀಯ ಮಹತ್ವಕಾಂಕ್ಷೆಗಾಗಿ ಮಾಡಿಕೊಂಡರು.

ಈ ಇಬ್ಭಾಗವು ಶಾಂತವಾಗಿ ನಡೆದರೂ ಅದು ಹೊಯ್ಸಳ ಸಾಮ್ರಾಜ್ಯ ಶಮತಿಯನ್ನಾಗಲಿ, ಸುಭದ್ರತೆಯನ್ನಾಗಲಿ ತಂದು ಕೊಡಲಿಲ್ಲ. ಇದರಿಂದಾಗಿ ಶತಮಾನ ಕಾಲ ನಿಧಾನವಾಗಿ ಮತ್ತು ಸಹನೆಯಿಂದ ಹೊಯ್ಸಳ ಸಾಮ್ರಾಜ್ಯದ ಸಮಾಧಿಯನ್ನು ತಾವೇ ತೋಡಿಕೊಂಡಂತಾಯಿತು. ಈ ಹಂತದಲ್ಲಿ ಇಬ್ಭಾಗವು ಹೊಯ್ಸಳ ಸಾಮ್ರಾಜ್ಯದಲ್ಲಿದ್ದ ಅಸಮರ್ಥ ಮತ್ತು ದೌರ್ಬಲ್ಯತೆಯನ್ನು ಪ್ರದರ್ಶಿಸಿತು ಅಲ್ಲದೆ ಈ ಇಬ್ಭಾಗವು ಕೇವಲ ಭೌತಿಕ

ಅಥವಾ ಭೌಗೋಳಿಕವಾಗಿರಲಿಲ್ಲ. ಅದು ಹೃದಯಗಳ, ನಿಷ್ಠೆಗಳ ಮತ್ತು ಸಂಪತ್ತಿನ ಇಬ್ಭಾಗವೂ ಆಗಿತ್ತು. ಆದರೆ ಹಾನಿ ಮಾಡಿಯಾಗಿತ್ತು ಮತ್ತು ಹಳೆದಾರಿಯಲ್ಲಿ ಹಿಂತಿರುಗುವ ಪ್ರಶ್ನೆಯೇ ಇರಲಿಲ್ಲ. ಸೋಮೇಶ್ವರನ ಈ ಕೃತ್ಯದಿಂದ ದೀರ್ಘಕಾಲಿನ ಪರಿಣಾಮಗಳು ಮತ್ತು ಸರಣಿ ಪ್ರತಿಕ್ರಿಯೆ ಆರಂಭವಾಯಿತು. ಅದರ ಪರಕಾಷ್ಠೆ ಎಂಬಂತೆ ತಮಿಳುನಾಡಿನ ಮಧುರೈನಲ್ಲಿ 3ನೇ ಬಲ್ಲಾಳನ ದುರಂತವಾಯಿತು. ಒಮ್ಮೆ ರಾಮನಾಥ ಅಧಿಕಾರದ ರುಚಿ ಕಂಡ ಮೇಲೆ ಅದನ್ನು ಕಳೆದುಕೊಳ್ಳಲು ಸಿದ್ಧನಿರಲಿಲ್ಲ. ಅದಕ್ಕಾಗಿ ಯಾವುದೇ ಬೆಲೆ ತೆರಲು ಅಥವಾ ಯಾವುದೇ ಅಪಾಯ ಎದುರಿಸಲು ಸಿದ್ಧನಾಗಿದ್ದ ಅವನು ಹೊಯ್ಸಳರ ಅಖಂಡತೆಗೂ ಬೆಲೆ ಕೊಡಲಿಲ್ಲ. ಇದು ಕೇವಲ ಆಡಳಿತಾತ್ಮಕ ತೊಂದರೆಗೆ ಆಗಿದ್ದರೆ ರಾಮನಾಥನಿಗೆ ತನ್ನ ತವರು ಮನೆಯ ಮೇಲೆ ಆಕ್ರಮಣ ಪರಿಸ್ಥಿತಿ ಬರುತ್ತಿರಲಿಲ್ಲ. ಪಾಂಡ್ಯರ ರಾಜ ಮಾರವರ್ಮನ್ ಕುಲಶೇಖರನ ಕಾಲದಲ್ಲಿ ರಾಮನಾಥ ಪರಿಸ್ಥಿತಿ ಕ್ಷೀಣವಾಗಿತ್ತು. ಈ ಎಲ್ಲಾ ಕಾರಣದಿಂದ ಕೇವಲ ಆಡಳಿತದ ಕಾರಣ ಒಪ್ಪಲು ಸಾಧ್ಯವಿಲ್ಲ.

ಹೀಗೆ 1254ರ ಸುಮಾರಿಗೆ ಹೊಯ್ಸಳ ಸಾಮ್ರಾಜ್ಯಕ್ಕೆ ಇಬ್ಬರು ದೊರೆಗಳಾದರು. ದಕ್ಷಿಣದಲ್ಲಿ ಕುಲಶೇಖರ ಮಾರವರ್ಮನ್ ರಾಮನಾಥನಿಗೆ ತೊಂದರೆ ಕೊಟ್ಟರೆ 3ನೇ ನರಸಿಂಹನಿಗೆ ಯಾದವರು, ಸೇವುಣರು ಮತ್ತು ಕಾಕತೀಯರ ಕಾಟವಿತ್ತು. ಆದಾಗ್ಯೂ ರಾಮನಾಥ ಮತ್ತು 3ನೇ ನರಸಿಂಹ ಒಟ್ಟಾಗಿ ಶತ್ರುಗಳನ್ನು ಎದುರಿಸಲಿಲ್ಲ ಆ ರೀತಿ ಹಣ ಮತ್ತು ಶಕ್ತಿ ಎರಡು ವ್ಯರ್ಥವಾಯಿತು. ಶತ್ರುಗಳು ಸಾಮ್ರಾಜ್ಯದ ಮೇಲೆ ಆಕ್ರಮಣ ಮಾಡಿದಾಗ ಇಬ್ಬರು ಅಣ್ಣ ತಮ್ಮಂದಿರು ತಮ್ಮೊಳಗೆ ಹೊಡೆದಾಡುತ್ತಿದ್ದರು. ಒಂದು ಕಾಲದಲ್ಲಿ ಹೊಯ್ಸಳರು ಯಶಸ್ವಿಯಾಗಿ ತಮ್ಮ ಅಧಿಕಾರವನ್ನು ಸದೃಢಗೊಳಿಸಲು ಅಮುದಾರನ ಪ್ರತಿಸ್ಥಾಪನೆ ಮತ್ತು ನಿರ್ಮೂಲನದಂತ ನೀತಿ ಅಳವಡಿಸಿಕೊಂಡಿದ್ದರು. ಆದರೆ ಅವರ ಈ ನೀತಿಗಳನ್ನೇ ಶತ್ರುಗಳು ಅಳವಡಿಸಿಕೊಂಡು ಅವರೇ ಈ ಪರಿಸ್ಥಿತಿಗೆ ಗುರಿಯಾಗುವ ಹಂತ ತಲುಪಿದ್ದರು.

ಈ ನಾಗರೀಕ ದಂಗೆಯ ಪರಿಸ್ಥಿತಿಯ ಲಾಭ ಪಡೆದು ಹೊಯ್ಸಳ ರಾಜ್ಯದ ಆಧಾರಸ್ತಂಭವಾಗಿದ್ದ ಅನೇಕ ದಂಡನಾಯಕರು ತಮ್ಮ ಮೇಲಧಿಕಾರಿಗಳ ವಿರುದ್ಧ ಕೈ ಎತ್ತಿದ್ದರು. ಬನವಾಸಿಯ ಮುಖಂಡ ಮೂರನೇ ನರಸಿಂಹನ ನಂತರ ಬಂದ ಮೂರನೇ ಬಲ್ಲಾಳನ ವಿರುದ್ಧ ದಂಗೆ ಎದ್ದ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಬಲ್ಲಾಳ ಕೊಂಗು, ನಂಗಾಲಿ, ತಲಕಾಡು, ಹಾನಗಲ್ ಮತ್ತು ಉಚ್ಛಂಗಿಗಳನ್ನು ವಶಪಡಿಸಿಕೊಂಡಿದ್ದನು. ಆದರೆ ಮೇಲೆ ತಿಳಿಸಿದ ಎಲ್ಲಾ ಪ್ರದೇಶಗಳು ಹೊಯ್ಸಳರ ಭಾಗವೇ ಆಗಿದ್ದವು. ಆದ ಮೇಲೆ ಇವುಗಳನ್ನು ಮತ್ತೆ

ವಶಪಡಿಸಿಕೊಳ್ಳುವ ಪ್ರಶ್ನೆ ಎಲ್ಲಿಂದ ಬಂತು, ಬಹುಶಃ ಈ ಪ್ರದೇಶದ ದಂಡನಾಯಕರು ಮೂರನೇ ಬಲ್ಲಾಳನ ವಿರುದ್ಧ ದಂಗೆಯೆದ್ದಿರಬೇಕು. ಮೂರನೇ ಬಲ್ಲಾಳನಿಗೆ ಅಂಕಿತವಾಗಿರುವ 'ಪ್ರತಾಪ ಚಕ್ರವರ್ತಿ' 'ಮಹಾಮಂಡಲೇಶ್ವರ' ಎಂಬ ಬಿರುದುಗಳು ಕೇವಲ ಔಪಚಾರಿಕವೇ ಹೊರತು ನಿಜವಲ್ಲ. ನಾವು ಶಾಸನಗಳಲ್ಲಿ ನೋಡಿದಂತೆ ದಂಡನಾಯಕರ ಅರಸ ಸಮ್ಮತಿಯ ಉಲ್ಲೇಖವಿಲ್ಲದೆ ತೆರಿಗೆ ನೀಡುತ್ತಾರೆ ಅಂದರೆ ಮಹಾಪ್ರಧಾನರ ಆದೇಶದಂತೆ ಸರ್ವಾಧಿಕಾರಿ, ಸೈನ್ಯ ಮುಖ್ಯಸ್ಥ, ಹಿರಿಯ ದಂಡನಾಯಕ ಎಂಬ ಹೆಸರುಗಳ ಉಲ್ಲೇಖವಾಗಿದೆ. ಇದು ದಂಡನಾಯಕರುಗಳಿಗೆ ಇದ್ದ ಸ್ವಾತಂತ್ರ್ಯವನ್ನು ತೋರಿಸುತ್ತದೆ. ಮೂರನೇ ಬಲ್ಲಾಳನ ಕಾಲದ ಎಷ್ಟೋ ಉಲ್ಲೇಖಗಳಿಗೆ ಅವನ ಬಿರುದುಗಳಾಗಲಿ ಅವನು ಎಲ್ಲಿಂದ ಆಳ್ವಿಕೆ ನಡೆಸುತ್ತಾನೆಂಬ ವಿಷಯದ ಬಗ್ಗೆ ಪ್ರಸ್ತಾಪವಿಲ್ಲ. 3ನೇ ಬಲ್ಲಾಳ ಮಾಡಿದ ದಾನದ ವಿಷಯದ ಉಲ್ಲೇಖಗಳು ಸಿಕ್ಕಿರುವುದು ಕಡಿಮೆ. ಅವನ ಆಳ್ವಿಕೆಯಲ್ಲಿ ದೇವಸ್ಥಾನ ರಚನೆ ಸಹ ನಿಂತಿರುವುದು ರಾಜಕೀಯ ಇಬ್ಭಾಗಕ್ಕೆ ಸಾಕ್ಷಿ.

ಬಲ್ಲಾಳನು ಸಾಮ್ರಾಜ್ಯದ ಏಕತೆಯನ್ನು ಎತ್ತಿಹಿಡಿಯುವುದಕ್ಕೆ ಪ್ರಯತ್ನ ಮಾಡಿರುವುದು ಸುಳ್ಳಲ್ಲ. ಅವನು ಕರ್ನಾಟಕ ಮತ್ತು ತಮಿಳುನಾಡನ್ನು ಒಗ್ಗೂಡಿಸಲು ಪ್ರಯತ್ನಿಸಿದ ಕುಲಶೇಖರನ ಮರಣಾ ನಂತರ ಪಾಂಡ್ಯರ ರಾಜ್ಯದಲ್ಲಿ ಆರಂಭವಾದ ನಾಗರೀಕ ದಂಗೆ ಅವನ ಅಂತ್ಯವನ್ನು ಅರಿತುಕೊಳ್ಳಲು ಅವಕಾಶ ನೀಡಿತು. ರಾಮನಾಥ ಕಳೆದುಕೊಂಡ ಪ್ರದೇಶಗಳನ್ನು ಮತ್ತೆ ಪಡೆಯಲು ಒಂದಲ್ಲಾ ಒಂದು ಗುಂಪಿಗೆ ಸಹಾಯ ಮಾಡಿದ, ಆದರೆ ಅವನ ವ್ಯರ್ಥ ಪ್ರಯತ್ನವು 1310ರಲ್ಲಿ ಉತ್ತರ ಭಾರತದಿಂದ ಬಂದ ಮಲ್ಲಿಕಾಫರ್‌ನ ಹಠಾತ್ ದಾಳಿಯಿಂದ ನಿಷ್ಫಲವಾಯಿತು.

ಮಲ್ಲಿಕಾಫರ್‌ನ ದಾಳಿಯಿಂದ ಮೂರನೇ ಬಲ್ಲಾಳನಿಗೆ 2 ಆಯ್ಕೆಗಳಿದ್ದು ಒಂದು ಅವನೊಂದಿಗೆ ಹೊಡೆದಾಡುವುದು ಅಥವಾ ಶರಣಾಗಿ ಶಾಂತಿಯಿಂದ ಇರುವುದು ನಾಡಿನ ಗಣ್ಯರ ಸಲಹೆಯಂತೆ ಅವನು ಮಲ್ಲಿಕಾಫರನ ವಿರುದ್ಧ ಹೋರಾಡಬೇಕು. ಬಲ್ಲಾಳ ಶತ್ರುವಿನ ಮತ್ತು ತನ್ನ ಬಲ ಭಾಗಗಳನ್ನು ಹೋಲಿಸಿ ಶರಣಾಗಲು ನಿರ್ಧರಿಸಿದ. ಹೀಗೆ ಪ್ರಖ್ಯಾತ ದ್ವಾರಸಮುದ್ರ ರಾಜಧಾನಿ ನಾಶವಾಯಿತು.

ಉತ್ತರ ಭಾರತದಿಂದ ಇನ್ನೂ ಎರಡು ದಾಳಿಗಳಾದವು. 1318ರಲ್ಲಿ ಮತ್ತು 1326ರಲ್ಲಿ ಮಹಮ್ಮದ್ ಬಿನ್ ತೊಘಲಕ್ ಮೂರನೇ ಬಲ್ಲಾಳ ಅವಧಿಯಲ್ಲಿ ಹೊಯ್ಸಳ ಸಾಮ್ರಾಜ್ಯದ

ಮೇಲೆ ದಾಳಿ ನಡೆಸಿದ. ಇದು ಪ್ರತಿಷ್ಠೆ ಮತ್ತು ಸಂಪತ್ತು ಎರಡನ್ನು ನಾಶ ಮಾಡಿತ್ತು. ಮೂರನೇ ಬಲ್ಲಾಳ ತಮಿಳುನಾಡಿನಲ್ಲಿ ತಿರುಣ್ಣಾಮಲೈನಲ್ಲಿ ತನಗೆ ಸ್ಥಾನ ದೊರಕಿಸಿಕೊಂಡನು. 1336ರಲ್ಲಿ ಮಧುರೈನಲ್ಲಿ ಸುಲ್ತಾನರ ಶಕೆ ಆರಂಭವಾಯಿತು. ಅಲ್ಲಿ ಹೊಯ್ಸಳ ಸಾಮ್ರಾಜ್ಯದ ಛಿದ್ರೀಕರಣ ಸಂಪೂರ್ಣವಾಗಿತ್ತು.

ಮೂರನೇ ಬಲ್ಲಾಳ ತನ್ನ ಕಡೆಯ ದಿನಗಳಲ್ಲಿ ಉಳಿವಿಗಾಗಿ ನಡೆಸಿದ ಹೋರಾಟ ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಧಾರ್ಮಿಕ ಹೋರಾಟ ಆಗಿತ್ತು. ಇಲ್ಲಿ ಸ್ವಲ್ಪ ಚರ್ಚೆ ಆಗಬೇಕೆಂದು ಮೂರನೇ ಬಲ್ಲಾಳ ತಿರುವಣ್ಣಾಮಲೈಗೆ ಬಂದ ನಂತರ ಈತ ಹಿಂದೂ ರಾಜರ ಮೇಲೆ ಪ್ರಭುತ್ವ ಸ್ಥಾಪಿಸುವ ಯೋಜನೆ ಬಿಟ್ಟನೆಂದು ಹೇಳಲಾಗಿದೆ. ಮುಸ್ಲಿಂ ದಾಳಿಕೋರರ ವಿರುದ್ಧ ನಿಲ್ಲಲು ಒಂದು ಏಕೀಕೃತ ಪ್ರಯತ್ನ ಬೇಕಿದ್ದ ಎಂಬ ಅನಿಸಿಕೆ ಬಂದಿತ್ತು. ಅವನು ತಿರುವಣ್ಣಾ-ಮಲೈಯನ್ನು ರಾಜಧಾನಿ ಮಾಡಿಕೊಂಡು ತನ್ನ ಪ್ರಯತ್ನದಿಂದ ದಕ್ಷಿಣ ಹಿಂದೂ ರಾಜರಲ್ಲಿ ಸ್ವಲ್ಪ ವಿಶ್ವಾಸ ಪಡೆದದ್ದು ಮಧುರೈ ಸುಲ್ತಾನರ ಸ್ಥಾಪನೆ ಹಿಂದೂಗಳ ಮನದಲ್ಲಿ ಆತಂಕ ಮೂಡಿಸಿತು ಮತ್ತು ಹಿಂದೂ ಧರ್ಮದ ರಕ್ಷಣೆ ಪ್ರಮುಖ ವಿಷಯವಾಯಿತು. ಮಧುರೈನಲ್ಲಿ ತನ್ನ ರಾಜಕೀಯ ವಿರೋಧಿಗಳ ಕೈಯಲ್ಲಿ ಆದ ಬಲ್ಲಾಳನ ದುರಂತದ ಸಾವು ಈ ವಿದ್ವಾಂಸರ ದೃಷ್ಟಿಯಲ್ಲಿ ಹಿಂದೂ ಧರ್ಮ ಉಳಿಸಲು ಮಾಡಿದ ಬಲಿದಾನ.

ಅವನ ಶತ್ರು ಪಡೆಗಳು ಅವನ ಮೇಲೆ 14 ದಿನಗಳ ಒಪ್ಪಂದದ ಅವಧಿಯಲ್ಲಿ ಮಾಡಿದ ದಾಳಿ ವಿಶ್ವಾಸ ಘಾತುಕತೆ. ಹೊಯ್ಸಳ ವಂಶದ ಕಡೆಯ ರಾಜನ ಕಡೆಯ ದಿನಗಳ ಬಗೆಗಿನ ಇಂತಹ ಅಭಿಪ್ರಾಯಗಳನ್ನು ಪುನರ್ ವಿಮರ್ಶಿಸಬೇಕಾದ ಅಗತ್ಯವಿದೆ. ಈ ಅಭಿಪ್ರಾಯಗಳು ರಾಜಕೀಯ ಮತ್ತು ಆರ್ಥಿಕ ಕಾರಣಗಳಿಗೆ ಧಾರ್ಮಿಕ ಅರ್ಥ ನೀಡುತ್ತವೆ. ಮೂರನೇ ಬಲ್ಲಾಳ ಹಿಂದೂ ಧರ್ಮದ ಸಂರಕ್ಷಕನೂ ಅಲ್ಲ ಅಥವಾ ಆ ಹೋರಾಟದಲ್ಲಿ ಹುತಾತ್ಮನೂ ಆಗಲಿಲ್ಲ. ಹಿಂದೂಧರ್ಮ ತನ್ನ ರಕ್ಷಣೆಗಾಗಿ ಎಂದು ರಾಜಕೀಯದ ಬೆಂಬಲದ ಮೇಲೆ ಅವಲಂಬಿತ-ವಾಗಿರಲಿಲ್ಲ. ಬದಲಾಗಿ ರಾಜಕೀಯ ನಾಯಕರು ಧಾರ್ಮಿಕ ಗುಂಪುಗಳ ನಿಷ್ಠೆ, ಬೆಂಬಲದಿಂದ ಅಧಿಕಾರ ಪಡೆಯಲು ಉಪಯೋಗಿಸುತ್ತಿದ್ದರು. ಕೇವಲ ಮೂರನೇ ಬಲ್ಲಾಳ ಮಾತ್ರ ಹಿಂದೂ ಧರ್ಮದ ಸಂರಕ್ಷಕನೆಂದು ಹೇಳುವುದು ಎಷ್ಟು ಸರಿ. ಅವನ ಕ್ಷೇತ್ರದಲ್ಲಿ ಹಿಂದೂ ಧರ್ಮವಲ್ಲದೆ ಜೈನಧರ್ಮವು ಇತ್ತು. ಅದರ ರಕ್ಷಣೆಯಲ್ಲಿ ಅವನ ಪಾತ್ರವೇನು? ಇಂತಹ ಅಭಿಪ್ರಾಯಗಳು ಹೊಯ್ಸಳ ರಾಜರು ಎಲ್ಲಾ ಸಮಯದ ರಕ್ಷಕರು ಎಂಬುದನ್ನು ಸುಳ್ಳು ಮಾಡುತ್ತವೆ.

ಇಂತಹ ಸಂಕಷ್ಟ ಸಮಯದಲ್ಲಿ ಏನಾಯಿತೆಂದರೆ, ಉತ್ತರ ಭಾರತದಿಂದ ಬಂದ ಸೈನ್ಯ ಹೊಯ್ಸಳರನ್ನು ನಾಶ ಮಾಡಲು ಕರ್ನಾಟಕಕ್ಕೆ ಬಂದಿದ್ದು. ತನ್ನ ಸ್ವಂತ ಸ್ಥಳದಿಂದ ಮೂರನೇ ಬಲ್ಲಾಳ ಹೊರಬಂದ ಮೇಲೆ ತಮಿಳುನಾಡಿನಲ್ಲಿ ತನ್ನ ಅಧಿಪತ್ಯ ಆರಂಭಿಸಲು ಒಂದು ಅನಿವಾರ್ಯ ಪ್ರಯತ್ನ ಮಾಡಿದ. ಆಗ ರಾಜಕೀಯ ಶೂನ್ಯ ಏರ್ಪಟ್ಟಿತ್ತು ಮತ್ತು ಅವನಿಗೆ ಸವಾಲು ಎಸೆಯಲು ಯಾವುದೇ ಕೇಂದ್ರ ಶಕ್ತಿ ಇರಲಿಲ್ಲ. ಆಗ ಒಂದು ರೀತಿ ಅಸ್ಥಿರ ಪರಿಸ್ಥಿತಿ ಇತ್ತು ಮತ್ತು ಇಂತಹ ಪರಿಸ್ಥಿತಿಯಲ್ಲೇ ಮಧುರೈಯ ಸುಲ್ತಾನನ ಶಕೆ ಆರಂಭವಾದದ್ದು ಮುಸ್ಲಿಂ ದಾಳಿಕೋರರಿಗೆ ತಮ್ಮ ರಾಜಕೀಯ ಮತ್ತು ಸೈನ್ಯದ ಬೆಳವಣಿಗೆಯಲ್ಲಿ ಹಿಂದೂಗಳಗೆ ಸಹಾಯ ಮಾಡಿದ್ದರೆಂಬುದನ್ನು ಮರೆಯುವಂತಿಲ್ಲ. ಇಂತಹ ಸಾಧ್ಯತೆಗಳಿಲ್ಲದೆ ಹೊಯ್ಸಳರನ್ನು ವಿನಾಶ ಮಾಡಲು ಸಾಧ್ಯವಿಲ್ಲ.

ದಕ್ಷಿಣ ಭಾರತದಲ್ಲಿ ರಾಜ್ಯಗಳ ನಡುವಿನ ಸಂಬಂಧ ಸಹ ಉತ್ತರ ಭಾರತದ ದಾಳಿಕೋರರಿಗೆ ಸಂಪತ್ತು ಲೂಟಿ ಮಾಡಲು ಅವಕಾಶ ನೀಡಿತ್ತು. ದೇವಗಿರಿಯ ಸೇವುಣರು ಹೊಯ್ಸಳರ ವಿನಾಶಕ್ಕೆ ಕೈ ಜೋಡಿಸಿದರು. ಸೇವುಣರ ಅಧಿಕಾರವನ್ನು ವಾರಂಗಲ್‌ನ ಕಾಕತೀಯರು ಪ್ರಶ್ನಿಸುತ್ತಲೇ ಬಂದಿದ್ದರು. ಹಾಗೆಯೇ ಹೊಯ್ಸಳರು ಮಧುರೈ ಪಾಂಡ್ಯರನ್ನು ಸೋಲಿಸಲು ಪ್ರಯತ್ನಿಸುತ್ತಲೇ ಇದ್ದರು. ಉತ್ತರದ ಈ ದಾಳಿ ಇವರಲ್ಲಿ ಒಂದು ಏಕೀಕೃತ ಪ್ರಯತ್ನ ಮಾಡಲು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರಣಗಳ ಸಹಾಯ ಪಡೆಯಲಿಲ್ಲ. ಇನ್ನೊಂದು ರಾಜ್ಯದ ಮೇಲೆ ನಿಯಂತ್ರಣ ಪಡೆಯುವ ಮಹತ್ವಾಕಾಂಕ್ಷೆಯೇ ಮುಖ್ಯವಾಯಿತು. ಇಂತಹ ಪರಿಸ್ಥಿತಿಯಲ್ಲಿ ಮೂರನೇ ಬಲ್ಲಾಳ ತನ್ನ ಮತ್ತು ರಾಜ್ಯದ ಉಳಿವಿಗೆ ಮಾಡಿದ ಚಟುವಟಿಕೆಗಳಿಗೆ ಧಾರ್ಮಿಕ ಅರ್ಥ ನೀಡುವ ವಿವರಣೆಗಳು ಸಾಕು ಎನಿಸುವುದಿಲ್ಲ. ಇದಕ್ಕೆ ಯಾವ ಕಾರಣವು ಇಲ್ಲ.

ಮೂರನೇ ಬಲ್ಲಾಳನ ಚಟುವಟಿಕೆಗಳಿಗೆ ಧಾರ್ಮಿಕ ಅರ್ಥ ನೀಡುವ ವಿದ್ವಾಂಸರು ಇಂತಹ ವಿಚ್ಛಿದ್ರತೆಗೆ ಕಾರಣವಾದ ಧಾರ್ಮಿಕವಲ್ಲದ ಅಂಶಗಳನ್ನು ಸಹ ನೀಡುತ್ತಾರೆ. ಆ ವಾದ ಇಂತಿದೆ:

ದಕ್ಷಿಣ ರಾಜ್ಯಗಳಾದ ಸೇವುಣರು, ಕಾಕತೀಯರು, ಹೊಯ್ಸಳರು ಮತ್ತು ಪಾಂಡ್ಯರು ಅಪಾರ ಸಂಪತ್ತನ್ನು ನಿಶ್ಚಯವಾಗಿ ಸಂಗ್ರಹಿಸಿದ್ದರು. ದಕ್ಷಿಣವನ್ನು ದೆಹಲಿಯವರು ಹಾಲು ಕರೆಯುವ ಹಸು ಎಂದು ಭಾವಿಸಿದ್ದರು. ಶತಮಾನಗಳಿಂದ ದೇವಸ್ಥಾನಗಳು ಸಂಪತ್ತಿನ ಆಗರಗಳಾಗಿದ್ದವು. ರಾಜ್ಯಗಳ ಆಂತರಿಕ ದೌರ್ಬಲ್ಯಗಳು ಮತ್ತು ಅವರ ಭಿನ್ನಾಭಿಪ್ರಾಯಗಳು

ಅವರು ಮುಸ್ಲಿಂ ದಾಳಿಕೋರರಿಗೆ ಸುಲಭ ತುತ್ತಾಗುವಂತೆ ಮಾಡಿದವು. ಅವರುಗಳನ್ನು ಸಾಮಂತರಾಗಿ ಮಾಡಿಕೊಳ್ಳುವ ಅಥವಾ ಅವರ ರಾಜ್ಯಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳುವ ಇರಾದೆಯೇನು ಇರಲಿಲ್ಲ.

ದಕ್ಷಿಣದಲ್ಲಿ ಇಂತಹ ಸಂಕಷ್ಟದ ಸಮಯದಲ್ಲಿ ಅನೇಕ ಬಲಿಷ್ಠ ರಾಜ್ಯಗಳಿದ್ದವು. ಒಂದು ಸಾಮಾನ್ಯ ಮತ್ತು ಏಕೀಕೃತ ಪ್ರಯತ್ನದ ಅಗತ್ಯತೆಯನ್ನು ಅವರು ನಿರ್ಲಕ್ಷಿಸಿದ್ದು ನಿಜಕ್ಕೂ ತುಂಬಾ ದುರದೃಷ್ಟಕರ. ಪ್ರತಿಯೊಬ್ಬರಿಗೂ ತಮ್ಮ ಪ್ರತಿಷ್ಠೆ, ಅಧಿಕಾರವೇ ಮುಖ್ಯವಾಗಿತ್ತು.

ಇದೆಲ್ಲವುದರಿಂದ ಸಂಪತ್ತು ಮತ್ತು ನಿರ್ಲಕ್ಷವೇ ಉತ್ತರ ಭಾರತದವರ ರಾಜಕೀಯ ವಿಜಯಕ್ಕೆ ಸಹಾಯ ಮಾಡಿದವು. ಈ ಎಲ್ಲಾ ಅಂಶಗಳಿಗೆ ಹೊಯ್ಸಳ ರಾಜ್ಯ ಗುರಿಯಾಯಿತು. ಹೊಯ್ಸಳ ಸೇರಿದಂತೆ ದಕ್ಷಿಣ ಭಾರತದ ರಾಜರಲ್ಲಿ ಏಕೀಕೃತ ಪ್ರಯತ್ನದ ಪ್ರಶ್ನೆ ಬಂದಾಗ, ಇಂತಹ ಅಗತ್ಯದ ಪ್ರಶ್ನೆ ಅದರ ರಾಜಕೀಯ ಇತಿಹಾಸದಲ್ಲಿ ಎಂದೂ ಒಂದೇ ಇಲ್ಲವೆನ್ನುವುದನ್ನು ಕಾಣಬಹುದು. ಉತ್ತರ ಭಾರತದಿಂದ ಅಪಾಯದ ಪ್ರಶ್ನೆ ಬಂದಾಗ ಇಂತಹ ಪ್ರಯತ್ನ ವಿಷಾದನೀಯ.

ದಕ್ಷಿಣ ಭಾರತ ಅಪಾಯಕ್ಕೆ ಒಳಪಟ್ಟ ಮೇಲೆ ಈ ಹಂತದಲ್ಲೂ ಹೊಯ್ಸಳರಲ್ಲಿ ಅದರಲ್ಲೂ ಮೂರನೇ ಬಲ್ಲಾಳ ಇಂತಹ ಪ್ರಯತ್ನ ಮಾಡಿದ್ದಲ್ಲಿ ಆಶ್ಚರ್ಯವಿಲ್ಲ.

ಮಧುರೈ ಸುಲ್ತಾನರ ಸೈನ್ಯದ ವಿಶ್ವಾಸದ್ರೋಹದ ಪ್ರಶ್ನೆ ಬಂದಾಗ ಅದೂ 14 ದಿನಗಳ ಕದನ ವಿರಾಮ ನಡೆಯುತ್ತಿದ್ದಾಗ ಪ್ರತ್ಯಕ್ಷ ಸಾಕ್ಷಿಯ ಪ್ರಕಾರ ಯುದ್ಧದಲ್ಲಿ ಮತ್ತು ರಾಜಕೀಯದಲ್ಲಿ ಇಂತಹ ವಿಶ್ವಾಸ ದ್ರೋಹ ಕೇವಲ ಮುಸ್ಲಿಂ ಸ್ವತ್ತಲ್ಲ ಕೌಟಿಲ್ಯರ ಶುಕ್ರ ಕಂಡತ, ಯಜ್ಞವಲ್ಕ ಮತ್ತು ಇತರರೂ ಸಹ ದಿಗ್ವಿಜಯಗಳಲ್ಲಿ ಇದೊಂದು ಅಗತ್ಯವಾದ ದುಷ್ಟಕಾಯ ಎಂದು ಒಪ್ಪಿಕೊಂಡಿದ್ದಾರೆ.

ಅವರ ಯುದ್ಧ ಚಟುವಟಿಕೆಗಳನ್ನು, ಸಾರ್ವಜನಿಕ ಕೆಲಸಗಳನ್ನು ಮತ್ತು ಕಲಾತ್ಮಕ ನಿರ್ಮಾಣಗಳನ್ನು ನಿರ್ವಹಿಸಲು ಹೊಯ್ಸಳರು ಧರ್ಮಗ್ರಂಥಗಳಲ್ಲಿ ನಿಗದಿಪಡಿಸಿದುದಕ್ಕಿಂತ ಹೆಚ್ಚು ಕೇಳುತ್ತಾ ನ್ಯಾಯವಾದಿಗಳ ನೀತಿ ನಿಯಮಗಳನ್ನು ವ್ಯತ್ಯಾಸವಿಲ್ಲದೆ ಉಲ್ಲಂಘಿಸಿದ್ದರು. ಇದಲ್ಲದೆ ಶಾಸನಗಳು ಸಾಕ್ಷ್ಯ ಹೇಳುವಂತೆ ಜನರು ಅಸಂಖ್ಯಾತ ತೆರಿಗೆಗೊಳಗಾಗಿದ್ದರು.

ಡಾ॥ಡೆರ್ರೆಟ್‌ರವರು ಸೂಚಿಸುವಂತೆ ಹೊಯ್ಸಳ ರಾಣಿಯರು ಪ್ರತಿಯೊಬ್ಬರೂ ತಮ್ಮ ಕೈಕೆಳಗಿನ ತಮ್ಮದೇ ಮಂತ್ರಿಗಳು ಮತ್ತು ಪಾರುಪತ್ತೆಗಾರರೊಂದಿಗೆ ಆಡಳಿತಾತ್ಮಕ ಅಧಿಕಾರವನ್ನು ಚಲಾಯಿಸುತ್ತಿದ್ದರು. ಅಲ್ಲದೆ ವಿಶೇಷ ಸಂದರ್ಭಗಳಲ್ಲಿ "ಅಷ್ಟು ಖಚಿತವೆನಿಸದ" ರೀತಿಯ ಸೈನಿಕ ಕಾರ್ಯಾಚರಣೆಯನ್ನೂ ನಡೆಸುತ್ತಿದ್ದರು. ಮುಂದೆ ಎರಡನೇ ಹೊಯ್ಸಳ ಬಲ್ಲಾಳನು ತನ್ನ ರಾಣಿಯರ ಸ್ವಾಭಾವಿಕ ಮತ್ತು ಪ್ರಶ್ನಾತೀತ ಉತ್ಸಾಹವನ್ನು ರಾಜ್ಯದ ಹಿತಕ್ಕಾಗಿ ಬಳಸಿಕೊಳ್ಳುವ ಕಲೆಯಲ್ಲಿ ಓರ್ವ ಪರಿಣಿತನಾಗಿದ್ದನೆಂದು ನಮಗೆ ತಿಳಿದುಬರುತ್ತದೆ. ಆದರೆ ಇನ್ನೊಂದು ರೀತಿಯಲ್ಲಿ ತನ್ನ ಆಡಳಿತಾತ್ಮಕ ಅನುಕ್ರಮಣಿಕೆಯಲ್ಲಿ ಅವರನ್ನು ಒಂದು ಭಾಗವನ್ನಾಗಿ ಮಾಡುವುದರಲ್ಲಿ ಮೂರನೇ ಬಲ್ಲಾಳನ ವಿಫಲತೆಯು ಅವನ ಅವನತಿಗೆ ಸಂದ ಒಂದು ಕಾರಣವಾಗಿತ್ತು.

ಸಂಪತ್ತು, ಅರಮನೆಗಳು, ದೇವಾಲಯಗಳು ಮತ್ತು ಶ್ರೀಮಂತ ಮನೆಗಳಲ್ಲಿ ಆಭರಣಗಳ ರೂಪದಲ್ಲಿ ಸಂಗ್ರಹಿಸಿಡಲಾಗಿತ್ತು. ಈ ಸಿರಿಯು ಘಸ್ನಿ ಮುಹಮ್ಮದ್, ಘೋರಿ ಮುಹಮ್ಮದ್, ಹಾಗೆಯೇ ಖಿಲ್ಜಿಗಳ ಮತ್ತು ತುಘಲಕ್‌ರಂತಹ ಮುಸ್ಲಿಂ ದಾಳಿಕೋರರ ದುರಾಸೆಯನ್ನು ಆಕರ್ಷಿಸಿತು. ಇಬ್ಬರು ಮುಹಮ್ಮದರು ಉತ್ತರ ಭಾರತದ ದೇವಾಲಯಗಳನ್ನು ಮತ್ತು ಶ್ರೀಮಂತ ನಗರಗಳನ್ನು ಲೂಟಿ ಹೊಡೆದರೆ, ಖಿಲ್ಜಿಗಳು ಮತ್ತು ತುಘಲಕ್ಕರು ಕರ್ನಾಟಕವೂ ಸೇರಿದಂತೆ ದಕ್ಷಿಣ ಭಾರತದ ದೇವಾಲಯಗಳ ಮತ್ತು ನಗರಗಳ ಸಂಪತ್ತನ್ನು ಲೂಟಿ ಮಾಡಿದರು. ಜೀವ ಮತ್ತು ಸಂಪತ್ತಿನ ಹಾಸಿಯಿಂದ ಅನೇಕ ಹಳೆಯ ನಗರಗಳು ಪಾಳುಬಿದ್ದವು.

ಹೊಯ್ಸಳರ ಕೃಷಿ ಆಧಾರಿತ ಅರ್ಥ ವ್ಯವಸ್ಥೆಯು ಒಟ್ಟಿನಲ್ಲಿ ಎರಡು ದೊಡ್ಡ ಅಂಶಗಳ ಹುಟ್ಟನ್ನು ಸಂಕೇತಿಸಿತು. ಮೊದಲನೆಯದು ಕೆಲವೊಮ್ಮೆ ರಾಜ್ಯವು ಉದಾರವಾಗಿದ್ದರೂ ಯಾವುದೇ ನಿರ್ಬಂಧವಿಲ್ಲದೆ ಭಾರವಾದ ಕಂದಾಯದ ಬೇಡಿಕೆಗಳ ರೂಪದಲ್ಲಿ ರಾಜ್ಯದಿಂದ ರೈತರ ಶೋಷಣೆ ರಾಜ್ಯವು ಉತ್ಪಾದನಾಂಗಗಳನ್ನು ನಿಯಂತ್ರಣದಲ್ಲಿಡಲು ಪ್ರಯತ್ನಿಸಲೇ ಇಲ್ಲ. ಆದರೆ ತನಗೆ ಬಂದ ಆದಾಯದಲ್ಲಿ ತೃಪ್ತವಾಗಿತ್ತು. ಮತ್ತೊಂದು ರಾಜ್ಯವು ದೇವಾಲಯಗಳು ಮತ್ತು ಅಗ್ರಹಾರಗಳಂತಹ ನಿಯೋಗಗಳ ಮೂಲಕ ಏಕ, ಅತ್ಯಂದ ದೊಡ್ಡ ಜಮೀನು ಮಾಲೀಕರ ವರ್ಗವಾಗಿ ಹೊಮ್ಮಿದ ಬ್ರಾಹ್ಮಣರಿಗೆ ಈ ಕೆಲಸವನ್ನು ವಹಿಸಿತ್ತು. ಕಾಲಕ್ರಮೇಣ ಅವರು ಕೃಷಿ ಕಾರ್ಯಗಳ ಮೇಲೆ ಬಂಡವಾಳ ಅಥವಾ ಹೂಡಿಕೆಯನ್ನು ನಿಯಂತ್ರಿಸುವಂತಾದರು. ಅವರು ಕೃಷಿ ಕಾರ್ಮಿಕರಿಗೆ ಉದ್ಯೋಗವನ್ನು ಒದಗಿಸುವುದರ ಮೂಲಕ ಶ್ರಮವನ್ನು ಸಹ

ನಿಯಂತ್ರಿಸಿದರು. ವಿಶಾಲವಾದ ಜಮೀನುಗಳನ್ನು, ಬಂಡವಾಳ ಮತ್ತು ಶ್ರಮವನ್ನು ಸಹ ಅವರು ನಿಯಂತ್ರಿಸುತ್ತಿದ್ದುದರಿಂದ ಉತ್ಪಾದನೆಯ ಮೇಲೆ ಅವರ ಹಿಡಿತ ಗಣನೀಯವಾಗಿತ್ತು. ಈಗಿನ ಸಮೀಕ್ಷೆಯ ಕೊನೆಯಲ್ಲಿ ಗ್ರಹಿಸುವ ಮನಸ್ಸಿಗೆ ಬರುವ ಅಂಶಗಳೆಂದರೆ ಈ ಎರಡು ವಿಷಯಗಳು.

ಈ ರೀತಿಯಾಗಿ ಆಂತರಿಕ ಮತ್ತು ಬಾಹ್ಯ ಕಾರಣಗಳಿಂದಾಗಿ ಸಾಮ್ರಾಜ್ಯವು ಅವನತಿ ಹೊಂದಿತು. ನೊಬೆಲ್ ವರ್ಗದವರ ಅಧಿಕಾರಕ್ಕಾಗಿ ಕಿತ್ತಾಟ, ಹೊಟ್ಟೆಕಿಚ್ಚು, ಸ್ವಾರ್ಥ ಮೊದಲಾದವುಗಳು ಪ್ರಮುಖ ಆಂತರಿಕ ಕಾರಣಗಳು. ಸಮರ್ಥರ ಅವಧಿಯಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ನೆಲೆಗೊಂಡಿತ್ತು. ಆದರೆ ಅಸಮರ್ಥರ ಅವಧಿಯಲ್ಲಿ ನೊಬೆಲ್ಲರು ಅವರ ಅಸಮರ್ಥತೆಯನ್ನು ತಾವು ಪ್ರಬಲರಾಗಲು ಬಳಸಿಕೊಳ್ಳುತ್ತಿದ್ದರು. ಆಡಳಿತದ ಹಿತದೃಷ್ಟಿಯಿಂದ ಸಾಮ್ರಾಜ್ಯವನ್ನು ವಿಭಾಗಗೊಳಿಸಿದ್ದು ಮುಂದೆ ಅಪಾಯಕ್ಕೆ ದಾರಿ ಮಾಡಿಕೊಟ್ಟಿತು. ಇದು ಪರಸ್ಪರ ಅಸೂಯೆ ಮತ್ತು ದ್ವೇಷಕ್ಕೆ ಕಾರಣವಾಗಿ ರಾಜ್ಯದ ಸಂಪನ್ಮೂಲಗಳ ವಿನಾಶಕ್ಕೆ ಕಾರಣವಾಯಿತು. 3ನೇ ಬಲ್ಲಾಳನು ಸಾಮ್ರಾಜ್ಯವನ್ನು ಒಂದುಗೂಡಿಸಿದರೂ ಸಾಮ್ರಾಜ್ಯದ ವಿವಿಧ ಪರಿಣಾಮಗಳೂ ಮುಂದುವರೆದವು. ಸಾಮ್ರಾಜ್ಯದ ಅವನತಿಗೆ ಕಾರಣವಾದ ಬಾಹ್ಯ ವಿಚಾರಗಳೂ ದುಷ್ಪರಿಣಾಮವನ್ನು ಬೀರಿದವು. 3ನೇ ಬಲ್ಲಾಳನ ಆಳ್ವಿಕೆಯಲ್ಲಿ ದಕ್ಷಿಣ ಭಾರತವು ಸಂಕಷ್ಟಗಳನ್ನು ಎದುರಿಸಬೇಕಾಯಿತು. ಆಂತರಿಕ ಕಲಹಗಳಲ್ಲಿ ತೊಡಗಿದ್ದ ಹಿಂದೂ ಸಾಮ್ರಾಜ್ಯಗಳು ಕ್ರಿ.ಶ.1310ರಲ್ಲಿ ಮಲ್ಲಿಕಾಫರನ ನಾಯಕತ್ವದಲ್ಲಿ ಮೊದಲು ದಕ್ಷಿಣ ಭಾರತವು ಮುಸ್ಲಿಂರ ದಾಳಿಗೆ ಒಳಗಾಯಿತು. ಈ ಮುಸ್ಲಿಮರ ದಾಳಿಗಳನ್ನು ತಡೆಗಟ್ಟಲು ಯಾವುದೇ ಸಿದ್ಧತೆಗಳನ್ನೂ ಮಾಡಿಕೊಂಡಿರಲಿಲ್ಲ. ಇಂತಹ ಸಮಯದಲ್ಲಿ ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ಹೊಯ್ಸಳರು ಮತ್ತು ಪಾಂಡ್ಯರು ಒಂದುಗೂಡಲಿಲ್ಲ. ಆದರೆ ಹಲವಾರು ವರ್ಷಗಳ ನಂತರ ಒಗ್ಗಟ್ಟಿನ ಪ್ರಾಮುಖ್ಯತೆಯ ಅರಿವು ಉಂಟಾಯಿತು. ಪ್ರತಿಕೂಲ ಪರಿಸ್ಥಿತಿಯ ಹೊರತಾಗಿಯೂ 3ನೇ ಬಲ್ಲಾಳನು ವೈರಿಗಳನ್ನು ತಡೆಗಟ್ಟಲು ಮೈತ್ರಿಕೂಟವನ್ನು ರಚಿಸಲು ಪ್ರಯತ್ನಿಸಿದರೂ ಈತನ ಪ್ರಯತ್ನ ಕೈಗೂಡಲಿಲ್ಲ. ಮಧುರೈ ಸುಲ್ತಾನರಿಂದ ಹತನಾದ್ದರಿಂದಾಗಿ ಈತನ ಯೋಜನೆಗಳೆಲ್ಲವೂ ವಿಫಲಗೊಂಡು ಹೊಯ್ಸಳರ ಆಳ್ವಿಕೆ ಅಂತ್ಯಗೊಂಡಿತು.

ಹೊಯ್ಸಳ ಕಾಲದ ಧಾರ್ಮಿಕ ವೈಷಮ್ಯ, ಧಾರ್ಮಿಕ ಸಹಿಷ್ಣುತೆ, ಧಾರ್ಮಿಕ ವಿಷಯದಲ್ಲಿ ಹೊಯ್ಸಳ ರಾಜರು ಮಧ್ಯಮ ನೀತಿ ಅನುಸರಿಸುತ್ತಿದ್ದರು. ಅವಧಿಯ ಉದ್ದಕ್ಕೂ ಹೊಯ್ಸಳರು ಅನೇಕ ಜೈನಬಸದಿಗಳನ್ನು, ಶಿವ, ವಿಷ್ಣು ಮತ್ತು ಹರಿಹರ ದೇವಸ್ಥಾನಗಳನ್ನು ಕಟ್ಟಿದರು ಮತ್ತು

ಜನಗಳಿಗೆ ಅವರವರ ದೇವರನ್ನು ಪೂಜಿಸುವ ಸ್ವಾತಂತ್ರ್ಯ ನೀಡಿದ್ದರು. ಆರಂಭಿಕ ಹೊಯ್ಸಳರು ಜೈನರಾಗಿದ್ದರು. ಆದರೆ ವಿಷ್ಣುವರ್ಧನನ ರಾಜ್ಯದ ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ಸಿಕ್ಕಿತು. ಒಂದನೇ ನರಸಿಂಹನ ಕಾಲದಲ್ಲಿ ವೈಷ್ಣವ ಧರ್ಮ ನಿಧಾನವಾಗಿ ಹೊಯ್ಸಳ ರಾಜ್ಯಕ್ಕೆ ಕಾಲಿಟ್ಟಿತು. ಆದ್ದರಿಂದ ಒಂದು ಶತಮಾನದವರೆಗೂ ದಕ್ಷಿಣದಿಂದ ವೈಷ್ಣವ ಧರ್ಮದ ಹಾಗೂ ಉತ್ತರದಿಂದ ವೀರಶೈವರ (ಶರಣರು) ದಾಳಿಯಿಂದ ಜೈನಧರ್ಮ ನಲುಗಿತ್ತು. ಅದೇ ಸಮಯದಲ್ಲಿ ವೀರಶೈವರು, ವೈಷ್ಣವರು ಮತ್ತು ಶೈವರ ಜೊತೆ ಕಡಿಮೆ ಘರ್ಷಣೆ ಇತ್ತು. ನಿಜವಾಗಿ ವೈಷ್ಣವ ಧರ್ಮದಿಂದ ಮೊದಲಿಗೆ ಜೈನಧರ್ಮ ತೊಂದರೆ ಅನುಭವಿಸಿತ್ತು.

ಹೊಯ್ಸಳರ ವ್ಯವಸಾಯ ಆಧಾರಿತ ಆರ್ಥಿಕತೆಯು ೩ ವಿಷಯಗಳಿಗೆ ದಾರಿ ಮಾಡಿಕೊಟ್ಟಿತು. ಒಂದು ರಾಜ್ಯದ ರೈತರ ಮೇಲೆ ಹೆಚ್ಚಿನ ತೆರಿಗೆಯ ಮೂಲಕ ಶೋಷಣೆ, ಆದರೂ ಕೆಲವು ಬಾರಿ ಉದಾರತೆ ತೋರಲಾಗಿತ್ತು. ರಾಜರು ಎಂದೂ ಉತ್ಪಾದನೆಯ ಅಂಶಗಳನ್ನು ನಿಯಂತ್ರಿಸಲು ಪ್ರಯತ್ನಿಸಿರಲಿಲ್ಲ. ಬದಲಾಗಿ ತಮಗೆ ಬಂದ ಆದಾಯದಿಂದ ತೃಪ್ತಿ ಹೊಂದಿದ್ದರು. ಇನ್ನೊಂದು ವಿಷಯವೆಂದರೆ ಈ ಕೆಲಸವನ್ನು ದೇವಸ್ಥಾನ ಮತ್ತು ಅಗ್ರಹಾರಗಳಲ್ಲಿರುವ ತಮ್ಮ ಏಜೆಂಟ್‌ಗಳ ಮೂಲಕ ಹೆಚ್ಚು ಭೂಮಾಲೀಕರಾಗಿದ್ದ ಬ್ರಾಹ್ಮಣರಿಗೆ ವಹಿಸಲಾಗಿತ್ತು. ಈ ಮಧ್ಯದಲ್ಲಿ ಅವರು ವ್ಯವಸಾಯ ಮೇಲಿನ ಬಂಡವಾಳವನ್ನು ನಿಯಂತ್ರಿಸುತ್ತಿದ್ದರು. ಅವರು ಕೂಲಿ ಕಾರ್ಮಿಕರನ್ನು ಕೆಲಸಕ್ಕೆ ನೇಮಿಸಿಕೊಳ್ಳುವುದರ ಮೂಲಕ ನಿಯಂತ್ರಿಸುತ್ತಿದ್ದರೆ ಅವರು ಭೂಮಿ, ಹಣ ಹಾಗೂ ಕಾರ್ಮಿಕರನ್ನು ನಿಯಂತ್ರಿಸುತ್ತಿದ್ದರಿಂದ ಉತ್ಪಾದನೆ ಮೇಲೆ ಗಮನಾರ್ಹ ಹಿಡಿತವಿಟ್ಟುಕೊಂಡಿದ್ದರು. ಈ ಎರಡು ಅಂಶಗಳ ಈ ಸಂಶೋಧನೆಯಲ್ಲಿ ಗೊತ್ತಾಗಿದೆ.

ಹೊಯ್ಸಳರ ದೊರೆ ವೀರಸೋಮೇಶ್ವರನ ಆಳ್ವಿಕೆಯ ನಂತರ ಅವನ ದಂಡ-ನಾಯಕರುಗಳ ನಡುವೆ ಭಿನ್ನಾಭಿಪ್ರಾಯ ಮೂಡುತ್ತದೆ. ದಂಡನಾಯಕರ ನಡುವೆ ಹೊಂದಾಣಿಕೆ ಇಲ್ಲದ ಕಾರಣ ಒಬ್ಬರ ಮತ್ತು ಇನ್ನೊಬ್ಬರ ನಡುವೆ ಅಸೂಯೆ ಹುಟ್ಟುತ್ತದೆ. ಅವರು ತಮ್ಮ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಸಲುವಾಗಿ ಅಂತರ್ ಕಲಹದಲ್ಲಿ ತೊಡಗಿರುತ್ತಾರೆ. ಆದರೆ ಹೊಯ್ಸಳರ ಪ್ರಖ್ಯಾತ ದೊರೆ ವಿಷ್ಣುವರ್ಧನನ ಕಾಲದಲ್ಲಿ ಈ ದಂಡನಾಯಕರು ಆಧಾರಸ್ತಂಭ-ಗಳಾಗಿರುತ್ತಾರೆ. ಕ್ರಮೇಣ ದಂಡನಾಯಕರು ತಮ್ಮ ಸ್ವಾರ್ಥ ಮನೋಭಾವನೆಯಿಂದಾಗಿ ಆಡಳಿತದಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಈ ದಂಡನಾಯಕರು

ಅರಸರಿಗೆ ಬಲಗೈ ಬಂಟರಂತೆ ಕಾರ್ಯ ನಿರ್ವಹಿಸುತ್ತಾರೆ. ಈ ಎಲ್ಲಾ ಅಂಶಗಳು ಹೊಯ್ಸಳ ಸಾಮ್ರಾಜ್ಯದ ಪತನಕ್ಕೆ ಕಾರಣವಾಯಿತು.

ಹೊಯ್ಸಳ ಸಾಮ್ರಾಜ್ಯದ ದಂಡನಾಯಕರನ್ನು ಜೈನ ಮತ್ತು ಹಿಂದೂ ಧಾರ್ಮಿಕ ಹಿನ್ನೆಲೆಯಲ್ಲಿ ಆಯ್ಕೆ ಮಾಡಲಾಗುತ್ತಿತ್ತು. ಇದು ಆ ಕಾಲದ ಧಾರ್ಮಿಕ ನೀತಿಗಳಿಗನುಗುಣವಾಗಿ ಇತ್ತು. ಜೈನ ಅಧಿಕಾರಿಗಳು ಮತ್ತು ಪಾಳೇಗಾರರು ಅವರ ಅಪ್ರತಿಮ ಪ್ರತಿಭೆಯಿಂದ ಹೊಯ್ಸಳರ ಪ್ರೀತಿ ಪಾತ್ರರಾಗಿದ್ದರು. ಗಂಗರಾಜ, ಹುಲ್ಲ, ಪುನಸಾಮಯ್ಯ ಈ ವರ್ಗಕ್ಕೆ ಸೇರಿದವರು. ಅದೇ ರೀತಿ ಹಿಂದೂ ದಂಡನಾಯಕರು ಶೈವ ಧರ್ಮ ಮತ್ತು ವೈಷ್ಣವ ಧರ್ಮದ ಪಂಗಡಗಳಿಂದ ಆಯ್ಕೆಯಾಗುತ್ತಿದ್ದರು. ಸೋಮನಾಥ ದಂಡನಾಯಕನು ಇವರಲ್ಲಿ ಅದ್ವಿತೀಯನಾಗಿದ್ದನು. ಇವನ ಧಾರ್ಮಿಕ ನಂಟು ಶೈವ ಧರ್ಮದ ಕಡೆಗೆ ಇತ್ತು. ದಂಡನಾಯಕರು, ಅವರ ಧಾರ್ಮಿಕ ನಂಟು ಯಾವುದೇ ಇರಲಿ, ಸಾಮ್ರಾಜ್ಯದ ಸಾಮಾಜಿಕ ಸ್ಥಿರತೆಯ ಸಾಮಾನ್ಯ ಹಿತಕ್ಕಾಗಿ ದುಡಿಯುತ್ತಿದ್ದರು. ಹೊಯ್ಸಳ ದಂಡನಾಯಕರ ಸಾಮಾಜಿಕ ಹಿನ್ನೆಲೆ ಬಹಳ ಸ್ವಾರಸ್ಯಕರವಾದುದು.

ದಂಡನಾಯಕರು ರಾಜ್ಯದಲ್ಲಿ ಉನ್ನತ ದರ್ಜೆಯ ಕಛೇರಿ ಕೆಲಸದವರಾಗಿದ್ದರು. ಇವರ ಮುಖ್ಯ ಗುರಿಯು ರಾಜ ನಿಷ್ಠೆಯನ್ನು ಮತ್ತು ತಮ್ಮದೇ ಆದ ಸೈನ್ಯವನ್ನು ಹೊಂದಿದ್ದು ನಾನಾ ರೀತಿಯ ಜಹಗೀರುದಾರರ ಸೈನ್ಯ ಸಹಾಯವನ್ನು ರಕ್ಷಿಸುವುದು ಮುಖ್ಯವಾಗಿತ್ತು. ವಿಷ್ಣುವರ್ಧನನ ಕಾಲದಲ್ಲಿ ಗಂಗರಾಜ, ಪುಣಿಸಾಮಯ್ಯ, ಬಿಟ್ಟಿಯಣ್ಣ, ಮರಿಯಾನೆ, ಭರತ, ಒಂದನೇ ನರಸಿಂಹನ ಕಾಲದಲ್ಲಿ ಎರೆಯಂಗಮಯ್ಯ, ಪರಿಸರಯ್ಯ, ಸಂತಿಯಣ್ಣ, ಹಿರಿಯ ಬೊಮ್ಮಯ್ಯ, ಇಮ್ಮಡಿ ಬಲ್ಲಾಳನ ಕಾಲದಲ್ಲಿ ಜೀವರಕ್ಷಕ, ಸೈನ್ಯ ದಳದವರು ಮತ್ತು ಆಭರಣ ಕೋಶಾಧ್ಯಕ್ಷರು ಅಮಿತಯ್ಯ, ಭರತಮಯ್ಯ, ಅಪ್ಪಣ್ಣ, ಬಾಹುಬಲಿಯಂತಹ ಪ್ರಸಿದ್ಧ ರಾಜ ಪ್ರತಿನಿಧಿಗಳನ್ನು ಹೊಂದಿದ್ದರು.

ಆಭರಣಗಳ ರೂಪದಲ್ಲಿ ಸಂಪತ್ತು ಅರಮನೆ, ದೇವಸ್ಥಾನ ಮತ್ತು ಶ್ರೀಮಂತ ಮನೆಗಳಲ್ಲಿ ಕ್ರೋಢೀಕೃತಗೊಂಡಿತ್ತು. ಈ ಸಂಪತ್ತು ಮುಸ್ಲಿಂ ದಾಳಿಕೋರರನ್ನು ಆಕರ್ಷಿಸಿತ್ತು. ಮಹಮದ್ ಘಜನಿ, ಘೋರಿ ಮಹಮದ್, ಖಿಲ್ಜಿ ಮತ್ತು ತುಘಲಕ್‌ನಂತಹವರು ಆಕರ್ಷಿತರಾಗಿದ್ದರು. ಇಬ್ಬರು ಮಹಮ್ಮದರು ದೇವಸ್ಥಾನ ಹಾಗೂ ಉತ್ತರ ಭಾರತದ ಶ್ರೀಮಂತರ ನಗರಗಳನ್ನು ಕೊಳ್ಳೆ

ಹೊಡೆದರು. ಖಿಲ್ಜಿ ಮತ್ತು ತುಘಲಕ್‌ರು ಕರ್ನಾಟಕ ಸೇರಿದಂತೆ ದಕ್ಷಿಣ ಭಾರತದ ನಗರಗಳು ಮತ್ತು ದೇವಸ್ಥಾನಗಳ ಸಂಪತ್ತನ್ನು ದೋಚಿದರು.

ಅನೇಕ ಪುರಾತನ ನಗರಗಳು ಜನರ ಪ್ರಾಣ ಹಾಗೂ ಧನ ದಾನಿಯಿಂದ ಅವನತಿಗೀಡಾದವು. ಆದರೂ ಸಹಾ ಹೊಯ್ಸಳರು ತೆರಿಗೆ ಲೆಕ್ಕಾಚಾರದಲ್ಲಿ ಮತ್ತು ತೆರಿಗೆದಾರರ ಕಷ್ಟಕಾರ್ಪಣ್ಯಗಳಗೆ ಅನುಗುಣವಾಗಿ ತೆರಿಗೆ ಸಂಗ್ರಹದಲ್ಲಿ ಮೃದು ಧೋರಣೆ ತೋರುತ್ತಿದ್ದರು. ಈ ಕೆಳಗಿನ ಒಂದು ಉಲ್ಲೇಖದ ಸಾರಾಂಶ ಅವರ ಈ ಮೇಲಿನ ನೀತಿಯನ್ನು ತೋರುತ್ತದೆ. ಒಂದು ನಿರ್ದಿಷ್ಟ ಪ್ರದೇಶದ ನೇಕಾರರು ತೆರಿಗೆ ಬಾರ ತಾಳಲಾರದೆ ಊರು ಬಿಟ್ಟು ಹೋಗಲು ನಿರ್ಧರಿಸಿದರು. ಅವರ ಕಷ್ಟವನ್ನು ಕೇಳದ ಅಧಿಕಾರಿಗಳು ತೆರಿಗೆ ಇಳಸಿ, ಊರು ಬಿಟ್ಟು ಹೋಗದಂತೆ ಮನ ಒಲಿಸಿದರು. ಇನ್ನೊಂದು ಉದಾಹರಣೆಯಲ್ಲಿ ಊರಿನವರು ಎರಡೆರಡು ಬಾರಿ ಮನವಿ ಮಾಡಿ ಎರಡು ಬಾರಿ ವಿನಾಯಿತಿ ಪಡೆದರು. ಇದು ಹೊಯ್ಸಳರು ಪ್ರಜೆಗಳ ಕಷ್ಟಕ್ಕೆ ಹೇಗೆ ಪ್ರತಿಕ್ರಿಯೆ ತೋರುತ್ತಿದ್ದರು ಎಂದು ತಿಳಸುತ್ತದೆ. ಈ ನೀತಿ ಹೊಯ್ಸಳ ರಾಜ್ಯಕ್ಕೆ ಆರ್ಥಿಕ ಸಮತೋಲನ ಮತ್ತು ರಾಜಕೀಯ ಸಬಲತೆ ಕಾಲದಲ್ಲಿ ಈ ತೆರಿಗೆ ಪದ್ಧತಿ ದೀರ್ಘಕಾಲದಲ್ಲಿ ನಂತರ ಹೊಯ್ಸಳ ರಾಜರ ಕಾಲದಲ್ಲಿ ಈ ತೆರಿಗೆ ಪದ್ಧತಿ ಆರ್ಥಿಕ ಸಂಕಷ್ಟಕ್ಕೆ ದಾರಿ ಮಾಡಿತ್ತು. ಮಧ್ಯಕಾಲೀನ ಅವಧಿಯಲ್ಲಿ ಸಾಮಾನ್ಯವಾಗಿ ಕಂಡುಬಂದಂತೆ ಆರ್ಥಿಕ ಸಂಕಷ್ಟವೇ ದಕ್ಷಿಣ ಹಾಗೂ ಉತ್ತರ ಭಾರತದಲ್ಲಿ ರಾಜ್ಯಗಳು ಹೋಳಾಗುವುದಕ್ಕೆ ಕಾರಣ.

- **ದೆಹಲಿ ಸುಲ್ತಾನರ ಆಕ್ರಮಣ**

ಹೊಯ್ಸಳರ ಕೊನೆಯ ಸಮರ್ಥ ದೊರೆಯಾದ ೩ನೇ ವೀರಬಲ್ಲಾಳನ ಅಧಿಕಾರಾವಧಿಯಲ್ಲಿ ದಕ್ಷಿಣ ಭಾರತಕ್ಕೆ ಹೊಸ ಉಪದ್ರವವು ತಲೆದೋರಿತು. ದೆಹಲಿಯ ಸೈನ್ಯದ ಆಕ್ರಮಣದಿಂದಾಗಿ ಅಪರಿಮಿತ ಐಶ್ವರ್ಯವನ್ನು ದೋಚಿತು. ದಕ್ಷಿಣದ ಹಿಂದೂ ಸಾಮ್ರಾಜ್ಯಗಳಗೆ ಈ ಆಕ್ರಮಣಗಳ ಬಗ್ಗೆ ಯಾವುದೇ ಮಾಹಿತಿಗಳೂ ಇರಲಿಲ್ಲ. ಜೊತೆಗೆ ಮುಸ್ಲಿಂರನ್ನು ಎದುರಿಸಲು ಯಾವ ಸಿದ್ಧತೆಗಳನ್ನೂ ಮಾಡಿಕೊಂಡಿರಲಿಲ್ಲ. ದಕ್ಷಿಣದಲ್ಲಿ ನಾಲ್ಕು ಹಿಂದೂ ಸಾಮ್ರಾಜ್ಯಗಳೆಂದರೆ ಸೇವುಣರೆಂದೇ ಪ್ರಸಿದ್ಧರಾಗಿದ್ದ ದೇವಗಿರಿಯ ಯಾದವರು, ಕಾಕತೀಯರು, ಹೊಯ್ಸಳರು ಮತ್ತು ಪಾಂಡ್ಯರು. ಆಂತರಿಕ ವಿಚಾರಗಳಲ್ಲಿ ಮಗ್ನರಾಗಿದ್ದ ಇವರು ದಕ್ಷಿಣದಲ್ಲಿ ತಮ್ಮ ಸಾರ್ವಭೌಮದ ಸ್ಥಾಪನೆಗಾಗಿ ಪರಸ್ಪರ ಯುದ್ಧದಲ್ಲಿ ತೊಡಗಿದ್ದರು. ಈ ಸಂದರ್ಭದಲ್ಲಿ ಹೊಯ್ಸಳ ರಾಜ್ಯವು ದೆಹಲಿ ಸುಲ್ತಾನರಿಂದ ಹಲವು ದಾಳಿಗಳಗೆ ತುತ್ತಾಗಿ ದುರ್ಬಲವಾಯಿತ್ತಲ್ಲದೆ ಅವನತಿಯ ಹಾದಿ ಹಿಡಿಯಿತು.

ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲಿಕಾಫರನು ದಕ್ಷಿಣದ ರಾಜ್ಯಗಳ ಆಕ್ರಮಣಕ್ಕೆ ನಿಯುಕ್ತನಾದನು. ಕ್ರಿ.ಶ.1311ರಲ್ಲಿ ದೇವಗಿರಿಗೆ ಮಲ್ಲಿಕಾಫರನು ಧಾವಿಸಿದನು. ಸೇವುಣ ರಾಜ ರಾಮಚಂದ್ರನು ಸೋತು ಮರಣ ಹೊಂದಿದನು. ಸೇವುಣರು ಮತ್ತು ಹೊಯ್ಸಳರು ಪ್ರಬಲ ವೈರಿಗಳಾಗಿದ್ದರಿಂದ ಮಲ್ಲಿಕಾಫರನಿಗೆ ಸಹಾಯ ಮಾಡಲು ಒಪ್ಪಿದರು. ರಾಮಚಂದ್ರನ ಉತ್ತರಾಧಿಕಾರಿಯಾದ ಶಂಕರನ ಮಾರ್ಗದರ್ಶನದಿಂದ ಮಲ್ಲಿಕಾಫರನು ದ್ವಾರಸಮುದ್ರದ ಕಡೆ ಧಾವಿಸಿದನು. ಮಲ್ಲಿಕಾಫರನಿಗೆ 3ನೇ ಬಲ್ಲಾಳನು ರಾಜಧಾನಿಯಿಂದ ದೂರವಿರುವ ವಿಚಾರ ತಿಳಿದು ದ್ವಾರಸಮುದ್ರದ ಮೇಲೆ ಶೀಘ್ರ ದಾಳಿ ಮಾಡಿದನು. ಮಲ್ಲಿಕಾಫರನ ದಂಡಯಾತ್ರೆಯ ಸುದ್ದಿ ತಿಳಿದೊಡನೆಯೇ 3ನೇ ಬಲ್ಲಾಳನು ದ್ವಾರಸಮುದ್ರಕ್ಕೆ ಶೀಘ್ರ ಗತಿಯಲ್ಲಿ ಹಿಂದಿರುಗಿದನು. ಮೊದಲಿಗೆ ಬಲ್ಲಾಳನು ಈ ಬೃಹತ್ ಸೈನ್ಯದ ವಿರುದ್ಧ ಯುದ್ಧ ಸಾಧ್ಯವಿಲ್ಲವೆಂದು ಮೈತ್ರಿ ಮಾಡಿಕೊಳ್ಳಲು ಬಯಸಿದನು. ಈ ಒಪ್ಪಂದದಂತೆ ಅಪಾರ ಪ್ರಮಾಣದ ಐಶ್ವರ್ಯ, ಅಸಂಖ್ಯಾತ ಕುದುರೆ ಮತ್ತು ಆನೆಗಳನ್ನೂ ಒಪ್ಪಿಸಿದನು. ಇದು ಹೊಯ್ಸಳರಿಗೆ ತೀವ್ರ ಹಿನ್ನಡೆಯನ್ನು ಉಂಟು ಮಾಡಿತು. ಸಂಪತ್ತನ್ನು ಕಳೆದುಕೊಂಡರೂ ಯುದ್ಧದ ಭೀಕರತೆಯಿಂದ ಪ್ರಾಣಹಾನಿಯ ನಷ್ಟವನ್ನು ತಡೆಗಟ್ಟಿದರು.

ಕ್ರಿ.ಶ.1318ರಲ್ಲಿ ದೆಹಲಿ ಸುಲ್ತಾನ ಕುತುಬ್-ದಿನ್-ಮುಬಾರಕ್‌ಷಾ ನ ಅವಧಿಯಲ್ಲಿ ದ್ವಾರಸಮುದ್ರವು ಮತ್ತೊಮ್ಮೆ ದಾಳಿಗೊಳಗಾಯಿತು. ಈತ ತನ್ನ ಸೈನ್ಯದ ತುಕಡಿಯನ್ನು ದ್ವಾರಸಮುದ್ರದಲ್ಲಿ ಸ್ಥಾಪಿಸಲು ಆಜ್ಞೆಯನ್ನು ಹೊರಡಿಸಿದನು. ಹೀಗೆ ತುಕಡಿಯ ಆಗಮನದಿಂದ ಹೊಯ್ಸಳರಿಗೆ ಮತ್ತೊಂದು ಯುದ್ಧವು ಅನಿವಾರ್ಯವಾಯಿತು. ಈ ಸಂದರ್ಭದಲ್ಲಿ ಬಲ್ಲಾಳನು ಅಮ್ಮ ಸಮುದ್ರದಲ್ಲಿ ವಾಸ್ತವ್ಯ ಹೂಡಿದ್ದನು. ವಿಷಯ ತಿಳಿದು ದ್ವಾರಸಮುದ್ರಕ್ಕೆ ಹಿಂದಿರುಗಲಾಗಿ ಅದೃಷ್ಟವಶಾತ್ ಈತನ ದಂಡನಾಯಕನಾದ ಕಠಾರಿ ಸಾಳುವ ರಸೇಯ ನಾಯಕನು ದೆಹಲಿಯ ಸೈನ್ಯವನ್ನು ಸೋಲಿಸಿ ದ್ವಾರಸಮುದ್ರದ ಮುತ್ತಿಗೆಯಿಂದ ಹಿಂದಿಕ್ಕಿಸುವಲ್ಲಿ ಸಫಲನಾದನು. ಇದು ಹೊಯ್ಸಳ ರಾಜ್ಯವನ್ನು ಮತ್ತಷ್ಟೂ ದುರ್ಬಲಗೊಳಿಸಿತು.

ಮಹಮದ್-ಬಿನ್-ತುಘಲಕ್‌ನ ಅವಧಿಯಲ್ಲಿ ಹೊಯ್ಸಳ ರಾಜಧಾನಿಯು ಮತ್ತೊಮ್ಮೆ ದಾಳಿಗೆ ಒಳಗಾಯಿತು. ಮಹಮದ್‌ನ ಸಂಬಂಧಿಯಾದ ಗುಲ್ಬರ್ಗದ ಸಮೀಪವಿರುವ ಸಾಗರ್‌ನ ರಾಜ್ಯಪಾಲನಾದ ಬಹಾವುದ್ದೀನ್ ಗುರ್ಷಾಸ್ಪನು ಸುಲ್ತಾನನ ವಿರುದ್ಧ ದಂಗೆ ಎದ್ದಿದ್ದರಿಂದ ಸುಲ್ತಾನನು ದಕ್ಷಿಣದ ಆಂತರಿಕ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡಬೇಕಾಯಿತು. ಸುಲ್ತಾನನು ದಂಗೆಯನ್ನು ಅಡಗಿಸಲು ದೊಡ್ಡ ಸೈನ್ಯವನ್ನು ಕಳುಹಿಸಿದನು. ಸುಲ್ತಾನನ ಸೈನ್ಯದಿಂದ ಹೆದರಿದ

ಬಹಾವುದ್ದೀನ್ ಗುರ್ಷಾಸ್ಪನು ಕಂಪಿಲಿ ಸಾಮ್ರಾಜ್ಯದ ಕಡೆ ರಕ್ಷಣೆಗೆ ಓಡಿ ಹೋದನು. ಕಂಪಿಲದೇವನು ಈತನಿಗೆ ಆಶ್ರಯ ನೀಡಿದ್ದರಿಂದ ಸುಲ್ತಾನನ ಪ್ರಬಲ ಸೈನ್ಯವು ಕಂಪಿಲಿ ಸಾಮ್ರಾಜ್ಯವನ್ನು ಮುತ್ತಿ ನಾಶಪಡಿಸಿತು. ಆದರೆ ಕಂಪಿಲದೇವನು ಬಹಾವುದ್ದೀನ್ ಗುರ್ಷಾಸ್ಪನನ್ನು ರಹಸ್ಯವಾಗಿ 3ನೇ ಬಲ್ಲಾಳನ ಆಸ್ಥಾನಕ್ಕೆ ಕಳುಹಿಸಿದನು. ಸುಲ್ತಾನನ ಸೈನ್ಯವು ದ್ವಾರಸಮುದ್ರದ ಕಡೆ ಧಾವಿಸಿತು. ಸುಲ್ತಾನನ ಸೈನ್ಯದ ಸಾಮರ್ಥ್ಯದ ಅರಿವಿದ್ದ 3ನೇ ಬಲ್ಲಾಳನು ಸಾಮ್ರಾಜ್ಯಕ್ಕೆ ಒದಗಿದ ಸಂದಿಗ್ಧಮಯ ಪರಿಸ್ಥಿತಿಯಲ್ಲಿ ಬಹಾವುದ್ದೀನ್ ಗುರ್ಷಾಸ್ಪನಿಗೆ ರಕ್ಷಣೆ ನೀಡಿ ಆತನನ್ನು ಬಂಧಿಸಿ ಆತನನ್ನು ಸುಲ್ತಾನನಿಗೆ ಒಪ್ಪಿಸಿದನು. ತನ್ನ ರಾಜ ತಾಂತ್ರಿಕ ಚಾಣಾಕ್ಷತನದಿಂದ ಬಲ್ಲಾಳನು ಸುಲ್ತಾನನ ದಾಳಿಗಳಿಂದ ಮುಕ್ತನಾದನು. ಮತ್ತು ತನ್ನ ರಾಜಧಾನಿ ಪ್ರಜೆಗಳ ಆಸ್ತಿಪಾಸ್ತಿಗಳನ್ನು ರಕ್ಷಿಸಿದನು. ತೊಘಲಕ್ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯದ ಹೊರತಾಗಿ ದಕ್ಷಿಣ ಭಾರತದ ಎಲ್ಲ ಪ್ರಸಿದ್ಧ ರಾಜಮನೆತನಗಳೂ ನಿರ್ನಾಮ-ವಾದವು. ಇದರ ಹಿರಿಮೆ 3ನೇ ಬಲ್ಲಾಳನಿಗೆ ಸಲ್ಲುತ್ತದೆ. ಆದರೂ ಸುಲ್ತಾನರ ನಿರಂತರ ದಾಳಿಗಳಿಂದಾಗಿ ಹೊಯ್ಸಳರ ಪರಮಾಧಿಕಾರ ಅಂತ್ಯದ ದಾರಿ ಹಿಡಿಯಿತು.

- **ಮಧುರೈ ಸುಲ್ತಾನರ ಸ್ಥಾಪನೆಯಿಂದಾಗಿ ಮೂರನೇ ಬಲ್ಲಾಳನ ಮರಣ**

ಮುಹಮದ್ ಬಿನ್ ತುಘಲಕ್‌ನು ದಕ್ಷಿಣ ಭಾರತದ ಪ್ರದೇಶಗಳಲ್ಲಿ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಲು ಪ್ರಯತ್ನಿಸಿದನು. ಅಲ್ಲಾವುದ್ದೀನನಿಗೆ ಈ ತರಹದ ಯಾವುದೇ ಆಸೆಗಳಿರಲಿಲ್ಲ. ಆಸ್ಥಾನ ವಿದ್ವಾಂಸರುಗಳಾದ ಖುಸ್ರು ಮತ್ತು ಇಸಾಮಿಯ ಪ್ರಕಾರ ಸುಲ್ತಾನನು ಮಲ್ಲಿಕಾಫರನಿಗೆ ಮಲಬಾರ್ ಮತ್ತು ದ್ವಾರಸಮುದ್ರದ ಮೇಲೆ ಆಕ್ರಮಣ ಮಾಡಿ ಮುಸ್ಲಿಂ ಪ್ರಭಾವವನ್ನು ಸ್ಥಾಪಿಸಲು ಆಜ್ಞಾಪಿಸಿದನು. ದಕ್ಷಿಣ ಸಂಪತ್ತನ್ನು ದೋಚುವುದು ಈತನ ಮೂಲ ಉದ್ದೇಶವಾಗಿತ್ತು. ಆದರೆ ಮಹಮದ್ ಬಿನ್ ತೊಘಲಕ್‌ನು ಆಕ್ರಮಣದಿಂದ ಈ ಪ್ರದೇಶಗಳನ್ನು ವಶಪಡಿಸಿಕೊಂಡು ತನ್ನ ಗಡಿಗಳನ್ನು ವಿಸ್ತರಿಸುವ ಆಕಾಂಕ್ಷೆ ಹೊಂದಿದ್ದನು. ಕ್ರಿ.ಶ.1335ರಲ್ಲಿ ಹಸನ್ ಷಾನು ಮಧುರೈನಲ್ಲಿ ಸುಲ್ತಾನರ ಆಳ್ವಿಕೆಯನ್ನು ಪ್ರಾರಂಭಿಸಿದ್ದರಿಂದಾಗಿ ದಕ್ಷಿಣದ ಹಿಂದೂ ರಾಜರಲ್ಲಿ ಭಯ ಉಂಟಾಯಿತು. ಪ್ರಮುಖವಾಗಿ 3ನೇ ಬಲ್ಲಾಳನು ಮಧುರೈ ಸುಲ್ತಾನರನ್ನು ಸೋಲಿಸಲು ಹಲವು ಬಾರಿ ಪ್ರಯತ್ನಿಸಿದನು. ಕ್ರಿ.ಶ.1325-27ರಲ್ಲಿ ದ್ವಾರಸಮುದ್ರವು ವಶವಾದ ನಂತರ ಪಾಂಡವಪುರದ ಸಮೀಪವಿರುವ ತೊಣ್ಣೂರಿನಲ್ಲಿ 3ನೇ ಬಲ್ಲಾಳನು ಆಶ್ರಯ ಪಡೆದು ನಂತರ ಉತ್ತರ ಆರ್ಕಾಟ್ ಜಿಲ್ಲೆಯಲ್ಲಿರುವ ತಿರುವಣ್ಣಾಮಲೈನಲ್ಲಿ ಸ್ಥಾನವನ್ನು ಭದ್ರಪಡಿಸಿಕೊಂಡು ಬಲ್ಲಾಳನು ಅಲ್ಲಿಂದಲೇ ತನ್ನ ಗಮನವೆಲ್ಲವನ್ನೂ ಮುಸ್ಲಿಂರ ದಾಳಿಗಳನ್ನು ತಡೆಗಟ್ಟಲು ಕೇಂದ್ರೀಕರಿಸಿದನು. ಅದರಲ್ಲೂ ತನ್ನ ಅಧಿಕಾರಾವಧಿಯ ಕೊನೆಯ

ಹದಿನೈದು ವರ್ಷಗಳಲ್ಲಿ ತಿರುವಣ್ಣಾಮಲೈನಲ್ಲೇ ನೆಲೆಗೊಂಡನು. ಏಕೆಂದರೆ ದಕ್ಷಿಣದ ಮೊಹಮದ್‌ರ ಚಟುವಟಿಕೆಗಳನ್ನು ನಿಯಂತ್ರಿಸಿ ಅವರಿಂದ ತನ್ನ ಸಾಮ್ರಾಜ್ಯದ ಗಡಿಗಳನ್ನು ರಕ್ಷಿಸಲು ಘಿಯಾಸುದ್ದೀನನ ಅವಧಿಯಲ್ಲಿ ಹಿಂದೂಗಳನ್ನು ಹಿಂಸಿಸುವುದು ಅತಿರೇಕಕ್ಕೆ ಹೋಯಿತು.

3ನೇ ಬಲ್ಲಾಳನು ಮಧುರೆ ಸುಲ್ತಾನರನ್ನು ಶಿಕ್ಷಿಸಲು ಸೈನ್ಯದ ಸಿದ್ಧತೆಯೊಂದಿಗೆ ಕಣ್ಣಾನೂರಿನ ಕಡೆ ಧಾವಿಸಿದನು. ಮೊದಲಿಗೆ ತಿರುಚಿನಾಪಳ್ಳಿಯು ವಶವಾಯಿತು. ಇದನ್ನು ಹೊಯ್ಸಳರ ರಾಜಧಾನಿಯನ್ನಾಗಿಸಿ ಮಧುರೈ ಸುಲ್ತಾನರನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಕಣ್ಣಾನೂರನ್ನು ಪುನಃ ವಶಪಡಿಸಿಕೊಳ್ಳುವುದು 3ನೇ ಬಲ್ಲಾಳನ ಗುರಿಯಾಗಿತ್ತು. ಕೊಪ್ಪಂ ಬಳಿಯಲ್ಲಿ ಯುದ್ಧ ಸಂಭವಿಸಿತು. ಇದು 'ಕಣ್ಣಾನೂರು ಕೊಪ್ಪಂ' ಕದನವೆಂದೇ ಪ್ರಸಿದ್ಧಿಯಾಯಿತು. ಸುಲ್ತಾನನ ಸೈನ್ಯವು ಸಂಪೂರ್ಣವಾಗಿ ಸೋತು ಶರಣಾಗತವಾಗಿ ಅಲ್ಲಿಂದ ಹೊರಡಲು 3ನೇ ಬಲ್ಲಾಳನಲ್ಲಿ ಹದಿನಾಲ್ಕು ದಿನಗಳ ಕಾಲಾವಕಾಶವನ್ನು ಬೇಡಿತು. ಆದರೆ ಸುಲ್ತಾನನು 3ನೇ ಬಲ್ಲಾಳನನ್ನು ವಂಚಿಸಿದನು. 3ನೇ ಬಲ್ಲಾಳನ ಸೈನ್ಯವು ಯಾವುದೇ ಯುದ್ಧದ ಸಿದ್ಧತೆಗಳಿಲ್ಲದೆ ಮಧ್ಯಾಹ್ನದ ವೇಳೆ ವಿಶ್ರಾಂತಿ ಪಡೆಯುತ್ತಿರುವಾಗ ಅನಿರೀಕ್ಷಿತ ದಾಳಿಗೆ ಒಳಗಾಯಿತು. ಇದರ ಫಲವಾಗಿ ಸುಲ್ತಾನನ ಸೈನ್ಯವು ಯುದ್ಧದಲ್ಲಿ ಮೇಲುಗೈ ಸಾಧಿಸಿ 3ನೇ ಬಲ್ಲಾಳನನ್ನು ಸೆರೆಹಿಡಿದು ಮಧುರೈಗೆ ಕರೆತರಲಾಯಿತು. ಈತನಿಂದ ಅಪರಿಮಿತವಾದ ಸಂಪತ್ತು ಕುದುರೆಗಳು ಮತ್ತು ಆನೆಗಳನ್ನು ಪಡೆಯುವ ತನಕ 3ನೇ ಬಲ್ಲಾಳನನ್ನು ಆಧರದಿಂದ ನೋಡಿಕೊಳ್ಳಲಾಯಿತು. ಆದರೆ ಇವೆಲ್ಲವನ್ನೂ ಪಡೆದ ತಕ್ಷಣ ಬಲ್ಲಾಳನನ್ನು ಕೊಲ್ಲಲಾಯಿತು. ಈ ರೀತಿಯಲ್ಲಿ 3ನೇ ಬಲ್ಲಾಳನ ಅಧಿಕಾರ ಅಂತ್ಯಗೊಂಡಿತು. ಕೊಪ್ಪಂನ ನಿರ್ಣಾಯಕ ಕದನ ಮತ್ತು 3ನೇ ಬಲ್ಲಾಳನ ದುರಂತ ಅಂತ್ಯ ಹೊಯ್ಸಳ ಸಾಮ್ರಾಜ್ಯದ ಅವನತಿಗೆ ಪ್ರಮುಖ ಕಾರಣವಾಯಿತು.

- **4ನೇ ಬಲ್ಲಾಳನ ಅಸಮರ್ಥ ಉತ್ತರಾಧಿಕಾರತ್ವ**

ಕ್ರಿ.ಶ.1310ರಲ್ಲೇ 3ನೇ ಬಲ್ಲಾಳನು ತಿರುವಣ್ಣಾಮಲೈನಲ್ಲಿ ತನ್ನ ಮಗ 4ನೇ ಬಲ್ಲಾಳನಿಗೆ ಪಟ್ಟಾಭಿಷೇಕವನ್ನು ನೆರವೇರಿಸಿದ್ದನು. ತನ್ನ ತಂದೆಯ ಮರಣದ ನಂತರ 4ನೇ ಬಲ್ಲಾಳ ಅಧಿಕಾರ ರೂಢನಾದನು. ಆದರೆ ಈತ ಹೊಯ್ಸಳ ಸಾಮ್ರಾಜ್ಯದಲ್ಲಿ ತನ್ನ ಸಾರ್ವಭೌಮ ಅಧಿಕಾರವನ್ನು ಪ್ರದರ್ಶಿಸಿದನು ಎಂಬುದರ ಬಗ್ಗೆ ಹಲವಾರು ಜಿಜ್ಞಾಸೆಗಳಿವೆ. ವಿರೂಪಾಕ್ಷ ಬಲ್ಲಾಳನೆಂದು ಪ್ರಸಿದ್ಧನಾಗಿರುವ 4ನೇ ಬಲ್ಲಾಳನ ಹಲವಾರು ಶಾಸನಗಳು ದೊರಕಿವೆ. ಅತ್ಯಂತ

ಅಸಮರ್ಥನಾಗಿದ್ದ ಈತ ತನ್ನ ಅಧೀನದಿಂದಲೂ ತಿರಸ್ಕೃತನಾಗಿ ತನ್ನ ಅಧಿಕಾರವನ್ನು ಸಾಮ್ರಾಜ್ಯದಲ್ಲಿ ಸ್ಥಾಪಿಸಲು ವಿಫಲನಾದನು. ಶಾಸನಗಳಲ್ಲಿ ಈತನ ಅಧಿಕಾರದ ಬಗ್ಗೆ ಹೆಚ್ಚಿನ ಉಲ್ಲೇಖಗಳು ಕಂಡುಬಂದಿಲ್ಲ. ಆದರೆ ದೊರಕಿರುವ ಅಲ್ಪ ವಿಚಾರದ ಪ್ರಕಾರ 3ನೇ ಬಲ್ಲಾಳನು ಮರಣ ಹೊಂದಿದ ನಂತರ ಹೊಯ್ಸಳ ಸಾಮ್ರಾಜ್ಯದಲ್ಲಿ ರಾಜಕೀಯ ಪ್ರಕ್ಷುಬ್ಧ ಉಂಟಾಯಿತು. ವಿರೂಪಾಕ್ಷ ಬಲ್ಲಾಳನು ಸೈನ್ಯದ ಬೆಂಬಲ ಗಳಿಸಲು ವಿಫಲನಾದನು. ಇದೇ ಅವಧಿಯಲ್ಲಿ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಗೊಂಡು ಹೊಯ್ಸಳರು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರು. 4ನೇ ಬಲ್ಲಾಳನು ಕ್ರಿ.ಶ.1346ರಲ್ಲಿ ಕಾಲವಾದನು. ಮಹಾನ್ ಸಾಮ್ರಾಜ್ಯವೊಂದು ಅಸ್ತಂಗತವಾದ ನಂತರ ಅರಾಜಕತೆ ಹೊಂದಿದ ದೇಶದಲ್ಲಿ ಹಲವಾರು ಸಣ್ಣಪುಟ್ಟ ರಾಜ್ಯಗಳು ಹುಟ್ಟಿಕೊಂಡವೆಂದು ಮಾಹಿತಿಗಳು ತಿಳಿಸುತ್ತವೆ. ಗೋಪಿನಾಥ, ಭೀರ್ಯ ದಂಡನಾಯಕನ ಪುತ್ರ ದಕ್ಷಿಣದ ದೊರೆಯೆಂದೇ ಘೋಷಿಸಿಕೊಂಡನು. ಮುಂದಿನ ಎರಡು ಅಥವಾ ಮೂರು ವರ್ಷಗಳಲ್ಲಿ 4ನೇ ವಿರೂಪಾಕ್ಷ ಬಲ್ಲಾಳನು ಮಧುರೈಯ ಸುಲ್ತಾನರೊಂದಿಗೆ ಯುದ್ಧವನ್ನು ಮುಂದುವರೆಸಿದನು ಎಂಬುದರ ಬಗ್ಗೆ ಯಾವುದೇ ಮಾಹಿತಿಗಳು ಲಭಿಸಿಲ್ಲ. ಹೊಸದಾಗಿ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯದಲ್ಲಿ ಹೊಯ್ಸಳ ರಾಜ್ಯವು ವಿಲೀನ-ಗೊಂಡಿತು.

## ವಿಜಯನಗರ ಸಾಮ್ರಾಜ್ಯದ ಸ್ಥಾಪನೆ

ಹೊಸದಾಗಿ ಏಳಿಗೆಗೆ ಬಂದ ವಿಜಯನಗರಕ್ಕೆ ಹೊಯ್ಸಳ ಸಾಮ್ರಾಜ್ಯವು ವಿಲೀನ-ಗೊಂಡಿತು. "ಯಾವುದೇ ರಕ್ತಪಾತವಿಲ್ಲದೆ ಅಧಿಕಾರವು ಇವರಿಂದ ವಿಜಯನಗರಕ್ಕೆ ಬದಲಾವಣೆ ಆಯಿತು. ಅದೇ ಹಳೇ ಸಾಮ್ರಾಜ್ಯವೇ ಹೊಸ ಹೆಸರು ಮತ್ತು ಹೊಸ ರಾಜಧಾನಿಯೊಂದಿಗೆ ಮುಂದುವರೆಯಿತ್ತೆಂದು ಕಂಡುಬರುತ್ತದೆ. ಇದು ವಿಜಯನಗರದ ಸಂಸ್ಥಾಪಕರು ಹಳೇ ಸಾಮ್ರಾಜ್ಯದವರೊಂದಿಗೆ ನಿಕಟ ಸಂಬಂಧ ಹೊಂದಿದ್ದರೆಂದೂ ತಿಳಿಸುತ್ತದೆ. ಪ್ರಾರಂಭದ ವಿಜಯನಗರದ ಪ್ರಮುಖರು ಶಾಂತಿಯುತರಾಗಿದ್ದು 4ನೇ ಬಲ್ಲಾಳನು ಮರಣ ಹೊಂದಿ ಆರು ವರ್ಷಗಳು ಕಳೆದ ನಂತರ ಕ್ರಾಂತಿಕಾರಕ ಬದಲಾವಣೆಗಳು ಜರುಗಿದವು." ಹರಿಹರನ ಹೊಯ್ಸಳ ರಾಜ್ಯದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. 3ನೇ ಬಲ್ಲಾಳನ ಅಧಿಕಾರಾವಧಿಯಲ್ಲಿ ಇವನು ಹಂಪೆ ಪ್ರದೇಶದ ಮಹಾಮಂಡಲೇಶ್ವರನಾಗಿದ್ದನು. ಬಹಳ ಶಾಂತಿಯುತವಾಗಿ ಅಧಿಕಾರವು ಹೊಯ್ಸಳರಿಂದ ಸಂಗಮ ಸಹೋದರರಿಗೆ ಹಸ್ತಾಂತರವಾಯಿತು. ಇವರೇ ಹೊಯ್ಸಳರ ಉತ್ತರಾಧಿಕಾರಿಯಾದರು. ಅನೇಕ ಶಾಸನಗಳಲ್ಲಿ ವಿಜಯನಗರದ ಅರಸರು ಹೊಯ್ಸಳ ರಾಜ್ಯವು ತಮ್ಮ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಸಿದ್ದಾರೆ.

# ಸಂಕೇತಾಕ್ಷರಗಳು

| | | |
|---|---|---|
| 1) ಅ. ಗೂ | – | ಅರಕಲಗೂಡು |
| 2) ಆ | – | ಆಲೂರು |
| 3) ಬೆ | – | ಬೇಲೂರು |
| 4) ಚೆ | – | ಚೆನ್ನಪಟ್ಟಣ |
| 5) ಚಾ. ನ | – | ಚಾಮರಾಜನಗರ |
| 6) ಎ. ಕ | – | ಎಫಿಗ್ರಾಫಿಯ ಕರ್ನಾಟಕ |
| 7) ಗುಂ | – | ಗುಂಡ್ಲುಪೇಟೆ |
| 8) ಹೆ. ದೆ. ಕೊ | – | ಹೆಗ್ಗಡದೇವನಕೋಟೆ |
| 9) ಹು | – | ಹುಣಸೂರು |
| 10) ಹೊ | – | ಹೊಳಲ್ಕೆರೆ |
| 11) ಹಾ | – | ಹಾಸನ |
| 12) ಹೊ. ನ | – | ಹೊಳೆನರಸೀಪುರ |
| 13) ಶಾ | – | ಶಾಸನಗಳು |
| 14) ಕೊ | – | ಕೊಳ್ಳೇಗಾಲ |
| 15) ಕೃ. ಪೆ | – | ಕೃಷ್ಣರಾಜಪೇಟೆ |
| 16) ಕೃ. ರಾ | – | ಕೃಷ್ಣರಾಜನಗರ |
| 17) ಮಳ | – | ಮಳವಳ್ಳಿ |
| 18) ಮ | – | ಮದ್ದೂರು |
| 19) ಮೈ. ಪ್ರಾ. ವ | – | ಮೈಸೂರು ಪ್ರಾಚ್ಯವಸ್ತುಶಾಸ್ತ್ರ ವರದಿ |
| 20) ಮೈ | – | ಮೈಸೂರು |
| 21) ನಾ. ಮ | – | ನಾಗಮಂಗಲ |
| 22) ನಂ | – | ನಂಜನಗೂಡು |
| 23) ನ | – | ನಗರ |
| 24) ಟಿ. ನ | – | ಟಿ. ನರಸೀಪುರ |
| 25) ಪಾಂ | – | ಪಾಂಡವಪುರ |
| 26) ಶ್ರ. ಬೆ | – | ಶ್ರವಣಬೆಳಗೊಳ |
| 27) ತಿಪ | – | ತಿಪಟೂರು |
| 28) ಯ | – | ಯಳಂದೂರು |
| 29) ಯ. ತೊ | – | ಯಡತೊರೆ/ಎ. ಎಡಿ |

## *BIBLIOGRAPHY*

Andhra Pradesh Report on Epigraphy for 1966

By Venkataramanayya, N., Hyderabad, 1970

Annual Repost on Indian Epigraphy, 1946 onwards, delhi.

Annual Repost of Archaeological Survey of India, 1887 onwards

Annual Reports of Mysore Archaeological department, 1906, onwards, Bangalore

Annual Reports on South Indian Epigraphy, 1887 onwards, Madras

Bombay-Karnataka Inscription

Vol. 1, part 1(ed.) Krishamacharalu, C.R,Madras, 1940

Vol. 1, part 2(ed.) Lakshinarayan Rao, N., Madras, 1953.

Vol. 2(ed.) Desai, P.B., Delhi, 1964.

Vol.3 (ed.) Lakshminarayana Rao, N.

Vol. 4(ed.) Gai, G.S., Delhi, 1965.

A catalogue of Inscriptions copied up to 1964, by Parabrahma Shastri, P.V, Hydrabad, 1965.

A Corpus of Inscriptions of Madras Presidency collected till 1915 with Notes and References by Rangacharya, V., 3 Vols., Madras 1917.

Epigraphic Carnatica, vols. 1-8 (rev.Ed.),

Gopal, B.R,(Pub.), University of Mysore.

Vol. 1, Coorg District, 1972.

Vol. 2, Sravanabelagola, 1973.

Vol. 3, Mysore District (Gundlupete, Najanagud and Heggadadevanakote taluks), 1974.

Vol. 4, Mysore District (Chamarajanagar, Yalanduru, Kollegala, Hunasur and Piriyapana taluks). 1975.

Vol. 5, Mysore District(Krishnarajanagara, Mysore and T. Narasipura taluks), 1976.

Vol, 6,Mandya District(Krishnarajapet, Panadavapura and Shrirangapattana taluks),1977.

Vol. 7, Mandya District(Nagamangala, Mandya, Madduru, Malavalli taluks), 1979.

Vol. 8, Hassan District(Holenarasipura, Arakalagud, Hassan and other taluks), 1984.

Epigraphia Carnatica Volumes(Ed.), Rice, B.L.

Vol. 1, Coorg Inscriptions, Bagalore, 1886.

Revised edition, Madras, 1914.

***Epigraphia Carnatica Volumes(Ed.) Rice, B.L***

Vol. 2, Inscriptions at Sravanabelagola, Bangalore, 1889. Revised edition by Narasihachar, R., Bangalore, 1923.

Vol. 3, Inscriptions in the Mysore District, part 1, Bangalore, 1894.

Vol. 4, Inscriptions in the Mysore District, Part 2, Bangalore, 1898.

Vol. 5, Inscriptions in the Hassan District, Magalore, 1901.

Vol. 6, Inscriptions in kadur District, Bangalore 1901.

Vol. 7, Inscriptions in Shimoga District, part 1, Bangalore, 1902.

Vol. 8, Inscriptions in the Shimoga District, part 2, Bagalore, 1904.

Vol. 9, Inscriptions in the Bangalore District, bagalore, 1905.

Vol. 10, Inscriptions in the Kolar District, section 1, Magalore, 1905; section 2, Bagalore, 1905.

Vol. 11, Inscriptions in the chitradurg District, Bagalore 1903.

Vol. 12, Inscriptions in the Tumakur District, Bangalore 1904.

***Epigraphia Carnatica Volumes(Ed.), Rice, B.L.***

Vol. 13, Genaral Index, Part 1, Krishna, M.H., Bangalore, 1934.

Vol. 14, Supplementary Inscriptions in the Hassan District(Ed.), Krishna, M.H., Mysore, 1943.

Vol. 15, Supplementary Inscriptions in the Hassan District(Ed.), Krishna, M.H., Mysore, 1943.

Vol. 16, Supplementary Inscriptions in the Tumakur District(Ed.), Nilakanta Shastri, K.A., Mysore, 1955

Vol. 17, Supplementary Inscriptions in the Kolar District(Ed.), Dr. seshadri, M., Mysore, 1965.

Supplementary Inscriptions in the Shimoga District, Vols. 7 and 8(Pub),

Dr. seshadri, M., Mysore, 1970.

Epigraphia Indica, 1892 onwards, Cacutta/ Delhi.

Kannada Inscriptions from Madras Presidency, Parts 1 and 2(Ed.), Shama Shastri, R., Madras, 1939, 1941.

Karnataka Inscriptions

Vols. 1, 2, 3, part 1(ed.) Panchamikhi, R.S,. Dharavad, 1941, 1952, 1953.

Vol. 4(Ed.), Annigeri, A.M., Dharavad, 1962.

Vil. 5(Ed.), Gopal, B.R., Dharavad, 1969.

***Epigraphia Carnatica volumes(Ed.), Rice. B.L***

Vol. 2, Inscriptions at Sravanabelagola, Bangalore, 1889, revised edition by Narasihmachar, R., Bangalore

Vol. 3, Inscriptions in the Mysore District, Part 1, Bangalore.

Vol. 4, Inscriptions in the Mysore District, Part 2, Bangalore.

Vol. 5, Inscriptions in the Hassan District, Mangalore, 1902.

Vol. 6, Inscriptions in the Kadur District, Bangalore, 1901.

Vol. 7, Inscriptions in the Shimoga District, Part 1, Bangalore, 1902.

Vol. 8, Inscriptions in the Shimoga District, Part 2, Bangalore, 1904.

Vol. 9, Inscriptions in the Bangalore District, Bangalore, 1904.

Vol. 10, Inscriptions in the Bangalore District, Bangalore, 1904.

Vol. 11, Inscriptions in the Kolar District, Section 1, Mangalore, 1905; Section 2, Bangalore, 1905.

Vol. 12, Inscriptions in the Chitradurga District, Bangalore, 1903.

Vol. 13, Inscriptions in the Tumakur District, Bangalore, 1904.

***Epigraphia Carnatica volumes(Ed.), Rice. B.L***

Vol. 13, General Index, Part 1, Krishna, M.H., Bangalore. 1934.

Vol. 14, Supplementary Inscriptions in the Hassan District(Ed.), Krishna M.H., Mysore, 1943.

Vol. 15 Supplementary Inscriptions in the Hassan District(Ed.), Krishna M.H., Mysore.

Vol. 16, Supplementary Inscriptions in the Tuamkur District(Ed.), Nilakanta Shastri, K.A., ., Mysore. 1965

Vol. 17, Supplementary Inscriptions in the Shimoga District(Ed.), Vols. 7 and 8(Pub.), Dr Sesshadri, M., Mysore. 1970.

Epigraphia Indica, 1892 onwards, Calcutta/ Delhi.

Kannada Inscriptions from Madras, 1939, 1941

Karnataka Inscriptions.

Vols.1, 2, 3, part 1(Ed.) Pancghamukhi, R.S., sharawad, 1941, 1952, 1953.

Vol. 4(Ed.), Annigeri, A.M., Dharavad, 1961.

Vol. 5(Ed.), Gopal, B.R., Dharavad, 1969.

# *SECONDARY SOURCES*

***Books in English***


Altekar A.S : State government in ancient India, delhi.

Acahrya, P.K : Indian Architecture according to manasara shilpashastra

Aiyangar S.K : Ancient Indian and South Indian History and Culture, Poona, 1941

Annaraya, Appanna : Swamy Satyabhadracharya.

Mirji, (Dr.) : Ratnakarandaka Sravokachara, Sholapura, 1960.

Aiyangar S.K : Contribution of South India to Indian Culture, Calcutta, 1923.

Altekar A.S : Education of Ancient India, Varanasi, 1957.

Do. : The Position of Women in Hindu Civilization, Delhi, 1962.

Appadurai, A. : Economic Condition in Southern India, Vols. 1 and 2, Madras, 1936

Bhandarker, R.G : Vaishnavism, Shaivism and Other Miner Religions, Poona, 1929.

Bulher, G. : Indian Palaeography, Calcutta,

| | | |
|---|---|---|
| | | 1959. |
| Basavaraju, K.R. | : | History and Culture of Karnataka, Dharavad, 1984. |
| Basavanala, S.S.(Ed) | : | Chamarasa, Prabhulingaalite, Dharavad, 1956. |
| Basavaradhya, N. | : | Raghavanka, Harichandra Kavya, Bangalore, 1955. |
| Bellave Venkatanarayanappa(Ed) | : | Pampa, Vikramarjuna Vijayam, Bangalore, 1931. Also (Ed.) Gangasuta, Dharawad, 1976. |
| Bilhana | : | Vikramankadeva Charita with an Introduction by George Bulher, Bombay, 1975. |
| Chakravarrti, R. | : | Santale, the Queen of Vishnuvardhana. |
| Coelho William | : | The Hoysala Vamsa, Bombay, 1950. |
| Dixit, G.S. | : | Okkalu, a Corporate Body of Medieval, Karnataka. |
| Do. | : | Local Self Governament in Medival Karnataka, Dharavad. |
| Derrett, J.D.M | : | The Hoysala, Oxford, 1956 |
| Deveerappa, H.(Ed) | : | Najunda Kavi, Ramanatha Charita, Mysore, 1964. |
| Deveerappa, H. and | : | Janna, Anantanathapurana, Mysore, 1972 |
| Padmanabha | : | Karnataka Through the Ages, |

| | | |
|---|---|---|
| Sharma(Ed) Divakar, R.R(Ed.) | | Bangalore, 1965. |
| Gharpure, J.R. | : | Devannabhatta, Smrithi Chandrika, Vyavahara Khanda, Parts 1-3- an English Translation, Bombay, 1950. |
| Ramanuja Ayyangar, M.A. And Narasimahachar, S.G.(Ed) | : | Ranna, Gadayuddha, Mysore 1925. |
| Rama Rao, R | : | Religion Under Vishnuvardhana, the Hoysala King. |
| Resesh, K.V and Others(Ed) | : | Srikantica, Mysore, 1973. |
| Rice Lewis, B. | : | Mysore and Coorg from Inscriptions, London, 1969. |
| Saletore, B.A. | : | Ancient Indian Political Thought and Institutions, Bombay, 1968. |
| Shama Shastri, K.(Trans.) | : | Koutilya Artha Shastra, Mysore, 1921. |
| Shama shastri, R(Ed) | : | Nayasena, Dharma Mrita, Mysore 1922, 1926. |
| Shastri, Chandrashekar, S | : | Economic Conditions Under Hoysalas. |
| Shastry, Krishna. H | : | Hoyasala in and Beyond Mysore |

Seetharam, C.B : Queen Shantala Devi.

Sesha Ayyangar, H. : Chavundaraya, Lokopakaram, Madras, 1950.

Sheik Ali, B.(Ed) : The Hoysala Dynosty, Mysore, 1972.

Do. : History of Western Gangas of Talakadu, Mysore, 1976.

Sircar, Dlc. : Indian Epigraphy, Delhi, 1965.

Sitaramaiah, M.V.(Ed) : Sri Vijaya, Kaviraja Marga, Bangalore, 1968

SriGondekar, G.K : Somesvaradeva, Manasollasa, Vols. 1-3, Baroda, 1925, 1939 and 1981.

Srikantayya, S : Topography of Halebidu

: Srikantashastri, S : Sources of Karnataka History, Vols. 1, Mysore, 1940.

Shivanna, K.S. : A Critics of Hoysala Politics, Mysore, 1988.

Venkannayya, T.(Ed) : Harihara, Basavarajadevara Ragale, Mysore, 1951.

Venkataraman, K.R : The Hoysala in Tamil Country.

Venkataramappa, K. and Javaregowda, D (Ed) : Nemichandra, Lilavathi Prabhanda, Mysore, 1966

Venkata Rao, A. and Sesha Ayyangar, H.(Ed) : Nagavarma, Abhidhanarathamala, Madras, 1940.

Do. : Ponna, Shantipuram, Madras, 1929.

## *Dictionaries, Encyclopedias, Gazetteers, Journals, Etc*

A Kannada-English Dictionary by F. Kittal(Ed.), Revised and Enlarged by M. Mariyappa Bhat, Madras, 1968-70.

Annals of Bhandarkar Research Institute, Poona. Asiatic researches.

Bombay University Journals.

Encyclopedia Brittanica.

Encyclopedia of religions and Ethics(ed.), James Hastings.

Encyclopedia of the Social Sciences(Editor-in Chief), Edwin R.A, Seligman.

Half Yearly Journal of Mysore University.

Imperial Gazetteer of India, Indian Empire, Vol. 2. New Delhi 1928.

Indian Historical Quarterly.

Journals of Andhra Historical Research Society.

Journal of Bombay Branch of Royal Asiatic Society.

Journal of Department of Letters, Calcutta.

Journals of Indian History, Trivendrum.

Journals of Karnataka university(Humanities), Dharwad.

Journals of Oriental research, Madras.

Journals of Royal Asiatic Society of Bengal.

Kannada Sahitya Parishat Patrike, Bangalore.

Manvika Karnataka, Mysore.

Mysore Casts and Tribes, L.K. Aiyar, Bangalore.

Mysore Gazetter (Ed. C. Hayavadana Rao), % Vols. Bangalore, 1927-50.

Prabhudha Karnataka, Mysore.

Proceedings of Indian History Congress.

Quarterly Journals of Mythic Society, Bangalore.





King Vishnuvardhana in a Durbar Scene
With his chief queen
Shantala Devi.



ಬೇಲೂರು ಚನ್ನಕೇಶ್ವರ ದೇವಸ್ಥಾನ



ಹಳೇಬೀಡು ಹೊಯ್ಸಳೇಶ್ವರ ದೇವಸ್ಥಾನ


ಹೊಯ್ಸಳರ ವಂಶಾವಳಿ
ಸಳ
ನೃಪಕಾಮ
(ಸು. ಕ್ರಿ.ಶ. 1000 - 1045)
ವಿನಯಾದಿತ್ಯ
(ಸು. ಕ್ರಿ.ಶ. 1045 - 1098)
ಎರೆಯಂಗ
(ಸು. ಕ್ರಿ.ಶ. 1098 - 1100)
ಒಂದನೇ ಬಲ್ಲಾಳ
(ಸು. 1100-1108)
ವಿಷ್ಣುವರ್ಧನ
(ಸು. 1108-1142)
ಉದಯಾದಿತ್ಯ
ಬಲ್ಲಾಳ ದೇವ
ಒಂದನೇ ನರಸಿಂಹ
(1142 - 1173)
ಎರಡನೇ ಬಲ್ಲಾಳ (ವೀರ ಬಲ್ಲಾಳ)
(1173 - 1220)
ಎರಡನೇ ನರಸಿಂಹ
(1220 - 1235)
ಸೋಮೇಶ್ವರ
(1235 - 1253)
ಮೂರನೇ ನರಸಿಂಹ
(ಸು. 1253 - 1292)
ರಾಮನಾಥ
(ಸು. 1253 - 1295)
ಮೂರನೇ ಬಲ್ಲಾಳ
(1292 - 1343)
ನಾಲ್ಕನೇ ವಿರುಪಾಕ್ಷ ಬಲ್ಲಾಳ (1343 - 1346)


HOYSALA KINGDOM UNDER VISHNUVARDHANA
1108-1142 A.D.
Kayana
Bidar
Warangal
Gulbarga
R. Bhima
CHALUKYAS OF KALYANA
Bijapur
R. Krishana
Raichur
R. Krishna
Belgaum
Badami
Belavola
Manvi
R. Tungabhadra
Savdatti
Yalburgi
Kurnool
Halasige
Gadag
Koppal
Goa
Dharwar
Lakkundi
Hampi
Kurgod
Hospet
Bellery
Lakshmeshwar
Bankapur
Hadagali
Guttal
Kurvatti
R. Peenar
Sirsi
Haveri
Banavasi
Harihar
Anantapur
Hirekerur
Balligavi
Hangal
Honnalli
Belgutti
Barkur
Shimoga
Kadur
Udipi
Arasikere
Tumkur
Halebid
Kolar
Belur
Dorasamudra
N
Mangalore
Hassan
Bangalore
Sravanabelgola
Kanchipuram
Srirangapatana
Mysore
R. Kaveri
Talakad
CŌLAS
Nilagiri
Kannanur
0
50
100
Miles
PANDYAS
Madurai




ಇದುವರೆಗೂ ತೋರಿಸಿರುವ ತುಂಗಭದ್ರಾ ನದಿ ಗಡಿ ಕ್ರಿ. ಶ. 1150ರಲ್ಲಿ ಇದ್ದ ಗಡಿಯಾಗಿದ್ದಿತು. ಕ್ರಿ.ಶ. 1220ರಲ್ಲಿ ಅದು ಯಾದವರ ನರ್ಮದಾ ತೀರದ ಗಡಿ ಹೊಯ್ಸಳ ಸಾಮ್ರಾಜ್ಯದ ಗಡಿಯಾಯಿತು.

# ಹೊಯ್ಸಳರು


ಚಾಲುಕ್ಯರು
ಸೌರಾಷ್ಟ್ರರು
ನರ್ಮದಾ ನದಿ
ತಪತೀ ನದಿ
ಅಜಂತಾ
ನಾಸಿಕ್
ಎಲ್ಲೋರ
ಮಹಾನದಿ
ಭುವನೇಶ್ವರ
ಕಳಿಂಗ
ಗೋದಾವರೀ ನದಿ
ಕಾಕತೀಯರು
ಓರಂಗಲ್
ಕೃಷ್ಣಾನದಿ
ಪೂರ್ವ ಚಾಲುಕ್ಯರು
ಪಟ್ಟದಕಲ್ಲು
ಐಹೊಳೆ
ಬಾದಾಮಿ
ಗೋವೆ
ಬಂಕಾಪುರ
ಹೊಯ್ಸಳರು
ದೋರಸಮುದ್ರ
ಕಾಂಚಿ
ಮಧುರೆ
ಪಾಂಡ್ಯರು
ಅನುರಾಧಪುರ

# HOYSALA KINGDOM

C.1050 – C.1355

KUNTALA
SEUNAS
VENGI
Krishna R.
KUKKANUR
ANNIGERI
GADAG
ITTAGI
LAKKUNDI
BELVOLA
DAMBAL
LAKSMESVAR
HUVINAHADAGALI
MAGALA
HIREHADAGALI
GUTTAL
CHAUDADANPURA
BAGALI
HAVERI
KURUVATTI
HANGAL
TILAVALLI
UCHCHANGI
BANAVASI
HARIHARA
BALLIGAMVE
NOLAMBAVADI
NIDUGAL
HENJERU
DUMME
BUDALI
HUMCHA
NIRGUNDA
SADALI
AMRITAPURA
HEGGERE
ABANDI
KANIKATTE
TONDAI-MANDALA
SRINGERI
JAVAGALLU
ARSIKERE
HARNAHALLI
NANGALI
BELAVADI
GANGA VADI
BELUR
HALEBID
KOLALAPURA
Palar R.
KANCIPURAM
ANGADI
SALIGAME
NUGGEHALLI
ANEKAL
KUNDANI
TIRUMALAI
GRAMA
KANNAMBADI
SRIRANGAPATNA
SRAVANA BELGOLA
NARTTAMALAI
SOMANATHAPUR
TIRUVANNAMALAI
TALAKAD
S. Pennar R.
Pennar R.
KALIYUR
TIRUVENDIPURAM
SENDAMANGALAM
KIRTIPURA
VRIDDACHALAM
CHOLAS
CIDAMLARAM
Kaveri R.
KANNANUR
SRIRANGAM
TIRUMALAVADI
TRICHINOPOLY
TANJORE
NAGAPATTAHAM
MADURA
PANDYAS
CAPE COMORIN




**HOYSALA KINGDOM DURING THE TIME OF NARASIMHA III 1254-1291 A.D. AFTER PARTITION**




SOUTH INDIA AT THE TIME OF NARASIMHA III ACCESSION




HOYSALA KINGDOM BEFORE NARASIMHA III
(UN - DIVIDED)


THE HOYSALA KINGDOM
N
Bidar
Gulbarga
Hyderabad
R. BHIMA
Bijapur
R. KRISHNA
Raichur
Belgaum
Badami
BELVOLA
Manvi
BHADRA
Savdatti
Yalburgi
Kurnool
Gova
Halasige
Gadag
R. TUNGA
Koppal
Dharwar
Lakkundi
Kurgod
Hospet
Bellary
Lakshmeshwar
Bankapur
Hadagali
Guttal
Kurvatti
Sirsi
Haveri
Anantapur
R. PENNAR
Banavasi
Harihar
Hirekerur
Hangal
Balligavi
Belgutti
Honnali
Shimoga
Barkur
Kadur
Udipi
Arsikere
Tumkur
Halebid
(DORASAMUDRA)
Kolar
Belur
Hassan
Bangalore
Mangalore
Canchipuram
Sravanabelgola
Srirangapattana
Mysore
Talakad
KAVERI
Ootacamund
Nilagiri
Kannanur
MILES
0
50
100
KLMS.